ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಕಟಣೆ - ೨೪
ಸಾಹಿತ್ಯಮಾಲೆ - ೨೩

ಪ್ರಧಾನ ಸಂಪಾದಕರು
**ಡಾ. ಪ್ರಧಾನ್ ಗುರುದತ್ತ**

ಸಂಪಾದಕರು
**ಡಾ. ಪಿ. ಎಸ್. ರಾಮಾನುಜಂ**

# ಕಥಾಸರಿತ್ಸಾಗರ

**(ಸಂಪುಟ ೨)**

**(ಲಂಬಕಗಳು: ಕಥಾಮುಖ ಮತ್ತು ಲಾವಾಣಕ)**

# ಕಥಾಸರಿತ್ಸಾಗರ

(ಸಂಪುಟ ೨)

(ಲಂಬಕಗಳು: ಕಥಾಮುಖ ಮತ್ತು ಲಾವಾಣಕ)

ಸಂಸ್ಕೃತ ಮೂಲ
**ಸೋಮದೇವ ಭಟ್ಟ**

ಕನ್ನಡ ಅನುವಾದ
**ಎಚ್.ವಿ. ನಾಗರಾಜರಾವ್**

**ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ**
ಕನ್ನಡ ಭವನ, ಜೆಸಿ. ರಸ್ತೆ ಬೆಂಗಳೂರು – ೫೬೦ ೦೦೨

**Kathā Sarit-sāgara (Vol. 2)** by **Somadeva Bhatta**, consisting Books 2 & 3 (**Kathāmukha** and **Lavanaka**); Kannada translation by **H. V. Nagaraja Rao**; Editor-in-Chief: **Dr. Pradhan Gurudatta**; General Editor of the series: **Dr. P. S. Ramanujam;** Published by **Registrar**, **Karnataka Anuvada Sahitya Academy**, Kannada Bhavana, J.C. Road, Bangalore - 560 002. 2007; Pp. xvi + 348; Price: Rs. 100/-.



ಮುದ್ರಣ : ೨೦೦೭
ಪುಟಗಳು : xvi+ ೩೪೮
ಬೆಲೆ : ರೂ. ೧೦೦/–
ಪ್ರತಿಗಳು : ೩೨೦೦

ಪ್ರಕಾಶಕರು :
**ಪಿ. ನಾರಾಯಣಸ್ವಾಮಿ**
ರಿಜಿಸ್ಟ್ರಾರ್
ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು
ದೂ : ೨೨೧೦೭೭೭೦

ಸಹಕಾರ :
**ಕನ್ನಡ ಮತ್ತು ಸಂಸ್ಕೃತಿ ಇಲಾಖೆ**
ಬೆಂಗಳೂರು

ಮುಖಪುಟ ವಿನ್ಯಾಸ ಮತ್ತು ಚಿತ್ರ : **ವಿಶ್ವನಾಥ್**

**ISBN : 978-81-905692-1-7**

ಮುದ್ರಕರು :
**ಮೆ॥ ಮಯೂರ ಪ್ರಿಂಟ್ ಆಡ್ಸ್**
ನಂ. ೬೯, ಸುಬೇದಾರ್‌ಛತ್ರಂ ರೋಡ್
ಬೆಂಗಳೂರು – ೫೬೦೦೨೦ ದೂ : ೨೩೩೪೨೭೨೪

ಕರ್ನಾಟಕ ಸರ್ಕಾರ

ಹೆಚ್.ಡಿ. ಕುಮಾರಸ್ವಾಮಿ
ಮುಖ್ಯಮಂತ್ರಿಗಳು

ವಿಧಾನಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೧೫.೦೩.೨೦೦೭

# ಮುನ್ನುಡಿ

ಕರ್ನಾಟಕ ರಾಜ್ಯ ಪುನರ್ ಘಟನೆಯ ಐವತ್ತು ವರ್ಷಗಳ ನೆನಪಿಗಾಗಿ ಕರ್ನಾಟಕ ಸರ್ಕಾರ 'ಸುವರ್ಣ ಕರ್ನಾಟಕ'ದ ಸಂಭ್ರಮಪೂರ್ಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕೆಂದು ನಿರ್ಧರಿಸಿತು. ಈ ಹೊತ್ತಿಗೆ ಸರಿಯಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಯ ಮೂಲಕ ಕರ್ನಾಟಕ ಸರ್ಕಾರ ಇನ್ನೊಂದು ಹೊಸ ಹೆಜ್ಜೆಯನ್ನೂ ಇಟ್ಟಿತ್ತು. ಭಾರತೀಯ ಭಾಷೆಗಳ ನಡುವಣ ಪಾರಸ್ಪರಿಕ ಅರಿವನ್ನು ಹೆಚ್ಚಿಸುವುದರ ಜೊತೆಗೆ, ನಮ್ಮ ನಾಡು–ನುಡಿಗಳ ಹಿರಿಮೆಯನ್ನು ಇತರ ಭಾಷಾ–ಬಾಂಧವರಿಗೆ ಹಾಗೂ ಜಾಗತಿಕ ನೆಲೆಯಲ್ಲಿ ಪರಿಚಯಿಸಿ ಕೊಡುವುದು ಮತ್ತು ಜಗತ್ತಿನ ಇತರ ಭಾಷೆಗಳ ಶ್ರೇಷ್ಠ ಸಾಹಿತ್ಯವನ್ನು ಕನ್ನಡಿಗರಿಗೆ ಒದಗಿಸುವುದು ಇದರ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಅನುವಾದ ಸಾಹಿತ್ಯ ಈ ಹೊತ್ತು ಸಾಹಿತ್ಯ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಲ್ಲದಿರುವುದರಿಂದ, ಜ್ಞಾನ–ವಿಜ್ಞಾನ– ತಂತ್ರಜ್ಞಾನಗಳ ಕ್ಷೇತ್ರಗಳನ್ನು ಒಳಗೊಂಡಂತೆ ವಿವಿಧ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡಕ್ಕೆ ತರುವುದೂ ಇದರಲ್ಲಿ ಸೇರಿದೆ. ಇದರಿಂದ ಐತಿಹಾಸಿಕ ಹಿರಿಮೆಯ ಜೊತೆಗೆ, ಕನ್ನಡದ ಸಾಮರ್ಥ್ಯ, ವೈಶಿಷ್ಟ್ಯ, ಹಿರಿಮೆಗಳು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟಗಳಲ್ಲಿ ಕಂಗೊಳಿಸುವಂತಾಗುತ್ತದೆ.

'ಸುವರ್ಣ ಕರ್ನಾಟಕ' ಸಂಭ್ರಮದ ಸಂದರ್ಭದಲ್ಲಿ, ಈ ಹಿಂದೆ ನಾಡು ನುಡಿಗೆ ಸೇವೆಯನ್ನು ಸಲ್ಲಿಸಿರುವ ಹಿರಿಯ ಚೇತನಗಳು ಸ್ವಪ್ರೇರಣೆಯಿಂದ ಕನ್ನಡಕ್ಕೆ ತಂದುಕೊಟ್ಟಿರುವ ಶ್ರೇಷ್ಠ ಕೃತಿಗಳಲ್ಲಿ ಆಯ್ದ ಗ್ರಂಥಗಳನ್ನು 'ಸುವರ್ಣ ಅನುವಾದ ಮಾಲೆಯ' ಅಂಗವಾಗಿ ಹೊರತರಲಾಗುತ್ತಿದೆ. ಅಂತೆಯೇ, ಇತರ ಭಾಷೆಗಳಲ್ಲಿನ ಹಾಗೂ ವಿಶ್ವದಲ್ಲಿನ ಶ್ರೇಷ್ಠ ಕೃತಿಗಳನ್ನೂ ಪರಿಚಯಿಸಿ ಕೊಡಲಾಗುತ್ತಿದೆ. ಇವು ಕನ್ನಡಿಗರಿಗೆ ಪ್ರಿಯವಾಗುತ್ತವೆಂದು ನಂಬಿದ್ದೇನೆ. ಈ ಕೃತಿಗಳನ್ನು ಸಹೃದಯತೆಯಿಂದ ಸ್ವಾಗತಿಸುವ ಮೂಲಕ, ಅನುವಾದ ಸಾಹಿತ್ಯ ಅಕಾಡೆಮಿಯ ಇಂಥ ಕೆಲಸಗಳಿಗೆ ಕನ್ನಡ ನಾಡಿನ ಜನತೆ ಪ್ರೋತ್ಸಾಹ ನೀಡುತ್ತದೆ ಎಂದು ಭಾವಿಸಿದ್ದೇನೆ.

(ಹೆಚ್.ಡಿ. ಕುಮಾರಸ್ವಾಮಿ)

**ಹೆಚ್.ಎಸ್. ಮಹದೇವ ಪ್ರಸಾದ್**
ಕನ್ನಡ ಮತ್ತು ಸಂಸ್ಕೃತಿ ಸಚಿವರು

ಕರ್ನಾಟಕ ಸರ್ಕಾರ

ನಂ. ೩೩೦, ೩ನೇ ಮಹಡಿ,
ವಿಧಾನಸೌಧ
ಬೆಂಗಳೂರು – ೫೬೦ ೦೦೧

ದಿನಾಂಕ : ೦೮–೦೨–೨೦೦೭

## ಶುಭಾಕಾಂಕ್ಷೆ

ಕರ್ನಾಟಕ ರಾಜ್ಯದಲ್ಲಿ ಮೊಟ್ಟಮೊದಲ ಬಾರಿಗೆ ಅಸ್ತಿತ್ವಕ್ಕೆ ಬಂದಿರುವ ಅನುವಾದ ಸಾಹಿತ್ಯ ಅಕಾಡೆಮಿ, ರಾಷ್ಟ್ರದಲ್ಲಿಯೇ ಇಂಥ ಆದ್ಯ ಸಂಸ್ಥೆಯಾಗಿದ್ದು ಅನೇಕ ಮಹತ್ವಪೂರ್ಣ ಯೋಜನೆಗಳನ್ನು ಕೈಗೊಂಡು, ಕನ್ನಡ ಸಾಹಿತ್ಯ ಮತ್ತು ಜ್ಞಾನ–ವಿಜ್ಞಾನ ಕ್ಷೇತ್ರಕ್ಕೆ ಅರ್ಥಪೂರ್ಣವಾದ ಕೊಡುಗೆಗಳನ್ನು ನೀಡುವ ಹಂಬಲವನ್ನು ಹೊಂದಿದೆ. ಇದರ ಸ್ಥಾಪನೆಯ ತರುಣದಲ್ಲಿಯೇ ಕರ್ನಾಟಕ ರಾಜ್ಯದ ಸುವರ್ಣ ಸಂಭ್ರಮದ ಉತ್ಸವವೂ ಕೂಡಿಬಂದಿರುವ ಕಾರಣದಿಂದಾಗಿ, ಅನುವಾದ ಸಾಹಿತ್ಯ ಅಕಾಡೆಮಿ ಗಾಂಧೀಜಿ, ನೆಹರೂ ಇಂಥ ಶ್ರೇಷ್ಠ ವ್ಯಕ್ತಿಗಳನ್ನು ಕುರಿತ ಮಹತ್ವದ ಕೃತಿಗಳನ್ನೇ ಅಲ್ಲದೆ, ವಿವಿಧ ಭಾಷೆಗಳಲ್ಲಿನ ಅತ್ಯುತ್ತಮ ಸಾಹಿತ್ಯ ಗ್ರಂಥಗಳನ್ನು ಮತ್ತು ಇತರ ಕೃತಿಗಳನ್ನು ಕನ್ನಡಿಗರಿಗೆ ಒದಗಿಸುವ ಕಾರ್ಯವನ್ನು ಹಮ್ಮಿಕೊಂಡಿರುವುದು ನನಗೆ ತುಂಬಾ ಸಂತೋಷವನ್ನು ಉಂಟುಮಾಡಿದೆ. ಇದರಲ್ಲಿ ದೇಶ–ವಿದೇಶಗಳ ಕಥೆ–ಕಾದಂಬರಿಗಳೂ, ನಾಟಕಗಳೂ, ಮಕ್ಕಳ ಸಾಹಿತ್ಯ, ವಿಜ್ಞಾನ ಸಾಹಿತ್ಯ ಮುಂತಾದ ಹಲವು ಕ್ಷೇತ್ರಗಳ ಕೃತಿಗಳೂ ಸೇರಿದ್ದು, ಕನ್ನಡಿಗರಿಗೆ ವೈವಿಧ್ಯಮಯ ಅನುಭವವನ್ನು ತಂದುಕೊಡುವಲ್ಲಿ ನೆರವಾಗುತ್ತವೆ ಎಂದು ನಂಬಿದ್ದೇನೆ. ಈ ಮಾಲೆಯಲ್ಲಿ ಈ ಬಗೆಯ ಇನ್ನೂ ಅನೇಕ ಕೃತಿಗಳು ಮುಂದಿನ ದಿನಗಳಲ್ಲಿ ಕನ್ನಡಿಗರಿಗೆ ದೊರೆಯಲಿವೆ ಎಂಬ ವಿಚಾರ ನನಗೆ ಹೆಚ್ಚಿನ ಸಂತೋಷವನ್ನು ಉಂಟುಮಾಡಿದೆ. ಇದೇ ರೀತಿ ಕನ್ನಡದ ಶ್ರೇಷ್ಠ ಕೃತಿಗಳನ್ನು ಇತರ ಭಾರತೀಯ ಭಾಷೆಗಳಿಗೆ ಹಾಗೂ ವಿದೇಶೀ ಭಾಷೆಗಳಿಗೆ ಅನುವಾದಿಸಿ ಕೊಡುವ ಕಾರ್ಯಗಳೂ ಸಾಕಷ್ಟು ಪ್ರಮಾಣದಲ್ಲಿ ನಡೆದು ಕನ್ನಡಿಗರ ಸಾಧನೆ ಜಗತ್ತಿಗೆ ಚೆನ್ನಾಗಿ ತಿಳಿದುಬರುವಂಥ ಸಾರ್ಥಕ ಪ್ರಯತ್ನಗಳು ನಡೆಯಲಿ ಎಂದು ಹಾರೈಸುತ್ತೇನೆ.

ಈಗ ಹೊರಬರುತ್ತಿರುವ ಕೃತಿಗಳಿಗೆ ಕನ್ನಡ ವಾಚಕಲೋಕದ ಸಹೃದಯಪೂರ್ಣ ಸ್ವಾಗತ ದೊರೆಯುತ್ತದೆಂದು ನಂಬಿದ್ದೇನೆ. ಇಂಥ ಸ್ವಾಗತ ಮತ್ತು ಪ್ರೋತ್ಸಾಹಗಳು ಅಕಾಡೆಮಿಯ ಮುಂದಿನ ಕಾರ್ಯಚಟುವಟಿಕೆಗಳಿಗೆ ಪ್ರೇರಣೆಯನ್ನೊದಗಿಸಲಿ ಎಂದು ಹಾರೈಸುತ್ತೇನೆ.

**(ಹೆಚ್.ಎಸ್. ಮಹದೇವ ಪ್ರಸಾದ್)**

ಕರ್ನಾಟಕ ಸರ್ಕಾರ

ಐ.ಎಂ. ವಿಠ್ಠಲಮೂರ್ತಿ, ಭಾ.ಆ.ಸೇ.
ಸರ್ಕಾರದ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಹಾಗೂ ಪ್ರವಾಸೋದ್ಯಮ ಇಲಾಖೆ

ಕಛೇರಿ : ೨೨೨೫೫೪೮೨
೨೨೦೩೪೦೦೭

ಕರ್ನಾಟಕ ಸರ್ಕಾರದ ಸಚಿವಾಲಯ
ಕೊ.ನಂ.೫, ನೆಲಮಹಡಿ, ವಿಕಾಸಸೌಧ,
ಬೆಂಗಳೂರು–೫೬೦ ೦೦೧

# ಹೊಸ ಹೆಜ್ಜೆ

ರಾಷ್ಟ್ರಕವಿ ಶ್ರೀ ಕುವೆಂಪು ಅವರ ಹೆಸರಿನಲ್ಲಿ ಸ್ಥಾಪಿಸಲಾಗುತ್ತಿರುವ 'ಶ್ರೀ ಕುವೆಂಪು ಭಾಷಾಭಾರತೀ' ಎಂಬ ರಾಷ್ಟ್ರೀಯ ಸಂಸ್ಥೆಯ ಒಂದು ಸ್ವತಂತ್ರ ವಿಭಾಗವಾಗಿ ಕರ್ನಾಟಕ ಸರ್ಕಾರ 'ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ'ಯನ್ನು ಈಗಾಗಲೇ (೨೦೦೬ರಲ್ಲಿ) ಅಸ್ತಿತ್ವಕ್ಕೆ ತಂದಿದೆ. ಇಂಥ ಉಪಕ್ರಮವನ್ನು ಮೆರೆಯುವಲ್ಲಿ ಕರ್ನಾಟಕವೇ ಮೊದಲನೆಯ ರಾಜ್ಯವಾಗಿದೆ ಎಂಬುದು ಹೆಮ್ಮೆಯ ಸಂಗತಿಯೇ ಆಗಿದೆ. ಈ ಅನುವಾದ ಅಕಾಡೆಮಿ, ಪ್ರಾರಂಭಗೊಂಡ ತರುಣದಲ್ಲಿಯೇ ಕರ್ನಾಟಕ ರಾಜ್ಯದ ಪುನರ್–ರಚನೆಯ ಸುವರ್ಣ ಮಹೋತ್ಸವದ ಸಂದರ್ಭ ಕೂಡಿ ಬಂದದ್ದು ಒಂದು ವಿಶಿಷ್ಟ ಯೋಗಾಯೋಗವೇ ಆಗಿದೆ. ಈ ಸುವರ್ಣ ಮಹೋತ್ಸವದ ಸಂದರ್ಭದ ಆಚರಣೆಯ ಅಂಗವಾಗಿ ಅನುವಾದ ಅಕಾಡೆಮಿ ಅನೇಕ ಮಹತ್ವಪೂರ್ಣ ಯೋಜನೆಗಳನ್ನು ಕೈಗೊಂಡಿದೆ. ಈ ಮೊದಲೇ ವಿಭಿನ್ನ ಭಾಷೆಗಳಲ್ಲಿನ ಹಲವು ಶ್ರೇಷ್ಠ ಲೇಖಕರ ಹಲವಾರು ಶ್ರೇಷ್ಠ ಕೃತಿಗಳು ನಮ್ಮ ಸಾಹಿತಿಗಳ ಗಮನವನ್ನು ಸೆಳೆದಿದ್ದು, ಅವುಗಳ ಯಥಾವತ್ತಾದ, ಸಂಗ್ರಹರೂಪವಾದ, ಅಳವಡಿಕೆಯಂತಿರುವ ಅನುವಾದಗಳನ್ನು ಅವರು ನಮಗೆ ಕೊಡಮಾಡಿದ್ದಾರೆ. 'ಒಬ್ಬನೇ ಉಂಡ ಊಟ ಹಬ್ಬವಲ್ಲ; ಒಬ್ಬನೇ ಸವಿದ ರುಚಿ ರುಚಿಯಲ್ಲ' ಎಂಬ ಗಾದೆ ಮಾತನ್ನು ಸಾರ್ಥಕಗೊಳಿಸುವಂತೆ, ಅವರು ಈ ಕೆಲಸವನ್ನು ಮಾಡಿದ್ದಾರೆ. ಇಂಥ ಪ್ರಸಿದ್ಧ, ಜನಪ್ರಿಯ, ಅಲಭ್ಯ ಕೃತಿಗಳನ್ನು 'ಸುವರ್ಣ ಕರ್ನಾಟಕ' ಯೋಜನೆಯ ಅಂಗವಾಗಿ ಹೊರತರಲಾಗುತ್ತಿದೆ. ಅಂತೆಯೇ, ಇತರ ಭಾಷೆಗಳಲ್ಲಿನ ಹೊಸ ಶ್ರೇಷ್ಠ ಗ್ರಂಥಗಳನ್ನು ಕನ್ನಡಿಗರಿಗೆ ಪರಿಚಯಿಸಿಕೊಡುವ ಪ್ರಯತ್ನವನ್ನೂ ಮಾಡಲಾಗುತ್ತಿದೆ. ಹೀಗೆ, ದೇಶ–ವಿದೇಶಗಳ ಉತ್ಕೃಷ್ಟ ಕೃತಿಗಳಿಂದ ಕನ್ನಡ ಭಾಷೆ–ಸಾಹಿತ್ಯಗಳನ್ನು ಸಮೃದ್ಧಗೊಳಿಸುವ ದಿಕ್ಕಿನಲ್ಲಿ ಅನುವಾದ ಅಕಾಡೆಮಿ ಮಹತ್ತರವಾದ ಪಾತ್ರವನ್ನು ನಿರ್ವಹಿಸಬೇಕಾಗಿದೆ.

ಅನುವಾದ ಇಂದು ತನ್ನ ಆಯಾಮವನ್ನು ಬಹುವಾಗಿ ವಿಸ್ತರಿಸಿಕೊಂಡು ಜ್ಞಾನ–ವಿಜ್ಞಾನ–ತಂತ್ರಜ್ಞಾನ ಕ್ಷೇತ್ರಗಳನ್ನು ತನ್ನ ತೆಕ್ಕೆಗೆ ಒಳಪಡಿಸಿಕೊಂಡಿದೆ. ಹೀಗಾಗಿ, ಈ ದಿಕ್ಕಿನಲ್ಲಿಯೂ ಕನ್ನಡವನ್ನು ಸಮೃದ್ಧಗೊಳಿಸುವತ್ತ ನಮ್ಮ ಗಮನ ಹರಿಯಬೇಕಾಗಿದೆ. ಅಕಾಡೆಮಿ ಈ ದಿಕ್ಕಿನಲ್ಲಿಯೂ ಕಾರ್ಯೋನ್ಮುಖವಾಗಿರುವುದು ಸಂತೋಷದ ವಿಚಾರವೇ ಆಗಿದೆ. ಈ ಬಗೆಯ ಬಹುಮುಖೀ ಕಾರ್ಯಚಟುವಟಿಕೆಗಳಿಂದ ಭಾರತೀಯ ಭಾಷೆಗಳಲ್ಲಿ ಈಗಾಗಲೇ ತನ್ನದೇ ಆದ ಹಿರಿಮೆಯನ್ನು

ಮರೆದಿರುವ, ಮರೆಯುತ್ತಿರುವ ಕನ್ನಡ ಭಾಷೆ–ಸಾಹಿತ್ಯ ಮತ್ತಷ್ಟು ಕಂಗೊಳಿಸುವಂತಾಗುತ್ತದೆ. ಅನೇಕ ಮಹತ್ವದ ಗ್ರಂಥಗಳು ದೊರೆಯುವಂತಾಗುತ್ತಿರುವುದು ವೈಯಕ್ತಿಕವಾಗಿಯೂ ನನಗೆ ಸಂತೋಷವನ್ನು ಉಂಟುಮಾಡುತ್ತಿದೆ. ಇಂಥ ಕಾರ್ಯಗಳಿಗೆ ಸರ್ಕಾರದ ಬೆಂಬಲದ ಜೊತೆಗೆ, ಜನತೆಯ ಹೃತ್ಪೂರ್ವಕ ಪ್ರೋತ್ಸಾಹವೂ ಅಗತ್ಯವಾಗುತ್ತದೆ. ವಿವೇಚನಾಶೀಲರೂ, ಸಹೃದಯರೂ ಆದ ಕನ್ನಡಿಗರು ಇಂಥ ಪ್ರೋತ್ಸಾಹ ನೀಡುವಲ್ಲಿ ಮುಂದಾಗುತ್ತಾರೆ ಎಂದು ನಂಬಿದ್ದೇನೆ. ಅಕಾಡೆಮಿಯ ಕಾರ್ಯಚಟುವಟಿಕೆಗಳು ಇತೋಪ್ಯತಿಶಯವಾಗಿ ಮುಂದುವರಿಯಲಿ ; ಕರ್ನಾಟಕದ ಜನತೆಗೆ ಹೊಸ ಅನುಭವಗಳ ಲೋಕವನ್ನು ತೆರೆದು ತೋರುವ ಕಾರ್ಯಗಳು ಅವಿಚ್ಛಿನ್ನವಾಗಿ ನಡೆಯಲಿ ಎಂದು ಈ ಸಂದರ್ಭದಲ್ಲಿ ಹಾರೈಸಬಯಸುತ್ತೇನೆ.

**(ಐ.ಎಂ. ವಿಠ್ಠಲಮೂರ್ತಿ)**

# ಪ್ರಸ್ತಾವನೆ

ಭಾರತದಲ್ಲಿ ಯಾವುದೇ ರಾಜ್ಯವೊಂದರಲ್ಲಿ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಮೊಟ್ಟಮೊದಲ ಬಾರಿಗೆ ಸ್ಥಾಪಿಸಿದ ಹಿರಿಮೆ ಕರ್ನಾಟಕ ಸರ್ಕಾರದ್ದಾಗಿದೆ. ಜನವರಿ ೬, ೨೦೦೬ರಂದು ಅಂದಿನ ಮಾನ್ಯ ಮುಖ್ಯಮಂತ್ರಿಗಳಾಗಿದ್ದ ಶ್ರೀ ಧರ್ಮಸಿಂಗ್ ಅವರು ವಿಧ್ಯುಕ್ತವಾಗಿ ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯನ್ನು ಉದ್ಘಾಟಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ ಹಾಗೂ ಭಾಷಾಂತರವನ್ನು ವಿಶ್ವವಿದ್ಯಾಲಯದ ಹಂತದಲ್ಲಿ ಶಿಕ್ಷಣ ವಿಷಯವಾಗಿ ಅಳವಡಿಸಿದ ಭಾಷಾಂತರ ಕ್ಷೇತ್ರದ ಭೀಷ್ಮಾಚಾರ್ಯರೂ ಆದ ಪ್ರೊ॥ ದೇ. ಜವರೇಗೌಡ ಅವರೂ, ಹಿರಿಯ ವಿದ್ವಾಂಸರಾದ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ ಅಕಾಡೆಮಿಯ ಕಾರ್ಯಚಟುವಟಿಕೆಗಳ ದಿಕ್ಕು–ದೆಸೆಗಳನ್ನು ನಿರ್ದೇಶಿಸಿದರು.

ನಮ್ಮ ನಾಡಿನಲ್ಲಿರುವ ವಿಚಿತ್ರ ಪರಿಸ್ಥಿತಿ ಎಂದರೆ ವಿದೇಶೀಯ ಭಾಷಾಸಾಹಿತ್ಯಗಳ ಅಷ್ಟಿಷ್ಟು ಪರಿಚಯವಾದರೂ ಇರುವ ನಮಗೆ ನಮ್ಮ ನಾಡಿನ ನೆರೆಹೊರೆಯ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯದ, ಶ್ರೇಷ್ಠ ಸಾಹಿತಿಗಳ ಪರಿಚಯ ಬಹುಮಂದಿಗೆ ಇಲ್ಲವೇ ಇಲ್ಲದಂತಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಇತರ ಕೆಲವು ರಾಷ್ಟ್ರೀಯ ಸಂಸ್ಥೆಗಳು ತಮ್ಮ ಕಾರ್ಯಚಟುವಟಿಕೆಗಳಲ್ಲಿ ಅನುವಾದಗಳನ್ನು ಹೊರತರುವ ಕೆಲವು ಯೋಜನೆಗಳನ್ನು ಕೈಗೊಳ್ಳುತ್ತಿರುವುದುಂಟು. ಆದರೆ, ಈ ಕಾರ್ಯಗಳು ಅಪೇಕ್ಷಣೀಯ ಪ್ರಮಾಣದಲ್ಲಿ ಹಾಗೂ ಪರಸ್ಪರ ಪೂರಕವಾಗುವ ರೀತಿಯಲ್ಲಿ ಆಗುತ್ತಿಲ್ಲ. ಮೇಲಾಗಿ ಈ ಕಾರ್ಯಕ್ರಮಗಳು ಬಹುಮಟ್ಟಿಗೆ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರವೇ ಸೀಮಿತವಾಗಿವೆ. ಹೀಗಾಗಿ, ಪರಸ್ಪರ ಕೊಳು–ಕೊಡೆಯ ಕಾರ್ಯಕ್ರಮಗಳು ಹೆಚ್ಚು–ಹೆಚ್ಚಾಗಿ ಹಾಗೂ ವೈವಿಧ್ಯಮಯವಾಗಿ ಆಗಬೇಕಾದ ಅಗತ್ಯವೂ ಇದೆ.

ಭಾರತೀಯ ಭಾಷಾಸಾಹಿತ್ಯಗಳು ಸಮೃದ್ಧವಾಗಿ ಬೆಳೆಯಬೇಕಾದರೆ, ಎರಡು ಮುಖಗಳಲ್ಲಿ ಕಾರ್ಯಗಳು ಆಗಬೇಕಾಗಿದೆ: (೧) ರಾಷ್ಟ್ರೀಯ ಮಟ್ಟದಲ್ಲಿ; (೨) ಅಂತಾರಾಷ್ಟ್ರೀಯ ಮಟ್ಟದಲ್ಲಿ. ರಾಷ್ಟ್ರೀಯ ಸ್ತರದಲ್ಲಿ ನಮ್ಮ ಭಾಷಾ ಸಾಹಿತ್ಯವನ್ನು ಬಿಂಬಿಸುವ ಕೆಲಸ ಎಷ್ಟು ಮುಖ್ಯವೋ, ಇತರ ಭಾಷೆಗಳಲ್ಲಿನ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಅಷ್ಟೇ ಮುಖ್ಯ. ರಾಷ್ಟ್ರೀಯ–ಅಂತಾರಾಷ್ಟ್ರೀಯ ಮಹತ್ವದ ಸಾಹಿತ್ಯವನ್ನು ಕನ್ನಡಕ್ಕೆ ತಂದುಕೊಳ್ಳುವುದು ಹಾಗೂ ಕನ್ನಡ ಸಾಹಿತ್ಯವನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಿಂಬಿಸುವುದೂ ಅಷ್ಟೇ ಮುಖ್ಯ. ಈ ದೃಷ್ಟಿಯಿಂದ ನೊಬೆಲ್ ಪ್ರಶಸ್ತಿ, ಬೂಕರ್ ಪ್ರಶಸ್ತಿ, ಜ್ಞಾನಪೀಠ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪಂಪ ಪ್ರಶಸ್ತಿ ಮೊದಲಾದ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದುಕೊಂಡಿರುವ ಲೇಖಕರ ಮಹತ್ವದ ಕೃತಿಗಳನ್ನು ಇತರ ಭಾಷೆಗಳಲ್ಲಿ ಹೊರತರುವ ಯೋಜನೆಗಳನ್ನು ಅನುವಾದ ಸಾಹಿತ್ಯ ಅಕಾಡೆಮಿ ತನ್ನ ಮುಂದಿರಿಸಿಕೊಂಡಿದೆ. ಅಷ್ಟೇ ಅಲ್ಲದೆ, ವಿಜ್ಞಾನ–ತಂತ್ರಜ್ಞಾನ, ವೈದ್ಯಕೀಯ, ಮಾನವಿಕ ಮೊದಲಾದ ಕ್ಷೇತ್ರಗಳಲ್ಲಿನ ಶ್ರೇಷ್ಠ ಕೃತಿಗಳನ್ನು ಕನ್ನಡದಲ್ಲಿ ತರುವ ಯೋಜನೆಗಳೂ

ಅಕಾಡೆಮಿಯ ಮುಂದಿವೆ. ಇತರ ರಾಜ್ಯ ಸರ್ಕಾರಗಳೊಂದಿಗೆ ಸಮಾಲೋಚಿಸಿ, ಅಂತೆಯೇ, ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ವಿಭಾಗ, ಕೇಂದ್ರೀಯ ಹಿಂದೀ ನಿರ್ದೇಶನಾಲಯ, ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದಾವಲೀ ಆಯೋಗ ಇತ್ಯಾದಿ ಸಂಸ್ಥೆಗಳೊಂದಿಗೆ ಸಂಪರ್ಕಿಸಿ ಈ ದಿಕ್ಕಿನಲ್ಲಿ ಸಹಕಾರವನ್ನು ಪಡೆದುಕೊಳ್ಳುವ ಆಲೋಚನೆಯನ್ನೂ ಅಕಾಡೆಮಿ ಇರಿಸಿಕೊಂಡಿದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳ ಅಂಗವಾಗಿ ಕಾರ್ಯಶಿಬಿರಗಳನ್ನು ಆಯೋಜಿಸಿ, ಅನುವಾದದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸುವ, ಸಮರ್ಥ ಭಾಷಾಂತರಕಾರರನ್ನು ಗುರುತಿಸುವ ಪ್ರಯತ್ನಗಳನ್ನು ಅಕಾಡೆಮಿ ಮಾಡುತ್ತಿದೆ.  ಈಗಾಗಲೇ ಕನ್ನಡ–ತೆಲುಗು, ಕನ್ನಡ–ಹಿಂದೀ, ಯಂತ್ರಾನುವಾದ, ವಿಜ್ಞಾನ ಸಾಹಿತ್ಯ ಅನುವಾದ ಇವುಗಳಿಗೆ ಸಂಬಂಧಿಸಿದಂತೆ ರಾಜ್ಯದ ಬೇರೆ–ಬೇರೆ ಕೇಂದ್ರಗಳಲ್ಲಿ ಹಾಗೂ ಹೊರ ರಾಜ್ಯಗಳಲ್ಲಿ ಕಾರ್ಯಶಿಬಿರಗಳನ್ನೂ, ವಿಚಾರಗೋಷ್ಠಿಗಳನ್ನೂ ನಡೆಸಲಾಗಿದೆ. ಉರ್ದೂ ಮತ್ತು ತಮಿಳು ಭಾಷೆಗಳ ಕಾರ್ಯಶಿಬಿರಗಳನ್ನು ಆಯೋಜಿಸಲಾಗುತ್ತಿದೆ.

ಭಾಷಾಂತರ ಕ್ಷೇತ್ರದಲ್ಲಿನ ಇತ್ತೀಚಿನ ಬೆಳವಣಿಗೆಗಳನ್ನು ಗಮನಕ್ಕೆ ತೆಗೆದುಕೊಂಡು ಆ ದಿಕ್ಕಿನಲ್ಲಿ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವ ಆಲೋಚನೆಯೂ ಇದೆ.  ಇತ್ತೀಚೆಗೆ ಸ್ಯಾಮ್ ಪಿಟ್ರೋಡಾ ಅವರು 'ರಾಷ್ಟ್ರೀಯ ಅನುವಾದ ಮಿಷನ್' (National Translation Mission) ಅನ್ನು ಸ್ಥಾಪಿಸುವ ಬಗ್ಗೆ ಕೇಂದ್ರ ಸರ್ಕಾರಕ್ಕೆ ಯೋಜನೆಯೊಂದನ್ನು ಸಲ್ಲಿಸಿದ್ದು, ಕೇಂದ್ರ ಸರ್ಕಾರ ಆ ಯೋಜನೆಯನ್ನು ಒಪ್ಪಿಕೊಂಡಿರುವ ವಿಚಾರ ಪತ್ರಿಕೆಗಳಲ್ಲಿ ವರದಿಯಾಗಿದೆ. ಈ ಯೋಜನೆ ಕಾರ್ಯರೂಪಕ್ಕೆ ಬಂದಲ್ಲಿ, ಜ್ಞಾನ–ವಿಜ್ಞಾನ–ತಂತ್ರಜ್ಞಾನಗಳು ಜನಸಾಮಾನ್ಯರ ವರೆಗೂ ಯಶಸ್ವಿಯಾಗಿ ಮುಟ್ಟುವುದು ಸಾಧ್ಯವಾಗುತ್ತದೆ ಹಾಗೂ ರಾಷ್ಟ್ರದ ಪ್ರಗತಿಯೂ ಅಭೂತಪೂರ್ವ ರೀತಿಯಲ್ಲಿ ಆಗುತ್ತದೆ ಎಂದು ಆಶಿಸಲಾಗಿದೆ.  ಈ ಯೋಜನೆ ಉದ್ಯೋಗಸೃಷ್ಟಿಯ ಮಹತ್ತರ ಯೋಜನೆಯೂ ಆಗಲಿದೆ. ಇಂಥ ಸಂದರ್ಭದಲ್ಲಿ ಅಗತ್ಯವಾಗುವ ಲಕ್ಷಾಂತರ ಮಂದಿ ಅನುವಾದಕರ ಪಡೆಯನ್ನು ಸಿದ್ಧಪಡಿಸುವುದು ಇಂಥ ಸಂಸ್ಥೆಗಳ ಮತ್ತು ವಿಶ್ವವಿದ್ಯಾನಿಲಯಗಳ ಹೊಣೆಯೇ ಆಗಿರುತ್ತದೆ. ರಾಜ್ಯದ ಹಾಗೂ ಹೊರಗಿನ ವಿಶ್ವವಿದ್ಯಾನಿಲಯಗಳಲ್ಲಿ ಈಗಾಗಲೇ ಭಾಷಾಂತರ ವಿಭಾಗಗಳು ಸ್ಥಾಪಿತವಾಗಿದ್ದು, ಅವು ಕಾರ್ಯಶೀಲವಾಗುತ್ತಿರುವುದು ಶುಭಸೂಚಕವಾಗಿದೆ.

ಇದುವರೆಗೆ ವಿದ್ವಾಂಸರ ವೈಯಕ್ತಿಕ ಪಾಂಡಿತ್ಯ, ವ್ಯುತ್ಪತ್ತಿ ಮತ್ತು ಒಲವನ್ನು ಆಧರಿಸಿ ಅನುವಾದ ಕಾರ್ಯಗಳು ನಡೆಯುತ್ತಾ ಬಂದಿವೆ.  ಆದರೆ ಇಂಥ ಕಾರ್ಯಗಳು ವ್ಯವಸ್ಥಿತವಾಗಿ ಹಾಗೂ ಉತ್ತಮ ಗುಣಮಟ್ಟದೊಂದಿಗೆ ನಡೆಯಬೇಕಾದ್ದು ಅಪೇಕ್ಷಣೀಯವಾಗಿರುವ ಹಿನ್ನೆಲೆಯಲ್ಲಿ, ಭಾಷಾಂತರ ಸಂಬಂಧವಾದ ಶಿಕ್ಷಣ–ಕ್ರಮಗಳನ್ನು ರೂಪಿಸುವುದು ಹಾಗೂ ದ್ವಿಭಾಷಾ ಮತ್ತು ಬಹುಭಾಷಾ ನಿಘಂಟುಗಳನ್ನು, ನುಡಿಗಟ್ಟುಗಳ ಮತ್ತು ಗಾದೆಗಳ ಕೋಶಗಳು, ಸಮಾನಾರ್ಥಕ ಮತ್ತು ಭಿನ್ನಾರ್ಥಕ ಕೋಶಗಳು ಹಾಗೂ ವಾಕ್ಯರಚನಾ ಕೈಪಿಡಿಗಳನ್ನು ಹೊರತರುವುದು – ಇವೇ ಮೊದಲಾದ ಕಾರ್ಯಗಳು ಆದ್ಯತೆಯ ಮೇರೆಗೆ ನಡೆಯಬೇಕಾಗಿವೆ.  ಅನುವಾದ ಅಕಾಡೆಮಿ ಸ್ಥಾಪಿತವಾದ ಅತ್ಯಲ್ಪ ಅವಧಿಯಲ್ಲಿಯೇ ಇತರ ಸಂಘ–ಸಂಸ್ಥೆಗಳ ಗಮನವನ್ನು ಸೆಳೆದಿದ್ದು, ಅಂತರರಾಷ್ಟ್ರೀಯ ಕನಕದಾಸ ಮಿಷನ್‌ನಂತಹ

ಸಂಸ್ಥೆ ಅನುವಾದ ಅಕಾಡೆಮಿಯೊಂದಿಗೆ ಸಹಕರಿಸಲು ಮುಂದೆ ಬಂದಿರುವುದು ಗಮನಾರ್ಹವಾದ ವಿಚಾರವೇ ಆಗಿದೆ. ಅಂತೆಯೇ, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯದ ಸಹಕಾರದೊಂದಿಗೆ ಇಂಜಿನಿಯರಿಂಗ್ ವಿಷಯಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಕನ್ನಡದಲ್ಲಿ ಹೊರತರುವ ಬಗ್ಗೆಯೂ ಆಲೋಚನೆ ಮಾಡಲಾಗುತ್ತಿದೆ. ಹೀಗೆ ಅನುವಾದ ಅಕಾಡೆಮಿ ಅನೇಕ ದಿಕ್ಕುಗಳಲ್ಲಿ ಮುಂದುವರಿದು ಸಾಧನೆ ಮಾಡಬೇಕಾಗಿದೆ.

ಕರ್ನಾಟಕ ಸರ್ಕಾರ ಅನುವಾದ ಅಕಾಡೆಮಿಯ ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು ತೋರಿ ಅಗತ್ಯವಾದ ನೆರವನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ವಿಶೇಷ ಸಂತೋಷದ ವಿಚಾರವೇ ಆಗಿದೆ. ಅದರಲ್ಲಿಯೂ ಈ ಬಾರಿ ಸುವರ್ಣ ಕರ್ನಾಟಕ ಕಾರ್ಯಕ್ರಮಗಳ ಅಂಗವಾಗಿ ವಿಶೇಷ ಧನಸಹಾಯ ನೀಡಿರುವುದರಿಂದ ಪ್ರಸಿದ್ಧ/ಅಲಭ್ಯ ಅನುವಾದಗಳ ಮರುಪ್ರಕಟಣೆ ಕಾರ್ಯವನ್ನು ಕೈಗೊಳ್ಳುವುದು, ಮತ್ತಿತರ ಮಹತ್ವದ ಪ್ರಕಟಣೆಗಳನ್ನು ಕೈಗೊಳ್ಳುವುದು ಸಾಧ್ಯವಾಗಿದೆ. ಈ ದಿಕ್ಕಿನಲ್ಲಿ ನಾಡಿನ ವಿದ್ವಾಂಸರು ವಿಶೇಷವಾದ ಸಹಾಯ-ಸಹಕಾರಗಳನ್ನು ನೀಡಲು ಮುಂದೆ ಬಂದಿರುವುದು ಅಕಾಡೆಮಿಗೆ ಗೌರವದ, ಸಂತೋಷದ ಹಾಗೂ ಹೆಮ್ಮೆಯ ವಿಚಾರವೇ ಆಗಿದೆ. ಈ ಸಂದರ್ಭದಲ್ಲಿ ವಿಲ್ ಡ್ಯೂರಾಂಟ್ ಅವರ ಜಗತ್-ಪ್ರಸಿದ್ಧವಾಗಿರುವ ಹಾಗೂ ಭಾರತದ ಬೇರಾವ ಭಾಷೆಯಲ್ಲೂ ಇನ್ನೂ ಬೆಳಕು ಕಾಣದಿರುವ 'ದಿ ಸ್ಟೋರಿ ಆಫ್ ಸಿವಿಲಿಜೇಷನ್' ಸಂಪುಟಗಳ ಕನ್ನಡ ಅನುವಾದವನ್ನು ಹೊರತರುವಲ್ಲಿ ಪ್ರೊ॥ ಎಲ್.ಎಸ್. ಶೇಷಗಿರಿರಾವ್ ಅವರೂ, ಬಹಳ ಹಿಂದೆಯೇ ಇಂಗ್ಲಿಷ್‌ನಲ್ಲಿ ೧೦ ಸಂಪುಟಗಳಲ್ಲಿ ಪ್ರಕಟಣೆಗೊಂಡಿರುವ ಸಂಸ್ಕೃತ ಸಾಹಿತ್ಯದ ವಿಶಿಷ್ಟ ಕೃತಿಯಾದ ಸೋಮದೇವನ 'ಕಥಾಸರಿತ್ಸಾಗರ'ದ ಕನ್ನಡ ಅನುವಾದವನ್ನು ನೇರವಾಗಿ ಸಂಸ್ಕೃತದಿಂದ ಅನುವಾದಿಸಿ ಹೊರತರುವಲ್ಲಿ ಡಾ॥ ಪಿ.ಎಸ್.ರಾಮಾನುಜಮ್ ಅವರೂ ನೆರವು ನೀಡುತ್ತಿರುವುದು ವಿಶೇಷವಾಗಿ ಸ್ಮರಣೀಯವಾಗಿದೆ. ಕನ್ನಡ ಸಹೃದಯಲೋಕ ಅಕಾಡೆಮಿಯ ಈ ಕಾರ್ಯಚಟುವಟಿಕೆಗಳ ವಿಷಯದಲ್ಲಿ ತನ್ನ ಸಹೃದಯತೆಯನ್ನು ಮೆರೆಯುತ್ತದೆ ಎಂದು ಆಶಿಸಿದ್ದೇನೆ.

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿಯ ಸ್ಥಾಪನೆಗೆ ಕಾರಣರಾದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಧರ್ಮಸಿಂಗ್ ಅವರಿಗೂ, ಅಕಾಡೆಮಿಯ ಕಾರ್ಯಚಟುವಟಿಕೆಗಳ ವಿಷಯದಲ್ಲಿ ವಿಶೇಷ ಆಸಕ್ತಿಯನ್ನು ತೋರಿ, ಎಲ್ಲ ನೆರವನ್ನು ನೀಡುತ್ತಿರುವ ಇಂದಿನ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಹೆಚ್.ಡಿ.ಕುಮಾರಸ್ವಾಮಿ ಅವರಿಗೂ, ಮಾನ್ಯ ಉಪಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್.ಯಡಿಯೂರಪ್ಪನವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವರಾದ ಮಾನ್ಯ ಶ್ರೀ ಮಹದೇವ ಪ್ರಸಾದ್ ಅವರಿಗೂ ಅಕಾಡೆಮಿ ವಿಶೇಷ ಕೃತಜ್ಞತೆಗಳನ್ನು ಸಲ್ಲಿಸಬಯಸುತ್ತದೆ. ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಬಗೆಯ ಸಹಾಯ-ಸಹಕಾರ-ಮಾರ್ಗದರ್ಶನ ನೀಡುತ್ತಾ ಬಂದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾಗಿದ್ದ ಶ್ರೀಮತಿ ಉಷಾ ಗಣೇಶ್ ಅವರಿಗೂ, ಚೈತನ್ಯಶೀಲರೂ, ದೂರಗಾಮಿ ದೃಷ್ಟಿಯನ್ನುಳ್ಳವರೂ ಆದ ಇಂದಿನ ಕಾರ್ಯದರ್ಶಿಗಳಾದ ಶ್ರೀ ಐ.ಎಂ.ವಿಠ್ಠಲಮೂರ್ತಿ ಅವರಿಗೂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಹಿಂದಿನ ಆಯುಕ್ತರುಗಳಾಗಿದ್ದ ಶ್ರೀ ಕೆ.ಆರ್.ನಿರಂಜನ್ ಮತ್ತು ಶ್ರೀ ಎಸ್.ಎಫ್. ಯೋಗಪ್ಪನವರ್

ಅವರಿಗೂ, ಈಗಿನ ನಿರ್ದೇಶಕರಾಗಿರುವ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೂ ಅಕಾಡೆಮಿ ವಿಶೇಷ ವಂದನೆಗಳನ್ನು ಸೂಚಿಸಬಯಸುತ್ತದೆ.

ಅಕಾಡೆಮಿಯ ಕಾರ್ಯಚಟುವಟಿಕೆಗಳಿಗೆ ಎಲ್ಲ ಸಹಾಯ, ಸಹಕಾರ ಮತ್ತು ಮಾರ್ಗದರ್ಶನ ಮಾಡುತ್ತಿರುವ ಅಕಾಡೆಮಿಯ ಎಲ್ಲ ಗೌರವಾನ್ವಿತ ಸದಸ್ಯರಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಮಹಾಕವಿ ಸೋಮದೇವಭಟ್ಟನ 'ಕಥಾಸರಿತ್ಸಾಗರ' ಸಂಸ್ಕೃತ ಕಥಾಸಾಹಿತ್ಯದ ಅಪೂರ್ವ ಕೃತಿಗಳಲ್ಲಿ ಒಂದು. ಭಾರತೀಯ ಧರ್ಮ, ಸಂಸ್ಕೃತಿ, ನೀತಿಶಾಸ್ತ್ರ, ರಾಜಕೀಯ ಚಿಂತನೆ, ಸಾಮಾಜಿಕ ಕಳಕಳಿ, ಸಾಹಿತ್ಯ ಪ್ರೀತಿ, ಕಥಾನಿರೂಪಣೆಯ ಕಲೆಗಾರಿಕೆ ಮತ್ತು ಸ್ವಾರಸ್ಯ – ಇವುಗಳೆಲ್ಲದರಿಂದ ಅದು ಭಾರತೀಯ ಸಾಹಿತ್ಯದ ವಿಶಿಷ್ಟ ಕೃತಿಗಳಲ್ಲಿ ಒಂದಾಗಿದೆ. ಜೀವನದ ಬಗೆಗಿನ ಎಲ್ಲ ಭಾರತೀಯ ಆದರ್ಶಗಳು ಇಲ್ಲಿಯ ಕಥೆಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ಮೈದಳೆದಿವೆ. ನಮ್ಮ ಪ್ರಾಚೀನ ಕಥಾಪರಂಪರೆಯ ಪ್ರತೀಕವಾಗಿರುವಂತೆಯೇ, ತನ್ನ ಕಾವ್ಯಮಯ ನಿರೂಪಣೆಯಿಂದಲೂ ಅದು ಸಾಹಿತ್ಯಪ್ರಿಯರನ್ನು ತನ್ನತ್ತ ಸೆಳೆದುಕೊಂಡಿದೆ. ಇಂಥ ಕೃತಿಯ ಓದು ನಮ್ಮ ಮಕ್ಕಳಲ್ಲಿ, ಜನತೆಯಲ್ಲಿ ಸತ್–ಸಂಸ್ಕೃತಿಯನ್ನು ಮೂಡಿಸಲು ಖಂಡಿತವಾಗಿಯೂ ನೆರವಾಗುತ್ತದೆ. ಇದರ ಮಹತ್ವವನ್ನು ಅರಿತ ಸಿ.ಎಚ್. ಥಾನಿ ಎಂಬ ಪಾಶ್ಚಾತ್ಯ ವಿದ್ವಾಂಸ ಕಳೆದ ಶತಮಾನದಲ್ಲಿಯೇ (ಸು. ೧೯೨೩) ಹನ್ನೊಂದು ಸಂಪುಟಗಳಲ್ಲಿ ಇದನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದನೆಂಬ ಸಂಗತಿ ಇದರ ವೈಶಿಷ್ಟ್ಯ–ಮಹತ್ವಗಳಿಗೆ ಸಾಕ್ಷಿಯಾಗಿದೆ. ಟಿ. ಚಿದಂಬರ ಪಂಡಿತರು 'ಕರ್ಣಾಟಕ ಕಥಾಸರಿತ್ಸಾಗರ' (೧೯೨೨) ಎಂಬ ಹೆಸರಿನಲ್ಲಿಯೂ, ಎ. ಆರ್. ಕೃಷ್ಣಶಾಸ್ತ್ರಿಗಳು 'ಕಥಾಮೃತ' (೧೯೫೨, ೬೮) ಎಂಬ ಹೆಸರಿನಲ್ಲಿಯೂ ಇದರ ಸಂಕ್ಷಿಪ್ತ ಆವೃತ್ತಿಗಳನ್ನು ಹೊರತಂದಿದ್ದರು. ದೇವುಡು ಅವರ ವಿ. ರಾಘವನ್ ಅವರಿಂದ ಸಂಕಲಿತವಾದ ಇದರ ೧೬–ಕಥೆಗಳನ್ನು ಕನ್ನಡಕ್ಕೆ ತಂದಿರುವುದೂ (೧೯೫೮) ಗಮನಿಸಬೇಕಾದ ಸಂಗತಿಯೇ ಆಗಿದೆ. ಆದರೆ ಸಮಗ್ರವಾಗಿ ಹಾಗೂ ಸಮೂಲವಾಗಿ ಇದರ ಕನ್ನಡ ಆವೃತ್ತಿ ಹೊರಬರುತ್ತಿರುವುದು ಇದೇ ಮೊದಲು. 'ನಿರ್ಣಯ ಸಾಗರ'ದ ವತಿಯಿಂದ ಪ್ರಕಟವಾಗಿರುವ ಪಂಡಿತ ದುರ್ಗಾ ಪ್ರಸಾದ್ ಮತ್ತು ಕಾಶೀನಾಥ ಪಾಂಡುರಂಗ ಪರಬ್ ಅವರಿಂದ ಸಂಪಾದಿತವಾದ ಹಾಗೂ ವಾಸುದೇವ ಲಕ್ಷ್ಮಣಶಾಸ್ತ್ರೀ ಪಣಶೀಕರ ಅವರಿಂದ ಪರಿಶೋಧಿತವಾಗಿರುವ ೧೯೧೫ರ ಆವೃತ್ತಿಯನ್ನು ಇದಕ್ಕೆ ಆಧಾರವಾಗಿ ಇರಿಸಿಕೊಳ್ಳಲಾಗಿದೆ. ನಾಡಿನ ಅನೇಕ ಖ್ಯಾತ ಸಂಸ್ಕೃತ ವಿದ್ವಾಂಸರು ಅಕಾಡೆಮಿಯ ಈ ಯೋಜನೆಯಲ್ಲಿ ಸಹಕರಿಸಿದ್ದಾರೆ. ಡಾ. ಪಿ.ಎಸ್. ರಾಮಾನುಜಂ ಅವರಂಥ ಅಪರೂಪದ ಸಾಹಿತಿ, ವಿದ್ವಾಂಸರು ಈ ಯೋಜನೆಯ ಸಂಪಾದಕರಾಗಿ ಕಾರ್ಯನಿರ್ವಹಿಸಲು ಒಪ್ಪಿರುವುದಂತೂ ಅಕಾಡೆಮಿಗೆ ಗೌರವಪ್ರಾಯವಾದ ಸಂಗತಿಯಾಗಿದೆ ಎಂದು ನಂಬಿದ್ದೇನೆ. ಅನುವಾದಗಳಿಗೆ ಶಿಷ್ಟತೆ, ಸಾಹಿತ್ಯಸೌಷ್ಠವ ಮತ್ತು ಲಾಲಿತ್ಯಗಳನ್ನು ತಂದುಕೊಟ್ಟಿರುವುದಲ್ಲದೆ, ಕನ್ನಡ ಗದ್ಯದ ಸಹಜಗುಣಗಳು ಅಳವಡುವಂತೆ ಅವರು ನೋಡಿಕೊಂಡಿದ್ದಾರೆ. ಜೊತೆಗೆ ವಿದ್ವತ್ ಪೂರ್ಣವಾಗಿರುವ ಪೀಠಿಕೆಯನ್ನು ಬರೆದುಕೊಟ್ಟು ಈ ಸಂಪುಟಗಳ ಶೋಭೆ ಮತ್ತು ಮಹತ್ವವನ್ನು ಹೆಚ್ಚಿಸಿದ್ದಾರೆ. ಇವೆಲ್ಲ ಕನ್ನಡದ ಬಗೆಗಿನ ಅವರ ಪ್ರೀತಿ–ಗೌರವಗಳಿಗೆ ನಿದರ್ಶನವಾಗಿವೆಯೆಂದು ನಂಬಿದ್ದೇನೆ. ಅವಿರತವಾಗಿ ಶ್ರಮಿಸಿ, ನಮ್ಮ ಈ ಯೋಜನೆ ಕಾಲಬದ್ಧವಾಗಿ ಕೈಗೂಡುವಂತೆ ಮಾಡುವಲ್ಲಿ

ಅವರು ನೀಡಿರುವ ಸಹಾಯ–ಸಹಕಾರ–ಮಾರ್ಗದರ್ಶನಗಳು ಅವಿಸ್ಮರಣೀಯವಾಗಿರುವಂಥವು. ಈ ಮೊದಲ ಸಂಪುಟದ ಅನುವಾದ ಕಾರ್ಯದಲ್ಲಿ ನಮಗೆ ನೆರವಾಗಿರುವವರು ಅಂತರರಾಷ್ಟ್ರೀಯ ಖ್ಯಾತಿಯ ಸಂಸ್ಕೃತ ವಿದ್ವಾಂಸರಾದ ಶ್ರೀ ಎಚ್.ವಿ. ನಾಗರಾಜರಾವ್ ಅವರು. ಆದರ್ಶವೆನ್ನಬಹುದಾದ ರೀತಿಯಲ್ಲಿ ಮೊದಲ ಐದು ಲಂಬಕಗಳನ್ನು ಅನುವಾದಿಸಿಕೊಟ್ಟಿರುವುದಲ್ಲದೆ, ಮೂಲದಲ್ಲಿ ಉಳಿದುಹೋಗಿದ್ದ ಭಾಷಾದೋಷಗಳನ್ನೂ/ಅಚ್ಚಿನ ತಪ್ಪುಗಳನ್ನೂ ಸರಿಪಡಿಸಿಕೊಡುವುದರ ಮೂಲಕ ಕನ್ನಡ ಆವೃತ್ತಿ ಶಿಷ್ಟ ಆವೃತ್ತಿಯಾಗುವಂತೆಯೂ ಅವರು ನೋಡಿಕೊಂಡಿದ್ದಾರೆ. ಬೇಸರವಿಲ್ಲದೆ ಕರಡುಗಳನ್ನು ಪರಿಶೀಲಿಸಿಕೊಟ್ಟಿದ್ದಾರೆ. ಅವರ ಈ ವಿದ್ವತ್ ಪ್ರೇಮ ಸಾಹಿತ್ಯಪ್ರಿಯರೆಲ್ಲರ ಮೆಚ್ಚುಗೆಗೆ ಪಾತ್ರವಾಗುತ್ತದೆಂದು ನಂಬಿದ್ದೇವೆ. ಈ ಸಂಪುಟದಲ್ಲಿ ಎರಡು ಮತ್ತು ಮೂರು – 'ಕಥಾಮುಖ' ಮತ್ತು 'ಲಾವಾಣಕ' – ಲಂಬಕಗಳ ಅನುವಾದವನ್ನು ಅಳವಡಿಸಲಾಗಿದೆ. ಈ ಎಲ್ಲ ಮಹನೀಯರಿಗೂ ಅಕಾಡೆಮಿ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸಬಯಸುತ್ತದೆ.

ಇನ್ನೊಂದು ಮಾತು: ಇದರ ಮಹತ್ವವನ್ನು ಮನಗಂಡ ಕನ್ನಡ ನಾಡಿನ ಅನೇಕ ಗಣ್ಯ ವಿದ್ವಾಂಸರು ಥಾನಿಯವರು ಸಂಪಾದಿಸಿರುವ '*The Ocean of Story*' ಆವೃತ್ತಿಯ ಕನ್ನಡ ಅವತರಣಿಕೆಯನ್ನು ಹೊರತರಬೇಕೆಂಬ ಪ್ರಸ್ತಾಪವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಮುಂದೆ ಇರಿಸಿದ್ದರು. ಹೀಗಾಗಿ ಇದು ಮೂಲತಃ ಕನ್ನಡ ಪುಸ್ತಕ ಪ್ರಾಧಿಕಾರದವರ ಯೋಜನೆ, ಅವರು ಈ ದಿಕ್ಕಿನಲ್ಲಿ ಕ್ರಮ ಕೈಗೊಂಡು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅನುವಾದ ಅಕಾಡೆಮಿಯ ಸ್ಥಾಪನೆಯಾದ ಹಿನ್ನೆಲೆಯಲ್ಲಿ, ಅಂದಿನ ಪ್ರಧಾನ ಕಾರ್ಯದರ್ಶಿಗಳು ಇದನ್ನು ಅಕಾಡೆಮಿಗೆ ವರ್ಗಾಯಿಸಿದರು. ಬೇಸರಪಟ್ಟುಕೊಳ್ಳದೆ ಇದಕ್ಕೆ ಒಪ್ಪಿಗೆ ನೀಡಿದ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ॥ ಎಸ್. ಜಿ. ಸಿದ್ಧರಾಮಯ್ಯನವರಿಗೆ ಅನುವಾದ ಅಕಾಡೆಮಿ ಕೃತಜ್ಞವಾಗಿದೆ.

ಅಕಾಡೆಮಿ ಈ ಯೋಜನೆಯಲ್ಲಿ ಒಂದು ಬದಲಾವಣೆ ಮಾಡಿಕೊಂಡಿದೆ. ಮೂಲ ಸಂಸ್ಕೃತ ಗ್ರಂಥದ ಇಂಗ್ಲಿಷ್ ಆವೃತ್ತಿಯನ್ನು ಕನ್ನಡಕ್ಕೆ ತಂದುಕೊಳ್ಳುವ ಬದಲಿಗೆ ನೇರವಾಗಿ ಸಮೂಲವಾಗಿ ಸಂಸ್ಕೃತದಿಂದಲೇ ಅನುವಾದಿಸಿಕೊಳ್ಳುವುದೇ ಆ ಬದಲಾವಣೆ. ಕನ್ನಡ ಓದುಗರಿಗೆ ನೇರವಾಗಿ ಕಥೆಯನ್ನು ಓದಿಕೊಂಡು ಹೋಗಲು ಅನುಕೂಲವಾಗುವಂತೆ ಕನ್ನಡಾನುವಾದವನ್ನು ಪುಟದ ಮೇಲು ಅರ್ಧದಲ್ಲಿ ಕೊಟ್ಟು, ಮೂಲವನ್ನು ಕೆಳ ಅರ್ಧದಲ್ಲಿ ಅಳವಡಿಸಲಾಗಿದೆ. ಇದು ಕನ್ನಡ–ಸಹೃದಯರಿಗೆ ಪ್ರಿಯವಾಗುತ್ತದೆಂದು ನಂಬಿದ್ದೇವೆ. ಮುಂದಿನ ಒಂದೆರಡು ವರ್ಷಗಳಲ್ಲಿ ಸುಮಾರು ೨೦ ಸಂಪುಟಗಳ ಇಡೀ ಕೃತಿಯನ್ನು ಕನ್ನಡ ಜನಸಮುದಾಯಕ್ಕೆ ಒಪ್ಪಿಸಲು ಸಾಧ್ಯವಾದೀತೆಂದೂ ನಂಬಿದ್ದೇವೆ. ಇದು ಸಾಧ್ಯವಾದಾಗ ಕನ್ನಡದ ಸಾಧನೆಗೆ ಇನ್ನೊಂದು ಹೆಮ್ಮೆಯ ಗರಿ ಸೇರಿದಂತಾಗುತ್ತದೆಂದು ನಂಬಿದ್ದೇವೆ.

ಅನುವಾದ ಅಕಾಡೆಮಿಯ ಕೆಲಸ–ಕಾರ್ಯಗಳಲ್ಲಿ ಹಾಗೂ ಪ್ರಕಟಣೆಯ ವಿಚಾರದಲ್ಲಿ ಹೃತ್ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಅಕಾಡೆಮಿಯ ರಿಜಿಸ್ಟ್ರಾರ್ ಪಿ. ನಾರಾಯಣಸ್ವಾಮಿ ಮತ್ತು ಇತರ ಸಿಬ್ಬಂದಿವರ್ಗದವರಿಗೆ ಹಾಗೂ ಸುಂದರವಾಗಿ ಮುದ್ರಿಸುವಲ್ಲಿ ಸಹಕರಿಸಿರುವ

ಮೆ॥ ಮಯೂರ ಪ್ರಿಂಟ್ ಆಡ್ಸ್‌ನ ಶ್ರೀ ಬಿ.ಎಲ್. ಶ್ರೀನಿವಾಸ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮ್ಮ ವಂದನೆಗಳು.

ಈ ಯೋಜನೆಯಲ್ಲಿ ಹೃತ್ಪೂರ್ವಕವಾಗಿ ಸಹಕರಿಸಿದ್ದ ಡಾ. ಬಿ. ಎಸ್. ರಾಮಕೃಷ್ಣರಾವ್ ಅವರು ಈ ಸಂಪುಟಗಳು ಹೊರಬರುವ ಮೊದಲೇ ವಿಧಿವಶರಾದದ್ದು ನಮಗೆ ತುಂಬ ವಿಷಾದವನ್ನುಂಟು ಮಾಡಿದೆ. ಅವರ ಆತ್ಮಕ್ಕೆ ನಮ್ಮ ಕಾರ್ಯ ಸಂತೋಷವನ್ನು ತರುತ್ತದೆಂದು ನಂಬಿದ್ದೇವೆ.

**ಪ್ರಧಾನ್ ಗುರುದತ್ತ**
ಅಧ್ಯಕ್ಷ

# ಪರಿವಿಡಿ



# ಕಥಾಸರಿತ್ಸಾಗರ

## ಲಾವಾಣಕ (ಮೂರನೆಯ ಲಂಬಕ) ೧೪೫-೩೪೮

ಕರ್ನಾಟಕ ಅನುವಾದ ಸಾಹಿತ್ಯ ಅಕಾಡೆಮಿ ಪ್ರಕಟಣೆ - ೨೪
ಸಾಹಿತ್ಯಮಾಲೆ - ೨೩

ಪ್ರಧಾನ ಸಂಪಾದಕರು

**ಡಾ. ಪ್ರಧಾನ್ ಗುರುದತ್ತ**

ಸಂಪಾದಕರು

**ಡಾ. ಪಿ. ಎಸ್. ರಾಮಾನುಜಂ**

# ಕಥಾಸರಿತ್ಸಾಗರ

**(ಸಂಪುಟ ೧)**

**(ಲಂಬಕಗಳು: ಕಥಾಮುಖ ಮತ್ತು ಲಾವಾಣಕ)**

ಮಹಾಕವಿ ಶ್ರೀ ಸೋಮದೇವಭಟ್ಟನಿಂದ

ವಿರಚಿತವಾದ

# ಕಥಾಸರಿತ್ಸಾಗರ

(ಸಂಪುಟ ೨)

(ಲಂಬಕಗಳು: ಕಥಾಮುಖ ಮತ್ತು ಲಾವಾಣಕ)

# ಕಥಾಮುಖ ಎಂಬ ಎರಡನೆಯ ಲಂಬಕ

## ಒಂದನೆಯ ತರಂಗ

೧ ಮುಕ್ಕಣ್ಣನ ಮೂರನೆಯ ಕಣ್ಣಿನ ಬೆಂಕಿಯ ಭೀತಿಯಿಂದ ಮನ್ಮಥನು ಪ್ರಯೋಗಿಸಿದ ವಾರುಣಾಸ್ತ್ರವೋ ಎಂಬಂತಿದ್ದ ಗೌರಿಯ ಮೊದಲನೆಯ ಆಲಿಂಗನದಲ್ಲಿ ಸುರಿದ ಶಿವನ ಬೆವರ ನೀರು ನಿಮ್ಮನ್ನು ಕಾಪಾಡಲಿ.

೨–೩. ಕೈಲಾಸದಲ್ಲಿ ಶಿವನ ಬಾಯಿಂದ ಪುಷ್ಪದಂತನಿಗೂ, ವರರುಚಿರೂಪವನ್ನು ಧರಿಸಿದ ಪುಷ್ಪದಂತನಿಂದ ಭೂಲೋಕದಲ್ಲಿ ಕಾಣಭೂತಿಗೂ, ಕಾಣಭೂತಿಯಿಂದ ಗುಣಾಢ್ಯನಿಗೂ, ಗುಣಾಢ್ಯನಿಂದ ಸಾತವಾಹನನಿಗೂ ತಲುಪಿದ ಅದ್ಭುತ ವಿದ್ಯಾಧರ ಕಥೆಯನ್ನು ಕೇಳಿರಿ.

೪. ಸ್ವರ್ಗಲೋಕದ ಗರ್ವವನ್ನು ಅಡಗಿಸಲು ಅದರ ಪ್ರತಿಸ್ಪರ್ಧಿಯಾಗಿ ಬ್ರಹ್ಮನಿಂದ ರಚಿತವಾಗಿದೆಯೋ ಎಂಬಂತಿರುವ ವತ್ಸ ಎಂಬ ಪ್ರಸಿದ್ಧ ದೇಶವಿದೆ.

---

## ಕಥಾಮುಖಂ ನಾಮ ದ್ವಿತೀಯೋ ಲಂಬಕಃ

## ಪ್ರಥಮಸ್ತರಂಗಃ

ಗೌರೀನವಪರಿಷ್ವಂಗೇ ವಿಭೋಃ ಸ್ವೇದಾಂಬು ಪಾತು ವಃ ।
ನೇತ್ರಾಗ್ನಿಭೀತ್ಯಾ ಕಾಮೇನ ವಾರುಣಾಸ್ತ್ರಮಿವಾಹಿತಮ್ ॥ ೧
ಕೈಲಾಸೇ ಧೂರ್ಜಟೇರ್ವಕ್ತ್ರಾತ್ ಪುಷ್ಪದಂತಂ ಗಣೋತ್ತಮಮ್ ।
ತಸ್ಮಾದ್ ವರರುಚೀಭೂತಾತ್ ಕಾಣಭೂತಿಂ ಚ ಭೂತಲೇ ॥ ೨
ಕಾಣಭೂತೇರ್ಗುಣಾಢ್ಯಂ ಚ ಗುಣಾಢ್ಯಾತ್ ಸಾತವಾಹನಮ್ ।
ಯತ್ಪ್ರಾಪ್ತಂ ಶೃಣುತೇದಂ ತದ್ ವಿದ್ಯಾಧರಕಥಾದ್ಭುತಮ್ ॥ ೩
ಅಸ್ತಿ ವತ್ಸ ಇತಿಖ್ಯಾತೋ ದೇಶೋ ದರ್ಪೋಪಶಾಂತಯೇ ।
ಸ್ವರ್ಗಸ್ಯ ನಿರ್ಮಿತೋ ಧಾತ್ರಾ ಪ್ರತಿಮಲ್ಲ ಇವ ಕ್ಷಿತೌ ॥ ೪

೫ ಭೂಮಂಡಲದ ಕೇಂದ್ರದಂತಿರುವ ಲಕ್ಷ್ಮಿಯ ವಿಲಾಸಗಳಿಗೆ ನೆಲೆಯಾಗಿರುವ ಕೌಶಾಂಬೀ ಎಂಬ ಮಹಾನಗರಿಯು ಅದರ ಮಧ್ಯಭಾಗದಲ್ಲಿದೆ.

೬ ಪಾಂಡವರ ವಂಶದಲ್ಲಿ ಹುಟ್ಟಿದವನೂ ಜನಮೇಜಯನ ಮಗನೂ ಪರೀಕ್ಷಿತನ ಮೊಮ್ಮಗನೂ ಆಗಿದ್ದ ರಾಜನಾದ ಶತಾನೀಕನು ಅದರಲ್ಲಿದ್ದನು.

೭ ಅವನು ಅಭಿಮನ್ಯುವಿನ ಮರಿಮಗ. ತ್ರಿಪುರಗಳ ಶತ್ರುವಾದ ಶಿವನ ಜಯಸ್ತಂಭಗಳಂತಹ ತೋಳುಗಳಲ್ಲಿ ತನ್ನ ಬಾಹುದಂಡಗಳ ಶಕ್ತಿಯನ್ನು ತೋರಿಸಿದ ಅರ್ಜುನನು ಅವನ ಆದಿಪುರುಷ.

೮ ಅವನಿಗೆ ಭೂಮಿಯೂ, ರಾಣಿ ವಿಷ್ಣುಮತಿಯೂ ಪತ್ನಿಯರು. ಭೂಮಿಯೇನೋ ರತ್ನಗಳನ್ನು ಉತ್ಪಾದಿಸುತ್ತಿತ್ತು. ಆದರೆ ಆ ಇನ್ನೊಬ್ಬ ಪತ್ನಿಯು ಮಗನನ್ನು ಹಡೆಯಲಿಲ್ಲ.

೯. ಒಮ್ಮೆ ಬೇಟೆಯ ಉದ್ದೇಶದಿಂದ ಅಲೆಯುತ್ತಿದ್ದ ರಾಜನಿಗೆ ಕಾಡಿನಲ್ಲಿ ಶಾಂಡಿಲ್ಯ ಮುನಿಯ ಪರಿಚಯವಾಯಿತು.

೧೦. ಮಗನು ಬೇಕೆಂದು ಆಶಿಸುತ್ತಿದ್ದ ರಾಜನ ಪತ್ನಿಗೆ ಋಷಿಶ್ರೇಷ್ಠ ಶಾಂಡಿಲ್ಯನು ಕೌಶಾಂಬಿಗೆ ಬಂದು ಮಂತ್ರಪೂತವಾದ ಚರು (ಯಜ್ಞದ ಅನ್ನ)ವನ್ನು ತಿನ್ನಿಸಿದನು.

೧೧. ತದನಂತರ ರಾಜನಿಗೆ ಸಹಸ್ರಾನೀಕನೆಂಬ ಮಗನು ಹುಟ್ಟಿದನು. ವಿನಯದಿಂದ ಗುಣ ಶೋಭಿಸುವಂತೆ ಆ ಮಗನಿಂದ ತಂದೆ ಶೋಭಿಸಿದನು.

---

ಕೌಶಾಂಬೀ ನಾಮ ತತ್ರಾಸ್ತಿ ಮಧ್ಯಭಾಗೇ ಮಹಾಪುರೀ ।
ಲಕ್ಷ್ಮೀವಿಲಾಸವಸತಿರ್ಭೂತಲಸ್ಯೇವ ಕರ್ಣಿಕಾ ॥ ೫

ತಸ್ಯಾಂ ರಾಜಾ ಶತಾನೀಕಃ ಪಾಂಡವಾನ್ವಯಸಂಭವಃ ।
ಜನಮೇಜಯಪುತ್ರೋಽಭೂತ್ ಪೌತ್ರೋ ರಾಜ್ಞಃ ಪರೀಕ್ಷಿತಃ ॥ ೬

ಅಭಿಮನ್ಯುಪ್ರಪೌತ್ರಶ್ಚ ಯಸ್ಯಾದಿಪುರುಷೋಽರ್ಜುನಃ ।
ತ್ರಿಪುರಾರಿಜಯಸ್ತಂಭದೃಷ್ಟದೋರ್ದಂಡವಿಕ್ರಮಃ ॥ ೭

ಕಲತ್ರಂ ಭೂರಭೂತ್ತಸ್ಯ ರಾಜ್ಞೀ ವಿಷ್ಣುಮತೀ ತಥಾ ।
ಏಕಾ ರತ್ನಾನಿ ಸುಷುವೇ ನ ತಾವದಪರಾ ಸುತಮ್ ॥ ೮

ಏಕದಾ ಮೃಗಯಾಸಂಗಾದ್ ಭ್ರಾಮ್ಯತಶ್ಚಾಸ್ಯ ಭೂಪತೇಃ ।
ಅಭೂಚ್ಛಾಂಡಿಲ್ಯಮುನಿನಾ ಸಮಂ ಪರಿಚಯೋ ವನೇ ॥ ೯

ಸೋಽಸ್ಯ ಪುತ್ರಾರ್ಥಿನೋ ರಾಜ್ಞಃ ಕೌಶಾಂಬೀಮೇತ್ಯ ಸಾಧಿತಮ್ ।
ಮಂತ್ರಪೂತಂ ಚರುಂ ರಾಜ್ಞೀಂ ಪ್ರಾಶಯನ್ಮುನಿಸತ್ತಮಃ ॥ ೧೦

ತತಸ್ತಸ್ಯ ಸುತೋ ಜಜ್ಞೇ ಸಹಸ್ರಾನೀಕಸಂಜ್ಞಕಃ ।
ಶುಶುಭೇ ಸ ಪಿತಾ ತೇನ ವಿನಯೇನ ಗುಣೋ ಯಥಾ ॥ ೧೧

೧೨. ಕಾಲಕ್ರಮೇಣ ಶತಾನೀಕನು ಆ ಮಗನನ್ನು ಯುವರಾಜನನ್ನಾಗಿ ಮಾಡಿ ತಾನು ಕೇವಲ ಭೋಗಗಳಿಂದ ರಾಜನೆನಿಸಿಕೊಂಡನು, ರಾಜ್ಯಭಾರದ ಚಿಂತನೆಗಳಿಂದಲ್ಲ.

೧೩. ಮುಂದೆ ಅಸುರರೊಡನೆ ದೇವತೆಗಳಿಗೆ ಯುದ್ಧವು ಒದಗಿಬರಲು ನೆರವು ಬೇಕೆಂದು ಇಂದ್ರನು ರಾಜನಿಗೆ ಮಾತಲಿಯನ್ನು ದೂತನನ್ನಾಗಿ ಕಳುಹಿಸಿದನು.

೧೪-೧೫. ಯುಗಂಧರ ಎಂಬ ಮುಖ್ಯಮಂತ್ರಿಯ ಹಾಗೂ ಸುಪ್ರತೀಕನೆಂಬ ಮುಖ್ಯ ಸೇನಾಧಿಪತಿಯ ಕೈಯಲ್ಲಿ ಮಗನನ್ನೂ ರಾಜ್ಯವನ್ನೂ ಅರ್ಪಿಸಿ ಕಾಳಗದಲ್ಲಿ ಅಸುರರನ್ನು ಕೊಲ್ಲುವುದಕ್ಕಾಗಿ ರಾಜನಾದ ಶತಾನೀಕನು ಮಾತಲಿಯೊಡನೆ ಇಂದ್ರನ ಬಳಿಗೆ ತೆರಳಿದನು.

೧೬. ಇಂದ್ರನು ನೋಡುತ್ತಿದ್ದಂತೆಯೇ ಯಮದಂಷ್ಟ್ರನೇ ಮುಂತಾದ ಅನೇಕ ಅಸುರರನ್ನು ಕೊಂದು ಶತಾನೀಕ ಭೂಪಾಲನು ತಾನೂ ಕಾಳಗದಲ್ಲಿ ಸಾವನ್ನಪ್ಪಿದನು.

೧೭. ರಾಜನ ಕಳೇವರವನ್ನು ಮಾತಲಿಯು ತರಲಾಗಿ ರಾಣಿಯೂ ಪತಿಯನ್ನು ಅನುಸರಿಸಿದಳು. ರಾಜ್ಯಲಕ್ಷ್ಮಿಯು ರಾಜನ ಮಗ ಸಹಸ್ರಾನೀಕನನ್ನು ಆಶ್ರಯಿಸಿದಳು.

೧೮. ಆಶ್ಚರ್ಯವೆಂದರೆ ತಂದೆಯ ಸಿಂಹಾಸನವನ್ನು ಆ ರಾಜನು ಏರಿದಾಗ ಅದರ ಭಾರದಿಂದ ಎಲ್ಲೆಡೆಯೂ ರಾಜರ ತಲೆಗಳು ಬಗ್ಗಿದವು.

---

ಯುವರಾಜಂ ಕ್ರಮಾತ್ ಕೃತ್ವಾ ಶತಾನೀಕೋ□ಥ ತಂ ಸುತಮ್ ।
ಸಂಭೋಗೈರೇವ ರಾಜಾಭೂತ್ ನ ತು ಭೂಭಾರಚಿಂತನೈಃ ॥ ೧೨
ಅಥಾಸುರೈಃ ಸಮಂ ಯುದ್ಧೇ ಪ್ರಾಪ್ತೇ ಸಾಹಾಯಕೇಚ್ಛಯಾ ।
ದೂತಸ್ತಸ್ಮೈ ವಿಸೃಷ್ಟೋ□ ಭೂದ್ರಾಜ್ಞೇ ಶಕ್ರೇಣ ಮಾತಲಿಃ ॥ ೧೩
ತತೋ ಯುಗಂಧರಾಖ್ಯಸ್ಯ ಹಸ್ತೇ ಧುರ್ಯಸ್ಯ ಮಂತ್ರಿಣಃ ।
ಸುಪ್ರತೀಕಾಭಿಧಾನಸ್ಯ ಮುಖ್ಯಸೇನಾಪತೇಶ್ಚ ಸಃ ॥ ೧೪
ಸಮರ್ಪ್ಯ ಪುತ್ರಂ ರಾಜ್ಯಂ ಚ ನಿಹಂತುಮಸುರಾನ್ ರಣೇ ।
ಶಕ್ರಾಂತಿಕಂ ಶತಾನೀಕಃ ಸಹ ಮಾತಲಿನಾ ಯಯೌ ॥ ೧೫
ಅಸುರಾನ್ ಯಮದಂಷ್ಟ್ರಾದೀನ್ ಬಹೂನ್ ಪಶ್ಯತಿ ವಾಸವೇ ।
ಹತ್ವಾ ತತ್ರೈವ ಸಂಗ್ರಾಮೇ ಪ್ರಾಪ ಮೃತ್ಯುಂ ಸ ಭೂಪತಿಃ ॥ ೧೬
ಮಾತಲ್ಯಾನೀತದೇಹಂ ಚ ದೇವೀ ತಂ ನೃಪಮನ್ವಗಾತ್ ।
ರಾಜಲಕ್ಷ್ಮೀಶ್ಚ ತತ್ಪುತ್ರಂ ಸಹಸ್ರಾನೀಕಮಾಶ್ರಯತ್ ॥ ೧೭
ಚಿತ್ರಂ ತಸ್ಮಿನ್ ಸಮಾರೂಢೇ ಪಿತ್ರ್ಯಂ ಸಿಂಹಾಸನಂ ನೃಪೇ ।
ಭರೇಣ ಸರ್ವತೋ ರಾಜ್ಞಾಂ ಶಿರಾಂಸಿ ನತಿಮಾಯಯುಃ ॥ ೧೮

೧೯. ಶತ್ರುಗಳನ್ನು ಗೆದ್ದು ಆಚರಿಸಿದ ವಿಜಯೋತ್ಸವಕ್ಕೆ ಇಂದ್ರನು ಮಾತಲಿಯನ್ನು ಕಳುಹಿಸಿ ತನ್ನ ಮಿತ್ರನ ಮಗ ಸಹಸ್ರಾನೀಕನನ್ನು ಸ್ವರ್ಗಕ್ಕೆ ಕರೆಸಿಕೊಂಡನು.

೨೦. ಅಲ್ಲಿ ರಾಜನು ಕಾಮಿನಿಯರೊಡನೆ ನಂದನವನದಲ್ಲಿ ಆಟವಾಡುತ್ತಿದ್ದ ದೇವತೆಗಳನ್ನು ನೋಡಿ ಸ್ವಲ್ಪ ವಿಷಣ್ಣನಾಗಿ ತನಗೂ ಅನುರೂಪಳಾದ ಭಾರ್ಯೆಯು ಬೇಕೆಂದು ಅಪೇಕ್ಷಿಸಿದನು.

೨೧. ಅವನ ಅಭಿಪ್ರಾಯವನ್ನು ಅರಿತುಕೊಂಡ ಇಂದ್ರನು, 'ರಾಜನ್ ! ವಿಷಾದ ಪಡಬೇಡ ನಿನ್ನ ಈ ಆಸೆಯು ಈಡೇರುವುದು.

೨೨. ನಿನಗೆ ಅನುರೂಪಳಾಗಿ ಮೊದಲೇ ಸೃಷ್ಟಳಾಗಿರುವ ಭಾರ್ಯೆ ಈಗಾಗಲೇ ಭೂಲೋಕದಲ್ಲಿ ಹುಟ್ಟಿದ್ದಾಳೆ. ನಾನು ಈಗ ವರ್ಣಿಸುವ ಈ ವೃತ್ತಾಂತವನ್ನು ಕೇಳು.

## ಸಹಸ್ರಾನೀಕನ ಕಥೆ

೨೩. ಹಿಂದೆ ಬ್ರಹ್ಮನನ್ನು ಕಾಣಲು ನಾನು ಅವನ ಸಭೆಗೆ ಹೋಗಿದ್ದೆನು. ನನ್ನ ಹಿಂದೆ ವಿಧೂಮನೆಂಬ ಒಬ್ಬ ವಸುವೂ ಬಂದನು.

೨೪. ನಾವೆಲ್ಲ ಅಲ್ಲಿರುವಾಗಲೇ ಬ್ರಹ್ಮನನ್ನು ಕಾಣಲು ಅಲಂಬುಸಾ ಎಂಬ ಅಪ್ಸರೆಯೂ ಬಂದಳು. ಆಗ ಗಾಳಿಯಿಂದ ಅವಳ ಬಟ್ಟೆ ಸ್ವಲ್ಪ ಜಾರಿತು.

---

ತತಃ ಶಕ್ರಃ ಸುಹೃತ್ಪುತ್ರಂ ವಿಪಕ್ಷವಿಜಯೋತ್ಸವೇ ।
ಸ್ವರ್ಗಂ ಸಹಸ್ರಾನೀಕಂ ತಂ ನಿನಾಯ ಪ್ರೇಷ್ಯ ಮಾತಲಿಮ್ ॥ ೧೯
ಸ ತತ್ರ ನಂದನೇ ದೇವಾನ್ ಕ್ರೀಡತಃ ಕಾಮಿನೀಸಖಾನ್ ।
ದೃಷ್ಟ್ವಾ ಸ್ವೋಚಿತಭಾರ್ಯಾರ್ಥೀ ರಾಜಾ ಶೋಕಮಿವಾವಿಶತ್ ॥ ೨೦
ವಿಜ್ಞಾಯೈತಮಭಿಪ್ರಾಯಂ ತಮುವಾಚಾಥ ವಾಸವಃ ।
ರಾಜನ್ನಲಂ ವಿಷಾದೇನ ವಾಂಛೇಯಂ ತವ ಸೇತ್ಸ್ಯತಿ ॥ ೨೧
ಉತ್ಪನ್ನಾ ಹಿ ಕ್ಷಿತೌ ಭಾರ್ಯಾ ತುಲ್ಯಾ ತೇ ಪೂರ್ವನಿರ್ಮಿತಾ ।
ಇಮಂ ಚ ಶೃಣು ವೃತ್ತಾಂತಮತ್ರ ತೇ ವರ್ಣಯಾಮ್ಯಹಮ್ ॥ ೨೨
ಪುರಾ ಪಿತಾಮಹಂ ದ್ರಷ್ಟುಮಗಚ್ಛಂ ತತ್ಸಭಾಮಹಮ್ ।
ವಿಧೂಮೋ ನಾಮ ಪಶ್ಚಾಚ್ಚ ಮಮೈಕೋ ವಸುರಾಗಮತ್ ॥ ೨೩
ಸ್ಥಿತೇಷ್ವಸ್ಮಾಸು ತತ್ರೈವ ವಿರಿಂಚಂ ದ್ರಷ್ಟುಮಪ್ಸರಾಃ ।
ಆಗಾದಲಂಬುಸಾ ನಾಮ ವಾತವಿಸ್ರಂಸಿತಾಂಶುಕಾ ॥ ೨೪

೨೫. ಅವಳನ್ನು ನೋಡುತ್ತಿದ್ದಂತೆಯೇ ವಸು ಕಾಮವಶನಾದನು. ಆ ಅಪ್ಸರೆಯ ಕಣ್ಣುಗಳೂ ಒಡನೆಯೇ ಆ ವಸುವಿನ ರೂಪದಿಂದ ಆಕರ್ಷಿತವಾದವು.

೨೬. ಅದನ್ನೆಲ್ಲ ಕಂಡು ಬ್ರಹ್ಮನು ನನ್ನ ಮುಖವನ್ನು ನೋಡಿದನು. ಅವನ ಅಭಿಪ್ರಾಯವನ್ನರಿತು ಕೋಪದಿಂದ ನಾನು ಅವರಿಬ್ಬರನ್ನೂ ಹೀಗೆ ಶಪಿಸಿದೆನು.

೨೭. "ಅವಿನೀತರಾದ ನೀವಿಬ್ಬರೂ ಮನುಷ್ಯಲೋಕದಲ್ಲಿ ಹುಟ್ಟಿರಿ. ಅಲ್ಲೇ ನೀವು ದಂಪತಿಗಳಾಗಿರಿ'.

೨೮. ಸಹಸ್ರಾನೀಕಭೂಪತಿಯೇ ! ಆ ವಸುವೇ ನೀನು. ಶತಾನೀಕನ ಮಗನಾಗಿ ಚಂದ್ರವಂಶಕ್ಕೇ ಅಲಂಕಾರಪ್ರಾಯನಾಗಿ ಹುಟ್ಟಿರುವೆ.

೨೯. ಆ ಅಪ್ಸರೆಯು ಅಯೋಧ್ಯೆಯಲ್ಲಿ ಕೃತವರ್ಮನೆಂಬ ರಾಜನ ಮಗಳಾಗಿ ಮೃಗಾವತೀ ಎಂಬ ಹೆಸರಿನಿಂದ ಹುಟ್ಟಿದ್ದಾಳೆ. ಅವಳು ನಿನ್ನ ಹೆಂಡತಿಯಾಗುವಳು'.

೩೦. ಆಗ ಸ್ನೇಹವೆಂಬ ಎಣ್ಣೆಯಿಂದ ತುಂಬಿದ್ದ ಸಹಸ್ರಾನೀಕನ ಹೃದಯದಲ್ಲಿ ಕಾಮಾಗ್ನಿಯು ಇಂದ್ರನ ಮಾತುಗಳೆಂಬ ಗಾಳಿಯು ಬೀಸಿದುದರಿಂದ ಇನ್ನೂ ಹೆಚ್ಚಾಗಿ ಉರಿಯಲಾರಂಭಿಸಿತು.

೩೧. ಇಂದ್ರನಿಂದ ಸತ್ಕೃತನಾಗಿ ಬೀಳ್ಕೊಂಡು ಅವನ ರಥವನ್ನೇ ಏರಿ ಸಹಸ್ರಾನೀಕನು ಮಾತಲಿಯೊಡನೆ ತನ್ನ ನಗರಕ್ಕೆ ಹೊರಟನು.

---

ತಾಂ ದೃಷ್ಟ್ವೈವ ಸ ಕಾಮಸ್ಯ ವಶಂ ವಸುರುಪಾಗಮತ್ ।
ಸಾಪ್ಯಪ್ಸರಾ ಝುಗಿತ್ಯಾಸೀತ್ ತದ್ರೂಪಾಕೃಷ್ಟಲೋಚನಾ ॥ ೨೫
ತದಾಲೋಕ್ಯ ಮಮಾಪಶ್ಯನ್ಮುಖಂ ಕಮಲಸಂಭವಃ ।
ಅಭಿಪ್ರಾಯಂ ವಿದಿತ್ವಾಸ್ಯ ತಾವಹಂ ಶಪ್ತವಾನ್ ಕ್ರುಧಾ ॥ ೨೬
ಮರ್ತ್ಯಲೋಕೇऽವತಾರೋऽಸ್ತು ಯುವಯೋರವಿನೀತಯೋಃ ।
ಭವಿಷ್ಯಥಶ್ಚ ತತ್ರೈವ ಯುವಾಂ ಭಾರ್ಯಾಪತೀ ಇತಿ ॥ ೨೭
ಸ ವಸುಸ್ತ್ವಂ ಸಮುತ್ಪನ್ನಃ ಸಹಸ್ರಾನೀಕಭೂಪತೇ ।
ಶತಾನೀಕಸ್ಯ ತನಯೋ ಭೂಷಣಂ ಶಶಿನಃ ಕುಲೇ ॥ ೨೮
ಸಾಪ್ಯಪ್ಸರಾ ಅಯೋಧ್ಯಾಯಾಂ ಕೃತವರ್ಮನೃಪಾತ್ಮಜಾ ।
ಜಾತಾ ಮೃಗಾವತೀ ನಾಮ ಸಾ ತೇ ಭಾರ್ಯಾ ಭವಿಷ್ಯತಿ ॥ ೨೯
ಇತೀಂದ್ರವಾಕ್ಯಪವನೈರುದ್ಧೂತೋ ಹೃದಿ ಭೂಪತೇಃ ।
ಸಸ್ನೇಹೇ ತಸ್ಯ ಝುಗಿತಿ ಪ್ರಾಜ್ವಲನ್ಮದನಾನಲಃ ॥ ೩೦
ತತಃ ಸಂಮಾನ್ಯ ಶಕ್ರೇಣ ಪ್ರೇಷಿತಸ್ತದ್ರಥೇನ ಸಃ ।
ಸಹ ಮಾತಲಿನಾ ರಾಜಾ ಪ್ರತಸ್ಥೇ ಸ್ವಾಂ ಪುರೀಂ ಪ್ರತಿ ॥ ೩೧

೩೨. ಹೊರಡಲಿದ್ದ ರಾಜನಿಗೆ ಅಪ್ಸರೆ ತಿಲೋತ್ತಮೆಯು "ದೊರೆಯೇ, ನಿನಗೆ ಏನೋ ಹೇಳಬೇಕಾಗಿದೆ, ಸ್ವಲ್ಪ ಕಾಯುವೆಯಾ ?' ಎಂದು ಪ್ರೀತಿಯಿಂದ ಹೇಳಿದಳು.

೩೩. ಮೃಗಾವತಿಯನ್ನು ಧ್ಯಾನಿಸುತ್ತಿದ್ದ ಸಹಸ್ರಾನೀಕನು ತಿಲೋತ್ತಮೆಯ ಮಾತನ್ನು ಕೇಳದೆಯೇ ಹೊರಟುಬಿಟ್ಟನು. ಅದರಿಂದ ಅಪಮಾನಕ್ಕೆ ಈಡಾದ ತಿಲೋತ್ತಮೆಯು ಕೋಪದಿಂದ ಶಾಪವನ್ನಿತ್ತಳು.

೩೪. "ರಾಜನ್, ಯಾವಳಿಂದ ನಿನ್ನ ಮನಸ್ಸು ಅಪಹೃತವಾಗಿ ನನ್ನ ಮಾತನ್ನು ನೀನು ಕೇಳಲಿಲ್ಲವೋ ಅವಳಿಗೂ ನಿನಗೂ ಹದಿನಾಲ್ಕು ವರ್ಷ ವಿಯೋಗವಾಗಲಿ'.

೩೫. ಮಾತಲಿಯು ಆ ಮಾತನ್ನು ಕೇಳಿಸಿಕೊಂಡನು. ಪ್ರಿಯೆಯ ಬಗೆಗೆ ಉತ್ಸುಕನಾಗಿದ್ದ ರಾಜನಾದರೋ ರಥದಿಂದ ಕೌಶಾಂಬಿಗೂ ಮನಸ್ಸಿನಿಂದ ಅಯೋಧ್ಯೆಗೂ ಹೋದನು.

೩೬. ಅನಂತರ ಅವನು ಯುಗಂಧರಾದಿ ಮಂತ್ರಿಗಳಿಗೆ ಇಂದ್ರನಿಂದ ತಾನು ಕೇಳಿದ್ದ ಮೃಗಾವತೀವೃತ್ತಾಂತವನ್ನು ಪೂರ್ಣವಾಗಿ ಉತ್ಸುಕತೆಯಿಂದ ಹೇಳಿದನು.

೩೭. ತಡವಾಗುವುದನ್ನು ಸಹಿಸದೆ ರಾಜನು ಆ ಕನ್ಯೆಗಾಗಿ ತನ್ನ ಬೇಡಿಕೆಯನ್ನು ತಿಳಿಸಲು ಅವಳ ತಂದೆಯಾದ ಕೃತವರ್ಮನ ಬಳಿಗೆ ಹೋಗಲು ಒಬ್ಬ ದೂತನನ್ನು ಅಯೋಧ್ಯೆಗೆ ಕಳುಹಿಸಿದನು.

---

ಗಚ್ಛಂತಂ ಚಾಪ್ಸರಾಃ ಪ್ರೀತ್ಯಾ ತಮುವಾಚ ತಿಲೋತ್ತಮಾ ।
ರಾಜನ್ ವಕ್ಷ್ಯಾಮಿ ತೇ ಕಿಂಚಿತ್ ಪ್ರತೀಕ್ಷಸ್ವ ಮನಾಗಿತಿ ॥ ೩೨
ತದಶ್ರುತ್ವೈವ ಹಿ ಯಯೌ ಸ ತಾಂ ಧ್ಯಾಯನ್ ಮೃಗಾವತೀಮ್ ।
ತತಃ ಸಾ ಲಜ್ಜಿತಾ ಕೋಪಾತ್ ತಂ ಶಶಾಪ ತಿಲೋತ್ತಮಾ ॥ ೩೩
ಯಯಾ ಹೃತಮನಾ ರಾಜನ್ನ ಶೃಣೋಷಿ, ವಚೋ ಮಮ ।
ತಸ್ಯಾಃ ಚತುರ್ದಶಸಮಾ ವಿಯೋಗಸ್ತೇ ಭವಿಷ್ಯತಿ ॥ ೩೪
ಮಾತಲಿಸ್ತಚ್ಚ ಶುಶ್ರಾವ ಸ ಚ ರಾಜಾ ಪ್ರಿಯೋತ್ಸುಕಃ ।
ಯಯೌ ರಥೇನ ಕೌಶಾಂಬೀಮಯೋಧ್ಯಾಂ ಮನಸಾ ಪುನಃ ॥ ೩೫
ತತೋ ಯುಗಂಧರಾದಿಭ್ಯೋ ಮಂತ್ರಿಭ್ಯೋ ವಾಸವಾಚ್ಛ್ರುತಮ್ ।
ಮೃಗಾವತೀಗತಂ ಸರ್ವಂ ಶಶಂಸೋತ್ಸುಕಯಾ ಧಿಯಾ ॥ ೩೬
ಯಾಚಿತುಂ ತಾಂ ಸ ಕನ್ಯಾಂ ಚ ತತ್ಪಿತುಃ ಕೃತವರ್ಮಣಃ ।
ಅಯೋಧ್ಯಾಂ ಪ್ರಾಹಿಣೋದ್ದೂತಂ ಕಾಲಕ್ಷೇಪಾಸಹೋ ನೃಪಃ ॥ ೩೭

೩೮. ಆ ದೂತನಿಂದ ಸಂದೇಶವನ್ನು ಕೇಳಿದ ಕೃತವರ್ಮನು ಹರ್ಷದಿಂದ ಅದನ್ನು ತನ್ನ ರಾಣಿ ಕಲಾವತಿಗೆ ಹೇಳಿದನು. ಆಗ ಅವಳು ಅವನಿಗೆ ಹೀಗೆ ಹೇಳಿದಳು.

೩೯. "ಪ್ರಭು, ಸಹಸ್ರಾನೀಕನಿಗೆ ಮೃಗಾವತಿಯನ್ನು ಅವಶ್ಯವಾಗಿ ಕೊಡಬೇಕು. ಈ ವಿಷಯವನ್ನು ಯಾವನೋ ಬ್ರಾಹ್ಮಣನು ಸ್ವಪ್ನದಲ್ಲಿ ನನಗೆ ಹೇಳಿದುದು ಗೊತ್ತಿದೆ".

೪೦. ಇದರಿಂದ ಸಂತುಷ್ಟನಾದ ಕೃತವರ್ಮನು ನೃತ್ಯ, ಗೀತೆ ಮುಂತಾದ ಕಲೆಗಳಲ್ಲಿ ಮೃಗಾವತಿಯ ಅಪ್ರತಿಮ ಕೌಶಲವನ್ನು ದೂತನಿಗೆ ತೋರಿಸಿದನು.

೪೧. ಲಲಿತಕಲೆಗಳಿಗೆ ಮುಖ್ಯಪಾತ್ರವಾಗಿದ್ದ ಚಂದ್ರನ ಮೂರ್ತಿಯೋ ಎಂಬಂತಿದ್ದ ತನ್ನ ಮಗಳನ್ನು ಕೃತವರ್ಮನು ರಾಜ ಸಹಸ್ರಾನೀಕನಿಗೆ ಕೊಟ್ಟನು.

೪೨. ಸಹಸ್ರಾನೀಕ ಹಾಗೂ ಮೃಗಾವತಿಯರ ಸಂಗಮವು ವಿದ್ಯೆಬುದ್ಧಿಗಳ ಸಂಯೋಗದಂತೆ ಪರಸ್ಪರ ಉತ್ಕರ್ಷಕ್ಕೆ ಕಾರಣವಾಯಿತು.

೪೩. ಇದಾದ ಮೇಲೆ ಸ್ವಲ್ಪಕಾಲದಲ್ಲೇ ರಾಜನ ಮಂತ್ರಿಗಳಿಗೆ ಮಕ್ಕಳು ಹುಟ್ಟಿದರು. ಯುಗಂಧರನಿಗೆ ಯೌಗಂಧರಾಯಣನೆಂಬ ಪುತ್ರನು ಜನಿಸಿದನು.

೪೪. ಸುಪ್ರತೀಕನಿಗೆ ರುಮಣ್ವಂತನೆಂಬ ಮಗನೂ, ರಾಜನ ಆಪ್ತ ಸಚಿವನಿಗೆ ವಸಂತಕನೆಂಬ ಮಗನೂ ಹುಟ್ಟಿದರು.

---

ಕೃತವರ್ಮಾ ಚ ತದ್ದೂತಾಚ್ಛ್ರುತ್ವಾ ಸಂದೇಶಮಭ್ಯಧಾತ್ ।
ಹರ್ಷಾದ್ದೇವ್ಯೈ ಕಲಾವತ್ಯೈ ತತಃ ಸಾಪ್ಯೇನಮಬ್ರವೀತ್ ॥ ೩೮
ರಾಜನ್ ಸಹಸ್ರಾನೀಕಾಯ ದೇಯಾವಶ್ಯಂ ಮೃಗಾವತೀ ।
ಇಮಮರ್ಥಂ ಚ ಮೇ ಸ್ವಪ್ನೇ ಜಾನೇ ಕೋಽಪ್ಯವದದ್ ದ್ವಿಜಃ ॥ ೩೯
ಅಥ ಹೃಷ್ಟೋ ಮೃಗಾವತ್ಯಾ ನೃತ್ತಗೀತಾದಿಕೌಶಲಮ್ ।
ರೂಪಂ ಚಾಪ್ರತಿಮಂ ತಸ್ಮೈ ದೂತಾಯಾದರ್ಶಯನ್ನೃಪಃ ॥ ೪೦
ದದೌ ತಾಂ ಚ ಸ ಕಾಂತಾನಾಂ ಕಲಾನಾಮೇಕಮಾಸ್ಪದಮ್ ।
ಕೃತವರ್ಮಾ ಸುತಾಂ ತಸ್ಮೈ ರಾಜ್ಞೇ ಮೂರ್ತಿಮಿವೈಂದವೀಮ್ ॥ ೪೧
ಪರಸ್ಪರಗುಣಾವಾಪ್ತ್ಯೈ ಸ ಶ್ರುತಪ್ರಜ್ಞಯೋರಿವ ।
ಅಭೂತ್ ಸಹಸ್ರಾನೀಕಸ್ಯ ಮೃಗಾವತ್ಯಾಶ್ಚ ಸಂಗಮಃ ॥ ೪೨
ಅಥ ತಸ್ಯಾಚಿರಾದ್ ರಾಜ್ಞೋ ಮಂತ್ರಿಣಾಂ ಜಜ್ಞಿರೇ ಸುತಾಃ ।
ಜಜ್ಞೇ ಯುಗಂಧರಸ್ಯಾಪಿ ಪುತ್ರೋ ಯೌಗಂಧರಾಯಣಃ ॥ ೪೩
ಸುಪ್ರತೀಕಸ್ಯ ಪುತ್ರಶ್ಚ ರುಮಣ್ವಾನಿತ್ಯಜಾಯತ ।
ಯೋಽಸ್ಯ ನರ್ಮಸುಹೃತ್ತಸ್ಯ ಪುತ್ರೋಽಜನಿ ವಸಂತಕಃ ॥ ೪೪

೪೫. ರಾಜನ ಪತ್ನಿ ಮೃಗಾವತಿಯೂ ಕೆಲವೇ ದಿವಸಗಳಲ್ಲಿ ಮುಖ ಬಿಳಿಚಿಕೊಂಡವಳಾಗಿ ಗರ್ಭವನ್ನು ಧರಿಸಿದಳು.

೪೬. ಅವಳನ್ನು ಎಷ್ಟು ನೋಡಿದರೂ ರಾಜನ ಕಣ್ಣುಗಳಿಗೆ ತೃಪ್ತಿಯಾಗುತ್ತಿರಲಿಲ್ಲ. ಅವಳು 'ರಕ್ತದಿಂದ ತುಂಬಿದ ಆಟದ ಕೊಳದಲ್ಲಿ ನಾನು ಮುಳುಗಿ ಸ್ನಾನ ಮಾಡಬೇಕು' ಎಂಬ ತನ್ನ ಬಯಕೆಯನ್ನು ಈಡೇರಿಸಬೇಕೆಂದು ರಾಜನನ್ನು ಕೋರಿದಳು.

೪೭. ಧಾರ್ಮಿಕನಾಗಿದ್ದ ರಾಜನು ಅವಳ ಇಚ್ಛೆಯನ್ನು ಪೂರೈಸಬೇಕೆಂದು ಕೊಳವನ್ನು ಅರಗು ಮುಂತಾದವುಗಳ ರಸದಿಂದ ತುಂಬಿಸಿ ರಕ್ತದಿಂದ ತುಂಬಿದ್ದಂತೆ ಮಾಡಿಸಿದನು.

೪೮. ಅದರಲ್ಲಿ ಅವಳು ಸ್ನಾನ ಮಾಡುತ್ತಿದ್ದಾಗ ಅರಗಿನ ರಸ ಮೆತ್ತಿಕೊಂಡಿದ್ದ ಅವಳನ್ನು ಗರುಡನ ವಂಶದಲ್ಲಿ ಜನಿಸಿದ ಯಾವುದೋ ಪಕ್ಷಿಯು ಮಾಂಸದ ತುಂಡೆಂಬ ಭ್ರಾಂತಿಯಿಂದ ಸರ್ರನೆ ಬಂದು ಎತ್ತಿಕೊಂಡು ಹಾರಿ ಹೋಯಿತು.

೪೯. ಪಕ್ಷಿಯು ಎಲ್ಲಿಗೋ ಎತ್ತಿಕೊಂಡು ಹೋದ ಅವಳನ್ನು ಹುಡುಕಲೋ ಎಂಬಂತೆ ಕಳವಳಗೊಂಡ ಸಹಸ್ರಾನೀಕನ ಧೈರ್ಯವು ಎಲ್ಲೋ ಹೋಯಿತು.

೫೦. ಪ್ರಿಯೆಯಲ್ಲಿ ಅನುರಕ್ತವಾಗಿದ್ದ ಅವನ ಮನಸ್ಸನ್ನೂ ಪಕ್ಷಿಯು ಕದ್ದೊಯ್ದಿರಬೇಕು, ಆದ್ದರಿಂದಲೇ ರಾಜನು ಪ್ರಜ್ಞಾಶೂನ್ಯನಾಗಿ ಭೂಮಿಯಲ್ಲಿ ಉರುಳಿದನು.

---

ತತಸ್ತಸ್ಯಾಪಿ ದಿವಸೈಃ ಸಹಸ್ರಾನೀಕಭೂಪತೇಃ ।
ಬಭಾರ ಗರ್ಭಮಾಪಾಂಡುಮುಖೀ ರಾಜ್ಞೀ ಮೃಗಾವತೀ ॥ ೪೫
ಯಯಾಚೇ ಸಾಥ ಭರ್ತಾರಂ ದರ್ಶನಾತೃಪ್ತಲೋಚನಮ್ ।
ದೋಹದಂ ರುಧಿರಾಪೂರ್ಣಲೀಲಾವಾಪೀನಿಮಜ್ಜನಮ್ ॥ ೪೬
ಸ ಚೇಚ್ಛಾಂ ಪೂರಯನ್ ರಾಜ್ಞ್ಯಾ ಲಾಕ್ಷಾದಿರಸನಿರ್ಭರಾಮ್ ।
ಚಕಾರ ಧಾರ್ಮಿಕೋ ರಾಜಾ ವಾಪೀಂ ರಕ್ತಾವೃತಾಮಿವ ॥ ೪೭
ತಸ್ಯಾಂ ಸ್ನಾಂತೀಮಕಸ್ಮಾಚ್ಚ ಲಾಕ್ಷಾಲಿಪ್ತಾಂ ನಿಪತ್ಯ ತಾಮ್ ।
ಗರುಡಾನ್ವಯಜಃ ಪಕ್ಷೀ ಜಹಾರಾಮಿಷಶಂಕಯಾ ॥ ೪೮
ಪಕ್ಷಿಣಾ ಕ್ವಾಪಿ ನೀತಾಂ ತಾಮನ್ವೇಷ್ಟುಮಿವ ತತ್ಕ್ಷಣಾತ್ ।
ಯಯೌ ಸಹಸ್ರಾನೀಕಸ್ಯ ಧೈರ್ಯಂ ವಿಹ್ವಲಚೇತಸಃ ॥ ೪೯
ಪ್ರಿಯಾನುರಕ್ತಂ ಚೇತೋಽಪಿ ನೂನಂ ತಸ್ಯ ಪತತ್ತ್ರಿಣಾ ।
ಜಹ್ರೇ ಯೇನ ಸ ನಿಃಸಂಜ್ಞಃ ಪಪಾತ ಭುವಿ ಭೂಪತಿಃ ॥ ೫೦

೫೧. ಒಂದು ಕ್ಷಣದಲ್ಲೇ ಅವನಿಗೆ ಪ್ರಜ್ಞೆ ಮರಳಿ ಬಂದಿತು. ಆಗ ಮಾತಲಿಯು ತನ್ನ ಪ್ರಭಾವದಿಂದ ವಿಷಯವನ್ನು ತಿಳಿದುಕೊಂಡು ಆಕಾಶಮಾರ್ಗದಿಂದ ಇಳಿದು ಅಲ್ಲಿಗೆ ಬಂದನು.

೫೨. ಅವನು ರಾಜನನ್ನು ಸಮಾಧಾನಪಡಿಸಿ ಹಿಂದೆ ತಾನು ಕೇಳಿಸಿಕೊಂಡಿದ್ದ ತಿಲೋತ್ತಮೆಯ ಶಾಪವನ್ನೂ ಅದರ ಅವಧಿಯನ್ನೂ ತಿಳಿಸಿಕೊಟ್ಟು ಅಲ್ಲಿಂದ ತೆರಳಿದನು.

೫೩. ದುಃಖದಿಂದ ಕಂಗೆಟ್ಟಿದ್ದ ರಾಜನು 'ಅಯ್ಯೋ ಪ್ರಿಯೆ, ಆ ಪಾಪಿ ತಿಲೋತ್ತಮೆಯ ಆಸೆ ಈಡೇರಿತು' ಎಂದೆಲ್ಲ ಹಲುಬಿದನು.

೫೪. ಶಾಪವೃತ್ತಾಂತವನ್ನು ತಿಳಿದುಕೊಂಡಮೇಲೆ ಅವನಿಗೆ ಮಂತ್ರಿಗಳೂ ಧೈರ್ಯವನ್ನು ಬೋಧಿಸಿದರು. ಪುನಃ ಪ್ರಿಯೆಯ ಸಂಗಮದ ಆಸೆಯಿಂದ ಆ ರಾಜನು ಹೇಗೋ ಜೀವವನ್ನು ಹಿಡಿದಿದ್ದನು.

೫೫. ಆ ದೊಡ್ಡ ಪಕ್ಷಿಯು ರಾಣಿಯನ್ನು ಕ್ಷಣಮಾತ್ರದಲ್ಲಿ ಎತ್ತಿಕೊಂಡು ಹೋಗಿ ಅವಳಿನ್ನೂ ಜೀವಿಸಿರುವುದನ್ನು ಗ್ರಹಿಸಿ ಸುದೈವದಿಂದ ಅವಳನ್ನು ಉದಯ ಪರ್ವತದಲ್ಲಿ ಬಿಟ್ಟಿತು.

೫೬. ದುಃಖದಿಂದಲೂ ಭಯದಿಂದಲೂ ತಳಮಳಗೊಂಡಿದ್ದ ರಾಣಿಯನ್ನು ಬಿಟ್ಟು ಪಕ್ಷಿಯು ಹಾರಿಹೋದಮೇಲೆ ಅವಳಿಗೆ ತಾನು ದುರ್ಗಮವಾದ ಬೆಟ್ಟದ ಪ್ರದೇಶದಲ್ಲಿರುವುದೂ, ಅನಾಥಳಾಗಿರುವುದೂ ತಿಳಿಯಿತು.

---

ಕ್ಷಣಾಚ್ಚ ಲಬ್ಧಸಂಜ್ಞೇಽಸ್ಮಿನ್ ರಾಜ್ಞಿ ಬುದ್ಧ್ವಾ ಪ್ರಭಾವತಃ ।
ಅವತೀರ್ಯ ದ್ಯುಮಾರ್ಗೇಣ ತತ್ರ ಮಾತಲಿರಾಯಯೌ ॥ ೫೧

ಸ ರಾಜಾನಂ ಸಮಾಶ್ವಾಸ್ಯ ಸಾವಧಿಂ ಪ್ರಾಗ್ ಯಥಾಶ್ರುತಮ್ ।
ತಸ್ಮೈ ತಿಲೋತ್ತಮಾಶಾಪಂ ಕಥಯಿತ್ವಾ ತತೋಽಗಮತ್ ॥ ೫೨

ಹಾ ಪ್ರಿಯೇ ಪೂರ್ಣಕಾಮಾ ಸಾ ಜಾತಾ ಪಾಪಾ ತಿಲೋತ್ತಮಾ ।
ಇತ್ಯಾದಿ ಚ ಸ ಶೋಕಾರ್ತೋ ವಿಲಲಾಪ ಮಹೀಪತಿಃ ॥ ೫೩

ವಿಜ್ಞಾತಶಾಪವೃತ್ತಾಂತೋ ಬೋಧಿತಶ್ಚ ಸ ಮಂತ್ರಿಭಿಃ ।
ಕಥಂಚಿಜ್ಜೀವಿತಂ ದಧ್ರೇ ಪುನಃ ಸಂಗಮವಾಂಛಯಾ ॥ ೫೪

ತಾಂ ಚ ರಾಜ್ಞೀಂ ಸ ಪಕ್ಷೀಂದ್ರಃ ಕ್ಷಣಾನ್ನೀತ್ವಾ ಮೃಗಾವತೀಮ್ ।
ಜೀವಂತೀಂ ವೀಕ್ಷ್ಯ ತತ್ಯಾಜ ದೈವಾದುದಯಪರ್ವತೇ ॥ ೫೫

ತ್ಯಕ್ತ್ವಾ ತಸ್ಮಿನ್ ಗತೇ ಚಾಥ ರಾಜ್ಞೀಂ ಶೋಕಭಯಾಕುಲಾ ।
ದದರ್ಶಾನಾಥಮಾತ್ಮಾನಂ ದುರ್ಗಮಾದ್ರಿತಟಸ್ಥಿತಮ್ ॥ ೫೬

೫೭. ಒಬ್ಬಂಟಿಗಳಾಗಿ ಒಂದೇ ವಸ್ತ್ರವನ್ನು ಧರಿಸಿದ್ದ ಅವಳು ಕಾಡಿನಲ್ಲಿ ಜೋರಾಗಿ ಅಳುತ್ತಿರುವಾಗ ಒಂದು ದೊಡ್ಡ ಹೆಬ್ಬಾವು ಅವಳನ್ನು ನುಂಗಲು ಬಂದಿತು.

೫೮. ಆಗ ಯಾವನೋ ಒಬ್ಬ ದೇವತಾಪುರುಷನು ಕಾಣಿಸಿಕೊಂಡು ಆ ಹೆಬ್ಬಾವನ್ನು ಕೊಂದುಹಾಕಿ ಒಳ್ಳೆಯ ಭವಿಷ್ಯವಿದ್ದ ಅವಳನ್ನು ಕಷ್ಟದಿಂದ ಬಿಡಿಸಿ, ಅವಳು ನೋಡುತ್ತಿದ್ದಂತೆಯೇ ಕಣ್ಮರೆಯಾದನು.

೫೯. ಅನಂತರ ಅವಳು ಸ್ವತಃ ಸಾಯಲು ಬಯಸಿ ಕಾಡಾನೆಯ ಮುಂದೆ ನಿಂತುಕೊಂಡಳು. ಆದರೆ ದಯೆಯಿಂದಲೋ ಎಂಬಂತೆ ಅದೂ ಅವಳನ್ನು ಕಾಪಾಡಿತು.

೬೦. ಕಾಡುಪ್ರಾಣಿಯೂ ಇವಳನ್ನು ಎದುರಿಗೆ ಕಂಡರೂ ಕೊಲ್ಲಲಿಲ್ಲ. ಆಶ್ಚರ್ಯ ! ಅಥವಾ ಭಗವಂತನ ಇಚ್ಛೆಯಿಂದ ಏನು ತಾನೆ ಸಂಭವಿಸುವುದಿಲ್ಲ ?

೬೧. ಆಮೇಲೆ ಅವಳು ಪ್ರಪಾತದ (ಆಳವಾದ ಕಂದಕದ) ಕಡೆಗೆ ಹೊರಟಳು. ಗರ್ಭದ ಭಾರದಿಂದ ಮೆಲ್ಲನೆ ನಡೆಯುತ್ತಿದ್ದ ಅವಳು ತನ್ನ ಗಂಡನನ್ನು ನೆನಪಿಸಿಕೊಂಡು ಮುಕ್ತಕಂಠದಿಂದ ಜೋರಾಗಿ ಅತ್ತಳು.

೬೨. ಆಗ ಹಣ್ಣು, ನಾರು, ಗೆಡ್ಡೆ ಇತ್ಯಾದಿಗಳಿಗಾಗಿ ಅಲ್ಲಿಗೆ ಬಂದಿದ್ದ ಮುನಿಪುತ್ರನೊಬ್ಬನು ಆ ಅಳುವನ್ನು ಕೇಳಿ ಶರೀರವನ್ನು ಧರಿಸಿದ ಶೋಕದಂತಿದ್ದ ಅವಳ ಕಡೆಗೆ ಬಂದನು.

---

ಏಕಾಕಿನೀಮೇಕವಸ್ತ್ರಾಂ ಕ್ರುದಂತೀಮಥ ತಾಂ ವನೇ ।
ಗ್ರಾಸೀಕರ್ತುಂ ಪ್ರವೃತ್ತೋಽಭೂದುತ್ಥಾಯಾಜಗರೋ ಮಹಾನ್ ॥ ೫೭
ನಿಹತ್ಯಾಜಗರಂ ತಂ ಚ ಶುಭೋದರ್ಕಾ ತಥೈವ ಸಾ ।
ದಿವ್ಯೇನ ಮೋಚಿತಾ ಪುಂಸಾ ದೃಷ್ಟನಷ್ಟೇನ ಕೇನಚಿತ್ ॥ ೫೮
ತತೋ ವನಗಜಸ್ಯಾಗ್ರೇ ಸಾ ಸ್ವಯಂ ಮರಣಾರ್ಥಿನೀ ।
ಆತ್ಮಾನಮಾಕ್ಷಿಪತ್ ಸೋಽಪಿ ರರಕ್ಷ ದಯಯೇವ ತಾಮ್ ॥ ೫೯
ಚಿತ್ರಂ ಯಚ್ಛ್ವಾಪದೋಽಪ್ಯೇನಾಂ ಪತಿತಾಮಪಿ ಗೋಚರೇ ।
ನಾವಧೀದಥವಾ ಕಿಂ ಹಿ ನ ಭವೇದೀಶ್ವರೇಚ್ಛಯಾ ॥ ೬೦
ಅಥ ಪ್ರಪಾತಾಭಿಮುಖೀ ಬಾಲಾ ಗರ್ಭಭರಾಲಸಾ ।
ಸ್ಮರಂತೀ ತಂ ಚ ಭರ್ತಾರಂ ಮುಕ್ತಕಂಠಂ ರುರೋದ ಸಾ ॥ ೬೧
ತಚ್ಛ್ರುತ್ವಾ ಮುನಿಪುತ್ರೋಽಥ ತತ್ರೈಕಸ್ತಾಂ ಸಮಾಯಯೌ ।
ಆಗತಃ ಫಲಮೂಲಾರ್ಥಂ ಶುಚಂ ಮೂರ್ತಿಮತೀಮಿವ ॥ ೬೨

೬೩. ದಯಾಮಯನಾದ ಅವನು ಅವಳ ಕಥೆಯನ್ನು ಕೇಳಿ ತಿಳಿದುಕೊಂಡು ಹೇಗೋ ಅವಳನ್ನು ಸಮಾಧಾನಪಡಿಸಿ ಜಮದಗ್ನಿಯ ಆಶ್ರಮಕ್ಕೆ ಒಯ್ದನು.

೬೪. ಅಲ್ಲಿ ಆಶ್ವಾಸನೆಯೇ ಮೂರ್ತಿವೆತ್ತು ಬಂದುತಿದ್ದ ಜಮದಗ್ನಿಯನ್ನು ಅವಳು ಕಂಡಳು. ಅವನು ತನ್ನ ತೇಜಸ್ಸಿನಿಂದ ಉದಯಾಚಲದಲ್ಲಿ ಉದಯಸೂರ್ಯನನ್ನು ಸ್ಥಿರಗೊಳಿಸಿದಂತೆ ಕಾಣುತ್ತಿದ್ದನು.

೬೫. ದಿವ್ಯದೃಷ್ಟಿಯನ್ನುಳ್ಳವನೂ ಶರಣಾಗತರಲ್ಲಿ ಪ್ರೀತಿಯುಳ್ಳವನೂ ಆಗಿದ್ದ ಜಮದಗ್ನಿಯು ಕಾಲಿಗೆ ಬಿದ್ದು ನಮಸ್ಕರಿಸಿದ, ಅಗಲಿಕೆಯ ದುಃಖದಿಂದ ಕಂಗೆಟ್ಟಿದ್ದ ಆ ರಾಣಿಯನ್ನು ಕುರಿತು ಹೀಗೆಂದನು.

೬೬. "ಮಗಳೇ, ಇಲ್ಲಿ ನಿನಗೆ ತಂದೆಯ ವಂಶವನ್ನು ಎತ್ತಿ ಹಿಡಿಯುವ ಮಗನು ಹುಟ್ಟುವನು. ನಿನ್ನ ಗಂಡನೊಡನೆ ಮತ್ತೆ ನಿನಗೆ ಸಮಾಗಮ ಆಗುವುದು, ಶೋಕಿಸಬೇಡ'

೬೭. ಹೀಗೆ ಮುನಿಯು ಹೇಳಿದ ಮೇಲೆ ರಾಣಿ ಮೃಗಾವತಿಯು ಆ ಆಶ್ರಮದಲ್ಲೇ ವಾಸಮಾಡಿ ತನ್ನ ಪ್ರಿಯನ ಸಂಗಮದ ಬಗೆಗೆ ಆಸೆಯನ್ನು ಇರಿಸಿ ಕೊಂಡಳು.

೬೮. ಸಜ್ಜನರ ಸಹವಾಸವು ಒಳ್ಳೆಯ ನಡವಳಿಕೆಯನ್ನು ಉಂಟುಮಾಡುವಂತೆ ಅನಿಂದಿತೆಯಾದ ಮೃಗಾವತಿಯು ಕೆಲವೇ ದಿನಗಳಲ್ಲಿ ಪ್ರಶಂಸಾರ್ಹನಾದ ಪುತ್ರರತ್ನನನ್ನು ಹೆತ್ತಳು.

---

ಸ ಚ ಪೃಷ್ಟ್ವಾ ಯಥಾವೃತ್ತಮಾಶ್ವಾಸ್ಯ ಚ ಕಥಂಚನ ।
ಜಮದಗ್ನ್ಯಾಶ್ರಮಂ ರಾಜ್ಞೀಂ ನಿನಾಯೈನಾಂ ದಯಾರ್ದ್ರಧೀಃ ॥ ೬೩
ತತ್ರ ಮೂರ್ತಮಿವಾಶ್ವಾಸಂ ಜಮದಗ್ನಿಂ ದದರ್ಶ ಸಾ ।
ತೇಜಸಾ ಸ್ಥಿರಬಾಲಾರ್ಕಂ ಕುರ್ವಾಣಮುದಯಾಚಲಮ್ ॥ ೬೪
ಸೋಽಪಿ ತಾಂ ಪಾದಪತಿತಾಂ ಮುನಿರಾಶ್ರಿತವತ್ಸಲಃ ।
ರಾಜ್ಞೀಂ ವಿಯೋಗದುಃಖಾರ್ತಾಂ ದಿವ್ಯದೃಷ್ಟಿರಭಾಷತ ॥ ೬೫
ಇಹ ತೇ ಜನಿತಾ ಪುತ್ರಿ ಪುತ್ರೋ ವಂಶಧರಃ ಪಿತುಃ ।
ಭವಿಷ್ಯತಿ ಚ ಭರ್ತ್ರಾ ತೇ ಸಂಗಮೋ ಮಾ ಶುಚಂ ಕೃಥಾಃ ॥ ೬೬
ಇತ್ಯುಕ್ತಾ ಮುನಿನಾ ಸಾಧ್ವೀ ಸಾ ಜಗ್ರಾಹ ಮೃಗಾವತೀ ।
ಆಶ್ರಮೇಽವಸ್ಥಿತಿಂ ತಸ್ಮಿನ್ನಾಶಾಂ ಚ ಪ್ರಿಯಸಂಗಮೇ ॥ ೬೭
ತತಶ್ಚ ದಿವಸೈಸ್ತತ್ರ ಶ್ಲಾಘನೀಯಮನಿಂದಿತಾ ।
ಸತ್ಸಂಗತಿರಿವಾಚಾರಂ ಪುತ್ರರತ್ನಮಸೂತ ಸಾ ॥ ೬೮

೧೯. "ಧೀಮಂತನೂ ಮಹಾಕೀರ್ತಿಶಾಲಿಯೂ ಆದ ಉದಯನನೆಂಬ ರಾಜನು ಹುಟ್ಟಿದ್ದಾನೆ. ಇವನ ಮಗನು ವಿದ್ಯಾಧರರಿಗೆಲ್ಲ ಒಡೆಯನಾಗುವನು'.

೨೦. ಎಂದು ಆಗ ಅಂತರಿಕ್ಷದಿಂದ ವಾಣಿಯು ಮೊಳಗಿತು. ಅದು ಬಹುಕಾಲದಿಂದ ಮರೆತುಹೋಗಿದ್ದ ಉಲ್ಲಾಸವನ್ನು ಮೃಗಾವತಿಗೆ ತಂದು ಕೊಟ್ಟಿತು.

೨೧. ಕ್ರಮವಾಗಿ ಉದಯನನು ಆ ತಪೋವನದಲ್ಲಿ ತನ್ನ ಸ್ನೇಹಿತರಂತಿದ್ದ ಸದ್ಗುಣಗಳ ಜೊತೆಯಲ್ಲಿ ಬಾಲಕನಾಗಿ ಬೆಳೆದನು.

೨೨. ಕ್ಷತ್ರಿಯೋಚಿತವಾದ ಸಂಸ್ಕಾರಗಳನ್ನೆಲ್ಲ ಮಾಡಿ ಜಮದಗ್ನಿಯು ಬಲಶಾಲಿಯಾದ ಉದಯನನಿಗೆ ಧನುರ್ವೇದವನ್ನೂ ಇತರ ಎಲ್ಲ ವಿದ್ಯೆಗಳನ್ನೂ ಕಲಿಸಿದನು.

೨೩. ಮೃಗಾವತಿಯು ಸಹಸ್ರಾನೀಕ ಎಂಬ ಹೆಸರಿದ್ದ ಬಳೆಯನ್ನು ತನ್ನ ಕೈಯಿಂದ ಕಳಚಿ ಮಗನ ಕೈಗೆ ಪ್ರೀತಿಯಿಂದ ತೊಡಿಸಿದಳು.

೨೪. ಅನಂತರ ಒಮ್ಮೆ ಜಿಂಕೆಗಳ ಬೇಟೆಗಾಗಿ ಅಲೆದಾಡುತ್ತಿದ್ದ ಬೇಡನೊಬ್ಬನು ಬಲಾತ್ಕಾರದಿಂದ ಹಾವೊಂದನ್ನು ಹಿಡಿದಿದ್ದುದನ್ನು ಉದಯನನು ನೋಡಿದನು.

೨೫. ನೋಡಲು ಸುಂದರವಾಗಿದ್ದ ಆ ಹಾವಿನಲ್ಲಿ ಉದಯನನಿಗೆ ಮರುಕ ಹುಟ್ಟಿತು. ಅವನು ಬೇಡನಿಗೆ "ನನ್ನ ಕೋರಿಕೆಯಂತೆ ಈ ಹಾವನ್ನು ಬಿಟ್ಟು ಬಿಡು' ಎಂದು ಹೇಳಿದನು.

---

ಶ್ರೀಮಾನುದಯನೋ ನಾಮ್ನಾ ರಾಜಾ ಜಾತೋ ಮಹಾಯಶಾಃ ।
ಭವಿಷ್ಯತಿ ಚ ಪುತ್ರೋಽಸ್ಯ ಸರ್ವವಿದ್ಯಾಧರಾಧಿಪಃ ॥ ೧೯
ಇತ್ಯಂತರಿಕ್ಷಾದುದಭೂತ್ ತಸ್ಮಿನ್ಕಾಲೇ ಸರಸ್ವತೀ ।
ಆದಧಾನಾ ಮೃಗಾವತ್ಯಾಶ್ಚಿತ್ತವಿಸ್ಮೃತಮುತ್ಸವಮ್ ॥ ೨೦
ಕ್ರಮಾದುದಯನಃ ಸೋಽಥ ಬಾಲಸ್ತಸ್ಮಿಂಸ್ತಪೋವನೇ ।
ಅವರ್ಧತ ನಿಜೈಃ ಸಾರ್ಧಂ ವಯಸ್ಯೈರಿವ ಸದ್ಗುಣೈಃ ॥ ೨೧
ಕೃತ್ವಾ ಕ್ಷತ್ರೋಚಿತಾನ್ ಸರ್ವಾನ್ ಸಂಸ್ಕಾರಾನ್ ಜಮದಗ್ನಿನಾ ।
ವ್ಯನೀಯತ ಸ ವಿದ್ಯಾಸು ಧನುರ್ವೇದೇ ಚ ವೀರ್ಯವಾನ್ ॥ ೨೨
ಕೃಷ್ಟ್ವಾ ಚ ಸ್ವಕರಾನ್ಮಾತಾ ತಸ್ಯ ಸ್ನೇಹಾನ್ಮೃಗಾವತೀ ।
ಸಹಸ್ರಾನೀಕನಾಮಾಂಕಂ ಚಕಾರ ಕಟಕಂ ಕರೇ ॥ ೨೩
ಹರಿಣಾಖೇಟಕೇ ಜಾತು ಭ್ರಾಮ್ಯನ್ನುದಯನೋಽಥ ಸಃ ।
ಶಬರೇಣ ಹಠಾಕ್ರಾಂತಮಟವ್ಯಾಂ ಸರ್ಪಮೈಕ್ಷತ ॥ ೨೪
ಸದಯಃ ಸುಂದರೇ ತಸ್ಮಿನ್ ಸರ್ಪೇ ತಂ ಶಬರಂ ಚ ಸಃ ।
ಉವಾಚ ಮುಚ್ಯತಾಮೇಷ ಸರ್ಪೋ ಮದ್ವಚನಾದಿತಿ ॥ ೨೫

೨೬. ಆಗ ಆ ಶಬರನು "ಒಡೆಯ, ಇದು ನನ್ನ ಜೀವನೋಪಾಯ. ಬಡವನಾದ ನಾನು ಹಾವನ್ನು ಆಡಿಸಿ ಬದುಕನ್ನು ನಡೆಸುತ್ತಿದ್ದೇನೆ.

೨೭. "ಹಿಂದೆ ನಾನು ಆಡಿಸುತ್ತಿದ್ದ ಹಾವು ಸತ್ತು ಹೋಯಿತು. ಮಂತ್ರ ಔಷಧಿಗಳ ಬಲದಿಂದ ನಿಯಂತ್ರಿಸಿ ಇದನ್ನು ಹಿಡಿದಿದ್ದೇನೆ. ಇದಕ್ಕಾಗಿ ಈ ದೊಡ್ಡ ಕಾಡಿನಲ್ಲೆಲ್ಲ ಹುಡುಕಾಡಿದ್ದೇನೆ' ಎಂದನು.

೨೮. ತ್ಯಾಗಶೀಲನಾದ ಉದಯನನು ಆ ಮಾತನ್ನು ಕೇಳಿ ತನ್ನ ತಾಯಿಯು ಕೊಟ್ಟಿದ್ದ ಬಳೆಯನ್ನು ಬೇಡನಿಗೆ ಕೊಟ್ಟು ಆ ಹಾವನ್ನು ಬಿಡಿಸಿದನು.

೨೯. ಬಳೆಯನ್ನು ತೆಗೆದುಕೊಂಡ ಬೇಡನು ತನ್ನ ದಾರಿಯನ್ನು ಹಿಡಿದು ಹೊರಟನು. ಆಗ ಆ ಸರ್ಪವು ಸಂತೋಷಪಟ್ಟು ಉದಯನನಿಗೆ ಹೇಳಿತು.

೩೦. "ವಸುನೇಮಿ ಎಂಬ ಹೆಸರಿನಿಂದ ಪ್ರಸಿದ್ಧನಾದ ನಾನು ವಾಸುಕಿಯ ಅಣ್ಣ. ನೀನು ನನ್ನನ್ನು ಕಾಪಾಡಿರುವೆ. ನನ್ನಿಂದ ಈ ವೀಣೆಯನ್ನು ತೆಗೆದುಕೋ.

೩೧. ಈ ವೀಣೆಯು ತಂತಿಗಳ ಮಧುರ ನಾದದಿಂದ ರಮಣೀಯವಾಗಿದೆ. ಇದರಲ್ಲಿ ಶ್ರುತಿಗಳ ಭಾಗಗಳು ವಿಂಗಡಿಸಲ್ಪಟ್ಟಿವೆ. ಹೊಚ್ಚ ಹೊಸದಾದ ಮಾಲಾತಿಲಕಗಳನ್ನುಳ್ಳ ತಾಂಬೂಲದ ಎಲೆಗಳನ್ನೂ ಅದರಲ್ಲಿ ಬಿಡಿಸಲಾಗಿದೆ'

---

ತತಃ ಸ ಶಬರೋಽವಾದೀಜ್ಜೀವಿಕೇಯಂ ಮಮ ಪ್ರಭೋ ।
ಕೃಪಣೋಽಹಂ ಹಿ ಜೀವಾಮಿ ಭುಜಗಂ ಖೇಲಯನ್ ಸದಾ ॥ ೨೬
ವಿಪನ್ನೇ ಪನ್ನಗೇ ಪೂರ್ವಂ ಮಂತ್ರೌಷಧಿಬಲಾದಯಮ್ ।
ವಷ್ಟಬ್ಧಶ್ಚ ಮಯಾ ಲಬ್ಧಶ್ಚಿನ್ವತೈತಾಂ ಮಹಾಟವೀಮ್ ॥ ೨೭
ಶ್ರುತ್ವೇತ್ಯುದಯನಸ್ತ್ಯಾಗೀ ದತ್ವಾಸ್ಮೈ ಶಬರಾಯ ತಮ್ ।
ಕಟಕಂ ಜನನೀದತ್ತಂ ಸ ತಂ ಸರ್ಪಮಮೋಚಯತ್ ॥ ೨೮
ಗೃಹೀತಕಟಕೇ ಯಾತೇ ಶಬರೇ ಪುರತೋ ಗತಿಮ್ ।
ಕೃತ್ವಾ ಸ ಭುಜಗಃ ಪ್ರೀತೋ ಜಗಾದೋದಯನಂ ತದಾ ॥ ೨೯
ವಸುನೇಮಿರಿತಿ ಖ್ಯಾತೋ ಜ್ಯೇಷ್ಠೋ ಭ್ರಾತಾಸ್ಮಿ ವಾಸುಕೇಃ ।
ಇಮಾಂ ವೀಣಾಂ ಗೃಹಾಣ ತ್ವಂ ಮತ್ತಃ ಸಂರಕ್ಷಿತಾತ್ ತ್ವಯಾ ॥ ೩೦
ತಂತ್ರೀನಿರ್ಘೋಷರಮ್ಯಾಂ ಚ ಶ್ರುತಿಭಾಗೇ ವಿಭಾಜಿತಾಮ್ ।
ತಾಂಬೂಲೀಶ್ಚ ಸಹಾಮ್ಲಾನಮಾಲಾತಿಲಕಯುಕ್ತಿಭಿಃ ॥ ೩೧

೮೨. ಆ ವೀಣೆಯೊಡನೆ ಸರ್ಪದಿಂದ ಬೀಳ್ಕೊಂಡ ಉದಯನನು ತಾಯಿಯ ದೃಷ್ಟಿಗೆ ಅಮೃತವನ್ನು ಸುರಿಸುವವನಂತೆ ಜಮದಗ್ನಿಯ ಆಶ್ರಮಕ್ಕೆ ಬಂದು ಸೇರಿದನು.

೮೩–೮೪. ಈ ಮಧ್ಯದಲ್ಲಿ ಬೇಡನು ಅಡವಿಯಲ್ಲಿ ಅಲೆದಾಡಿ, ಉದಯನನಿಂದ ಪಡೆದಿದ್ದ ರಾಜನ ಅಂಕಿತವಿದ್ದ ಬಳೆಯನ್ನು ತೆಗೆದುಕೊಂಡು ಬಂದು ಅಂಗಡಿಯಲ್ಲಿ ಅದನ್ನು ಮಾರಲು ಯತ್ನಿಸಿದಾಗ ವಿಧಿವಶದಿಂದ ರಾಜಭಟರು ಅವನನ್ನು ಹಿಡಿದು ರಾಜನ ಅರಮನೆಗೆ ಒಯ್ದರು.

೮೫. ರಾಜ ಸಹಸ್ರಾನೀಕನು ಶೋಕದಿಂದ ತಾನೇ ಆ ಬೇಡನನ್ನು 'ನಿನಗೆ ಈ ಬಳೆ ಎಲ್ಲಿ ಸಿಕ್ಕಿತು'? ಎಂದು ಕೇಳಿದನು.

೮೬ ಆ ಶಬರನು ರಾಜನಿಗೆ ತಾನು ಉದಯಾದ್ರಿಯಲ್ಲಿ ಹಾವನ್ನು ಹಿಡಿದ ಘಟನೆಯಿಂದ ಆರಂಭಿಸಿ ಬಳೆಯು ದೊರಕಿದ ಕ್ಷಣದವರೆಗೆ ನಡೆದುದೆಲ್ಲವನ್ನೂ ಹೇಳಿದನು.

೮೭ ವಿಷಯವನ್ನೆಲ್ಲ ಬೇಡನಿಂದ ತಿಳಿದುಕೊಂಡು, ತನ್ನ ಪ್ರಿಯೆಯ ಬಳೆಯನ್ನು ನೋಡಿ ಸಹಸ್ರಾನೀಕ ಮಹಾರಾಜನು ವಿಚಾರದ ಉಯ್ಯಾಲೆಯನ್ನು ಏರಿದನು (ಅವನ ಮನಸ್ಸು ಡೋಲಾಯಮಾನವಾಯಿತು).

---

ತದ್ಯುಕ್ತೋ ಜಮದಗ್ನೇಸ್ತಂ ನಾಗೋಕ್ತ್ಯಾಪ್ತಃ ಸ ಚಾಶ್ರಮಮ್ ।
ಅಗಾದುದಯನೋ ಮಾತುರ್ದೃಶಿ ವರ್ಷನ್ನಿವಾಮೃತಮ್ ॥ ೮೨
ಅತ್ರಾಂತರೇ ಸ ಶಬರೋ□ ಪ್ಯಟವೀಂ ಪ್ರಾಪ್ಯ ಪರ್ಯಟನ್ ।
ಆದಾಯೋದಯನಾತ್ ಪ್ರಾಪ್ತಂ ಕಟಕಂ ತದ್‌ವಿಧೇರ್ವಶಾತ್ ॥ ೮೩
ವಿಕ್ರೇಣಾನಶ್ಚ ತತ್ತತ್ರ ರಾಜನಾಮಾಂಕಮಾಪಣೇ ।
ವಷ್ಟಭ್ಯ ರಾಜಪುರುಷೈರ್ನಿನ್ಯೇ ರಾಜಕುಲಂ ಚ ಸಃ ॥ ೮೪
ಕುತಸ್ತ್ವಯೇದಂ ಕಟಕಂ ಸಂಪ್ರಾಪ್ತಮಿತಿ ತತ್ರ ಸಃ ।
ರಾಜ್ಞಾ ಸಹಸ್ರಾನೀಕೇನ ಸ್ವಯಂ ಶೋಕಾದಪೃಚ್ಛ್ಯತ ॥ ೮೫
ಅಥೋದಯಾದ್ರೌ ಸರ್ಪಸ್ಯ ಗ್ರಹಣಾತ್ ಪ್ರಭೃತಿ ಸ್ವಕಮ್ ।
ಕಟಕಪ್ರಾಪ್ತಿವೃತ್ತಾಂತಂ ಶಬರಃ ಸ ಜಗಾದ ತಮ್ ॥ ೮೬
ತದ್‌ಬುದ್ಧ್ವಾ ಶಬರಾದ್ ದೃಷ್ಟ್ವಾ ದಯಿತಾವಲಯಂ ಚ ತಮ್ ।
ವಿಚಾರದೋಲಾಮಾರೋಹತ್ ಸಹಸ್ರಾನೀಕಭೂಪತಿಃ ॥ ೮೭

೮೮. "ರಾಜನೇ, ನಿನ್ನ ಶಾಪವು ಮುಗಿಯಿತು. ನಿನ್ನ ಪತ್ನಿ ಮೃಗಾವತಿಯು ಉದಯಾದ್ರಿಯಲ್ಲಿ ಜಮದಗ್ನಿಯ ಆಶ್ರಮದಲ್ಲಿ ಮಗನೊಡನೆ ಇದ್ದಾಳೆ".

೮೯. ಹೀಗೆ ದಿವ್ಯವಾದ ಅಶರೀರವಾಣಿಯೊಂದು ಬೇಸಿಗೆಯಿಂದ ಬೆಂದುಹೋಗಿದ್ದ ಮಳೆಯ ಧಾರೆಯು ನವಿಲನ್ನು ಮುದಗೊಳಿಸುವಂತೆ ಆ ರಾಜನನ್ನು ಆನಂದಪಡಿಸಿತು.

೯೦. ಕಾಯುವ ಕಾತರತೆಯಿಂದ ದೀರ್ಘವಾಗಿ ತೋರಿದ ಆ ದಿನವು ಹೇಗೋ ಮುಗಿಯಿತು. ಮಾರನೆಯ ದಿನ ಆ ಬೇಡನನ್ನೇ ಮುಂದಿಟ್ಟುಕೊಂಡು ಸಹಸ್ರಾನೀಕಮಹಾರಾಜನು ತನ್ನ ಪ್ರಿಯತಮೆಯನ್ನು ಮತ್ತೆ ಪಡೆದುಕೊಳ್ಳಲು ಸೈನ್ಯಗಳ ಜೊತೆಯಲ್ಲಿ ತ್ವರೆಯಿಂದ ಉದಯಶೈಲದ ಆಶ್ರಮಸ್ಥಾನಕ್ಕೆ ಹೊರಟನು.

**ಮಹಾಕವಿ ಶ್ರೀ ಸೋಮದೇವಭಟ್ಟನು ರಚಿಸಿದ**
**ಕಥಾಸರಿತ್ಸಾಗರದ ಕಥಾಮುಖಲಂಬಕದಲ್ಲಿ**
**ಮೊದಲನೆಯ ತರಂಗವು ಮುಗಿಯಿತು.**

---

ಕ್ಷೀಣಃ ಶಾಪಃ ಸ ತೇ ರಾಜನ್ ಉದಯಾದ್ರೌ ಚ ಸಾ ಸ್ಥಿತಾ ।
ಜಮದಗ್ನ್ಯಾಶ್ರಮೇ ಜಾಯಾ ಸಪುತ್ರಾ ತೇ ಮೃಗಾವತೀ ॥ ೮೮
ಇತಿ ದಿವ್ಯಾ ತದಾ ವಾಣೀ ನಂದಯಾಮಾಸ ತಂ ನೃಪಮ್ ।
ವಿಪ್ರಯೋಗನಿದಾಘಾರ್ತಂ ವಾರಿಧಾರೇವ ಬರ್ಹಿಣಮ್ ॥ ೮೯
ಅಥೋತ್ಕಂಠಾದೀರ್ಘೇ ಕಥಮಪಿ ದಿನೇಽಸ್ಮಿನ್ನವಸಿತೇ
ತಮೇವಾಗ್ರೇ ಕೃತ್ವಾ ಶಬರಮಪರೇದ್ಯುಃ ಸ ನೃಪತಿಃ ।
ಸಹಸ್ರಾನೀಕಸ್ತಾಂ ಸರಭಸಮವಾಪ್ತುಂ ಪ್ರಿಯತಮಾಂ
ಪ್ರತಸ್ಥೇ ತತ್ಸೈನ್ಯೈಃ ಸಮಮುದಯಶೈಲಾಶ್ರಮಪದಮ್ ॥ ೯೦

**ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ**
**ಕಥಾಸರಿತ್ಸಾಗರೇ ಕಥಾಮುಖಲಂಬಕೇ**
**ಪ್ರಥಮಸ್ತರಂಗಃ.**

## ಎರಡನೆಯ ತರಂಗ

೧ ಆ ದಿನ ಬಹಳ ದೂರ ಪ್ರಯಾಣ ಮಾಡಿ ರಾಜನು ಒಂದು ಸರೋವರದ ದಡದಲ್ಲಿ ಬಿಡಾರವನ್ನು ಹೂಡಿದನು.

೨. ಅವನು ಬಳಲಿ ಸಾಯಂಕಾಲದಲ್ಲಿ ಹಾಸಿಗೆಯಲ್ಲಿ ಮಲಗಿದಾಗ ಅವನ ಸೇವೆಯನ್ನು ಮಾಡಲು ಸಂಗತಕನೆಂಬ ಕಥಕನು (ಕಥೆಗಳನ್ನು ಹೇಳುವುದರಲ್ಲಿ ಜಾಣನು) ಬಂದನು. ಅವನಿಗೆ ರಾಜನು ಹೀಗೆಂದನು.

೩ "ಮೃಗಾವತಿಯ ಮುಖಕಮಲವನ್ನು ಕಾಣುವ ಸಂಭ್ರಮದ ಆಕಾಂಕ್ಷೆಯಲ್ಲಿರುವ ನನ್ನ ಹೃದಯಕ್ಕೆ ವಿನೋದವನ್ನು ನೀಡುವ ಯಾವುದಾದರೊಂದು ಕಥೆಯನ್ನುಹೇಳು.'

೪. ಆಗ ಸಂಗತಕನು ಹೇಳಿದನು — " ದೇವ, ತಾವು ಸುಮ್ಮನೆ ಪರಿತಪಿಸುವುದು ಏಕೆ ? ಶಾಪವು ಮುಗಿಯುತ್ತಾ ಬಂದಿರುವುದರಿಂದ ದೇವಿಯೊಡನೆ ತಮ್ಮ ಸಮಾಗಮವು ಸನ್ನಿಹಿತವೇ ಆಗಿದೆ

೫ ಮಾನವರಿಗೆ ಎಷ್ಟೋ ಸಂಯೋಗಗಳೂ ವಿಯೋಗಗಳೂ ಆಗುತ್ತಿರುತ್ತವೆ. ಪ್ರಭು, ಈ ವಿಷಯದಲ್ಲೊಂದು ಕಥೆಯನ್ನು ಹೇಳುವೆನು, ಕೇಳಿರಿ.

---

## ದ್ವಿತೀಯಸ್ತರಂಗಃ

ಗತ್ವಾಥ ದೂರಮಧ್ವಾನಂ ರಾಜಾ ವಸತಿಮಗ್ರಹೀತ್ ।
ದಿನೇ ತಸ್ಮಿನ್ ಸ ಕಸ್ಮಿಂಶ್ಚಿದರಣ್ಯಸರಸಸ್ತಟೇ ॥ ೧
ಶಯನೀಯಗತಃ ಶ್ರಾಂತಸ್ತತ್ರ ಸೇವಾರಸಾಗತಮ್ ।
ಸಾಯಂ ಸಂಗತಕಂ ನಾಮ ಜಗಾದ ಕಥಕಂ ನೃಪಃ ॥ ೨
ಕಥಾಮಾಖ್ಯಾಹಿ ಮೇ ಕಾಂಚಿದ್ಧೃದಯಸ್ಯ ವಿನೋದಿನೀಮ್ ।
ಮೃಗಾವತೀಮುಖಾಂಭೋಜದರ್ಶನೋತ್ಸವಕಾಂಕ್ಷಿಣಃ ॥ ೩
ಅಥ ಸಂಗತಕೋ□ವಾದೀದ್ದೇವ ಕಿಂ ತಪ್ಯಸೇ ವೃಥಾ ।
ಆಸನ್ನ ಏವ ದೇವ್ಯಾಸ್ತೇ ಕ್ಷೀಣಶಾಪಃ ಸಮಾಗಮಃ ॥ ೪
ಸಂಯೋಗಾ ವಿಪ್ರಯೋಗಾಶ್ಚ ಭವಂತಿ ಬಹವೋ ನೃಣಾಮ್ ।
ತಥಾ ಚಾತ್ರ ಕಥಾಮೇಕಾಂ ಕಥಯಾಮಿ ಶೃಣು ಪ್ರಭೋ ॥ ೫

## ಶ್ರೀದತ್ತನ ಕಥೆ

೬ ಹಿಂದೆ ಮಾಲವದೇಶದಲ್ಲಿ ಯಜ್ಞಸೋಮನೆಂಬ ಬ್ರಾಹ್ಮಣನಿದ್ದನು. ಸಜ್ಜನನಾದ ಅವನಿಗೆ ಜನಪ್ರಿಯರಾದ ಇಬ್ಬರು ಮಕ್ಕಳಿದ್ದರು.

೭ ಅವರಲ್ಲೊಬ್ಬನು ಕಾಲನೇಮಿ ಎಂಬ ಹೆಸರಿನಿಂದ ಪ್ರಸಿದ್ಧನು. ಎರಡನೆಯವನ ಹೆಸರು ವಿಗತಭಯ.

೮ ತಂದೆ ಸ್ವರ್ಗವಾಸಿಯಾಗಲು ಆ ಇಬ್ಬರು ಮಕ್ಕಳೂ ಬಾಲ್ಯವನ್ನು ದಾಟಿ ಅನಂತರ ವಿದ್ಯೆಯನ್ನು ಗಳಿಸಲು ಪಾಟಲೀಪುತ್ರ ನಗರಕ್ಕೆ ಪಯಣಿಸಿದರು.

೯. ಅಲ್ಲಿ ವಿದ್ಯೆಯನ್ನು ಗಳಿಸಿದ ಅವರಿಬ್ಬರಿಗೆ ಉಪಾಧ್ಯಾಯ ದೇವಶರ್ಮನು ಶರೀರವನ್ನು ಧರಿಸಿದ ಇನ್ನೆರಡು ವಿದ್ಯೆಗಳಂತಿದ್ದ ತನ್ನ ಇಬ್ಬರು ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊಟ್ಟನು.

೧೦. ಬೇರೆ ಗೃಹಸ್ಥರು ಧನಿಕರಾಗಿದ್ದುದನ್ನು ಕಂಡು ಈರ್ಷ್ಯೆಯನ್ನು ಹೊಂದಿದ ಕಾಲನೇಮಿಯು ವ್ರತಗಳನ್ನೂ ಹೋಮಗಳನ್ನೂ ಮಾಡಿ ಲಕ್ಷ್ಮಿಯನ್ನು ಒಲಿಸಿಕೊಂಡನು.

೧೧. ಸಂತುಷ್ಟಳಾದ ಲಕ್ಷ್ಮಿಯು ಪ್ರತ್ಯಕ್ಷಳಾಗಿ ಹೀಗೆ ಹೇಳಿದಳು. "ಸಮೃದ್ಧವಾದ ಸಂಪತ್ತನ್ನೂ, ಅಲ್ಲದೆ ಮುಂದೆ ರಾಜನಾಗುವ ಮಗನನ್ನೂ ಪಡೆಯುವೆ.

---

ಮಾಲವೇ ಯಜ್ಞಸೋಮಾಖ್ಯೋ ದ್ವಿಜಃ ಕಶ್ಚಿದಭೂತ್ ಪುರಾ ।
ತಸ್ಯ ಚ ದ್ವೌ ಸುತೌ ಸಾಧೋರ್ಜಾಯೇತೇ ಸ್ಮ ಜನಪ್ರಿಯೌ ॥ ೬
ಏಕಸ್ತಯೋರಭೂನ್ನಾಮ್ನಾ ಕಾಲನೇಮಿರಿತಿ ಶ್ರುತಃ ।
ದ್ವಿತೀಯಶ್ಚಾಪಿ ವಿಗತಭಯ ಇತ್ಯಾಖ್ಯಯಾಭವತ್ ॥ ೭
ಪಿತರಿ ಸ್ವರ್ಗತೇ ತೌ ಚ ಭ್ರಾತರೌ ತೀರ್ಣಶೈಶವೌ ।
ವಿದ್ಯಾಪ್ರಾಪ್ತ್ಯೈ ಪ್ರಯಯತುಃ ಪುರಂ ಪಾಟಲಿಪುತ್ರಕಮ್ ॥ ೮
ತತ್ರೈವೋಪಾತ್ತವಿದ್ಯಾಭ್ಯಾಮುಪಾಧ್ಯಾಯೋ ನಿಜೇ ಸುತೇ ।
ದೇವಶರ್ಮಾ ದದೌ ತಾಭ್ಯಾಂ ಮೂರ್ತೇ ವಿದ್ಯೇ ಇವಾಪರೇ ॥ ೯
ಅಥಾನ್ಯಾನ್ ವೀಕ್ಷ್ಯ ತಾನಾಢ್ಯಾನ್ ಗೃಹಸ್ಥಾನೀರ್ಷ್ಯಯಾ ಶ್ರಿಯಮ್ ।
ಹೋಮೈಃ ಸ ಸಾಧಯಾಮಾಸ ಕಾಲನೇಮಿಃ ಕೃತವ್ರತಃ ॥ ೧೦
ಸಾ ಚ ತುಷ್ಟಾ ಸತೀ ಸಾಕ್ಷಾದೇವಂ ಶ್ರೀಸ್ತಮಭಾಷತ ।
ಭೂರಿ ಪ್ರಾಪ್ಸ್ಯಸಿ ವಿತ್ತಂ ಚ ಪುತ್ರಂ ಚ ಪೃಥಿವೀಪತಿಮ್ ॥ ೧೧

೧೨. ಆದರೆ ನೀನು ರೋಷದಿಂದ ಕಲುಷಿತವಾದ ಮನಸ್ಸಿನಿಂದ ಹೋಮ ಮಾಡಿದ ಕಾರಣದಿಂದ ಕೊನೆಯಲ್ಲಿ ಕಳ್ಳರಿಗೆ ಆಗುವ ವಧೆ ನಿನಗೂ ಆಗುವುದು.'

೧೩. ಇಷ್ಟು ಹೇಳಿ ಲಕ್ಷ್ಮಿಯು ಅಂತರ್ಧಾನ ಹೊಂದಿದಳು. ಕಾಲನೇಮಿ ಕ್ರಮಶಃ ದೊಡ್ಡ ಧನಿಕನಾದನು. ಅಲ್ಲದೆ ಕೆಲವೇ ದಿನಗಳಲ್ಲಿ ಅವನಿಗೆ ಮಗನೂ ಹುಟ್ಟಿದನು.

೧೪. ಆಶೆಗಳನ್ನೆಲ್ಲ ಈಡೇರಿಸಿಕೊಂಡ ಕಾಲನೇಮಿಯು ಶ್ರೀದೇವಿಯ ವರದಿಂದ ಮಗನು ಹುಟ್ಟಿದನೆಂಬ ಕಾರಣದಿಂದ ಅವನಿಗೆ ಶ್ರೀದತ್ತ ಎಂಬ ಹೆಸರನ್ನಿಟ್ಟನು.

೧೫. ಕ್ರಮೇಣ ಬೆಳೆದ ಶ್ರೀದತ್ತನು ಬ್ರಾಹ್ಮಣನಾಗಿದ್ದರೂ ಅಸ್ತ್ರಗಳಲ್ಲೂ ಬಾಹುಯುದ್ಧದಲ್ಲೂ ಭೂಲೋಕದಲ್ಲೇ ಅಸಮಾನನಾದನು.

೧೬. ಕಾಲನೇಮಿಯ ತಮ್ಮ ವಿಗತಭಯನಾದರೋ ತನ್ನ ಹೆಂಡತಿಯನ್ನು ಹಾವು ನುಂಗಿತೆಂಬ ಕಾರಣದಿಂದ ತೀರ್ಥಯಾತ್ರೆಯನ್ನು ಮಾಡಲು ದೇಶಾಂತರಕ್ಕೆ ಹೋದನು.

೧೭. ವಲ್ಲಭಶಕ್ತಿ ಎಂಬ ರಾಜನು ಗುಣಗ್ರಾಹಿಯಾಗಿ ತನ್ನ ಮಗ ವಿಕ್ರಮಶಕ್ತಿ ಎಂಬುವನಿಗೆ ಶ್ರೀದತ್ತನನ್ನು ಮಿತ್ರನನ್ನಾಗಿ ಮಾಡಿದನು.

೧೮. ಅಭಿಮಾನಿಯಾಗಿದ್ದ ರಾಜಪುತ್ರನಿಗೂ ಶ್ರೀದತ್ತನಿಗೂ ಉಂಟಾದ ಸಹವಾಸವು ಬಲಶಾಲಿಯಾದ ದುರ್ಯೋಧನನಿಗೂ ಭೀಮನಿಗೂ ಬಾಲ್ಯದಲ್ಲಿ ಇದ್ದ ಸಂಬಂಧದಂತೆ ಇತ್ತು.

---

ಕಿಂತ್ವಂತೇ ಚೌರಸದೃಶೋ ವಧಸ್ತವ ಭವಿಷ್ಯತಿ ।
ಹುತಮಗ್ನೌ ತ್ವಯಾ ಯಸ್ಮಾದಮರ್ಷಕಲುಷಾತ್ಮನಾ ॥ ೧೨
ಇತ್ಯುಕ್ತ್ವಾಂತರ್ದಧೇ ಲಕ್ಷ್ಮೀಃ ಕಾಲನೇಮಿರಪಿ ಕ್ರಮಾತ್ ।
ಮಹಾಧನೋಽಭೂತ್ ಕಿಂಚಾಸ್ಯ ದಿನೈಃ ಪುತ್ರೋಽಪ್ಯಜಾಯತ ॥ ೧೩
ಶ್ರೀವರಾದೇಷ ಸಂಪ್ರಾಪ್ತ ಇತಿ ನಾಮ್ನಾ ತಮಾತ್ಮಜಮ್ ।
ಶ್ರೀದತ್ತಮಕರೋತ್ ಸೋಽಪಿ ಪಿತಾ ಪೂರ್ಣಮನೋರಥಃ ॥ ೧೪
ಕ್ರಮಾತ್ ಸ ವೃದ್ಧಿಂ ಸಂಪ್ರಾಪ್ತಃ ಶ್ರೀದತ್ತೋ ಬ್ರಾಹ್ಮಣೋಽಪಿ ಸನ್ ।
ಅಸ್ತ್ರೇಷು ಬಾಹುಯುದ್ಧೇಷು ಬಭೂವಾಪ್ರತಿಮೋ ಭುವಿ ॥ ೧೫
ಕಾಲನಾಮೇರಥ ಭ್ರಾತಾ ತೀರ್ಥಾರ್ಥೀ ಸರ್ಪಭಕ್ಷಿತಾಮ್ ।
ಭಾರ್ಯಾಮುದ್ದಿಶ್ಯ ವಿಗತಭಯೋ ದೇಶಾಂತರಂ ಯಯೌ ॥ ೧೬
ಶ್ರೀದತ್ತೋಽಪಿ ಗುಣಜ್ಞೇನ ರಾಜ್ಞಾ ವಲ್ಲಭಶಕ್ತಿನಾ ।
ತತ್ರ ವಿಕ್ರಮಶಕ್ತೇಃ ಸ ಸ್ವಪುತ್ರಸ್ಯ ಕೃತಃ ಸಖಾ ॥ ೧೭
ರಾಜಪುತ್ರೇಣ ತೇನಾಸ್ಯ ಸಹವಾಸೋಽಭಿಮಾನಿನಾ ।
ಬಾಲ್ಯೇ ದುರ್ಯೋಧನೇನೇವ ಭೀಮಸ್ಯಾಸೀತ್ತರಸ್ವಿನಾ ॥ ೧೮

೧೯. ಅವಂತಿದೇಶದ ಕ್ಷತ್ರಿಯರಾಗಿದ್ದ ಬಾಹುಶಾಲಿ, ವಜ್ರಮುಷ್ಟಿ ಎಂಬಿಬ್ಬರು ಈ ಬ್ರಾಹ್ಮಣ ಶ್ರೀದತ್ತನ ಮಿತ್ರರಾದರು.

೨೦. ದಕ್ಷಿಣದೇಶಗಳ ಅನೇಕರು ಮಂತ್ರಿಪುತ್ರರೂ ಶ್ರೀದತ್ತನಿಂದ ಬಾಹುಯುದ್ಧದಲ್ಲಿ ಸೋತು ಅವನ ಗುಣಗಳನ್ನು ಇಷ್ಟಪಟ್ಟು ತಾವಾಗಿಯೇ ಅವನ ಸ್ನೇಹವನ್ನು ಬಯಸಿ ಅವನನ್ನು ಆಶ್ರಯಿಸಿದರು.

೨೧. ಮಹಾಬಲ, ವ್ಯಾಘ್ರಭಟ, ಉಪೇಂದ್ರಬಲ ಮತ್ತು ನಿಷ್ಠುರಕ ಎಂಬುವರೆಲ್ಲ ಅವನ ಮಿತ್ರತ್ವವನ್ನು ಗಳಿಸಿದರು.

೨೨. ಒಮ್ಮೆ ಮಳೆಗಾಲದಲ್ಲಿ ಗಂಗಾನದಿಯ ದಡದಲ್ಲಿ ವಿಹರಿಸಲು ಶ್ರೀದತ್ತನು ತನ್ನ ಮಿತ್ರರೊಡನೆ ರಾಜಪುತ್ರನ ಜೊತೆಯಲ್ಲಿ ಹೋದನು.

೨೩. ಆಟದಲ್ಲಿ ನಿಜವಾದ ರಾಜಪುತ್ರನನ್ನು ಅವನ ಭಟರು ರಾಜನನ್ನಾಗಿ ಕಲ್ಪಿಸಿದರು. ಅದೇ ಕಾಲದಲ್ಲಿ ಆಟಕ್ಕಾಗಿ ಶ್ರೀದತ್ತನನ್ನು ಅವನ ಮಿತ್ರರು ರಾಜನನ್ನಾಗಿ ಮಾಡಿದರು.

೨೪. ಅಷ್ಟಕ್ಕೇ ರಾಜಪುತ್ರನಿಗೆ ರೋಷ ಉಕ್ಕಿತು. ಗರ್ವದಿಂದ ಅವನು ವಿಪ್ರವೀರ ಶ್ರೀದತ್ತನನ್ನು ಕೂಡಲೇ ಕಾಳಗಕ್ಕೆ ಆಹ್ವಾನಿಸಿದನು.

೨೫. ಬಾಹುಯುದ್ಧದಲ್ಲಿ ಶ್ರೀದತ್ತನು ರಾಜಕುಮಾರನನ್ನು ಸೋಲಿಸಿಬಿಟ್ಟನು. ಕಳಂಕಿತ ಹೃದಯದ ರಾಜಕುಮಾರನು ಬೆಳೆಯುತ್ತಿದ್ದ ಶ್ರೀದತ್ತನನ್ನು ಕೊಂದು ಹಾಕಬೇಕೆಂದು ಮನಸ್ಸಿನಲ್ಲೇ ನಿರ್ಧರಿಸಿದನು.

---

ದ್ವಾವೇತಸ್ಯಾಥ ಮಿತ್ರತ್ವಂ ವಿಪ್ರಸ್ಯಾವಂತಿದೇಶಜೌ ।
ಕ್ಷತ್ರಿಯೌ ಬಾಹುಶಾಲೀ ಚ ವಜ್ರಮುಷ್ಟಿಶ್ಚ ಜಗ್ಮತುಃ ॥ ೧೯
ಬಾಹುಯುದ್ಧಜಿತಾಶ್ಚಾನ್ಯೇ ದಾಕ್ಷಿಣಾತ್ಯಾ ಗುಣಪ್ರಿಯಾಃ ।
ಸ್ವಯಂವರಸುಹೃತ್ತ್ವೇನ ಮಂತ್ರಿಪುತ್ರಾಸ್ತಮಾಶ್ರಯನ್ ॥ ೨೦
ಮಹಾಬಲವ್ಯಾಘ್ರಭಟಾವುಪೇಂದ್ರಬಲ ಇತ್ಯಪಿ ।
ತಥಾ ನಿಷ್ಠುರಕೋ ನಾಮ ಸೌಹಾರ್ದಂ ತಸ್ಯ ಚಕ್ರಿರೇ ॥ ೨೧
ಕದಾಚಿದಥ ವರ್ಷಾಸು ವಿಹರ್ತುಂ ಜಾಹ್ನವೀತಟೇ ।
ಶ್ರೀದತ್ತಃ ಸಹ ತೈರ್ಮಿತ್ರೈ ರಾಜಪುತ್ರಸಖೋ ಯಯೌ ॥ ೨೨
ಸ್ವಭೃತ್ಯಾಸ್ತತ್ರ ತಂ ಚಕ್ರುರ್ನಿಜಂ ರಾಜಸುತಂ ನೃಪಮ್ ।
ಶ್ರೀದತ್ತೋಽಪಿ ಸ ತತ್ಕಾಲಂ ರಾಜಾ ಮಿತ್ರೈರಕಲ್ಪ್ಯತ ॥ ೨೩
ತಾವತಾ ಜಾತರೋಷೇಣ ರಾಜಪುತ್ರೇಣ ತೇನ ಸಃ ।
ವಿಪ್ರವೀರೋ ರಣಾಯಾಶು ಸಮಾಹೂತೋ ಮದಸ್ಪೃಶಾ ॥ ೨೪
ಸ ತೇನ ಬಾಹುಯುದ್ಧೇನ ಶ್ರೀದತ್ತೇನಾಥ ನಿರ್ಜಿತಃ ।
ಚಕಾರ ಹೃದಿ ವಧ್ಯಂ ತು ವರ್ಧಮಾನಂ ಕಲಂಕಿತಃ ॥ ೨೫

೨೬. ರಾಜಪುತ್ರನ ಆ ಅಭಿಪ್ರಾಯವನ್ನರಿತುಕೊಂಡು ಶ್ರೀದತ್ತನು ಶಂಕೆಯಿಂದ ತನ್ನ ಮಿತ್ರರೊಡನೆ ರಾಜಪುತ್ರನ ಬಳಿಯಿಂದ ದೂರ ಸರಿದನು.

೨೭. ಹಾಗೆ ಹೋಗುವಾಗ ಗಂಗೆಯ ಮಧ್ಯದಲ್ಲಿ ಸಮುದ್ರದಲ್ಲಿರುವ ಲಕ್ಷ್ಮಿಯಂತಿದ್ದ ಒಬ್ಬ ಹೆಣ್ಣು ನೀರಿನ ಪ್ರವಾಹದಲ್ಲಿ ಕೊಚ್ಚಿ ಹೋಗುವುದನ್ನು ಅವನು ಕಂಡನು.

೨೮. ಬಾಹುಶಾಲಿಯೇ ಮುಂತಾದ ಆರುಜನ ಮಿತ್ರರನ್ನೂ ದಡದಲ್ಲಿ ನಿಲ್ಲಿಸಿ ಶ್ರೀದತ್ತನು ನೀರಿನ ಮಧ್ಯದಲ್ಲಿದ್ದ ಅವಳನ್ನು ಎತ್ತಿ ತಂದು ಕಾಪಾಡಲು ತಾನೇ ನೀರಿಗೆ ಧುಮುಕಿದನು.

೨೯. ದೂರದಲ್ಲಿ ನೀರಿನಲ್ಲಿ ಮುಳುಗುತ್ತಿದ್ದ ಆ ಸ್ತ್ರೀಯನ್ನು ಕೂದಲಿನಲ್ಲಿಯಾದರೂ ಹಿಡಿದುಕೊಳ್ಳಲು ಆಗುವಂತೆ ಅನುಸರಿಸಿ ಹೋಗಲು ಅವನೂ ಅಲ್ಲಿ ಮುಳುಗಿದನು.

೩೦. ಅಲ್ಲಿ ಮುಳುಗಿದ ಶ್ರೀದತ್ತನು ಕ್ಷಣಮಾತ್ರದಲ್ಲಿ ಶಿವಭಕ್ತರಾದ ದೇವತೆಗಳನ್ನು ನೋಡಿದನು. ನೀರನ್ನಾಗಲಿ ಆ ಸ್ತ್ರೀಯನ್ನಾಗಲಿ ಕಾಣಲಿಲ್ಲ.

೩೧. ಆಯಾಸಗೊಂಡಿದ್ದ ಶ್ರೀದತ್ತನು ಆ ದೊಡ್ಡ ವಿಸ್ಮಯವನ್ನು ನೋಡಿ, ಶಿವನನ್ನು ನಮಸ್ಕರಿಸಿ ಅಲ್ಲಿದ್ದ ಉದ್ಯಾನದಲ್ಲಿ ಆ ರಾತ್ರಿಯನ್ನು ಕಳೆದನು.

೩೨. ಬೆಳಗ್ಗೆ ಶಿವನನ್ನು ಪೂಜಿಸಲು ಹೆಣ್ಣಿನ ಗುಣಗಳಿಂದ ತುಂಬಿದ ರೂಪಲಕ್ಷ್ಮಿಯೇ ಮೂರ್ತಿಮತ್ತಾಗಿ ಬಂದಳೋ ಎಂಬಂತಿದ್ದ ಒಬ್ಬಳು ಸ್ತ್ರೀ ಬಂದುದನ್ನು ಅವನು ನೋಡಿದನು.

---

ಜ್ಞಾತ್ವಾ ಚ ತಮಭಿಪ್ರಾಯಂ ರಾಜಪುತ್ರಸ್ಯ ಶಂಕಿತಃ ।
ಶ್ರೀದತ್ತಃ ಸಹ ತೈರ್ಮಿತ್ರೈಸ್ತತ್ಸಮೀಪಾದುಪಾಸರತ್ ॥ ೨೬
ಉಪಸರ್ಪನ್ ಸ ಚಾಪಶ್ಯದ್ ಗಂಗಾಮಧ್ಯಗತಾಂ ಸ್ತ್ರಿಯಮ್ ।
ಹ್ರಿಯಮಾಣಾಂ ಜಲೌಘೇನ ಸಾಗರಸ್ಥಾಮಿವ ಶ್ರಿಯಮ್ ॥ ೨೭
ತತಶ್ಚಾವತತಾರೈತಾಮುದ್ಧರ್ತುಂ ಜಲಮಧ್ಯತಃ ।
ಷಡ್ ಬಾಹುಶಾಲಿಪ್ರಮುಖಾನ್ ಸ್ಥಾಪಯಿತ್ವಾ ತಟೇ ಸಖೀನ್ ॥ ೨೮
ತಾಂ ಚ ಕೇಶೇಷ್ವಪಿ ಪ್ರಾಪ್ತಾಂ ನಿಮಗ್ನಾಂ ದೂರಮಂಭಸಿ ।
ಅನುಸರ್ತುಂ ಸ್ತ್ರಿಯಂ ಸೋಽಪಿ ವೀರಸ್ತತ್ರೈವ ಮಗ್ನವಾನ್ ॥ ೨೯
ನಿಮಜ್ಜ್ಯ ಚ ದದರ್ಶಾತ್ರ ಸ ಶ್ರೀದತ್ತಃ ಕ್ಷಣಾದಿತಿ ।
ಶೈವಂ ದೇವಕುಲಂ ದಿವ್ಯಂ ನ ಪುನರ್ವಾರಿ ನ ಸ್ತ್ರಿಯಮ್ ॥ ೩೦
ತದ್ ದೃಷ್ಟ್ವಾ ಮಹದಾಶ್ಚರ್ಯಂ ಶ್ರಾಂತೋ ನತ್ವಾ ವೃಷಧ್ವಜಮ್ ।
ಉದ್ಯಾನೇ ಸುಂದರೇ ತತ್ರ ತಾಂ ನಿನಾಯ ವಿಭಾವರೀಮ್ ॥ ೩೧
ಪ್ರಾತಶ್ಚ ದೇವಮೀಶಾನಂ ಸಾ ಪೂಜಯಿತುಮಾಗತಾ ।
ದದೃಶೇ ತೇನ ಮೂರ್ತೇವ ರೂಪಶ್ರೀಃ ಸ್ತ್ರೀಗುಣಾನ್ವಿತಾ ॥ ೩೨

೩೩ ಈಶ್ವರನನ್ನು ಪೂಜಿಸಿ ಆ ಚಂದ್ರಮುಖಿಯು ತನ್ನ ಮನೆಗೆ ಹೋದಳು. ಶ್ರೀದತ್ತನೂ ಅವಳ ಹಿಂದೆ ಹೋದನು.

೩೪. ಅವನು ದೇವತೆಗಳ ಪಟ್ಟಣದಂತಿದ್ದ ಅವಳ ಮನೆಯನ್ನು ನೋಡಿದನು. ಅವಳು ಗಾಬರಿಗೊಂಡು ಅವಮಾನವಾದವಳೋ ತನ್ನ ಮನೆಯನ್ನು ಪ್ರವೇಶಿಸಿದಳು.

೩೫ ಅವಳು ಅವನೊಡನೆ ಏನನ್ನೂ ಮಾತನಾಡದೆ ಒಳಗಿನ ಕೋಣೆಯೊಳಗೆ ಮಂಚದ ಮೇಲೆ ಕುಳಿತುಕೊಂಡಳು. ನೂರಾರು ಸ್ತ್ರೀಯರು ಅವಳಿಗೆ ಸೇವೆಯನ್ನು ಮಾಡುತ್ತಿದ್ದರು.

೩೬ ಶ್ರೀದತ್ತನೂ ಅಲ್ಲೇ ಅವಳ ಬಳಿ ಕುಳಿತುಕೊಂಡನು. ಆಗ ಅವಳು ಇದ್ದಕ್ಕಿದ್ದ ಹಾಗೆ ಅಳಲಾರಂಭಿಸಿದಳು.

೩೭ ಬಿಸಿಯಾಗಿದ್ದ ಅವಳ ಕಂಬನಿಗಳು ಎದೆಯಮೇಲೆ ಬೀಳುತ್ತಿದ್ದವು. ಆಗ ಶ್ರೀದತ್ತನ ಹೃದಯದಲ್ಲಿ ಕರುಣೆ ಉಕ್ಕಿತು.

೩೮. "ನೀನು ಯಾರು ? ನಿನ್ನ ದುಃಖಕ್ಕೆ ಕಾರಣವೇನು ? ಚೆಲುವೆ, ಹೇಳು. ಏಕೆಂದರೆ ನಾನು ಆ ದುಃಖವನ್ನು ಹೋಗಲಾಡಿಸಲು ಶಕ್ತನು’ ಎಂದು ಹೇಳಿದನು.

---

ಈಶ್ವರಂ ಪೂಜಯಿತ್ವಾ ಚ ಸಾ ತತೋ ನಿಜಮಂದಿರಮ್ ।
ಯಯಾವಿಂದುಮುಖೀ ಸೋಽಪಿ ಶ್ರೀದತ್ತೋಽನುಜಗಾಮ ತಾಮ್ ॥ ೩೩
ದದರ್ಶ ಮಂದಿರಂ ತಚ್ಚ ತಸ್ಯಾಃ ಸುರಪುರೋಪಮಮ್ ।
ಪ್ರವಿವೇಶ ಚ ಸಂಭ್ರಾಂತಾ ಸಾವಮಾನೇವ ಮಾನಿನೀ ॥ ೩೪
ಸಾಪ್ಯಸಂಭಾಷಮಾಣೈವ ತಮಂತರ್ವಾಸವೇಶ್ಮನಿ ।
ತನ್ವೀ ನ್ಯಷೀದತ್ ಪರ್ಯಂಕೇ ಸ್ತ್ರೀಸಹಸ್ರೋಪಸೇವಿತಾ ॥ ೩೫
ಶ್ರೀದತ್ತೋಽಪಿ ಸ ತತ್ರೈವ ನಿಷಸಾದ ತದಂತಿಕೇ ।
ಅಥಾಕಸ್ಮಾತ್ ಪ್ರವವೃತೇ ತಯಾ ಸಾಧ್ವ್ಯಾ ಪ್ರರೋದಿತುಮ್ ॥ ೩೬
ನಿಪೇತುಃಸ್ತನಯೋಸ್ತಸ್ಯಾಃ ಸಂತಪ್ತಾ ಬಾಷ್ಪಬಿಂದವಃ ।
ಶ್ರೀದತ್ತಸ್ಯ ಚ ತತ್ಕಾಲಂ ಕಾರುಣ್ಯಂ ಹೃದಯೇ ಗತಮ್ ॥ ೩೭
ತತಃ ಸ ಚೈನಾಂ ಪಪ್ರಚ್ಛ ಕಾ ತ್ವಂ ದುಃಖಂ ಚ ಕಿಂ ತವ ।
ವದ ಸುಂದರಿ ಶಕ್ತೋಽಹಂ ತನ್ನಿವಾರಯಿತುಂ ಯತಃ ॥ ೩೮

೩೯. ಆಗ ಅವಳು ಹೇಗೋ ಕಷ್ಟಪಟ್ಟು ಹೇಳತೊಡಗಿದಳು. ""ನಾವು ದೈತ್ಯರ ರಾಜ ಬಲಿಯ ಒಂದು ಸಾವಿರ ಮೊಮ್ಮಕ್ಕಳು. ಅವರಲ್ಲಿ ಹಿರಿಯಳಾದ ನನ್ನ ಹೆಸರು ವಿದ್ಯುತ್ಪ್ರಭಾ.

೪೦. ನಮ್ಮ ತಾತನನ್ನು ವಿಷ್ಣು ದೀರ್ಘಕಾಲದ ಬಂಧನಕ್ಕೆ ಒಳಪಡಿಸಿದನು. ಅದೇ ವಿಷ್ಣು ನಮ್ಮ ತಂದೆಯನ್ನು ಬಾಹುಯುದ್ಧದಲ್ಲಿ ಕೊಂದುಹಾಕಿದನು.

೪೧. ನಮ್ಮ ತಂದೆಯನ್ನು ಕೊಂದು ಹಾಕಿದ ಮೇಲೆ ಅವನು ನಮ್ಮನ್ನೆಲ್ಲ ನಮ್ಮ ಊರಿನಿಂದ ಓಡಿಸಿಬಿಟ್ಟನು. ನಾವು ಒಳಗೆ ಬರದಂತೆ ತಡೆಯುವುದಕಕ್ಕಾಗಿ ಅಡ್ಡವಾಗಿ ಅವನೇ ಒಂದು ಸಿಂಹವನ್ನು ಇಟ್ಟಿದ್ದಾನೆ.

೪೨. ಸಿಂಹವು ಆ ಸ್ಥಾನವನ್ನು ಆಕ್ರಮಿಸಿದೆ, ದುಃಖವು ನಮ್ಮ ಹೃದಯವನ್ನು ಆಕ್ರಮಿಸಿದೆ. ಕುಬೇರನ ಸೇವಕನಾಗಿದ್ದ ಒಬ್ಬ ಯಕ್ಷನು ಶಾಪದಿಂದ ಆ ಸಿಂಹವಾಗಿದ್ದಾನೆ.

೪೩. ಮನುಷ್ಯರಿಂದ ಸೋಲು ಉಂಟಾದಾಗ ಅವನಿಗೆ ಶಾಪವಿಮೋಚನೆ ಎಂದು ಹೇಳಲಾಗಿದೆ. ನಮ್ಮ ಊರಿಗೆ ನಾವು ಪ್ರವೇಶ ಮಾಡುವುದು ಹೇಗೆ ಎಂದು ನಾವು ವಿಜ್ಞಾಪಿಸಿಕೊಂಡಾಗ ವಿಷ್ಣುವೇ ಅದನ್ನು ಹೇಳಿದನು.

೪೪. ಆದ್ದರಿಂದ ನಮ್ಮ ಶತ್ರುವಾಗಿರುವ ಆ ಸಿಂಹವನ್ನು ನೀನು ಗೆಲ್ಲು. ವೀರನೇ ! ಅದಕ್ಕಾಗಿಯೇ ನಿನ್ನನ್ನು ಇಲ್ಲಿಗೆ ಕರೆದು ತಂದೆನು.

---

ತತಃ ಕಥಂಚಿತ್ ಸಾವಾದೀದ್ವಯಂ ದೈತ್ಯಪತೇರ್ಬಲೇಃ ।
ಪೌತ್ರ್ಯೋ ದಶಶತಂ ತಾಸಾಂ ಜ್ಯೇಷ್ಠಾ ವಿದ್ಯುತ್ಪ್ರಭೇತ್ಯಹಮ್ ॥ ೩೯
ಸ ನಃ ಪಿತಾಮಹೋ ನೀತೋ ವಿಷ್ಣುನಾ ದೀರ್ಘಬಂಧನಮ್ ।
ಪಿತಾ ಚ ಬಾಹುಯುದ್ಧೇನ ಹತಸ್ತೇನೈವ ಶೌರಿಣಾ ॥ ೪೦
ತಂ ಹತ್ವಾ ತೇನ ಚ ನಿಜಾತ್ ಪುರಾನ್ನಿರ್ವಾಸಿತಾ ವಯಮ್ ।
ಪ್ರವೇಶರೋಧಕೃತ್ತತ್ರ ಸಿಂಹಶ್ಚ ಸ್ಥಾಪಿತೋ□ಂತರೇ ॥ ೪೧
ಆವೃತಂ ತತ್ಪದಂ ತೇನ ದುಃಖೇನ ಹೃದಯಂ ಚ ನಃ ।
ಸ ಚ ಯಕ್ಷಃ ಕುಬೇರಸ್ಯ ಶಾಪಾತ್ ಸಿಂಹತ್ವಮಾಗತಃ ॥ ೪೨
ಮರ್ತ್ಯೈರ್ಶ್ಚಾಭಿಭವಸ್ತಸ್ಯ ಶಾಪಾಂತಃ ಕಥಿತಃ ಪುರಾ ।
ಪುರಪ್ರವೇಶೋಪಾಯಾರ್ಥೇ ವಿಜ್ಞಪ್ತೋ ವಿಷ್ಣುರಾದಿಶತ್ ॥ ೪೩
ಅತಃ ಸ ಶತ್ರುರಸ್ಮಾಕಂ ಕೇಸರೀ ಜೀಯತಾಂ ತ್ವಯಾ ।
ತದರ್ಥಮೇವ ಚಾನೀತೋ ಮಯಾ ವೀರ ಭವಾನಿಹ ॥ ೪೪

೪೫ ಅವನನ್ನು ಗೆದ್ದ ಮೇಲೆ ಅವನಿಂದ ಮೃಗಾಂಕಕ ಎಂಬ ಕತ್ತಿಯನ್ನು ನೀನು ಪಡೆಯುವೆ. ಅದರ ಪ್ರಭಾವದಿಂದ ಭೂಮಿಯನ್ನು ಗೆದ್ದು ರಾಜನಾಗುವೆ.”

೪೬. ಅದನ್ನು ಕೇಳಿ ಶ್ರೀದತ್ತನು ಹಾಗೆಯೇ ಆಗಲಿ ಎಂದು ಒಪ್ಪಿ ಆ ದಿನವನ್ನು ಅಲ್ಲೇ ಕಳೆದು ಮಾರನೆಯ ದಿನ ಆ ದೈತ್ಯಕನ್ಯೆಯರನ್ನೇ ಮುಂದಿಟ್ಟುಕೊಂಡು ಅವರ ಊರಿಗೆ ಹೋದನು.

೪೭. ಕೊಬ್ಬಿದ್ದ ಆ ಸಿಂಹವನ್ನು ಬಾಹುಯುದ್ಧ ಮಾಡಿ ಶ್ರೀದತ್ತನು ಸೋಲಿಸಿದನು. ಸಿಂಹವು ಶಾಪವಿಮುಕ್ತವಾಗಿ ಮಾನವನ ಆಕಾರವನ್ನು ಪಡೆಯಿತು.

೪೮. ಸಂತುಷ್ಟನಾದ ಯಕ್ಷನು ತನ್ನ ಶಾಪವನ್ನು ಕೊನೆಗೊಳಿಸಿದ ಶ್ರೀದತ್ತನಿಗೆ ತನ್ನ ಖಡ್ಗವನ್ನಿತ್ತು ಅಸುರಾಂಗನೆಯರ ದುಃಖರಾಶಿಯೊಡನೆ ತಾನೂ ಅದೃಶ್ಯನಾದನು.

೪೯. ತನ್ನ ತಂಗಿಯರೊಡಗೂಡಿದ ದೈತ್ಯಕನ್ಯೆಯಾದ ವಿದ್ಯುತ್ಪ್ರಭೆಯೊಡನೆ ಶ್ರೀದತ್ತನು ಹೊರ ಬಂದ ಆಕಾಶವೋ ಎಂಬಂತೆ ವಿಶಾಲವಾಗಿದ್ದ ಆ ಶ್ರೇಷ್ಠಪುರವನ್ನು ಪ್ರವೇಶಿಸಿದನು.

೫೦. ದೈತ್ಯನ ಮಗಳಾದ ವಿದ್ಯುತ್ಪ್ರಭೆಯು ಅವನಿಗೆ ವಿಷಾಪಹಾರಕವಾದ ಉಂಗುರವನ್ನಿತ್ತಳು. ಅಲ್ಲಿಯೇ ಉಳಿದ ಯುವಕ ಶ್ರೀದತ್ತನಿಗೆ ಅವಳಲ್ಲಿ ಅಭಿಲಾಷೆ ಉಂಟಾಯಿತು.

---

ಮೃಗಾಂಕಕಾಖ್ಯಂ ಖಡ್ಗಂ ಚ ಜಿತಾತ್ತಸ್ಮಾದವಾಪ್ಸ್ಯಸಿ ।
ಪೃಥಿವೀಂ ಯತ್ಪ್ರಭಾವೇಣ ಜಿತ್ವಾ ರಾಜಾ ಭವಿಷ್ಯಸಿ ॥ ೪೫
ತಚ್ಛ್ರುತ್ವಾ ಸ ತಥೇತ್ಯತ್ರ ಶ್ರೀದತ್ತೋಽತೀತತದ್ದಿನಃ ।
ಅನ್ಯೇದ್ಯುರ್ದೈತ್ಯಕನ್ಯಾಸ್ತಾಃ ಕೃತ್ವಾಗ್ರೇ ತತ್ಪುರಂ ಯಯೌ ॥ ೪೬
ಜಿಗಾಯ ಬಾಹುಯುದ್ಧೇನ ಯತ್ರ ತಂ ಸಿಂಹಮುದ್ಧತಮ್ ।
ಸೋಽಪಿ ಶಾಪವಿಮುಕ್ತಃ ಸನ್ ಬಭೂವ ಪುರುಷಾಕೃತಿಃ ॥ ೪೭
ದತ್ತ್ವಾ ಚಾಸ್ಮೈ ಸ ಖಡ್ಗಂ ಸ್ವಂ ತುಷ್ಟಃ ಶಾಪಾಂತಕಾರಿಣೇ ।
ಸಹಾಸುರಾಂಗನಾದುಃಖಭಾರೇಣಾದರ್ಶನಂ ಯಯೌ ॥ ೪೮
ಸೋಽಥ ಸಾನುಜಯಾ ಸಾಕಂ ಶ್ರೀದತ್ತೋ ದೈತ್ಯಕನ್ಯಯಾ ।
ಬಹಿರ್ಗತಮಿವಾನಂತಂ ತದ್ವಿವೇಶ ಪುರೋತ್ತಮಮ್ ॥ ೪೯
ಅಂಗುಲೀಯಂ ವಿಷಘ್ನಂ ಚ ಸಾಸ್ಮೈ ದೈತ್ಯಸುತಾ ದದೌ ।
ತತಃ ಸೋಽತ್ರ ಸ್ಥಿತಸ್ತಸ್ಯಾಂ ಸಾಭಿಲಾಷೋಽಭವದ್ ಯುವಾ ॥ ೫೦

೫೧. ಆಗ ಯುಕ್ತಿಯಿಂದ ಅವಳು ಅವನಿಗೆ "ಇಲ್ಲಿರುವ ಇಳಿಯುವ ಬಾವಿಯಲ್ಲಿ ನೀನು ಸ್ನಾನ ಮಾಡು. ಮೊಸಳೆಗಳ ಭಯವನ್ನು ನಿವಾರಿಸುವ ಈ ಖಡ್ಗವನ್ನು ಹಿಡಿದುಕೊಂಡು ಮುಳುಗು' ಎಂದು ಹೇಳಿದಳು.

೫೨. ಹಾಗೇ ಆಗಲಿ ಎಂದು ಹೇಳಿ ಆ ಬಾವಿಯಲ್ಲಿ ಮುಳುಗಿದ ಶ್ರೀದತ್ತನು ಹಿಂದೆ ಯಾವ ಸ್ಥಳದಲ್ಲಿ (ಆ ಸ್ತ್ರೀಯನ್ನು ಕಾಪಾಡಲು) ಇಳಿದಿದ್ದನೋ ಅದೇ ಗಂಗಾದಡದಲ್ಲಿ ಮೇಲೆದ್ದನು.

೫೩. ಪಾತಾಳದಿಂದ ಮೇಲೆದ್ದ ಶ್ರೀದತ್ತನು ಖಡ್ಗವನ್ನೂ ಉಂಗುರವನ್ನೂ ನೋಡಿ ಅಸುರಕನ್ಯೆಯಿಂದ ವಂಚಿತನಾದೆನು ಎಂದು ವಿಷಣ್ಣನೂ ವಿಸ್ಮಿತನೂ ಆದನು.

೫೪. ಆಮೇಲೆ ಮಿತ್ರರನ್ನು ಹುಡುಕುವುದಕ್ಕಾಗಿ ತನ್ನ ಮನೆಯ ಕಡೆಗೆ ಹೊರಟನು. ಹೋಗುವಾಗ ದಾರಿಯಲ್ಲಿ ನಿಷ್ಠುರಕ ಎಂಬ ಮಿತ್ರನನ್ನು ಕಂಡನು.

೫೫ ನಿಷ್ಠುರಕನು ಬಂದು ನಮಸ್ಕರಿಸಿ ತ್ವರೆಯಿಂದ ಶ್ರೀದತ್ತನನ್ನು ಏಕಾಂತ ಸ್ಥಳಕ್ಕೆ ಕರೆದೊಯ್ದನು. ಅಲ್ಲಿ ಶ್ರೀದತ್ತನು ತನ್ನ ಜನರ ಬಗ್ಗೆ ಪ್ರಶ್ನಿಸಿದಾಗ ಇಂತೆಂದನು.

೫೬ ಗಂಗೆಯಲ್ಲಿ ಮುಳುಗಿದ ನಿನ್ನನ್ನು ಬಹುದಿನಗಳವರೆಗೆ ಹುಡುಕಿ, ಶೋಕದಿಂದ ನಮ್ಮ ತಲೆಗಳನ್ನು ಕಡಿದುಕೊಳ್ಳಲು ನಾವು ಸಿದ್ಧರಾದೆವು.

---

ಸಾಥ ಯುಕ್ತ್ಯಾ ಜಗಾದೈನಂ ವಾಪ್ಯಾಂ ಸ್ನಾನಮಿತಃ ಕುರು ।
ಆದಾಯೈನಂ ಚ ಮಜ್ಜೇಸ್ತ್ವಂ ಖಡ್ಗಂ ಗ್ರಾಹಭಯಾಪಹಮ್ ॥ ೫೧
ತಥೇತಿ ವಾಪ್ಯಾಂ ಮಗ್ನಃ ಸನ್ ಶ್ರೀದತ್ತೋ ಜಾಹ್ನವೀತಟಾತ್ ।
ತಸ್ಮಾದೇವ ಸಮುತ್ತಸ್ಥೌ ಯಸ್ಮಾತ್ ಪೂರ್ವಮವಾತರತ್ ॥ ೫೨
ಖಡ್ಗಾಂಗುಲೀಯಕೇ ಪಶ್ಯನ್ ಪಾತಾಲಾದುತ್ಥಿತೋಽಥ ಸಃ ।
ವಿಷಣ್ಣೋ ವಿಸ್ಮಿತಶ್ಚಾಸೀದ್ ವಂಚಿತೋಽಸುರಕನ್ಯಯಾ ॥ ೫೩
ತತಸ್ತಾನ್ ಸುಹೃದೋಽನ್ವೇಷ್ಟುಂ ಸ್ವಗೃಹಾಭಿಮುಖಂ ಯಯೌ ।
ಗಚ್ಛನ್ನಿಷ್ಠುರಕಾಖ್ಯಂ ಚ ಮಿತ್ರಂ ಮಾರ್ಗೇ ದದರ್ಶ ಸಃ ॥ ೫೪
ಸ ಚೋಪೇತ್ಯ ಪ್ರಣಮ್ಯಾಥ ನೀತ್ವೈಕಾಂತೇ ಚ ಸತ್ವರಮ್ ।
ತಂ ಪೃಷ್ಟಸ್ವಜನೋದಂತಮೇವಂ ನಿಷ್ಠುರಕೋಽಬ್ರವೀತ್ ॥ ೫೫
ಗಂಗಾಂತಸ್ತ್ವಾಂ ತದಾ ಮಗ್ನಮನ್ವಿಷ್ಯ ದಿವಸಾನ್ ಬಹೂನ್ ।
ಸ್ವಶಿರಾಂಸಿ ಶುಚಾ ಛೇತ್ತುಮಭೂಮ ವಯಮುದ್ಯತಾಃ ॥ ೫೬

೫೭. ಆಗ 'ಮಕ್ಕಳೇ, ಸಾಹಸ ಮಾಡಬೇಡಿ, ನಿಮ್ಮ ಮಿತ್ರನು ಬದುಕಿ ಹಿಂದಿರುಗಿ ಬರುತ್ತಾನೆ' ಎಂಬ ಅಂತರಿಕ್ಷವಾಣಿಯು ನಮ್ಮ ಆ ಕೆಲಸವನ್ನು ತಡೆಹಿಡಿಯಿತು.

೫೮. ಆಮೇಲೆ ನಿನ್ನ ತಂದೆಯ ಬಳಿಗೆ ಹೋಗಲು ನಾವು ತೆರಳುತ್ತಿದ್ದಾಗ ದಾರಿಯಲ್ಲೇ ಒಬ್ಬ ಮನುಷ್ಯನು ತ್ವರೆಯಿಂದ ಓಡಿಬಂದು ಹೀಗೆ ಹೇಳಿದನು.

೫೯. '"ನೀವು ಈಗ ನಗರವನ್ನು ಪ್ರವೇಶಿಸಬಾರದು, ಏಕೆಂದರೆ ರಾಜ ವಲ್ಲಭಶಕ್ತಿಯು ಮೃತನಾಗಿದ್ದಾನೆ

೬೦. ಮಂತ್ರಿಗಳೆಲ್ಲ ಒಟ್ಟಾಗಿ ರಾಜ್ಯವನ್ನು ವಿಕ್ರಮಶಕ್ತಿಗೆ ಕೊಟ್ಟಿದ್ದಾರೆ. ರಾಜ್ಯವನ್ನು ಪಡೆದ ಮರುದಿನವೇ ಅವನು ಕಾಲನೇಮಿಯ ಮನೆಗೆ ಹೋದನು.

೬೧. ರೋಷಾವಿಷ್ಟನಾಗಿ ವಿಕ್ರಮಶಕ್ತಿಯು ಕಾಲನೇಮಿಯನ್ನು 'ನಿನ್ನ ಆ ಮಗ ಶ್ರೀದತ್ತನೆಲ್ಲಿ?' ಎಂದು ಕೇಳಿದನು. ಅವನು 'ನನಗೆ ತಿಳಿಯದು' ಎಂದು ಉತ್ತರವನ್ನು ಕೊಟ್ಟನು.

೬೨. ಇವನು ಮಗನನ್ನೆಲ್ಲೋ ಬಚ್ಚಿಟ್ಟಿದ್ದಾನೆ ಎಂದು ರಾಜನು ಕ್ರೋಧದಿಂದ ಕಾಲನೇಮಿಯನ್ನು ಕಳ್ಳನೆಂದು ಹೇಳಿ ಶೂಲಕ್ಕೇರಿಸಿ ಕೊಂದನು.

೬೩. ಅದನ್ನು ನೋಡಿ ಕಾಲನೇಮಿಯ ಹೆಂಡತಿಯ ಹೃದಯವು ಒಡೆದು ಹೋಯಿತು. ಕ್ರೂರಕರ್ಮಿಗಳ ಪಾಪವು ಮತ್ತೊಂದು ಪಾಪವನ್ನು ತರುವುದರಿಂದ ಹೆಚ್ಚು ಕ್ರೂರವಾಗುತ್ತದೆ.

---

ನ ಪುತ್ರಾಃ ಸಾಹಸಂ ಕಾರ್ಯಂ ಜೀವನ್ನೇಷ್ಯತಿ ವಃ ಸಖಾ ।
ಇತ್ಯಂತರಿಕ್ಷಾದ್ವಾಣೀ ನಸ್ತಮುದ್ಯೋಗಂ ನ್ಯವಾರಯತ್ ॥ ೫೭
ತತಶ್ಚ ತ್ವತ್ಪಿತುಃ ಪಾರ್ಶ್ವಮಸ್ಮಾಕಂ ಪ್ರತಿಗಚ್ಛತಾಮ್ ।
ಮಾರ್ಗೇ ಸತ್ವರಮಭ್ಯೇತ್ಯ ಪುಮಾನೇಕೋ$\square$ಬ್ರವೀದಿದಮ್ ॥ ೫೮
ನಗರಂ ನ ಪ್ರವೇಷ್ಟವ್ಯಂ ಯುಷ್ಮಾಭಿರಿಹ ಸಾಂಪ್ರತಮ್ ।
ಯತೋ ವಲ್ಲಭಶಕ್ತಿಃ ಸ ವಿಪನ್ನೋ$\square$ತ್ರ ಮಹೀಪತಿಃ ॥ ೫೯
ದತ್ತೋ ವಿಕ್ರಮಶಕ್ತಿಶ್ಚ ರಾಜ್ಯಂ ಸಂಭೂಯ ಮಂತ್ರಿಭಿಃ ।
ಪ್ರಾಪ್ತರಾಜ್ಯಃ ಸ ಚಾನ್ಯೇದ್ಯುಃ ಕಾಲನೇಮೇರಗಾದ್ ಗೃಹಮ್ ॥ ೬೦
ಶ್ರೀದತ್ತಃ ಕ್ವ ಸ ತೇ ಪುತ್ರ ಇತಿ ಚಾಮರ್ಷನಿರ್ಭರಃ ।
ತಮಪೃಚ್ಛತ್ ಸ ಚಾಪ್ಯೇನಂ ನಾಹಂ ವೇದ್ಮೀತ್ಯಭಾಷತ ॥ ೬೧
ಪ್ರಚ್ಛಾದಿತೋ$\square$ಮುನಾ ಪುತ್ರ ಇತಿ ತೇನ ನಿಷೂದಿತಃ ।
ಕಾಲನೇಮಿಃ ಸ ಶೂಲಾಯಾಂ ರಾಜ್ಞಾ ಚೌರ ಇತಿ ಕ್ರುಧಾ ॥ ೬೨
ತದ್ ದೃಷ್ಟ್ವಾ ತಸ್ಯ ಭಾರ್ಯಾಯಾಃ ಸ್ವಯಂ ಹೃದಯಮಸ್ಫುಟತ್ ।
ಪಾಪಂ ಪಾಪಾಂತರಾಕ್ಷೇಪಕ್ರೂರಂ ಹಿ ಕ್ರೂರಕರ್ಮಣಾಮ್ ॥ ೬೩

೬೪. ವಿಕ್ರಮಶಕ್ತಿಯು ಶ್ರೀದತ್ತನನ್ನೂ ಅವನ ಮಿತ್ರರನ್ನೂ ಕೊಂದು ಹಾಕಬೇಕೆಂದು ಹುಡುಕಿಸುತ್ತಿದ್ದಾನೆ. ನೀವು ಅವನ ಮಿತ್ರರು. ಆದ್ದರಿಂದ ದೂರ ಹೊರಟು ಹೋಗಿ" ಎಂದು ಹೇಳಿದನು.

೬೫. ಹೀಗೆ ಅವನು ಹೇಳಲು ಅವರೆಲ್ಲರೂ ಶೋಕದಿಂದ ಖಿನ್ನರಾದರು. ಬಾಹುಶಾಲಿ ಮೊದಲಾದ ಐವರು ಸಮಾಲೋಚಿಸಿ ತಮ್ಮ ಊರಾದ ಉಜ್ಜಯಿನಿಗೆ ಹೊರಟು ಹೋದರು.

೬೬. "ಮಿತ್ರನೇ, ನಿನಗಾಗಿ ನನ್ನೊಬ್ಬನನ್ನು ಅವರು ಇಲ್ಲಿ ಗುಟ್ಟಾಗಿ ಇರಿಸಿದ್ದಾರೆ. ಆದ್ದರಿಂದ ನೀನೂ ಬಾ. ಅಲ್ಲಿಗೇ ಸ್ನೇಹಿತರ ಬಳಿಗೆ ಹೋಗೋಣ.'

೬೭. ಈ ವಿಷಯವನ್ನು ನಿಷ್ಠುರಕನಿಂದ ಕೇಳಿ ತಂದೆತಾಯಿಯರಿಗಾಗಿ ಶೋಕಿಸಿ ಶ್ರೀದತ್ತನು ಖಡ್ಗದಲ್ಲಿ ಪ್ರತೀಕಾರದ ಆಸಕ್ತಿಯನ್ನು ಹರಿಸುತ್ತಿದ್ದಾನೋ ಎಂಬಂತೆ ತನ್ನ ದೃಷ್ಟಿಯನ್ನು ಮತ್ತೆ ಮತ್ತೆ ಹರಿಸಿದನು.

೬೮. ಸರಿಯಾದ ಕಾಲವನ್ನು ನಿರೀಕ್ಷಿಸುತ್ತಾ ಆ ವೀರನು ನಿಷ್ಠುರಕನ ಜೊತೆಯಲ್ಲಿ ತನ್ನ ಮಿತ್ರರನ್ನು ಸೇರಿಕೊಳ್ಳಲು ಉಜ್ಜಯಿನೀನಗರಕ್ಕೆ ಹೊರಟನು.

೬೯. ಬಾವಿಯಲ್ಲಿ ಮುಳುಗುವವರೆಗಿನ ತನ್ನ ವೃತ್ತಾಂತವನ್ನು ಆ ಮಿತ್ರನಿಗೆ ವರ್ಣಿಸುತ್ತಿದ್ದ ಶ್ರೀದತ್ತನು ದಾರಿಯಲ್ಲಿ ಜೋರಾಗಿ ಕಿರಿಚಿ ಅಳುತ್ತಿದ್ದ ಹೆಂಗಸೊಬ್ಬಳನ್ನು ನೋಡಿದನು.

---

ತೇನ ಚಾನ್ವಿಷ್ಯತೇ ಹಂತುಂ ಸೋऽಪಿ ವಿಕ್ರಮಶಕ್ತಿನಾ ।
ಶ್ರೀದತ್ತಸ್ತದ್ವಯಸ್ಯಾಶ್ಚ ಯೂಯಂ ತದ್ಗಮ್ಯತಾಮಿತಃ ॥ ೬೪
ಇತಿ ತೇನೋದಿತಾಃ ಪುಂಸಾ ಶೋಕಾರ್ತಾಸ್ತೇ ನಿಜಾಂ ಭುವಮ್ ।
ಬಾಹುಶಾಲ್ಯಾದಯಃ ಪಂಚ ಸಂಮಂತ್ರ್ಯೋಜ್ಜಯಿನೀಂ ಗತಾಃ ॥ ೬೫
ಪ್ರಚ್ಛನ್ನಃ ಸ್ಥಾಪಿತಶ್ಚಾಹಂ ತ್ವದರ್ಥಮಿಹ ತೈಃ ಸಖೇ ।
ತದೇಹಿ ತಾವದ್ ಗಚ್ಛಾವಸ್ತತ್ರೈವ ಸುಹೃದಂತಿಕಮ್ ॥ ೬೬
ಏವಂ ನಿಷ್ಠುರಕಾಚ್ಛ್ರುತ್ವಾ ಪಿತರಾವನುಶೋಚ್ಯ ಸಃ ।
ನಿದಧೇ ಪ್ರತಿಕಾರಾಸ್ಥಾಮಿವ ಖಡ್ಗೇ ದೃಶಂ ಮುಹುಃ ॥ ೬೭
ಕಾಲಂ ಪ್ರತೀಕ್ಷಮಾಣೋऽಥ ಧೀರೋ ನಿಷ್ಠುರಕಾನ್ವಿತಃ ।
ಪ್ರತಸ್ಥೇ ತಾನ್ ಸಖೀನ್ ಪ್ರಾಪ್ತುಂ ಸ ತಾಮುಜ್ಜಯಿನೀಂ ಪುರೀಮ್ ॥ ೬೮
ಆಮಜ್ಜನಾಂತಂ ವೃತ್ತಾಂತಂ ಸಖ್ಯುಸ್ತಸ್ಯ ಚ ವರ್ಣಯನ್ ।
ಶ್ರೀದತ್ತ ಸ ದದರ್ಶೈಕಾಂ ಕ್ರೋಶಂತೀಮಬಲಾಂ ಪಥಿ ॥ ೬೯

೨೦. 'ನಾನೊಬ್ಬ ದಾರಿತಪ್ಪಿದ ಮಹಿಳೆ, ಮಾಲವದೇಶಕ್ಕೆ ನಾನು ಹೊರಟಿರುವುದು' ಎಂದು ಹೇಳುತ್ತಿದ್ದ ಅವಳನ್ನು ಅವನು ಕರುಣೆಯಿಂದ ಜೊತೆಯ ಪ್ರಯಾಣಿಕಳನ್ನಾಗಿ ಮಾಡಿಕೊಂಡನು.

೨೧. ದಯೆಯಿಂದ ಪ್ರೇರಿತನಾಗಿ ನಿಷ್ಠುರಕನೊಡನಿದ್ದ ಶ್ರೀದತ್ತನು ಆ ಹೆಂಗಸಿನೊಡನೆ ಯಾವುದೋ ಒಂದು ನಿರ್ಜನ ನಗರದಲ್ಲಿ ಆ ದಿನ ವಾಸಿಸಿದನು.

೨೨. ಅಲ್ಲಿ ರಾತ್ರಿಯ ವೇಳೆ ಅಕಸ್ಮಾತ್ ನಿದ್ರೆಯಿಂದ ಎಚ್ಚರವಾದಾಗ ಆ ಹೆಂಗಸು ನಿಷ್ಠುರಕನನ್ನು ಕೊಂದುಹಾಕಿ ಸಂತೋಷದಿಂದ ಅವನ ಮಾಂಸವನ್ನು ತಿನ್ನುತ್ತಿದ್ದುದನ್ನು ಶೀದತ್ತನು ನೋಡಿದನು.

೨೩. ಮೃಗಾಂಕಕವೆಂಬ ತನ್ನ ಖಡ್ಗವನ್ನು ಒರೆಯಿಂದ ಸೆಳೆದು ಅವನು ಎದ್ದು ನಿಂತನು. ಆ ಹೆಂಗಸೂ ಘೋರವಾದ ರಾಕ್ಷಸಿಯ ರೂಪವನ್ನು ಧರಿಸಿದಳು.

೨೪. ಆ ಹೆಂಗಸನ್ನು ಕೊಲ್ಲಲು ಶ್ರೀದತ್ತನು ಅವಳ ಕೂದಲನ್ನು ಹಿಡಿದೆಳೆದನು. ಆ ಕ್ಷಣವೇ ಅವಳು ದೇವತೆಯ ರೂಪವನ್ನು ಧರಿಸಿ ಹೀಗೆ ಹೇಳಿದಳು.

೨೫. "ಮಹಾಭಾಗ, ನನ್ನನ್ನು ಕೊಲ್ಲಬೇಡ, ಬಿಡು. ನಾನು ರಾಕ್ಷಸಿಯಲ್ಲ. ನನಗೆ ಇಂಥ ಶಾಪವು ಕೌಶಿಕಮುನಿಯಿಂದ ಉಂಟಾಗಿತ್ತು.

---

ಅಬಲಾ ಭ್ರಷ್ಟಮಾರ್ಗಾಹಂ ಮಾಲವಂ ಪ್ರಸ್ಥಿತೇತಿ ತಾಮ್ ।
ಬ್ರುವಂತೀಂ ದಯಯಾ ಸೋಽಥ ಸಹಪ್ರಸ್ಥಾಯಿನೀಂ ವ್ಯಧಾತ್ ॥ ೨೦
ತಯಾ ದಯಾನುರೋಧಾಚ್ಚ ಸ್ತ್ರಿಯಾ ನಿಷ್ಠುರಕಾನ್ವಿತಃ ।
ಕಸ್ಮಿಂಶ್ಚಿಚ್ಛೂನ್ಯನಗರೇ ದಿನೇ ತಸ್ಮಿನ್ನುವಾಸ ಸಃ ॥ ೨೧
ತತ್ರ ರಾತ್ರಾವಕಸ್ಮಾಚ್ಚ ಮುಕ್ತನಿದ್ರೋ ದದರ್ಶ ತಾಮ್ ।
ಸ್ತ್ರಿಯಂ ನಿಷ್ಠುರಕಂ ಹತ್ವಾ ಹರ್ಷಾತ್ತನ್ಮಾಂಸಮಶ್ನತೀಮ್ ॥ ೨೨
ಉದತಿಷ್ಠತ್ ಸಮಾಕೃಷ್ಯ ಸೋಽಥ ಖಡ್ಗಂ ಮೃಗಾಂಕಕಮ್ ।
ಸಾಪಿ ಸ್ತ್ರೀ ರಾಕ್ಷಸೀರೂಪಂ ಘೋರಂ ಸ್ವಂ ಪ್ರತ್ಯಪದ್ಯತ ॥ ೨೩
ಸ ಚ ಕೇಶೇಷು ಜಗ್ರಾಹ ನಿಹಂತುಂ ತಾಂ ನಿಶಾಚರೀಮ್ ।
ತತ್ಕ್ಷಣಂ ದಿವ್ಯರೂಪತ್ವಂ ಸಂಪ್ರಾಪ್ತಾ ತಮುವಾಚ ಸಾ ॥ ೨೪
ಮಾ ಮಾಂ ವಧೀರ್ಮಹಾಭಾಗ ಮುಂಚ ನೈವಾಸ್ಮಿ ರಾಕ್ಷಸೀ ।
ಅಯಮೇವಂವಿಧಃ ಶಾಪೋ ಮಮಾಭೂತ್ ಕೌಶಿಕಾನ್ಮುನೇಃ ॥ ೨೫

೨೬. ಆ ಋಷಿಯು ಕುಬೇರನ ಸ್ಥಾನವನ್ನು ತಾನು ಪಡೆಯಬೇಕೆಂದು ತಪಸ್ಸನ್ನು ಮಾಡುತ್ತಿದ್ದನು. ಅವನ ತಪಸ್ಸಿಗೆ ವಿಘ್ನವನ್ನೊಡ್ಡಲು ಧನಾಧಿಪತಿ ಕುಬೇರನು ನನ್ನನ್ನು ಕಳುಹಿಸಿದನು.

೨೭. ಆಕರ್ಷಕವಾದ ನನ್ನ ರೂಪದಿಂದ ಕೌಶಿಕನನ್ನು ವಿಚಲಿತಗೊಳಿಸಲು ಅಸಮರ್ಥಳಾದ ನಾನು ನಾಚಿಕೊಂಡು ಅವನನ್ನು ಬೆದರಿಸಲು ಘೋರವಾದ ಆಕಾರವನ್ನು ಧರಿಸಿದೆನು.

೨೮. ಅದನ್ನು ನೋಡಿದ ಋಷಿಯು "ಪಾಪಿ, ನೀನು ಮನುಷ್ಯರನ್ನು ಕೊಂದು ತಿನ್ನುವ ರಾಕ್ಷಸಿಯಾಗು' ಎಂದು ಅದಕ್ಕೆ ಅನುರೂಪವಾದ ಶಾಪವನ್ನೇ ನೀಡಿದನು.

೨೯. ಅನಂತರ ಆ ಋಷಿಯು "ಶ್ರೀದತ್ತನು ನಿನ್ನ ತಲೆಗೂದಲನ್ನು ಹಿಡಿದು ಸೆಳೆದಾಗ ಶಾಪವಿಮುಕ್ತಿ' ಎಂದು ವಿಮೋಚನೆಯನ್ನೂ ವಿಧಿಸಿದನು. ಶಾಪದ ಕಾರಣದಿಂದ ನಾನು ಭಯಂಕರ ರಾಕ್ಷಸೀಸ್ವಭಾವವನ್ನು ಪಡೆದುಕೊಂಡೆನು.

೩೦. ನಾನೇ ಈ ನಗರವನ್ನು ನುಂಗಿ ಹಾಳು ಮಾಡಿದೆ. ಬಹುಕಾಲದ ಅನಂತರ ನೀನು ನನ್ನ ಶಾಪವನ್ನು ಕೊನೆಗಾಣಿಸಿದೆ. ಈಗ ನನ್ನಿಂದ ವರವನ್ನು ಪಡೆದುಕೋ.'

೩೧. ಅವಳ ಈ ಮಾತನ್ನು ಕೇಳಿ ಶ್ರೀದತ್ತನು ಆದರದಿಂದ 'ಬೇರೆ ವರದಿಂದ ಏನಾಗಬೇಕು? ಈಗ ನನ್ನ ಮಿತ್ರನು ಮತ್ತೆ ಬದುಕಲಿ ಅಷ್ಟೇ ಸಾಕು' ಎಂದು ನುಡಿದನು.

೩೨. "ಹಾಗೆಯೇ ಆಗಲಿ' ಎಂದು ಅವನಿಗೆ ವರವನ್ನಿತ್ತು ಅವಳು ಅಂತರ್ಧಾನವನ್ನೈದಿದಳು. ನಿಷ್ಠುರಕನು ಯಾವ ಅಂಗಗಳಿಗೂ ಅಪಾಯವಿಲ್ಲದೆ ಬದುಕಿ ಎದ್ದು ನಿಂತನು.

---

ತಪಸ್ಯತೋಽಹಿ ತಸ್ಯಾಹಂ ಧನಾಧಿಪತಿನಾಮುನಾ ।
ವಿಘ್ನಾಯ ಪ್ರೇಷಿತಾ ಪೂರ್ವಂ ತತ್ಪದಪ್ರಾಪ್ತಿಕಾಂಕ್ಷಿಣಃ ॥ ೨೬
ತತಃ ಕಾಂತೇನ ರೂಪೇಣ ತಂ ಕ್ಷೋಭಯಿತುಮಕ್ಷಮಾ ।
ಲಜ್ಜಿತಾ ತ್ರಾಸಯಂತ್ಯೇನಮಕಾರ್ಷಂ ಭೈರವಂ ವಪುಃ ॥ ೨೭
ತದ್ ದೃಷ್ಟ್ವಾ ಸ ಮುನಿಃ ಶಾಪಂ ಸದೃಶಂ ಮಯ್ಯಥೋ ದಧೇ ।
ರಾಕ್ಷಸೀ ಭವ ಪಾಪೇ ತ್ವಂ ನಿಘ್ನಂತೀ ಮಾನುಷಾನಿತಿ ॥ ೨೮
ತ್ವತ್ತಃ ಕೇಶಗ್ರಹೇ ಪ್ರಾಪ್ತೇ ಶಾಪಾಂತಂ ಮೇ ಸ ಚಾಕರೋತ್ ।
ಇತ್ಯಹಂ ರಾಕ್ಷಸೀಭಾವಮಿಮಂ ಕಷ್ಟಮುಪಾಗಮಮ್ ॥ ೨೯
ಮಯೈವ ನಗರಂ ಚೈತದ್ ಗ್ರಸ್ತಮದ್ಯ ಚ ಮೇ ಚಿರಾತ್ ।
ತ್ವಯಾ ಕೃತಃ ಸ ಶಾಪಾಂತಸ್ತದ್ ಗೃಹಾಣಾಧುನಾ ವರಮ್ ॥ ೩೦
ಇತಿ ತಸ್ಯಾ ವಚಃ ಶ್ರುತ್ವಾ ಶ್ರೀದತ್ತಃ ಸಾದರೋಽಭ್ಯಧಾತ್ ।
ಕಿಮನ್ಯೇನ ವರೇಣಾದ್ಯ ಜೀವತ್ವೇಷ ಸಖಾ ಮಮ ॥ ೩೧
ಏವಮಸ್ತ್ವಿತಿ ಸಾ ಚಾಸ್ಮೈ ವರಂ ದತ್ತ್ವಾ ತಿರೋದಧೇ ।
ಅಕ್ಷತಾಂಗಃ ಸ ಚೋತ್ತಸ್ಥೌ ಜೀವನ್ನಿಷ್ಠುರಕಃ ಪುನಃ ॥ ೩೨

೮೩. ವಿಸ್ಮಿತನೂ ಸಂತುಷ್ಟನೂ ಆದ ಶ್ರೀದತ್ತನು ಅವನೊಡನೆ ಹೊರಟು ಕ್ರಮೇಣ ಉಜ್ಜಯಿನಿಗೆ ಬಂದು ಸೇರಿದನು.

೮೪. ಅವನ ದಾರಿಗೆ ಎದುರಾಗಿ ಬಂದ ಮಿತ್ರರನ್ನೆಲ್ಲ ಅವನು ಪ್ರೀತಿಯಿಂದ, ಮೋಡವು ನವಿಲುಗಳನ್ನು ಆನಂದಪಡಿಸುವಂತೆ ದರ್ಶನದಿಂದ ಸಂತುಷ್ಟರನ್ನಾಗಿ ಮಾಡಿದನು.

೮೫. ಬಾಹುಶಾಲಿಯು ಅವನನ್ನು ಮನೆಗೆ ಕರೆದುಕೊಂಡು ಹೋಗಿ ಆತಿಥ್ಯವನ್ನು ಮಾಡಿದನು. ಶ್ರೀದತ್ತನು ಅವನಿಗೆ ತನ್ನ ವೃತ್ತಾಂತದ ಸಮಸ್ತ ಕೌತುಕಗಳನ್ನೂ ಹೇಳಿದನು.

೮೬. ಅಲ್ಲಿ ಬಾಹುಶಾಲಿಯ ತಾಯಿತಂದೆಯರೂ ಅವನನ್ನು ಉಪಚರಿಸಿದರು. ಶ್ರೀದತ್ತನು ಅಲ್ಲಿ ತನ್ನ ಮನೆಯಲ್ಲಿರುವಂತೆಯೇ ಸ್ನೇಹಿತರೊಡಗೂಡಿ ವಾಸ ಮಾಡಿದನು.

೮೭. ಒಮ್ಮೆ ವಸಂತಮಾಸದ ಮಹೋತ್ಸವದ ಸಂದರ್ಭದಲ್ಲಿ ಉದ್ಯಾನವನದಲ್ಲಿ ನಡೆದ ಯಾತ್ರೋತ್ಸವವನ್ನು (ಜಾತ್ರೆಯನ್ನು) ನೋಡಲು ಮಿತ್ರರೊಡನೆ ಶ್ರೀದತ್ತನು ಹೋದನು.

೮೮. ಅಲ್ಲಿಗೆ ವಸಂತಲಕ್ಷ್ಮಿಯೇ ಆಕೃತಿಯನ್ನು ಧರಿಸಿ ಸಾಕ್ಷಾತ್ ಬಂದಂತಿದ್ದ ಒಬ್ಬ ಕನ್ಯೆಯನ್ನು ಅವನು ಕಂಡನು. ಅವಳು ದೊರೆ ಶ್ರೀಬಿಂಬಕಿ ಎಂಬವನ ಮಗಳು.

---

ತೇನೈವ ಸಹ ಚ ಪ್ರಾತಃ ಪ್ರಹೃಷ್ಟೋ ವಿಸ್ಮಿತಶ್ಚ ಸಃ ।
ತತಃ ಪ್ರತಸ್ಥೇ ಶ್ರೀದತ್ತಃ ಪ್ರಾಪ ಚೋಜ್ಜಯಿನೀಂ ಕ್ರಮಾತ್ ॥ ೮೩
ತತ್ರ ಸಂಭಾವಯಾಮಾಸ ಸಖೀನ್ ಮಾರ್ಗೋನ್ಮುಖಾನ್ ಸ ತಾನ್ ।
ದರ್ಶನೇನ ಯಥಾಯಾತೋ ನೀಲಕಂಠಾನಿವಾಂಬುದಃ ॥ ೮೪
ಕೃತಾತಿಥ್ಯವಿಧಿಶ್ಚಾಸೌ ಸ್ವಗೃಹಂ ಬಾಹುಶಾಲಿನಾ ।
ನೀತೋಽಭೂತ್ ಕಥಿತಾಶೇಷನಿಜವೃತ್ತಾಂತಕೌತುಕಃ ॥ ೮೫
ತತ್ರೋಪಚರ್ಯಮಾಣಃ ಸನ್ ಪಿತೃಭ್ಯಾಂ ಬಾಹುಶಾಲಿನಃ ।
ಸ ಉವಾಸ ಸಮಂ ಮಿತ್ರೈಃ ಶ್ರೀದತ್ತಃ ಸ್ವಗೃಹೇ ಯಥಾ ॥ ೮೬
ಕದಾಚಿತ್ ಸೋಽಥ ಸಂಪ್ರಾಪ್ತೇ ಮಧುಮಾಸಮಹೋತ್ಸವೇ ।
ಯಾತ್ರಾಮುಪವನೇ ದ್ರಷ್ಟುಂ ಜಗಾಮ ಸಖಿಭಿಃ ಸಹ ॥ ೮೭
ತತ್ರ ಕನ್ಯಾಂ ದದರ್ಶೈಕಾಂ ರಾಜ್ಞಃ ಶ್ರೀಬಿಂಬಕೇಃ ಸುತಾಮ್ ।
ಆಗತಾಮಾಕೃತಿಮತೀಂ ಸಾಕ್ಷಾದಿವ ಮಧುಶ್ರಿಯಮ್ ॥ ೮೮

೭೯. ಅವಳ ಹೆಸರು ಮೃಗಾಂಕವತಿ. ಅವಳನ್ನು ಕಂಡಾಗ ಅರಳಿದ ಅವನ ವಿಶಾಲವಾದ ಕಣ್ಣುಗಳು ಅವಳಿಗೆ ದಾರಿಯನ್ನು ತೋರಿಸಿದಂತಾಗಿ ಅವಳು ಅವನ ಹೃದಯವನ್ನು ಆ ಕ್ಷಣದಲ್ಲೇ ಪ್ರವೇಶಿಸಿದಳು.

೮೦. ಸ್ನೇಹಪೂರ್ಣವಾಗಿದ್ದ ಅವಳ ನೋಟವು ತನ್ನ ಮೊದಲನೆಯ ಒಲವನ್ನು ನಿವೇದಿಸಲು ಅವನ ಬಳಿ ಕಳುಹಿಸಲ್ಪಟ್ಟ ದೂತಿಯಂತೆ ಮುಂದಕ್ಕೂ ಹಿಂದಕ್ಕೂ ಓಡಾಡಿತು.

೮೧. ಅವಳು ಒತ್ತಾಗಿ ಬೆಳೆದಿದ್ದ ಮರಗಳ ತೋಪಿನೊಳಗೆ ಹೋದಾಗ ಅವಳನ್ನು ಕಾಣದೆ ಕ್ಷಣಮಾತ್ರದಲ್ಲಿ ಶ್ರೀದತ್ತನ ಹೃದಯವು ಶೂನ್ಯವಾಯಿತು. ದಿಕ್ಕುಗಳೂ ಅವನಿಗೂ ಕಾಣಿಸಲಿಲ್ಲ.

೮೨. "ನಿನ್ನ ಮನಸ್ಸು ನನಗೆ ತಿಳಿಯಿತು. ಮಿತ್ರ, ಮುಚ್ಚಿಡಬೇಡ, ಬಾ, ರಾಜಕುಮಾರಿ ಎಲ್ಲಿಗೆ ಹೋದಳೋ ಅಲ್ಲಿಗೆ ಹೋಗೋಣ'.

೮೩. ಎಂದು ಇಂಗಿತಜ್ಞನಾದ ಬಾಹುಶಾಲಿಯು ಹೇಳಿದಾಗ ಆಗಬಹುದು ಎಂದು ಶ್ರೀದತ್ತನು ಮಿತ್ರನೊಡನೆ ರಾಜಕುಮಾರಿಯ ಸಮೀಪಕ್ಕೆ ತೆರಳಿದನು.

೮೪. 'ಅಯ್ಯೋ ! ಹಾ ! ರಾಜಪುತ್ರಿಯನ್ನು ಹಾವು ಕಚ್ಚಿತು' ಎಂದು ಆ ಕ್ಷಣವೇ ಯಾರೋ ಕಿರಿಚಿದುದು ಕೇಳಿಬಂದಿತು. ಅದು ಶ್ರೀದತ್ತನ ಹೃದಯದಲ್ಲಿ ಜ್ವರವನ್ನುಂಟು ಮಾಡಿತು.

---

ಸಾ ಮೃಗಾಂಕವತೀ ನಾಮ ಹೃದಯಂ ತಸ್ಯ ತತ್ಕ್ಷಣಮ್ ।
ವಿವೇಶ ದತ್ತಮಾರ್ಗೇವ ದೃಷ್ಟ್ಯಾಸ್ಯ ಸವಿಕಾಸಯಾ ॥ ೭೯
ತಸ್ಯಾ ಅಪಿ ಮುಹುಃ ಸ್ನಿಗ್ಧಾ ಪ್ರಥಮಪ್ರೇಮಶಂಸಿನೀ ।
ನ್ಯಸ್ತಾ ತಂ ಪ್ರತಿ ದೂತೀವ ದೃಷ್ಟಿಶ್ಚಕ್ರೇ ಗತಾಗತಮ್ ॥ ೮೦
ಪ್ರವಿಷ್ಟಾಂ ವೃಕ್ಷಗಹನಂ ತಾಮಪಶ್ಯನ್ನಥ ಕ್ಷಣಾತ್ ।
ಶ್ರೀದತ್ತಃ ಶೂನ್ಯಹೃದಯೋ ದಿಶೋಪಿ ನ ದದರ್ಶ ಸಃ ॥ ೮೧
ಜ್ಞಾತಂ ಮಯಾ ತೇ ಹೃದಯಂ ಸಖೇ ಮಾಪಹ್ನವಂ ಕೃಥಾಃ ।
ತದೇಹಿ ತತ್ರ ಗಚ್ಛಾವೋ ಯತ್ರ ರಾಜಸುತಾ ಗತಾ ॥ ೮೨
ಇತ್ಯುಕ್ತೋಂಗಿತಜ್ಞೇನ ಸುಹೃದಾ ಬಾಹುಶಾಲಿನಾ ।
ತಥೇತಿ ಸ ಯಯೌ ತಸ್ಯಾಃ ಸಂನಿಕರ್ಷಂ ಸುಹೃತ್ಸಖಃ ॥ ೮೩
ಹಾ ಕಷ್ಟಮಹಿನಾ ದಷ್ಟಾ ರಾಜಪುತ್ರೀತಿ ತತ್ಕ್ಷಣಮ್ ।
ಆಕ್ರಂದ ಉದಭೂತ್ತತ್ರ ಶ್ರೀದತ್ತಹೃದಯಜ್ವರಃ ॥ ೮೪

೯೫. ಬಾಹುಶಾಲಿಯು ಕೂಡಲೇ ಕಂಚುಕಿಯ ಬಳಿಗೆ ಹೋಗಿ "ನನ್ನ ಮಿತ್ರನ ಬಳಿ ವಿಷವನ್ನು ಹೋಗಲಾಡಿಸುವ ಉಂಗುರವೂ ಮಂತ್ರವಿದ್ಯೆಯೂ ಇದೆ' ಎಂದು ಹೇಳಿದನು.

೯೬. ಆ ಕ್ಷಣದಲ್ಲೇ ಕಂಚುಕಿಯು ಶ್ರೀದತ್ತನ ಬಳಿಗೆ ಬಂದು ಕಾಲಿಗೆ ಬಿದ್ದು ನಮಸ್ಕರಿಸಿ ರಾಜಕುಮಾರಿಯ ಬಳಿಗೆ ಅವನನ್ನು ವೇಗವಾಗಿ ಕರೆದುಕೊಂಡು ಹೋದನು.

೯೭. ಶ್ರೀದತ್ತನು ರಾಜಕುಮಾರಿಯ ಬೆರಳಿಗೆ ವಿಷವನ್ನು ತೆಗೆಯುವ ಉಂಗುರವನ್ನು ತೊಡಿಸಿ ಮಂತ್ರವನ್ನು ಜಪಿಸಿದನು. ಅದರಿಂದ ಅವಳು ಮತ್ತೆ ಬದುಕಿದಳು.

೯೮. ಎಲ್ಲರಿಗೂ ಸಂತೋಷವಾಯಿತು. ಎಲ್ಲರೂ ಶ್ರೀದತ್ತನನ್ನು ಹೊಗಳಲಾರಂಭಿಸಿದರು. ವಾರ್ತೆಯನ್ನು ತಿಳಿದುಕೊಂಡ ರಾಜ ಬಿಂಬಕಿಯೂ ಅಲ್ಲಿಗೆ ಬಂದನು.

೯೯. ಶ್ರೀದತ್ತನು ತನ್ನ ಉಂಗುರವನ್ನು ಹಿಂದಕ್ಕೆ ತೆಗೆದುಕೊಳ್ಳದೆ ಮಿತ್ರರೊಡನೆ ಬಾಹುಶಾಲಿಯ ಮನೆಗೆ ಹಿಂದಿರುಗಿದನು.

೧೦೦. ಸಂತುಷ್ಟನಾದ ರಾಜನು ಕಳುಹಿಸಿದ ಚಿನ್ನ ಮುಂತಾದುವೆಲ್ಲವನ್ನು ಶ್ರೀದತ್ತನು ಬಾಹುಶಾಲಿಯ ತಂದೆಗೆ ಸಮರ್ಪಿಸಿದನು.

೧೦೧. ಅನಂತರ ಆ ಕಾಂತೆಯನ್ನೇ ಸ್ಮರಿಸುತ್ತಾ ಶ್ರೀದತ್ತನು ಎಷ್ಟು ನೊಂದು ಬೆಂದನೆಂದರೆ ಅವನ ಮಿತ್ರರೂ ದಿಕ್ಕು ತೋಚದೆ ಏನು ಮಾಡಬೇಕೆಂದು ತಿಳಿಯದಾದರು.

---

ವಿಷಘ್ನಮಂಗುಲೀಯಂ ಚ ವಿದ್ಯಾ ಚ ಸುಹೃದೋಽಸ್ಯ ಮೇ ।
ಅಸ್ತೀತಿ ಗತ್ವಾ ಜಗದೇ ಕಂಚುಕೀ ಬಾಹುಶಾಲಿನಾ ॥ ೯೫
ಸ ಚ ತತ್ಕ್ಷಣಮಭ್ಯೇತ್ಯ ಕಂಚುಕೀ ಚರಣಾನತಃ ।
ನಿಕಟಂ ರಾಜದುಹಿತುಃ ಶ್ರೀದತ್ತಮನಯದ್ ದ್ರುತಮ್ ॥ ೯೬
ಸೋಽಪಿ ತಸ್ಯಾಸ್ತದಂಗುಲ್ಯಾಂ ನಿಚಿಕ್ಷೇಪಾಂಗುಲೀಯಕಮ್ ।
ತತೋ ಜಜಾಪ ವಿದ್ಯಾಂ ಚ ತೇನ ಪ್ರತ್ಯುಜ್ಜಿಜೀವ ಸಾ ॥ ೯೭
ಅಥ ಸರ್ವಜನೇ ತುಷ್ಟೇ ಶ್ರೀದತ್ತಸ್ತುತಿತತ್ಪರೇ ।
ತತ್ರೈವ ಜ್ಞಾತವೃತ್ತಾಂತೋ ರಾಜಾ ಬಿಂಬಕಿರಾಯಯೌ ॥ ೯೮
ತೇನಾಸೌ ಸುಖಿಭಿಃ ಸಾರ್ಧಮಗೃಹೀತಾಂಗುಲೀಯಕಃ ।
ಪ್ರತ್ಯಾಜಗಾಮ ಶ್ರೀದತ್ತೋ ಭವನಂ ಬಾಹುಶಾಲಿನಃ ॥ ೯೯
ತತ್ರ ತಸ್ಮೈ ಸುವರ್ಣಾದಿ ಯತ್ ಪ್ರೀತಃ ಪ್ರಾಹಿಣೋನ್ನೃಪಃ ।
ತದ್ ಬಾಹುಶಾಲಿನಃ ಪಿತ್ರೇ ಸಮಗ್ರಂ ಸ ಸಮಾರ್ಪಯತ್ ॥ ೧೦೦
ಅಥ ತಾಂ ಚಿಂತಯನ್ ಕಾಂತಾಂ ಸ ತಥಾ ಪರ್ಯತಪ್ಯತ ।
ಯಥಾ ಕಿಂಕಾರ್ಯತಾಮೂಢಾ ವಯಸ್ಯಾಸ್ತಸ್ಯ ಜಜ್ಞಿರೇ ॥ ೧೦೧

೧೧೨. ಆಗ ರಾಜಕುಮಾರಿಯ ಪ್ರಿಯಸಖಿ ಭಾವನಿಕಾ ಎಂಬುವಳು ಉಂಗುರವನ್ನು ಹಿಂದಿರುಗಿಸುವ ನೆವದಿಂದ ಶ್ರೀದತ್ತನ ಬಳಿ ಬಂದಳು.

೧೧೩. "ಚೆಲುವನೇ, ನನ್ನ ಸಖಿಗೆ ಈಗ ನೀನೇ ಪ್ರಾಣವನ್ನು ಕೊಡುವ ಪತಿಯಾಗಬೇಕು, ಇಲ್ಲದಿದ್ದರೆ ಅವಳಿಗೆ ಸಾವೇ ಗತಿ. ಇದು ನಿಶ್ಚಯ' ಎಂದು ಅವಳು ಹೇಳಿದಳು.

೧೧೪. ಹೀಗೆ ಭಾವನಿಕೆಯು ಹೇಳಿದಾಗ ಶ್ರೀದತ್ತನೂ ಅವಳೂ ಬಾಹುಶಾಲಿಯೂ ಇತರ ಮಿತ್ರರೂ ಒಟ್ಟಿಗೆ ಕುಳಿತು ಮಂತ್ರಾಲೋಚನೆ ಮಾಡಿದರು.

೧೧೫. "ಯುಕ್ತಿಯಿಂದ ರಾಜಪುತ್ರಿಯನ್ನು ಗುಟ್ಟಾಗಿ ಇಲ್ಲಿಂದ ಕದ್ದೊಯ್ಯೋಣ. ಇಲ್ಲಿಂದ ಗುಪ್ತವಾಗಿ ಮಧುರಾಪಟ್ಟಣಕ್ಕೆ ವಾಸಮಾಡಲು ಹೋಗೋಣ.'

೧೧೬. ಹೀಗೆ ಸಮಾಲೋಚಿಸಿ ಕಾರ್ಯಸಿದ್ಧಿಗಾಗಿ ಪರಸ್ಪರ ಸಂಕೇತಗಳನ್ನು ಮಾಡಿಕೊಂಡ ಮೇಲೆ ಭಾವನಿಕೆಯು ಅಲ್ಲಿಂದ ಹೋದಳು.

೧೧೭. ಮಾರನೆಯ ದಿನ ಬಾಹುಶಾಲಿಯು ವ್ಯಾಪಾರ ಮಾಡುವ ನೆಪ ಮಾಡಿಕೊಂಡು ಮೂವರು ಮಿತ್ರರೊಡನೆ ಮಧುರಾ ಪಟ್ಟಣಕ್ಕೆ ಹೋದನು.

೧೧೮. ಹಾಗೆ ಹೋಗುವಾಗ, ರಾಜಪುತ್ರಿಯ ಪಲಾಯನಕ್ಕೆ ಅನುಕೂಲವಾಗುವಂತೆ ದಾರಿಯಲ್ಲಿ ಅಲ್ಲಲ್ಲಿ ಗೂಢವಾಗಿ ವೇಗವಾಗಿ ಚಲಿಸುವ ವಾಹನಗಳನ್ನು ನಿಲ್ಲಿಸಿ ವ್ಯವಸ್ಥೆ ಮಾಡಿದನು.

---

ತತೋ ಭಾವನಿಕಾ ನಾಮ ರಾಜಪುತ್ರ್ಯಾಃ ಪ್ರಿಯಾ ಸಖೀ ।
ಅಂಗುಲೀಯಾರ್ಪಣವ್ಯಾಜಾತ್ ತಸ್ಯಾಂತಿಕಮುಪಾಯಯೌ ॥ ೧೧೨
ಉವಾಚ ಚೈನಂ ಮತ್ಸಖ್ಯಾಸ್ತಸ್ಯಾಃ ಸುಭಗ ಸಾಂಪ್ರತಮ್ ।
ತ್ವಂ ವಾ ಪ್ರಾಣಪ್ರದೋ ಭರ್ತಾ ಮೃತ್ಯುರ್ವಾಪ್ಯೇಷ ನಿಶ್ಚಯಃ ॥ ೧೧೩
ಇತ್ಯುಕ್ತೇ ಭಾವನಿಕಯಾ ಶ್ರೀದತ್ತಃ ಸ ಚ ಸಾಪಿ ಚ ।
ಬಾಹುಶಾಲೀ ಚ ತೇಽನ್ಯೇ ಚ ಮಂತ್ರಂ ಸಂಭೂಯ ಚಕ್ರಿರೇ ॥ ೧೧೪
ಹರಾಮೋ ನಿಭೃತಂ ಯುಕ್ತ್ಯಾ ರಾಜಪುತ್ರೀಮಿಮಾಂ ವಯಮ್ ।
ನಿವಾಸಹೇತೋರ್ಗುಪ್ತಂ ಚ ಗಚ್ಛಾಮೋ ಮಧುರಾಮಿತಃ ॥ ೧೧೫
ಇತಿ ಸಂಮಂತ್ರಿತೇ ಸಮ್ಯಕ್ ಕಾರ್ಯಸಿದ್ಧೌ ಚ ಸಂವಿದಿ ।
ಅನ್ಯೋನ್ಯಂ ಸ್ಥಾಪಿತಾಯಾಂ ಸಾ ಯಯೌ ಭಾವನಿಕಾ ತತಃ ॥ ೧೧೬
ಅನ್ಯೇದ್ಯುರ್ಬಾಹುಶಾಲೀ ಚ ವಯಸ್ಯತ್ರಿತಯಾನ್ವಿತಃ ।
ವಣಿಜ್ಯಾವ್ಯಪದೇಶೇನ ಜಗಾಮ ಮಧುರಾಂ ಪ್ರತಿ ॥ ೧೧೭
ಸ ಗಚ್ಛನ್ ಸ್ಥಾಪಯಾಮಾಸ ವಾಹನಾನಿ ಪದೇ ಪದೇ ।
ರಾಜಪುತ್ರ್ಯಭಿಸಾರಾಯ ಗೂಢಾನಿ ಚತುರಾಣಿ ಚ ॥ ೧೧೮

೧೦೯. ಯಾವಳೋ ಒಬ್ಬಳು ಹೆಂಗಸಿಗೂ ಅವಳ ಮಗಳಿಗೂ ಮದ್ಯವನ್ನು ಕುಡಿಸಿ ಅವರು ರಾಜಕುಮಾರಿಯ ಅಂತಃಪುರದಲ್ಲಿ ಇರುವಂತೆ ಶ್ರೀದತ್ತನು ಮಾಡಿದನು.

೧೧೦. ಆಮೇಲೆ ದೀಪವನ್ನು ಹಚ್ಚುವ ನೆವದಲ್ಲಿ ಭಾವನಿಕೆಯು ಅಂತಃಪುರಕ್ಕೆ ಬೆಂಕಿ ಇಟ್ಟು ರಾಜಕುಮಾರಿಯನ್ನು ಗುಟ್ಟಾಗಿ ಹೊರಗೊಯ್ದಳು.

೧೧೧. ತತ್‌ಕ್ಷಣ ಹೊರಗೆ ನಿಂತಿದ್ದ ಶ್ರೀದತ್ತನು ಅವಳನ್ನು ಮೊದಲೇ ಮಧುರೆಗೆ ಹೋಗಿದ್ದ ಬಾಹುಶಾಲಿಯ ಬಳಿಗೆ ಕಳುಹಿಸಿದನು.

೧೧೨. ಅವಳ ಹಿಂದೆ ರಕ್ಷಣೆಗಾಗಿ ಇಬ್ಬರು ಮಿತ್ರರನ್ನೂ ಭಾವನಿಕೆಯನ್ನೂ ಕಳುಹಿಸಿದನು. ಅವಳ ಅಂತಃಪುರದಲ್ಲಿ ಅಮಲಿನಲ್ಲಿದ್ದ ಹೆಂಗಸು ಮಗಳ ಜೊತೆಯಲ್ಲೇ ಬೆಂಕಿಯಲ್ಲಿ ಸುಟ್ಟು ಹೋದಳು.

೧೧೩. ರಾಜಕುಮಾರಿಯೂ ಅವಳ ಸಖಿಯೂ ಸುಟ್ಟುಹೋದರು ಎಂದು ಜನರು ಭಾವಿಸಿದರು. ಬೆಳಗ್ಗೆ ಮೊದಲಿನಂತೆ ಜನರು ಶ್ರೀದತ್ತನನ್ನು ನೋಡಿದರು.

೧೧೪. ಅನಂತರ ಎರಡನೆಯ ರಾತ್ರಿಯಲ್ಲಿ ಶ್ರೀದತ್ತನು ಮೃಗಾಂಕಕ ಎಂಬ ಖಡ್ಗವನ್ನು ಹಿಡಿದು ಮೊದಲೇ ಹೊರಟಿದ್ದ ತನ್ನ ಪ್ರಿಯೆ ರಾಜಕುಮಾರಿಯನ್ನು ಸೇರಿಕೊಳ್ಳುವ ಉದ್ದೇಶದಿಂದ ಹೊರಟನು.

೧೧೫. ಉತ್ಸುಕನಾಗಿ ಆ ರಾತ್ರಿಯಲ್ಲೇ ದೂರದ ದಾರಿಯನ್ನು ದಾಟಿ ಬೆಳಗಾಗಿ ಒಂದು ಪ್ರಹರ ಕಳೆದ ಮೇಲೆ ಅವನು ವಿಂಧ್ಯಾಟವಿಯನ್ನು ತಲುಪಿದನು.

---

ಶ್ರೀದತ್ತೋಽಪಿ ತತಃ ಕಾಂಚಿದ್ ದುಹಿತ್ರಾ ಸಹಿತಾಂ ಸ್ತ್ರಿಯಮ್ ।
ಸಾಯಂ ರಾಜಸುತಾವಾಸೇ ಪಾಯಯಿತ್ವಾ ಮಧು ನ್ಯಧಾತ್ ॥ ೧೦೯

ತತೋಽತ್ರ ದೀಪೋದ್ದೇಶೇನ ದತ್ತ್ವಾಗ್ನಿಂ ವಾಸವೇಶ್ಮನಿ ।
ಪ್ರಚ್ಛನ್ನಂ ಭಾವನಿಕಯಾ ನಿನ್ಯೇ ರಾಜಸುತಾ ಬಹಿಃ ॥ ೧೧೦

ತತ್‌ಕ್ಷಣಂ ತಾಂ ಚ ಸಂಪ್ರಾಪ್ಯ ಶ್ರೀದತ್ತೇ ಸ ಬಹಿಃ ಸ್ಥಿತಃ ।
ಪ್ರಾಕ್ ಪ್ರಸ್ಥಿತಸ್ಯ ನಿಕಟಂ ಪ್ರಾಹಿಣೋದ್ ಬಾಹುಶಾಲಿನಃ ॥ ೧೧೧

ದದೌ ಮಿತ್ರದ್ವಯಂ ಚಾಸ್ಯಾಃ ಪಶ್ಚಾದ್ ಭಾವನಿಕಾ ತಥಾ ।
ತನ್ಮಂದಿರೇ ಚ ದಗ್ಧಾ ಸಾ ಕ್ಷೀಬಾ ಸ್ತ್ರೀ ಸುತಯಾ ಸಹ ॥ ೧೧೨

ಲೋಕಸ್ತು ತಾಂ ಸಖೀಯುಕ್ತಾಂ ಮೇನೇ ದಗ್ಧಾಂ ನೃಪಾತ್ಮಜಾಮ್ ।
ಪ್ರಾತಶ್ಚ ಪೂರ್ವವತ್ತತ್ರ ಶ್ರೀದತ್ತೋ ದದೃಶೇ ಜನೈಃ ॥ ೧೧೩

ತತೋ ರಾತ್ರೌ ದ್ವಿತೀಯಸ್ಯಾಂ ಸ ಗೃಹೀತಮೃಗಾಂಕಕಃ ।
ಶ್ರೀದತ್ತಃ ಪ್ರಯಯೌ ಪೂರ್ವಪ್ರಸ್ಥಿತಾಂ ತಾಂ ಪ್ರಿಯಾಂ ಪ್ರತಿ ॥ ೧೧೪

ತಯಾ ಚ ರಾತ್ರ್ಯಾತಿಕ್ರಮ್ಯ ದೂರಮಧ್ವಾನಮುತ್ಸುಕಃ ।
ವಿಂಧ್ಯಾಟವೀಮಥ ಪ್ರಾಪ ಸ ಪ್ರಾತಃ ಪ್ರಹರೇ ಗತೇ ॥ ೧೧೫

೧೧೬ ಮೊದಲ ಬಾರಿಗೆ ಅಲ್ಲೂ ಅನಂತರ ದಾರಿಯಲ್ಲೂ ಅವನು ಅಪಶಕುನಗಳನ್ನು ಕಂಡನು. ಮುಂದೆ ಅವನ ಮಿತ್ರರೆಲ್ಲರೂ ಭಾವನಿಕೆಯೂ ಏಟುಗಳನ್ನು ತಿಂದು ಬಿದ್ದಿರುವುದನ್ನು ನೋಡಿದನು.

೧೧೭ ಗಾಬರಿಯಾಗಿ ಬಳಿ ಬಂದ ಅವನನ್ನು ನೋಡಿ ಅವರು ಹೇಳಿದರು. "ಇಂದು ದೊಡ್ಡ ಕುದುರೆಸವಾರರ ಒಂದು ದಂಡು ಬಂದು ಮೇಲೆ ಬಿದ್ದು ನಮ್ಮನ್ನು ದೋಚಿತು.

೧೧೮. ನಾವು ಈ ಅವಸ್ಥೆಯಲ್ಲಿದ್ದಾಗ ಹೆದರಿಕೆಯಿಂದ ಕಂಗೆಟ್ಟಿದ್ದ ರಾಜಕುಮಾರಿಯನ್ನು ಒಬ್ಬ ಕುದುರೆ ಸವಾರನು ತನ್ನ ಕುದುರೆಯ ಮೇಲೆ ಕೂರಿಸಿಕೊಂಡು ಹೊತ್ತೊಯ್ದನು.

೧೧೯. ಅವಳನ್ನು ಅವನು ಬಹುದೂರ ಹೊತ್ತೊಯ್ಯುವುದರೊಳಗೆ ಇದೇ ದಿಕ್ಕಿನಲ್ಲಿ ಹಿಂಬಾಲಿಸಿ ಹೋಗು. ನಮ್ಮ ಬಳಿ ನಿಲ್ಲಬೇಡ. ಎಲ್ಲರಿಗಿಂತ ರಾಜಕುಮಾರಿ ಹೆಚ್ಚು'

೧೨೦. ಹೀಗೆ ಆ ಮಿತ್ರರಿಂದ ಕಳುಹಿಸಲ್ಪಟ್ಟ ಶ್ರೀದತ್ತನು ಪುನಃ ಪುನಃ ಹಿಂತಿರುಗಿ ನೋಡುತ್ತಾ ವೇಗವಾಗಿ ರಾಜಕುಮಾರಿಯನ್ನು ಅನುಸರಿಸಿ ಹೋದನು.

೧೨೧. ಸಾಕಷ್ಟು ದೂರ ಹೋದ ಮೇಲೆ ಆ ಕುದುರೆಸವಾರರ ಸೈನ್ಯವು ಕಾಣಿಸಿತು. ಅವರ ಮಧ್ಯದಲ್ಲಿ ಒಬ್ಬ ಕ್ಷತ್ರಿಯತರುಣನನ್ನೂ ಅವನು ಕಂಡನು.

---

ತತ್ರಾದಾವನಿಮಿತ್ತಾನಿ ಪಶ್ಚಾತ್ ಪಥಿ ದದರ್ಶ ತಾನ್ ।
ಸರ್ವಾನ್ ಪ್ರಹಾರಾಭಿಹತಾನ್ ಸಹಭಾವನಿಕಾನ್ ಸಖೀನ್ ॥ ೧೧೬
ತೇ ಚ ದೃಷ್ಟ್ವಾ ನಿಜಗದುಸ್ತಂ ಸಂಭ್ರಾಂತಮುಪಾಗತಮ್ ।
ಮುಷಿತಾಃ ಸ್ಮೋ ನಿಪತ್ಯಾದ್ಯ ಬಹ್ವಶ್ವಾರೋಹಸೇನಯಾ ॥ ೧೧೭
ಏಕೇನ ಚಾಶ್ವಾರೋಹೇಣ ರಾಜಪುತ್ರೀ ಭಯಾಕುಲಾ ।
ಅಸ್ಮಾಸ್ವೇತದವಸ್ಥೇಷು ನೀತಾಶ್ವಮಧಿರೋಪ್ಯ ಸಾ ॥ ೧೧೮
ದೂರಂ ನ ಯಾವನ್ನೀತಾ ಚ ತಾವದ್ ಗಚ್ಛಾನಯಾ ದಿಶಾ ।
ಅಸ್ಮಾಕಮಂತಿಕೇ ಮಾ ಸ್ಥಾಃ ಸರ್ವಥಾಭ್ಯಧಿಕಾ ಚ ಸಾ ॥ ೧೧೯
ಇತಿ ತೈಃ ಪ್ರೇಷಿತೋ ಮಿತ್ರೈರ್ಮುಹುಃ ಪಶ್ಯನ್ ವಿವೃತ್ಯ ಸಃ ।
ಜವೇನ ರಾಜತನಯಾಂ ಶ್ರೀದತ್ತೋಽನುಸಸಾರ ತಾಮ್ ॥ ೧೨೦
ಗತ್ವಾ ಸುದೂರಂ ಲೇಭೇ ಚ ತಾಮಶ್ವಾರೋಹವಾಹಿನೀಮ್ ।
ಯುವಾನಮೇಕಂ ತನ್ಮಧ್ಯೇ ಕ್ಷತ್ರಿಯಂ ಸ ದದರ್ಶ ಚ ॥ ೧೨೧

೧೨೨. ಆ ತರುಣನು ರಾಜಕುಮಾರಿಯನ್ನು ಕುದುರೆಯ ಮೇಲೆ ಕೂಡಿಸಿ ಹಿಡಿದುಕೊಂಡಿದ್ದುದು ಕಾಣಿಸಿತು. ಶ್ರೀದತ್ತನು ತರುಣನ ಹತ್ತಿರಕ್ಕೆ ಹೋದನು.

೧೨೩. ಒಳ್ಳೆಯ ಮಾತಿನಲ್ಲಿ ಹೇಳಿದಾಗ ಆ ತರುಣನು ರಾಜಕುಮಾರಿಯನ್ನು ಬಿಡಲಿಲ್ಲ. ಆಗ ಕಾಲಿನಿಂದ ಒದೆದು ಕುದುರೆಯಿಂದ ಕಲ್ಲಿನ ಮೇಲೆ ಬೀಳಿಸಿ ಶ್ರೀದತ್ತನು ಅವನನ್ನು ಪುಡಿ ಪುಡಿ ಮಾಡಿದನು.

೧೨೪. ಅವನನ್ನು ಕೊಂದ ಮೇಲೆ ಅವನ ಕುದುರೆಯನ್ನೇ ಏರಿ, ಬೇರೆಯವರು ಸಿಟ್ಟಿನಿಂದ ಅಟ್ಟಿಸಿಕೊಂಡು ಬಂದಾಗ ಅವರಲ್ಲಿಯೂ ಅನೇಕರನ್ನು ಕೊಚ್ಚಿಹಾಕಿದನು.

೧೨೫. ಅವನ ಅಮಾನುಷವಾದ ಶಕ್ತಿಯನ್ನು ನೋಡಿ, ಸಾಯದೆ ಉಳಿದಿದ್ದ ಸವಾರರು ಭಯದಿಂದ ಪಲಾಯನ ಮಾಡಿ ದೂರ ಹೋದರು.

೧೨೬. ಶ್ರೀದತ್ತನು ಕುದುರೆಯನ್ನೇರಿ ರಾಜಪುತ್ರಿ ಮೃಗಾಂಕವತಿಯೊಡನೆ ತನ್ನ ಮಿತ್ರರನ್ನು ನೋಡಲು ಹಿಂದಿರುಗಿ ಹೋದನು.

೧೨೭. ಸ್ವಲ್ಪ ದೂರ ಹೋಗುವಷ್ಟರಲ್ಲಿ ಯುದ್ಧದಲ್ಲಿ ತುಂಬ ಗಾಯಗೊಂಡಿದ್ದ ಅವನ ಕುದುರೆಯು ರಾಜಕುಮಾರಿಯೊಡನೆ ಅವನು ಇಳಿಯುತ್ತಿದ್ದಂತೆ ಉರುಳಿ ಬಿದ್ದು ಸತ್ತು ಹೋಯಿತು.

---

ತೇನೋಪರಿ ತುರಂಗಸ್ಯ ಗೃಹೀತಾಂ ತಾಂ ನೃಪಾತ್ಮಜಾಮ್ ।
ಅಪಶ್ಯಚ್ಚ ಯಯೌ ಚಾಸ್ಯ ಕ್ಷತ್ರಯೂನೋಽಂತಿಕಂ ಕ್ರಮಾತ್ ॥ ೧೨೨
ಸಾಂತ್ವೇನ ರಾಜಪುತ್ರೀಂ ತಾಮಮುಂಚಂತಂ ಚ ಪಾದತಃ ।
ಅಶ್ವಾದಾಕ್ಷಿಪ್ಯ ದೃಷದಿ ಶ್ರೀದತ್ತಸ್ತಮಚೂರ್ಣಯತ್ ॥ ೧೨೩
ತಂ ಹತ್ವಾ ಚ ತಮೇವಾಶ್ವಮಾರುಹ್ಯ ನಿಜಘಾನ ತಾನ್ ।
ಅನ್ಯಾನಪಿ ಬಹೂನ್ ಕ್ರುದ್ಧಾನ್ ಅಶ್ವಾರೋಹಾನ್ ಪ್ರಧಾವಿತಾನ್ ॥ ೧೨೪
ಹತಶೇಷಾಸ್ತತಸ್ತೇ ಚ ತದ್ ದೃಷ್ಟ್ವಾ ತಸ್ಯ ತಾದೃಶಮ್ ।
ವೀರಸ್ಯಾಮಾನುಷಂ ವೀರ್ಯಂ ಪಲಾಯ್ಯ ಸಭಯಂ ಯಯುಃ ॥ ೧೨೫
ಸ ಚಾಪಿ ತುರಗಾರೂಢೋ ರಾಜಪುತ್ರ್ಯಾ ತಯಾ ಸಹ ।
ಮೃಗಾಂಕವತ್ಯಾ ಶ್ರೀದತ್ತಃ ಪ್ರಯಯೌ ತಾನ್ ಸಖೀನ್ ಪ್ರತಿ ॥ ೧೨೬
ಸ್ತೋಕಂ ಗತ್ವಾ ಚ ತಸ್ಯಾಶ್ವಃ ಸಂಗ್ರಾಮೇ ವ್ರಣಿತೋ ಭೃಶಮ್ ।
ಸಭಾರ್ಯಸ್ಯಾವತೀರ್ಣಸ್ಯ ಪಪಾತ ಪ್ರಾಪ ಪಂಚತಾಮ್ ॥ ೧೨೭

೧೨೮. ಅದೇ ಸಮಯದಲ್ಲಿ ಅವನ ಪ್ರಿಯೆ ಮೃಗಾಂಕವತಿಯು ಭಯದಿಂದಲೂ ಆಯಾಸದಿಂದಲೂ ಬಳಲಿ ಬೆಂಡಾಗಿ ತುಂಬ ಬಾಯಾರಿದಳು.

೧೨೯. ಅವಳನ್ನು ಒಂದೆಡೆಯಲ್ಲಿ ಕೂಡಿಸಿ ಅಲ್ಲಿ ಇಲ್ಲಿ ನೀರನ್ನು ಹುಡುಕುತ್ತಾ ಅವನು ದೂರ ಹೋದಾಗ ಸೂರ್ಯನು ಅಸ್ತಮಿಸಿದನು.

೧೩೦. ಅನಂತರ ಅವನಿಗೆ ನೀರು ಸಿಕ್ಕಿದರೂ ದಾರಿ ತಪ್ಪಿಹೋಯಿತು. ಅಲೆದಾಡುತ್ತಾ ಚಕ್ರವಾಕಪಕ್ಷಿಯಂತೆ ಕೂಗುತ್ತಾ ರಾತ್ರಿಯನ್ನೆಲ್ಲ ಕಾಡಿನಲ್ಲೇ ಕಳೆದನು.

೧೩೧. ಬೆಳಗಾದ ಮೇಲೆ ಕುದುರೆ ಬಿದ್ದಿದ್ದ ಗುರುತಿನಿಂದ ಅದೇ ಜಾಗಕ್ಕೇ ಬಂದನು. ಆದರೆ ಅಲ್ಲೆಲ್ಲೂ ಅವನ ಪ್ರಿಯೆ ರಾಜಕುಮಾರಿ ಕಾಣಿಸಲಿಲ್ಲ.

೧೩೨. ಆಗ ಶ್ರೀದತ್ತನು ಮೋಹದಿಂದ ಮೃಗಾಂಕಕ ಎಂಬ ತನ್ನ ಖಡ್ಗವನ್ನು ನೆಲದ ಮೇಲಿಟ್ಟು ರಾಜಕುಮಾರಿಯನ್ನು ಹುಡುಕಲು ಮರದ ತುದಿಯನ್ನೇರಿದನು.

೧೩೩. ಆ ಕ್ಷಣದಲ್ಲಿ ಅಲ್ಲಿಗೆ ಯಾವನೋ ಬೇಡರ ರಾಜನು ಬಂದು ಮರದ ಬುಡದಲ್ಲಿಟ್ಟಿದ್ದ ಮೃಗಾಂಕಕವನ್ನು ಎತ್ತಿಕೊಂಡನು.

೧೩೪. ಅವನನ್ನು ಕಂಡು ಮರದ ತುದಿಯಿಂದ ಇಳಿದ ಶ್ರೀದತ್ತನು ತನ್ನ ಪ್ರಿಯೆಯ ವೃತ್ತಾಂತದ ಬಗೆಗೆ ಆರ್ತನಾಗಿ ಆ ಶಬರಾಧಿಪತಿಯನ್ನೇ ಕೇಳಿದನು.

---

ತತ್ಕಾಲಂ ಚಾಸ್ಯ ತತ್ರೈವ ಸಾ ಮೃಗಾಂಕವತೀ ಪ್ರಿಯಾ ।
ತ್ರಾಸಾಯಾಸಪರಿಶ್ರಾಂತಾ ತೃಷಾರ್ತಾ ಸಮಪದ್ಯತ ॥ ೧೨೮
ಸ್ಥಾಪಯಿತ್ವಾ ಚ ತಾಂ ತತ್ರ ಗತ್ವಾ ದೂರಮಿತಸ್ತತಃ ।
ಜಲಮನ್ವಿಷ್ಯತಶ್ಚಾಸ್ಯ ಸವಿತಾಸ್ತಮುಪಾಯಯೌ ॥ ೧೨೯
ತತಃ ಸ ಲಬ್ಧೇಽಪಿ ಜಲೇ ಮಾರ್ಗನಾಶವಶಾದ್ ಭ್ರಮನ್ ।
ಚಕ್ರವಾಕವದುತ್ಕೂಜಂಸ್ತಾಂ ನಿನಾಯ ನಿಶಾಂ ವನೇ ॥ ೧೩೦
ಪ್ರಾತಃ ಪ್ರಾಪ ಚ ತತ್ಸ್ಥಾನಂ ಪತಿತಾಶ್ವೋಪಲಕ್ಷಿತಮ್ ।
ನ ಚ ತತ್ರ ಕ್ವಚಿತ್ ಕಾಂತಾಂ ರಾಜಪುತ್ರೀಂ ದದರ್ಶ ತಾಮ್ ॥ ೧೩೧
ತತಃ ಸ ಮೋಹಾದ್ ವಿನ್ಯಸ್ಯ ಭುವಿ ಖಡ್ಗಂ ಮೃಗಾಂಕಕಮ್ ।
ವೃಕ್ಷಾಗ್ರಮಾರುರೋಹೈನಾಮವೇಕ್ಷಿತುಮಿತಸ್ತತಃ ॥ ೧೩೨
ತತ್ಕ್ಷಣಂ ತೇನ ಮಾರ್ಗೇಣ ಕೋಽಪ್ಯಗಾಚ್ಛಬರಾಧಿಪಃ ।
ಸ ಚಾಗತ್ಯೈವ ಜಗ್ರಾಹ ವೃಕ್ಷಮೂಲಾನ್ಮೃಗಾಂಕಕಮ್ ॥ ೧೩೩
ತಂ ದೃಷ್ಟ್ವಾಪಿ ಸ ವೃಕ್ಷಾಗ್ರಾದವತೀರ್ಯೈವ ಪೃಷ್ಟವಾನ್ ।
ಪ್ರಿಯಾಪ್ರವೃತ್ತಿಮತ್ಯಾರ್ತಃ ಶ್ರೀದತ್ತಃ ಶಬರಾಧಿಪಮ್ ॥ ೧೩೪

೧೩೫. "ನೀನು ಇಲ್ಲಿಂದ ನನ್ನ ಹಳ್ಳಿಗೆ ಹೋಗು. ನಿನ್ನ ಪ್ರಿಯೆ ಅಲ್ಲಿಗೆ ಹೋಗಿರಬಹುದು ಎಂದೆನಿಸುತ್ತದೆ. ನಾನು ಆಮೇಲೆ ಅಲ್ಲಿಗೇ ಬರುತ್ತೇನೆ. ಅಲ್ಲಿ ಈ ನಿನ್ನ ಕತ್ತಿಯನ್ನು ನಿನಗೆ ಕೊಡುತ್ತೇನೆ.'

೧೩೬. ಎಂದು ಹೇಳಿ ಆ ಬೇಡನು ಶ್ರೀದತ್ತನನ್ನು ಹಳ್ಳಿಗೆ ಕಳುಹಿಸಿದನು. ಅವನು ಉತ್ಸುಕನಾಗಿ ಬೇಡನು ಕಳುಹಿಸಿದ ಜನರೊಡನೆ ಹಳ್ಳಿಗೆ ಹೋದನು.

೧೩೭. ಆಯಾಸ ಪರಿಹಾರವನ್ನು ಮೊದಲು ಮಾಡಿಕೋ ಎಂದು ಆ ಜನರು ಹೇಳಿದಾಗ ತುಂಬ ಬಳಲಿದ್ದ ಶ್ರೀದತ್ತನು ಹಳ್ಳಿಯ ಮುಖ್ಯನ ಮನೆಯಲ್ಲಿ ಒಡನೆಯೇ ನಿದ್ದೆ ಮಾಡಿದನು.

೧೩೮. ಅವನಿಗೆ ಎಚ್ಚರವಾದಾಗ, ಕಾಂತೆಯ ದಾರಿ ಸಿಗದೆ ಅವಳ ಪ್ರಾಪ್ತಿಯಲ್ಲಿ ವಿಫಲವಾದ ಅವನು ಉಪಾಯದ ಪ್ರಯತ್ನಗಳಂತೆ ಅವನ ಕಾಲುಗಳೆರಡೂ ಸಂಕೋಲೆಗಳಿಂದ ಬಿಗಿಯಲ್ಪಟ್ಟಿರುವುದನ್ನು ಕಂಡನು.

೧೩೯. ಒಂದು ಕ್ಷಣ ಮುಖವನ್ನು ತೋರಿಸಿ ಮತ್ತೊಂದು ಕ್ಷಣದಲ್ಲಿ ಕಣ್ಮರೆಯಾದ ಪ್ರಿಯೆಯು ದೈವಗತಿಯಂತೆ ಎಂದು ಶೋಕಿಸುತ್ತಾ ಅವನು ಇರಬೇಕಾಯಿತು.

೧೪೦. ಮೋಚನಿಕಾ ಎಂಬ ಹೆಸರಿನ ಕೆಲಸಗಾರ್ತಿಯೊಬ್ಬಳು "ಮಹಾಭಾಗ, ಇಲ್ಲಿಗೇಕೆ ಸಾಯುವುದಕ್ಕೆ ಬಂದೆ ? ' ಎಂದು ಕೇಳಿದಳು.

---

ಇತಸ್ತ್ವಂ ಗಚ್ಛ ಮತ್ಪಲ್ಲೀಂ ಜಾನೇ ಸಾ ತತ್ರ ತೇ ಗತಾ ।
ಅಹಂ ತತ್ರೈವ ಚೈಷ್ಯಾಮಿ ದಾಸ್ಯಾಮ್ಯಸಿಮಿಮಂ ಚ ತೇ ॥ ೧೩೫
ಇತ್ಯುಕ್ತ್ವಾ ಪ್ರೇಷಿತಸ್ತೇನ ಶಬರೇಣ ಸ ಚೋತ್ಸುಕಃ ।
ಶ್ರೀದತ್ತಸ್ತಾಂ ಯಯೌ ಪಲ್ಲೀಂ ತದೀಯೈಃ ಪುರುಷೈಃ ಸಹ ॥ ೧೩೬
ಶ್ರಮಂ ತಾವದ್ವಿಮುಂಚೇತಿ ತತ್ರೋಕ್ತ ಪುರುಷೈಶ್ಚ ತೈಃ ।
ಪ್ರಾಪ್ಯ ಪಲ್ಲೀಪತೇರ್ಗೇಹಂ ಶ್ರಾಂತೋ ನಿದ್ರಾಂ ಕ್ಷಣಾದ್ ಯಯೌ ॥ ೧೩೭
ಪ್ರಬುದ್ಧಶ್ಚ ದದರ್ಶ ಸ್ವೌ ಪಾದೌ ನಿಗಡಸಂಯುತೌ ।
ಅಲಬ್ಧತದ್ಗತೀ ಕಾಂತಾಪ್ರಾಪ್ತ್ಯುಪಾಯೋದ್ಯಮಾವಿವ ॥ ೧೩೮
ಅಥ ಕ್ಷಣಂ ದತ್ತಮುಖಾಂ ಕ್ಷಣಾಂತರವಿಮಾಥಿನೀಮ್ ।
ದೈವಸ್ಯೇವ ಗತಿಂ ತತ್ರ ತಸ್ಥೌ ಶೋಚನ್ ಸ ತಾಂ ಪ್ರಿಯಾಮ್ ॥ ೧೩೯
ಏಕದಾ ತಮುವಾಚೈತ್ಯ ಚೇಟೀ ಮೋಚನಿಕಾಭಿಧಾ ।
ಆಗತೋ॑ಸಿ ಮಹಾಭಾಗ ಕುತ್ರೇಹ ಬತ ಮೃತ್ಯವೇ ॥ ೧೪೦

141. "ಬೇಡರ ಒಡೆಯನು ಬೇರೆ ಯಾವುದೋ ಕೆಲಸಕ್ಕಾಗಿ ಎಲ್ಲೋ ಹೋಗಿದ್ದಾನೆ.' ಬಂದ ಮೇಲೆ ಅವನು ನಿನ್ನನ್ನು ಚಂಡಿಗೆ ಬಲಿ ಕೊಟ್ಟುಬಿಡುತ್ತಾನೆ.

142. ಈ ಉದ್ದೇಶದಿಂದಲೇ ನೀನು ವಿಂಧ್ಯಾಟವಿಯಲ್ಲಿ ಸಿಕ್ಕಿದರೂ ಯುಕ್ತಿಯಿಂದ ಅಲ್ಲಿ ನಿನ್ನನ್ನು ಕೊಲ್ಲದೆ ಇಲ್ಲಿಗೆ ತಂದು ಬಂಧನದಲ್ಲಿರಿಸಿದ್ದಾನೆ.

143. ಭಗವತಿ ಚಂಡಿಗೆ ಅವರು ಕೊಡುವ ಕಾಣಿಕೆ ನೀನು. ಹಾಗೆ ಅವರು ಕಲ್ಪಿಸಿಕೊಂಡಿರುವುದರಿಂದಲೇ ಅಲ್ಲಿಯವರೆಗೆ ಯಾವಾಗಲೂ ನಿನಗೆ ಆಹಾರ ಮತ್ತು ಬಟ್ಟೆಗಳನ್ನು ಕೊಟ್ಟು ಉಪಚಾರ ಮಾಡುತ್ತಾರೆ.

144. ನೀನು ಒಪ್ಪಿದರೆ ನಿನ್ನ ಬಿಡುಗಡೆಗೆ ಒಂದು ಉಪಾಯವಿದೆ. ಬೇಡರ ಒಡೆಯನಿಗೆ ಸುಂದರಿ ಎಂಬ ಒಬ್ಬಳು ಮಗಳಿದ್ದಾಳೆ. ಅವಳು ನಿನ್ನನ್ನು ನೋಡಿ ಕಾಮವಶೆಯಾಗುತ್ತಾಳೆ. ನನ್ನ ಸ್ನೇಹಿತೆಯಾದ ಅವಳನ್ನು ನೀನು ವರಿಸು. ಅದರಿಂದ ನಿನಗೆ ಒಳ್ಳೆಯದಾಗುತ್ತದೆ.'

145. ಅವಳು ಹೀಗೆ ಹೇಳಿದಾಗ ಬಿಡುಗಡೆಯನ್ನು ಬಯಸಿದ ಶ್ರೀದತ್ತನು 'ಹಾಗೆಯೇ ಆಗಲಿ' ಎಂದು ಒಪ್ಪಿ ಆ ಸುಂದರಿಯನ್ನು ಗಾಂಧರ್ವವಿಧಿಯಂತೆ ಮದುವೆಯಾಗಿ ಹೆಂಡತಿಯನ್ನಾಗಿ ಸ್ವೀಕರಿಸಿದನು.

---

ಕಾರ್ಯಸಿದ್ಧ್ಯೈ ಸ ಹಿ ಕ್ವಾಪಿ ಪ್ರಯಾತಃ ಶಬರಾಧಿಪಃ ।
ಆಗತ್ಯ ಚಂಡಿಕಾಯಾಸ್ತ್ವಾಮ್ ಉಪಹಾರೀಕರಿಷ್ಯತಿ ॥ ೧೪೧
ಏತದರ್ಥಂ ಹಿ ತೇನ ತ್ವಮಿತೋ ವಿಂಧ್ಯಾಟವೀತಟಾತ್ ।
ಪ್ರಾಪ್ಯ ಯುಕ್ತ್ಯಾ ವಿಸೃಜ್ಯೇಹ ನೀತಃ ಸಂಪ್ರತಿ ಬಂಧನಮ್ ॥ ೧೪೨
ಭಗವತ್ಯುಪಹಾರತ್ವೇ ಯತ ಏವಾಸಿ ಕಲ್ಪಿತಃ ।
ಅತ ಏವ ಸದಾ ವಸ್ತ್ರೈರ್ಭೋಜನೈಶ್ಚೋಪಚರ್ಯಸೇ ॥ ೧೪೩
ಏಕಸ್ತು ಮುಕ್ತ್ಯುಪಾಯಸ್ತೇ ವಿದ್ಯತೇ ಯದಿ ಮನ್ಯಸೇ ।
ಅಸ್ತ್ಯಸ್ಯ ಸುಂದರೀ ನಾಮ ಶಬರಾಧಿಪತೇಃ ಸುತಾ ॥ ೧೪೪
ಅತ್ಯರ್ಥಂ ಸಾ ಚ ದೃಷ್ಟ್ವಾ ತ್ವಾಂ ಜಾಯತೇ ಮದನಾತುರಾ !
ತಾಂ ಭಜಸ್ವ ವಯಸ್ಯಾಂ ಮೇ ತತಃ ಕ್ಷೇಮಮವಾಪ್ಸ್ಯಸಿ ॥ ೧೪೫
ತಯೇತ್ಯುಕ್ತೋ ವಿಮುಕ್ತ್ಯರ್ಥೀ ಸ ಶ್ರೀದತ್ತಸ್ತಥೇತಿ ತಾಮ್ ।
ಗಾಂಧರ್ವವಿಧಿನಾ ಗುಪ್ತಂ ಭಾರ್ಯಾಂ ವ್ಯಧಿತ ಸುಂದರೀಮ್ ॥ ೧೪೬

147. ಪ್ರತಿರಾತ್ರಿಯಲ್ಲೂ ಅವನ ಸಂಕೋಲೆಗಳನ್ನು ಕಳಚಿಹಾಕುತ್ತಿದ್ದ ಸುಂದರಿ ಬಹುಬೇಗನೆ ಗರ್ಭಿಣಿಯಾದಳು.

148. ಅವಳ ತಾಯಿ ವಿಷಯವೆಲ್ಲವನ್ನೂ ಮೋಚನಿಕೆಯ ಬಾಯಿಂದ ಕೇಳಿ ತಿಳಿದುಕೊಂಡಳು. ಅಳಿಯನೆಂಬ ಪ್ರೀತಿಯಿಂದ ಅವಳು ಶ್ರೀದತ್ತನ ಬಳಿಗೆ ತಾನೇ ಹೋಗಿ ಇಂತೆಂದಳು.

149. "ಮಗನೇ, ಸುಂದರಿಯ ತಂದೆ ಶ್ರೀಚಂಡನು ಅತಿ ಕೋಪಿಷ್ಠನು. ಅವನು ನಿನ್ನನ್ನು ಕ್ಷಮಿಸಲಾರ. ಆದ್ದರಿಂದ ತಪ್ಪಿಸಿಕೊಂಡು ಹೋಗು. ಸುಂದರಿಯನ್ನು ಮಾತ್ರ ಮರೆಯಬೇಡ.'

150. ಹೀಗೆ ಹೇಳಿ ಅತ್ತೆಯು ಶ್ರೀದತ್ತನನ್ನು ಬಂಧನದಿಂದ ಬಿಡಿಸಿದಳು. ಶ್ರೀಚಂಡನ ಕೈಯಲ್ಲಿರುವ ಖಡ್ಗ ತನ್ನದೆಂದು ಸುಂದರಿಗೆ ತಿಳಿಸಿ ಶ್ರೀದತ್ತನು ಅಲ್ಲಿಂದ ಹೊರಟುಹೋದನು.

151. ಚಿಂತಾಕ್ರಾಂತನಾಗಿ ಮತ್ತೆ ಅದೇ ಅಡವಿಯನ್ನು ಹೊಕ್ಕು ಮೃಗಾಂಕವತಿಯ ದಾರಿಯನ್ನು ತಿಳಿದುಕೊಳ್ಳಲು ಯತ್ನಿಸಿದನು.

152. ಒಳ್ಳೆಯ ಶಕುನಗಳನ್ನು ಕಂಡಿದ್ದರಿಂದ ಅವನ ಕುದುರೆ ಸತ್ತು ಬಿದ್ದಿದ್ದ ಹಾಗೂ ಅವನ ಪ್ರಿಯೆ ಕಳೆದುಹೋಗಿದ್ದ ಅದೇ ಸ್ಥಳಕ್ಕೆ ಹೋದನು.

---

ರಾತ್ರೌ ರಾತ್ರೌ ಚ ಸಾ ತಸ್ಯ ಬಂಧನಾನಿ ನ್ಯವಾರಯತ್ ।
ಅಚಿರಾಚ್ಚ ಸಗರ್ಭಾ ಸಾ ಸುಂದರೀ ಸಮಪದ್ಯತ ॥ ೧೪೭
ತತ್ಸರ್ವಮಥ ತನ್ಮಾತಾ ಬುದ್ಧ್ವಾ ಮೋಚನಿಕಾಮುಖಾತ್ ।
ಜಾಮಾತೃಸ್ನೇಹತೋ ಗತ್ವಾ ಸ್ವೈರಂ ಶ್ರೀದತ್ತಮಬ್ರವೀತ್ ॥ ೧೪೮
ಪುತ್ರ ಶ್ರೀಚಂಡನಾಮಾಸೌ ಕೋಪನಃ ಸುಂದರೀಪಿತಾ ।
ನ ತ್ವಾಂ ಕ್ಷಮೇತ ತದ್ಗಚ್ಛ ವಿಸ್ಮರ್ತವ್ಯಾ ನ ಸುಂದರೀ ॥ ೧೪೯
ಇತ್ಯುಕ್ತ್ವಾ ಮೋಚಿತಃ ಶ್ವಶ್ರ್ವಾ ಖಡ್ಗಂ ಶ್ರೀಚಂಡಹಸ್ತಗಮ್ ।
ಸುಂದರ್ಯೈ ನಿಜಮಾವೇದ್ಯ ಶ್ರೀದತ್ತಃ ಪ್ರಯಯೌ ತತಃ ॥ ೧೫೦
ವಿವೇಶ ಚಾದ್ಯಾಂ ತಾಮೇವ ಚಿಂತಾಕ್ರಾಂತೋ ನಿಜಾಟವೀಮ್ ।
ಮೃಗಾಂಕವತ್ಯಾಃ ಪದವೀಂ ತಸ್ಯಾ ಜಿಜ್ಞಾಸಿತುಂ ಪುನಃ ॥ ೧೫೧
ನಿಮಿತ್ತಂ ಚ ಶುಭಂ ದೃಷ್ಟ್ವಾ ತಮೇವೋದ್ದೇಶಮಾಯಯೌ ।
ಯತ್ರಾಸ್ಯಾಶ್ವೋ ಮೃತಃ ಸೋಽಥ ಯತ್ರ ಸಾ ಹಾರಿತಾ ವಧೂಃ ॥ ೧೫೨

153. ಅಲ್ಲಿ ಒಬ್ಬ ಬೇಡರವನು ಎದುರಿಗೆ ಬಂದಾಗ ಅವನನ್ನು ರಾಜಕುಮಾರಿಯ ವೃತ್ತಾಂತದ ಬಗೆಗೆ ಕೇಳಿದನು.

154. ಆ ಬೇಡರವನು 'ನೀನು ಶ್ರೀದತ್ತನೋ ?' ಎಂದು ಪ್ರಶ್ನಿಸಿದಾಗ 'ಆ ದುರದೃಷ್ಟಶಾಲಿ ನಾನೇ' ಎಂದು ನಿಟ್ಟುಸಿರನ್ನಿಡುತ್ತಾ ಹೇಳಿದನು.

155. ಆಗ ಆ ಬೇಡನು — "ಮಿತ್ರ, ಹಾಗಾದರೆ ಹೇಳುತ್ತೇನೆ, ಕೇಳು. ನಿನ್ನ ಆ ಭಾರ್ಯೆಯು ನಿನಗಾಗಿ ಅಳುತ್ತಾ ಕೂಗಾಡುತ್ತಾ ಅತ್ತಿತ್ತ ಅಲೆದಾಡುತ್ತಿದ್ದುದನ್ನು ನಾನು ನೋಡಿದೆನು.

156. ಅವಳನ್ನು ಕೇಳಿ ಅವಳ ವೃತ್ತಾಂತವನ್ನೆಲ್ಲ ತಿಳಿದುಕೊಂಡು ಸಮಾಧಾನಪಡಿಸಿ ದಯೆಯಿಂದ ಅವಳನ್ನು ನನ್ನ ಹಳ್ಳಿಗೆ ಕರೆದುಕೊಂಡು ಹೋದೆನು.

157. ಅಲ್ಲಿದ್ದ ತರುಣ ಬೇಟೆಗಾರರನ್ನು ನೋಡಿ ನನಗೆ ಭಯವಾಯಿತು. ಆದ್ದರಿಂದ ಮಧುರೆಯ ಬಳಿ ಇರುವ ನಾಗಸ್ಥಳ ಎಂಬ ಗ್ರಾಮಕ್ಕೆ ಅವಳನ್ನು ಕರೆದೊಯ್ದೆನು.

158. ಅಲ್ಲಿ ವಿಶ್ವದತ್ತ ಎಂಬ ವೃದ್ಧಬ್ರಾಹ್ಮಣನ ಮನೆಯಲ್ಲಿ ಗೌರವದಿಂದ ಅವಳನ್ನು ನ್ಯಾಸವಾಗಿ ಇಟ್ಟಿದ್ದೇನೆ

159. ಅನಂತರ ರಾಜಕುಮಾರಿಯ ಬಾಯಿಂದಲೇ ನಿನ್ನ ಹೆಸರನ್ನು ಕೇಳಿ ತಿಳಿದುಕೊಂಡು ನಿನ್ನನ್ನು ಹುಡುಕಲೆಂದೇ ನಾನಿಲ್ಲಿಗೆ ಬಂದೆನು. ಆದ್ದರಿಂದ ಈಗ ಬೇಗನೆ ನಾಗಸ್ಥಳಕ್ಕೆ ಹೋಗು" ಎಂದು ಹೇಳಿದನು.

---

ತತ್ರ ಚೈಕಂ ದದರ್ಶಾರಾಲ್ಲುಬ್ಧಕಂ ಸಂಮುಖಾಗತಮ್ ।
ದೃಷ್ಟ್ವಾ ಚ ಪೃಷ್ಟವಾಂಸ್ತಸ್ಯಾಃ ಪ್ರವೃತ್ತಿಂ ಹರಿಣೀದೃಶಃ ॥ ೧೫೩
ಕಿಂ ಶ್ರೀದತ್ತ ಸ್ತ್ವ ಮಿತ್ಯುಕ್ತೋ ಲುಬ್ಧಕೇನ ಚ ತತ್ರ ಸಃ ।
ಸ ಏವ ಮಂದಭಾಗ್ಯೋಽಹಮಿತ್ಯುವಾಚ ವಿನಿಃಶ್ವಸನ್ ॥ ೧೫೪
ತತಃ ಸ ಲುಬ್ಧಕೋಽವಾದೀತ್ ತರ್ಹಿ ಮತ್ತಃ ಸಖೇ ಶೃಣು ।
ದೃಷ್ಟಾ ಸಾ ತೇ ಮಯಾ ಭಾರ್ಯಾ ಕ್ರುದಂತೀ ತ್ವಾಮಿತಸ್ತತಃ ॥ ೧೫೫
ಪೃಷ್ಟ್ವಾ ತತಶ್ಚ ವೃತ್ತಾಂತಮಾಶ್ವಾಸ್ಯ ಚ ಕೃಪಾಕುಲಃ ।
ನಿಜಾಂ ಪಲ್ಲೀಮಿತೋಽರಣ್ಯಾದ್ ದೀನಾಂ ತಾಂ ನೀತವಾನಹಮ್ ॥ ೧೫೬
ತತ್ರ ಚಾಲೋಕ್ಯ ತರುಣಾನ್ ಪುಲಿಂದಾನ್ ಸಭಯೇನ ಸಾ ।
ಮಧುರಾನಿಕಟಂ ಗ್ರಾಮಂ ನೀತಾ ನಾಗಸ್ಥಲಂ ಮಯಾ ॥ ೧೫೭
ತತ್ರ ಚ ಸ್ಥಾಪಿತಾ ಗೇಹೇ ಸ್ಥವಿರಸ್ಯ ದ್ವಿಜನ್ಮನಃ ।
ವಿಶ್ವದತ್ತಾಭಿಧಾನಸ್ಯ ನ್ಯಾಸೀಕೃತ್ಯ ಸಗೌರವಮ್ ॥ ೧೫೮
ತತಶ್ಚಾಹಮಿಹಾಯಾತೋ ಬುದ್ಧ್ವಾ ತ್ವನ್ನಾಮ ತನ್ಮುಖಾತ್ ।
ತ್ವಾಮನ್ವೇಷ್ಟುಂ ತತೋ ಗಚ್ಛ ಶೀಘ್ರಂ ನಾಗಸ್ಥಲಂ ಪ್ರತಿ ॥ ೧೫೯

160. ಹೀಗೆ ಬೇಡರವನು ಹೇಳಿದಾಗ ಶ್ರೀದತ್ತನು ಬೇಗನೆ ಹೊರಟು ಮಾರನೆಯ ದಿನ ಸಂಜೆಯ ವೇಳೆಗೆ ನಾಗಸ್ಥಳವನ್ನು ತಲುಪಿದನು.

161. ವಿಶ್ವದತ್ತನ ಭವನವನ್ನು ತಲುಪಿ ಪ್ರವೇಶಿಸಿ ಅವನನ್ನು ಕಂಡು "ಬೇಡರವನು ನ್ಯಾಸವಾಗಿಟ್ಟಿರುವ ನನ್ನ ಭಾರ್ಯೆಯನ್ನು ನನಗೆ ಕೊಡು" ಎಂದು ಬೇಡಿದನು.

162. ಅದನ್ನು ಕೇಳಿ ವಿಶ್ವದತ್ತನು ಶ್ರೀದತ್ತನಿಗೆ "ಮಧುರೆಯಲ್ಲಿ ಗುಣಶಾಲಿಗಳಿಗೆ ಪ್ರಿಯನಾದ ನನ್ನ ಬ್ರಾಹ್ಮಣಮಿತ್ರನೊಬ್ಬನಿದ್ದಾನೆ.

163. ಅವನು ಶೂರಸೇನಮಹಾರಾಜನಿಗೆ ಉಪಾಧ್ಯಾಯನೂ ಮಂತ್ರಿಯೂ ಆಗಿರುವನು. ನಿನ್ನ ಗೃಹಿಣಿಯನ್ನು ಅವನ ಕೈಗೆ ಒಪ್ಪಿಸಿದ್ದೇನೆ.

164. ಇದು ನಿರ್ಜನವಾದ ಗ್ರಾಮ. ರಾಜಕುಮಾರಿಯನ್ನು ಇಲ್ಲಿ ರಕ್ಷಿಸುವುದು ಸಾಧ್ಯವಾಗದಿರಬಹುದು. ಆದ್ದರಿಂದ ನಾಳೆ ಬೆಳಗಾದ ಮೇಲೆ ಅಲ್ಲಿಗೆ ಹೋಗು. ಈಗ ಇಲ್ಲಿ ವಿಶ್ರಮಿಸು" ಎಂದು ಹೇಳಿದನು.

165. ಹಾಗೆ ವಿಶ್ವದತ್ತನು ಹೇಳಿದ ಮೇಲೆ ಶ್ರೀದತ್ತನು ಆ ರಾತ್ರಿಯನ್ನು ಅಲ್ಲೇ ಕಳೆದು ಮಾರನೆಯ ದಿನ ಬೆಳಗಾದ ಮೇಲೆ ಹೊರಟು ಮಥುರಾನಗರವನ್ನು ತಲುಪಿದನು.

---

ಇತ್ಯುಕ್ತೋ ಲುಬ್ಧಕೇನಾಶು ಸ ಶ್ರೀದತ್ತಸ್ತತೋ ಯಯೌ ।
ತಂ ಚ ನಾಗಸ್ಥಲಂ ಪ್ರಾಪದಪರೇದ್ಯುರ್ದಿನಾತ್ಯಯೇ ॥ ೧೬೦
ಭವನಂ ವಿಶ್ವದತ್ತಸ್ಯ ಪ್ರವಿಶ್ಯಾಥ ವಿಲೋಕ್ಯ ತಮ್ ।
ಯಯಾಚೇ ದೇಹಿ ಮೇ ಭಾರ್ಯಾಂ ಲುಬ್ಧಕಸ್ಥಾಪಿತಾಮಿತಿ ॥ ೧೬೧
ತಚ್ಛ್ರುತ್ವಾ ವಿಶ್ವದತ್ತಸ್ತಂ ಶ್ರೀದತ್ತಂ ನಿಜಗಾದ ಸಃ ।
ಮಥುರಾಯಾಂ ಸುಹೃನ್ಮೇಽಸ್ತಿ ಬ್ರಾಹ್ಮಣೋ ಗುಣಿನಾಂ ಪ್ರಿಯಃ ॥ ೧೬೨
ಉಪಾಧ್ಯಾಯಶ್ಚ ಮಂತ್ರೀ ಚ ಶೂರಸೇನಸ್ಯ ಭೂಪತೇಃ ।
ತಸ್ಯ ಹಸ್ತೇ ತ್ವದೀಯಾ ಸಾ ಗೃಹಿಣೀ ಸ್ಥಾಪಿತಾ ಮಯಾ ॥ ೧೬೩
ಅಯಂ ಹಿ ವಿಜನೋ ಗ್ರಾಮೋ ನ ತದ್ರಕ್ಷಾಕ್ಷಮೋ ಭವೇತ್ ।
ತತ್ ಪ್ರಾತಸ್ತತ್ರ ಗಚ್ಛ ತ್ವಮದ್ಯ ವಿಶ್ರಮ್ಯತಾಮಿಹ ॥ ೧೬೪
ಇತ್ಯುಕ್ತೋ ವಿಶ್ವದತ್ತೇನ ಸ ನೀತ್ವಾತ್ರೈವ ತಾಂ ನಿಶಾಮ್ ।
ಪ್ರಾತಃ ಪ್ರತಸ್ಥೇ ಪ್ರಾಪಚ್ಚ ಮಥುರಾಮಪರೇ ದಿನೇ ॥ ೧೬೫

166. ದೂರದ ದಾರಿಯನ್ನು ಸವೆಸಿ ಬಂದುದರಿಂದ ಮಲಿನನಾಗಿದ್ದ ಮತ್ತು ಬಳಲಿದ್ದ ಶ್ರೀದತ್ತನು ನಗರದ ಹೊರಗೆ ನಿರ್ಮಲವಾದ ನೀರಿನ ಕೊಳದಲ್ಲಿ ಸ್ನಾನವನ್ನು ಮಾಡಿದನು.

167. ಕೊಳದ ನೀರಿನ ಮಧ್ಯದಲ್ಲಿ ಯಾರೋ ಕಳ್ಳರು ಇರಿಸಿದ್ದ ವಸ್ತ್ರವು ಅವನಿಗೆ ಸಿಕ್ಕಿತು. ಆ ವಸ್ತ್ರದ ಅಂಚಿನಲ್ಲಿ ಒಂದ ಹಾರವನ್ನು ಗಂಟುಕಟ್ಟಿ ಇಡಲಾಗಿತ್ತು

168. ಶ್ರೀದತ್ತನು ಹಾರವನ್ನು ಗಮನಿಸದೆ ಆ ವಸ್ತ್ರವನ್ನು ತೆಗೆದುಕೊಂಡು ಪ್ರಿಯೆಯನ್ನು ಕಾಣುವ ಉದ್ದೇಶದಿಂದ ಮಥುರಾಪುರಿಯೊಳಗೆ ಹೋದನು.

169. ನಗರದ ರಕ್ಷಕಭಟರು ಆ ವಸ್ತ್ರವನ್ನು ಗುರುತಿಸಿದರಲ್ಲದೆ ಅದರಲ್ಲಿದ್ದ ಹಾರವನ್ನೂ ಹುಡುಕಿ ಪಡೆದರು. ಅವನೇ ಕಳ್ಳನೆಂದು ನಿರ್ಧರಿಸಿ ಕಟ್ಟಿಹಾಕಿ ಅವನನ್ನು ಒಯ್ದರು.

170. ಹಾಗೆ ಕಟ್ಟಿ ಹಾಕಿದ್ದ ಅವನನ್ನು ನಗರಾಧಿಪತಿಯ ಬಳಿಗೆ ಕರೆದೊಯ್ದು ತೋರಿಸಿದರು. ಅವನು ವಿಷಯವನ್ನು ರಾಜನಿಗೆ ತಿಳಿಸಿದಾಗ ರಾಜನು ಮರಣದಂಡನೆಯನ್ನು ವಿಧಿಸಿದನು.

---

ದೀರ್ಘಾಧ್ವಮಲಿನಸ್ತಸ್ಮಿನ್ ನಗರೇ ಬಹಿರೇವ ಸಃ ।
ಸ್ನಾನಂ ಚಕ್ರೇ ಪರಿಶ್ರಾಂತೋ ನಿರ್ಮಲೇ ದೀರ್ಘಿಕಾಜಲೇ ॥ ೧೬೬

ತತ ಏವಾಂಬುಮಧ್ಯಾಚ್ಚ ವಸ್ತ್ರಂ ಚೌರನಿವೇಶಿತಮ್ ।
ಪ್ರಾಪ್ತವಾನಂಚಲಗ್ರಂಥಿಬದ್ಧಹಾರಮಶಂಕಿತಮ್ ॥ ೧೬೭

ಅಥ ತದ್ವಸ್ತ್ರಮಾದಾಯ ಸ ತಂ ಹಾರಮಲಕ್ಷಯನ್ ।
ಪ್ರಿಯಾಂ ದಿದೃಕ್ಷುಃ ಶ್ರೀದತ್ತೋ ವಿವೇಶ ಮಥುರಾಂ ಪುರೀಮ್ ॥ ೧೬೮

ತತ್ರ ತತ್ ಪ್ರತ್ಯಭಿಜ್ಞಾಯ ವಸ್ತ್ರಂ ಹಾರಮವಾಪ್ಯ ಚ ।
ಸ ಚೌರ ಇತ್ಯವಷ್ಟಭ್ಯ ನಿನ್ಯೇ ನಗರರಕ್ಷಿಭಿಃ ॥ ೧೬೯

ದರ್ಶಿತಶ್ಚ ತಥಾಭೂತೋ ನಗರಾಧಿಪತೇಶ್ಚ ತೈಃ ।
ತೇನಾಪ್ಯಾವೇದಿತೋ ರಾಜ್ಞೇ ರಾಜಾಪ್ಯಸ್ಯಾದಿಶದ್ ವಧಮ್ ॥ ೧೭೦

171. ಅವನನ್ನು ಕೊಲ್ಲಲು ವಧೆಯ ಸ್ಥಳಕ್ಕೆ ಕರೆದೊಯ್ದರು. ಅವನ ಹಿಂದೆ ತಮಟೆಯನ್ನು ಬಡಿಯಲಾಗುತ್ತಿತ್ತು. ಆಗ ದೂರದಿಂದ ಮೃಗಾಂಕವತಿಯು ಅವನನ್ನು ನೋಡಿದಳು.

172. "ನನ್ನ ಗಂಡನನ್ನೇ ವಧೆಯ ಭೂಮಿಗೆ ಎಳೆದೊಯ್ಯುತ್ತಿದ್ದಾರೆ" ಎಂದು ಗಾಬರಿಯಿಂದ ಅವಳು ತಾನು ಇಳಿದುಕೊಂಡಿದ್ದ ಮನೆಯವನೇ ಆಗಿದ್ದ ಮುಖ್ಯಮಂತ್ರಿಗೆ ತಿಳಿಸಿದಳು.

173. ಆ ಮಂತ್ರಿಯ ಕೂಡಲೇ ವಧೆ ಮಾಡುವವರನ್ನು ತಡೆದು ರಾಜನಿಗೆ ವಿಜ್ಞಾಪಿಸಿ ಶ್ರೀದತ್ತನನ್ನು ವಧೆಯಿಂದ ತಪ್ಪಿಸಿ ಮನೆಗೆ ಕರೆದುತಂದನು.

174. "ಇವನು ಹಿಂದೆ ದೇಶಾಂತರಕ್ಕೆ ಹೋದ ನನ್ನ ಚಿಕ್ಕಪ್ಪ ವಿಗತಭಯ ನಲ್ಲವೇ ? ಅವನು ಸುದೈವದಿಂದ ಇಲ್ಲೇ ಮಂತ್ರಿಪದವಿಯನ್ನು ಪಡೆದಿರುವನು."

175 ಎಂದು ಮಂತ್ರಿಯ ಮನೆಗೆ ಬಂದಾಗ ಅವನನ್ನು ಗುರುತಿಸಿ ಶ್ರೀದತ್ತನು ಅವನ ಪಾದಗಳ ಮೇಲೆ ಬಿದ್ದು ನಮಸ್ಕರಿಸಿದನು.

176. ವಿಗತಭಯನೂ ಅವನನ್ನು ತನ್ನ ಅಣ್ಣನ ಮಗನೆಂದು ಗುರುತಿಸಿ ವಿಸ್ಮಿತನಾಗಿ ಕಂಠದಲ್ಲಿ ಆಲಂಗಿಸಿ ಎಲ್ಲ ವೃತ್ತಾಂತವನ್ನೂ ಕೇಳಿದನು.

---

ತತೋ ವಧ್ಯಭುವಂ ಹಂತುಂ ನೀಯಮಾನಂ ದದರ್ಶ ತಮ್ ।
ಸಾ ಮೃಗಾಂಕವತೀ ದೂರಾತ್ ಪಶ್ಚಾತ್ ಪ್ರಹತಡಿಂಡಿಮಮ್ ॥ ೧೭೧
ಸೋಽಯಂ ಮೇ ನೀಯತೇ ಭರ್ತಾ ವಧಾಯೇತಿ ಸಸಂಭ್ರಮಮ್ ।
ಸಾ ಗತ್ವಾ ಮಂತ್ರಿಮುಖ್ಯಂ ತಮಬ್ರವೀದ್ ಯದ್ಗೃಹೇ ಸ್ಥಿತಾ ॥ ೧೭೨
ನಿವಾರ್ಯ ವಧಕಾನ್ ಸೋಽಥ ಮಂತ್ರೀ ವಿಜ್ಞಾಪ್ಯ ಭೂಪತಿಮ್ ।
ಶ್ರೀದತ್ತಂ ಮೋಚಯಿತ್ವಾ ತಂ ವಧಾದ್ ಆನಾಯಯದ್ ಗೃಹಮ್ ॥ ೧೭೩
ಕಥಂ ಸೋಽಯಂ ಪಿತೃವ್ಯೋ ಮೇ ಗತ್ವಾ ದೇಶಾಂತರಂ ಪುರಾ ।
ಇಹೈವ ದೈವಾದ್ ವಿಗತಭಯಃ ಪ್ರಾಪ್ತೋಽದ್ಯ ಮಂತ್ರಿತಾಮ್ ॥ ೧೭೪
ಇತಿ ತಂ ಮಂತ್ರಿಣಂ ಸೋಽಥ ಶ್ರೀದತ್ತಸ್ತದ್ಗೃಹಾಗತಃ ।
ಪ್ರತ್ಯಭಿಜ್ಞಾತವಾನ್ ಪೃಷ್ಟ್ವಾ ಪಪಾತಾಸ್ಯ ಚ ಪಾದಯೋಃ ॥ ೧೭೫
ಸೋಽಪಿ ತಂ ಪ್ರತ್ಯಭಿಜ್ಞಾಯ ಭ್ರಾತುಃ ಪುತ್ರಂ ಸವಿಸ್ಮಯಃ ।
ಕಂಠೇ ಜಗ್ರಾಹ ಸರ್ವಂ ಚ ವೃತ್ತಾಂತಂ ಪರಿಪೃಷ್ಟವಾನ್ ॥ ೧೭೬

177. ಆಗ ಶ್ರೀದತ್ತನು ತನ್ನ ತಂದೆಯ ವಧೆಯಿಂದ ಆರಂಭಿಸಿ ಎಲ್ಲ ವೃತ್ತಾಂತವನ್ನೂ ಚಿಕ್ಕಪ್ಪನಿಗೆ ತಿಳಿಸಿದನು.

178. ಅವನೂ ಕಂಬನಿಗಳನ್ನು ಸುರಿಸಿ ಏಕಾಂತದಲ್ಲಿ ಅಣ್ಣನ ಮಗನಿಗೆ ಹೀಗೆ ಹೇಳಿದನು. "ಮಗನೇ, ಅಧೈರ್ಯ ಪಡಬೇಡ. ನನಗೆ ಯಕ್ಷಿಣಿ ವಶವಾಗಿದ್ದಾಳೆ.

179. ಆ ಯಕ್ಷಿಣಿಯು ಮಕ್ಕಳಿಲ್ಲದ ನನಗೆ ಐದುಸಾವಿರ ಕುದುರೆಗಳನ್ನೂ ಏಳು ಕೋಟಿ ಹೊನ್ನುಗಳನ್ನೂ ಕೊಟ್ಟಿದ್ದಾಳೆ. ಆ ಎಲ್ಲ ಧನವೂ ನಿನ್ನದೇ."

180. ಹಾಗೆ ಹೇಳಿ ಚಿಕ್ಕಪ್ಪನು ಶ್ರೀದತ್ತನಿಗೆ ಅವನಿಗೆ ಪ್ರಿಯೆಯಾದ ಮೃಗಾಂಕವತಿಯನ್ನೂ ಕೊಟ್ಟನು. ಐಶ್ವರ್ಯವನ್ನು ಪಡೆದ ಶ್ರೀದತ್ತನು ಅವಳನ್ನು ಮದುವೆಮಾಡಿಕೊಂಡನು.

181. ತನ್ನ ಕಾಂತೆಯೊಡನೆ ಕೂಡಿದ ಶ್ರೀದತ್ತನು ರಾತ್ರಿಯೊಡಗೂಡಿದ ನೈದಿಲೆಗಳ ಸರೋವರದಂತೆ ಅಲ್ಲೇ ಆನಂದದಿಂದ ವಾಸವಾಗಿದ್ದನು.

182. ಅವನು ಸಂಪತ್ತಿನಿಂದ ತುಂಬಿದ್ದರೂ ಬಾಹುಶಾಲಿ ಮುಂತಾದ ಮಿತ್ರರ ಚಿಂತೆಯು ಚಂದ್ರನ ಕಪ್ಪು ಮಚ್ಚೆಯಂತೆ ಅವನ ಹೃದಯಕ್ಕೆ ನೋವನ್ನು ಕೊಡುತ್ತಲೇ ಇತ್ತು.

---

ತತಸ್ತಸ್ಮೈ ಸ ನಿಖಿಲಂ ಶ್ರೀದತ್ತಃ ಸ್ವಪಿತುರ್ವಧಾತ್ ।
ಆರಭ್ಯ ನಿಜವೃತ್ತಾಂತಂ ಪಿತೃವ್ಯಾಯ ನ್ಯವೇದಯತ್ ॥ 177
ಸೋಽಪಿ ಮುಕ್ತ್ವಾಶ್ರು ವಿಜನೇ ಭ್ರಾತುಃ ಪುತ್ರಂ ತಮಭ್ಯಧಾತ್ ।
ಅಧೃತಿಂ ಮಾ ಕೃಥಾಃ ಪುತ್ರ ಮಮ ಸಿದ್ಧಾ ಹಿ ಯಕ್ಷಿಣೀ ॥ ೧೭೮
ಪಂಚ ವಾಜಿಸಹಸ್ರಾಣಿ ಹೇಮಕೋಟೀಶ್ಚ ಸಪ್ತ ಸಾ ।
ಪ್ರಾದಾನ್ಮಹ್ಯಮಪುತ್ರಾಯ ತತ್ತವೈವಾಖಿಲಂ ಧನಮ್ ॥ ೧೭೯
ಇತ್ಯುಕ್ತ್ವಾ ಸ ಪಿತೃವ್ಯಸ್ತಾಂ ಶ್ರೀದತ್ತಾಯಾರ್ಪಯತ್ ಪ್ರಿಯಾಮ್ ।
ಶ್ರೀದತ್ತೋಽಪ್ಯಾತ್ತವಿಭವಸ್ತತ್ರ ತಾಂ ಪರಿಣೀತವಾನ್ ॥ ೧೮೦
ತತಶ್ಚ ತಸ್ಥೌ ತತ್ರೈವ ಸಂಗತಃ ಕಾಂತಯಾ ತಯಾ ।
ಮೃಗಾಂಕವತ್ಯಾ ಸಾನಂದೋ ರಾತ್ರ್ಯೇವ ಕುಮುದಾಕರಃ ॥ ೧೮೧
ಬಾಹುಶಾಲ್ಯಾದಿಚಿಂತಾ ತು ತಸ್ಯಾಭೂತ್ ಪೂರ್ಣಸಂಪದಃ ।
ಇಂದೋಃ ಕಲಂಕಲೇಖೇವ ಹೃದಿ ಮಾಲಿನ್ಯದಾಯಿನೀ ॥ ೧೮೨

183. ಒಮ್ಮೆ ಚಿಕ್ಕಪ್ಪನು ಏಕಾಂತದಲ್ಲಿ ಶ್ರೀದತ್ತನಿಗಿಂತೆಂದನು. "ಮಗನೇ, ಈ ಶೂರಸೇನ ರಾಜನಿಗೆ ಇನ್ನೂ ಕನ್ಯೆಯಾಗಿರುವ ಮಗಳೊಬ್ಬಳಿದ್ದಾಳೆ.

184–185. ರಾಜನ ಆಜ್ಞೆಯಂತೆ ಮದುವೆಗಾಗಿ ಅವಳನ್ನು ನಾನು ಅವಂತಿ ದೇಶಕ್ಕೆ ಕರೆದೊಯ್ಯಬೇಕಾಗಿದೆ. ಆ ನೆಪದಲ್ಲೇ ಅವಳನ್ನು ಒಯ್ದು ನಿನಗೆ ಕೊಡುತ್ತೇನೆ. ಆಗ ಅವಳನ್ನು ಅನುಸರಿಸಿ ಬರುವ ಸೈನ್ಯವೂ ನನ್ನ ಸೈನ್ಯವೂ ಲಭಿಸಿ ನಿನಗೆ ಹಿಂದೆ ಲಕ್ಷ್ಮಿಯು ವರದಲ್ಲಿ ಅನುಗ್ರಹಿಸಿದ್ದ ರಾಜ್ಯವನ್ನು ಬೇಗನೆ ಪಡೆಯುವೆ."

186. ಹಾಗೆಯೇ ನಿಶ್ಚಯಿಸಿ ಆ ಕನ್ಯೆಯನ್ನು ಕರೆದುಕೊಂಡು ಶ್ರೀದತ್ತನೂ ಅವನ ಚಿಕ್ಕಪ್ಪನೂ ಸೈನ್ಯಸಹಿತರಾಗಿ ಪರಿವಾರದೊಡನೆ ಹೊರಟರು.

187. ವಿಂಧ್ಯಾಟವಿಯನ್ನು ಇವರಿಬ್ಬರೂ ಸೇರಿದಾಗ ಅನಿರೀಕ್ಷಿತವಾಗಿ ಕಳ್ಳರ ದೊಡ್ಡ ಸೈನ್ಯವು ಬಂದು ಬಾಣಗಳ ಮಳೆಯನ್ನು ಸುರಿಸುತ್ತಾ ಅವರನ್ನು ತಡೆಯಿತು.

188. ಶ್ರೀದತ್ತನ ಸೈನಿಕರು ಸತ್ತುಹೋದರು. ಏಟುತಿಂದು ಅವನೂ ಮೂರ್ಛೆ ಹೋದಾಗ ಅವನ ಹಣವನ್ನೆಲ್ಲ ಕಿತ್ತುಕೊಂಡು ಕಳ್ಳರು ಅವನನ್ನು ತಮ್ಮ ಹಳ್ಳಿಗೆ ಕೊಂಡೊಯ್ದರು.

---

ಏಕದಾ ಸ ಪಿತೃವ್ಯಸ್ತಂ ರಹಃ ಶ್ರೀದತ್ತಮಭ್ಯಧಾತ್ ।
ಪುತ್ರ ರಾಜ್ಞಃ ಸುತಾಸ್ತ್ಯಸ್ಯ ಶೂರಸೇನಸ್ಯ ಕನ್ಯಕಾ ॥ ೧೮೩
ಮಯಾ ಚಾವಂತಿದೇಶೇ ಸಾ ನೇಯಾ ದಾತುಂ ತದಾಜ್ಞಯಾ ।
ತತ್ತೇನೈವಾಪದೇಶೇನ ಹೃತ್ವಾ ತುಭ್ಯಂ ದದಾಮಿ ತಾಮ್ ॥ ೧೮೪
ತತಸ್ತದನುಗೇ ಪ್ರಾಪ್ತೇ ಬಲೇ ಸತಿ ಚ ಮಾಮಕೇ ।
ಯದ್ರಾಜ್ಯಂ ತೇ ಶ್ರಿಯಾದಿಷ್ಟಂ ತತ್ಪ್ರಾಪ್ಸ್ಯಸ್ಯಚಿರಾದಿತಿ ॥ ೧೮೫
ನಿಶ್ಚಿತ್ಯೈತಚ್ಚ ತಾಂ ಕನ್ಯಾಂ ಗೃಹೀತ್ವಾ ಯಯತುಸ್ತತಃ ।
ಶ್ರೀದತ್ತಸ್ತತ್ಪಿತೃವ್ಯಶ್ಚ ಸಸೈನ್ಯೌ ಸಪರಿಗ್ರಹೌ ॥ ೧೮೬
ತತೋ ವಿಂಧ್ಯಾಟವೀಮೇತೌ ಪ್ರಾಪ್ತಮಾತ್ರಾವತರ್ಕಿತಾ ।
ಚೌರಸೇನಾತಿಮಹತೀ ರುರೋಧ ಶರವರ್ಷಿಣೀ ॥ ೧೮೭
ಪ್ರಹಾರಮೂರ್ಛಿತಂ ಬದ್ಧ್ವಾ ಶ್ರೀದತ್ತಂ ಭಗ್ನಸೈನಿಕಮ್ ।
ನಿನ್ಯುಶ್ಚೋರಾಃ ಸ್ವಪಲ್ಲೀಂ ತೇ ಸ್ವೀಕೃತ್ಯ ಸಕಲಂ ಧನಮ್ ॥ ೧೮೮

189. ಅವರು ಶ್ರೀದತ್ತನನ್ನು ಭಯಂಕರವಾಗಿದ್ದ ಚಂಡಿಯ ದೇವಸ್ಥಾನಕ್ಕೆ ಒಯ್ದರು. ಘಂಟೆಗಳ ಶಬ್ದದಿಂದ ಮೃತ್ಯು ತನಗೆ ಕಾಣಿಕೆಯನ್ನು ಕೊಡಲು ಆಹ್ವಾನಿಸುತ್ತಿರುವಂತಿತ್ತು.

190. ಆ ಹಳ್ಳಿಯ ಒಡೆಯನ ಮಗಳೂ ಅವನ ಹೆಂಡತಿಯೂ ಆಗಿದ್ದ ಸುಂದರಿ ತನ್ನ ಪುಟ್ಟ ಮಗುವಿನೊಂದಿಗೆ ದೇವಿಯನ್ನು ನೋಡಲು ಬಂದಿದ್ದಳು. ಅವಳು ಶ್ರೀದತ್ತನನ್ನು ನೋಡಿದಳು.

191. ಆನಂದದಿಂದ ಉಬ್ಬಿದ ಅವಳು ಆ ಕಳ್ಳರನ್ನೂ ಮಧ್ಯಸ್ಥರನ್ನೂ ಶ್ರೀದತ್ತನ ವಧೆ ಮಾಡದಂತೆ ತಡೆದಳು. ಶ್ರೀದತ್ತನು ಅವಳೊಡನೆ ಅವಳ ಮನೆಗೆ ಹೋದನು.

192. ಸುಂದರಿಯ ತಂದೆಯು ಸಾಯುವಾಗ, ಅವನಿಗೆ ಬೇರೆ ಮಕ್ಕಳಿರಲಿಲ್ಲದ ಕಾರಣ, ರಾಜ್ಯವನ್ನು ಮಗಳಿಗೆ ಒಪ್ಪಿಸಿದ್ದನು. ಆ ರಾಜ್ಯವನ್ನು ಈಗ ಶ್ರೀದತ್ತನೇ ಪಡೆದುಕೊಂಡನು.

193. ಕಳ್ಳರು ಕಿತ್ತುಕೊಂಡಿದ್ದ, ಅವನ ಚಿಕ್ಕಪ್ಪನಿಂದ ಬಂದಿದ್ದ ಎಲ್ಲ ಧನವನ್ನೂ, ತನ್ನ ಹೆಂಡತಿಯನ್ನೂ ಮೃಗಾಂಕಕವೆಂಬ ಖಡ್ಗವನ್ನೂ ಶ್ರೀದತ್ತನು ಮತ್ತೆ ಪಡೆದುಕೊಂಡನು.

194. ಅಲ್ಲಿಯೇ ಶೂರಸೇನನ ಮಗಳನ್ನೂ ಮದುವೆ ಮಾಡಿಕೊಂಡ ಶ್ರೀದತ್ತನು ನಗರದಲ್ಲೂ ಮಹಾರಾಜನಾದನು.

---

ತೇ ಚ ತಂ ಪ್ರಾಪಯಾಮಾಸುಶ್ಚಂಡಿಕಾಸದ್ಮ ಭೀಷಣಮ್ ।
ಉಪಹಾರಾಯ ಘಂಟಾನಾಂ ನಾದೈರ್ಮೃತ್ಯುರಿವಾಹ್ವಯತ್ ॥ ೧೮೯
ತತ್ರಾಪಶ್ಯಚ್ಚ ತಂ ಪತ್ನೀ ಸಾ ಪಲ್ಲೀಪತಿಪುತ್ರಿಕಾ ।
ಸುಂದರೀ ದ್ರಷ್ಟುಮಾಯಾತಾ ದೇವೀಂ ಬಾಲಸುತಾನ್ವಿತಾ ॥ ೧೯೦
ನಿಷಿದ್ಧವತ್ಯಾ ಮಧ್ಯಸ್ಥಾನ್ ದಸ್ಯೂನ್ ಆನಂದಪೂರ್ಣಯಾ ।
ಸ ಶ್ರೀದತ್ತಸ್ತಯಾ ಸಾಕಂ ತನ್ಮಂದಿರಮಥಾವಿಶತ್ ॥ ೧೯೧
ತದೈವ ಪಲ್ಲೀರಾಜ್ಯಂ ತತ್ ಪ್ರಾಪ ಪಿತ್ರಾ ಯದರ್ಪಿತಮ್ ।
ಪ್ರಾಗೇವಾನನ್ಯಪುತ್ರೇಣ ಸುಂದರ್ಯೈ ಗಚ್ಛತಾ ದಿವಮ್ ॥ ೧೯೨
ತಂ ಚ ಚೌರಸಮಾಕ್ರಾಂತಂ ಸಪಿತೃವ್ಯಪರಿಚ್ಛದಮ್ ।
ಸಕಲತ್ರಂ ಚ ಲೇಭೇಽಸೌ ತಂ ಖಡ್ಗಂ ಚ ಮೃಗಾಂಕಕಮ್ ॥ ೧೯೩
ತತ್ರೈವ ಶೂರಸೇನಸ್ಯ ಸುತಾಂ ತಾಂ ಪರಿಣೀಯ ಚ ।
ಶ್ರೀದತ್ತೋಽಪಿ ಮಹಾನ್ ರಾಜಾ ನಗರೇ ಸಮಪದ್ಯತ ॥ ೧೯೪

195. ತನ್ನ ಮಾವಂದಿರಾದ ಬಿಂಬಕಿ ಮತ್ತು ಶೂರಸೇನ ಎಂಬ ಇಬ್ಬರು ರಾಜರಿಗೂ ಶ್ರೀದತ್ತನು ದೂತರನ್ನು ಕಳುಹಿಸಿದನು.
196. ಈ ಸಂಬಂಧದ ವಿಷಯ ತಿಳಿದು ತಮ್ಮ ಮಕ್ಕಳ ಮೇಲೆ ಅಪಾರ ಪ್ರೇಮವಿಟ್ಟಿದ್ದ ಅವರು ಸೇನಾಸಮುದಾಯಗಳೊಡನೆ ಸಂತೋಷದಿಂದ ಅವನ ಬಳಿ ಬಂದು ತಲುಪಿದರು.
197. ಶ್ರೀದತ್ತನಿಂದ ಬೇರ್ಪಟ್ಟಿದ್ದ ಅವನ ಮಿತ್ರರಾದ ಬಾಹುಶಾಲಿಯೇ ಮೊದಲಾದವರೂ ಅವನು ರಾಜನಾದ ವಿಷಯವನ್ನು ತಿಳಿದು ಅವನ ಬಳಿ ಬಂದರು. ಅವರ ಗಾಯಗಳೆಲ್ಲ ವಾಸಿಯಾಗಿದ್ದು ಅವರು ಆರೋಗ್ಯದಿಂದಿದ್ದರು.
198. ಆಮೇಲೆ ವೀರ ಶ್ರೀದತ್ತನು ತನ್ನ ಮಾವಂದಿರೊಡನೆ ಹೋಗಿ ತನ್ನ ತಂದೆಯನ್ನು ಕೊಂದುಹಾಕಿದ್ದ ವಿಕ್ರಮಶಕ್ತಿಯನ್ನು ಕೋಪದ ಬೆಂಕಿಗೆ ಆಹುತಿಯನ್ನಾಗಿ ಮಾಡಿದನು.
199. ಅನಂತರ ಶ್ರೀದತ್ತನು ಸಮುದ್ರಪರ್ಯಂತವಾದ ಭೂಮಿಗೆ ಒಡೆಯನಾಗಿ ಮೃಗಾಂಕವತಿಯ ಸಖನಾಗಿ ಎಲ್ಲ ವಿಯೋಗಗಳ ದುಃಖವನ್ನೂ ದಾಟಿ ಆನಂದದಿಂದ ಇದ್ದನು.
200. ಹೇ ರಾಜನ್, ಇದೇ ರೀತಿಯಲ್ಲಿ ಧೀರಹೃದಯರು ದೀರ್ಘವಿಯೋಗದ ದುಃಖವೆಂಬ ಸಮುದ್ರವನ್ನು ದಾಟಿ ಶುಭವನ್ನು ಪಡೆಯುತ್ತಾರೆ.

---

ಪ್ರಹಿಣಾಯ ಸ ದೂತಾಂಶ್ಚ ತತಃ ಶ್ವಶುರಯೋಸ್ತಯೋಃ ।
ಬಿಂಬಕೇಸ್ತಸ್ಯ ತಸ್ಯಾಪಿ ಶೂರಸೇನಸ್ಯ ಭೂಪತೇಃ ॥ ೧೯೫
ತಮುಪಾಜಗ್ಮತುಸ್ತೌ ಚ ಸೇನಾಸಮುದಯಾನ್ವಿತೌ ।
ತಂ ವಿಜ್ಞಾಯೈವ ಸಂಬಂಧಂ ಮುದಾ ದುಹಿತೃವತ್ಸಲೌ ॥ ೧೯೬
ತೇಽಪಿ ರೂಢವ್ರಣಾಃ ಸ್ವಸ್ಥಾಸ್ತದ್ವಿಯುಕ್ತಾ ವಯಸ್ಯಕಾಃ ।
ಬಾಹುಶಾಲಿಪ್ರಭೃತಯಸ್ತದ್‌ಬುದ್ಧ್ವಾ ತಮುಪಾಯಯುಃ ॥ ೧೯೭
ಅಥ ಶ್ವಶುರಸಂಯುಕ್ತೋ ಗತ್ವಾ ತಂ ಪಿತೃಘಾತಿನಮ್ ।
ಚಕ್ರೇ ವಿಕ್ರಮಶಕ್ತಿಂ ಸ ವೀರಃ ಕ್ರೋಧಾನಲಾಹುತಿಮ್ ॥ ೧೯೮
ತತಶ್ಚ ಸಾಬ್ಧಿವಲಯಾಂ ಶ್ರೀದತ್ತಃ ಪ್ರಾಪ್ಯ ಮೇದಿನೀಮ್ ।
ನನಂದ ವಿರಹೋತ್ತೀರ್ಣಃ ಸ ಮೃಗಾಂಕವತೀಸಖಃ ॥ ೧೯೯
ಇತ್ಥಂ ನರಪತೇ ದೀರ್ಘವಿಯೋಗವ್ಯಸನಾರ್ಣವಮ್ ।
ತರಂತಿ ಚ ಲಭಂತೇ ಚ ಕಲ್ಯಾಣಂ ಧೀರಚೇತಸಃ ॥ ೨೦೦

201. ಈ ರೀತಿಯಾಗಿ ಸಂಗತಕನಿಂದ ಕಥೆಯನ್ನು ಕೇಳಿದ ಸಹಸ್ರಾನೀಕ ಮಹಾರಾಜನು ತನ್ನ ಪ್ರಿಯೆಯನ್ನು ಕಾಣಲು ಉತ್ಕಂಠಿತನಾಗಿ ಆ ರಾತ್ರಿಯನ್ನು ದಾರಿಯಲ್ಲಿ ಕಳೆದನು.

202. ಮನೋರಥವನ್ನೇರಿದ ಮನಸ್ಸನ್ನು ಮೊದಲೇ ಕಳುಹಿಸಿದ ಸಹಸ್ರಾನೀಕ ಮಹಾರಾಜನು ಬೆಳಗಾಗುತ್ತಲೇ ತನ್ನ ಪ್ರಿಯೆಯನ್ನು ನೋಡಲು ಹೊರಟನು.

203. ಕೆಲವೇ ದಿನಗಳಲ್ಲಿ ಅವನು ಜಮದಗ್ನಿಯ ಪ್ರಶಾಂತವಾದ ಆಶ್ರಮವನ್ನು ತಲುಪಿದನು. ಅಲ್ಲಿ ಪ್ರಾಣಿಗಳೂ ಚಂಚಲತೆಯನ್ನು ಪರಿತ್ಯಜಿಸಿದ್ದುವು.

204. ಆತಿಥ್ಯವನ್ನು ನೀಡಿದ ಜಮದಗ್ನಿಯು ತಪಸ್ಸುಗಳ ಪಾವನವಾದ ತೇಜಸ್ಸಿನಿಂದ ತುಂಬಿದ ಆಕೃತಿಯಂತಿದ್ದನು. ರಾಜನು ಅವನಿಗೆ ನಮಸ್ಕಾರ ಮಾಡಿ ದರ್ಶನವನ್ನು ಪಡೆದನು.

205. ಆ ಮುನಿಯು ರಾಜನಿಗೆ ಪುತ್ರಸಹಿತಳಾಗಿದ್ದು ಆನಂದದಿಂದ ಕೂಡಿದ ನೆಮ್ಮದಿಯಂತಿದ್ದ ರಾಣಿ ಮೃಗಾವತಿಯನ್ನು ಸಮರ್ಪಿಸಿದನು.

206. ಶಾಪವು ಕೊನೆಗೊಂಡ ಸಮಯದಲ್ಲಿ ಆದ ಆ ದಂಪತಿಗಳ ಪರಸ್ಪರದರ್ಶನವು ಆನಂದಬಾಷ್ಪಗಳಿಂದ ತುಂಬಿದ್ದ ಅವರ ಕಣ್ಣುಗಳಲ್ಲಿ ಅಮೃತವನ್ನು ಸುರಿಸುವಂತಿತ್ತು.

---

ಇತಿ ಸಂಗತಕಾಚ್ಛ್ರುತ್ವಾ ಕಥಾಂ ಸ ದಯಿತೋತ್ಸುಕಃ ।
ತಾಂ ನಿನಾಯ ನಿಶಾಂ ಮಾರ್ಗೇ ಸಹಸ್ರಾನೀಕಭೂಪತಿಃ ॥ ೨೦೧
ತತೋ ಮನೋರಥಾರೂಢಃ ಪುರಃ ಪ್ರಹಿತಮಾನಸಃ ।
ಪ್ರಾತಃ ಸಹಸ್ರಾನೀಕೋಽಸೌ ಪ್ರತಸ್ಥೇ ಸ್ವಾಂ ಪ್ರಿಯಾಂ ಪ್ರತಿ ॥ ೨೦೨
ದಿನೈಃ ಕತಿಪಯೈಸ್ತುಂ ಚ ಜಮದಗ್ನೇರವಾಪ ಸಃ ।
ಮೃಗೈರಪಿ ಪರಿತ್ಯಕ್ತಚಾಪಲಂ ಶಾಂತಮಾಶ್ರಮಮ್ ॥ ೨೦೩
ದದರ್ಶ ಕಲ್ಪಿತಾತಿಥ್ಯಂ ಜಮದಗ್ನಿಂ ಚ ತತ್ರ ತಮ್ ।
ಪ್ರಣತಃ ಪಾವನಾಲೋಕಮಾಕಾರಂ ತಪಸಾಮಿವ ॥ ೨೦೪
ಸ ಚ ತಸ್ಮೈ ಮುನೀ ರಾಜ್ಞೇ ಸಪುತ್ರಾಂ ತಾಂ ಸಮಾರ್ಪಯತ್ ।
ಚಿರಾನ್ಮೃಗಾವತೀಂ ರಾಜ್ಞೀಂ ಸಾನಂದಾಮಿವ ನಿರ್ವೃತಿಮ್ ॥ ೨೦೫
ಶಾಪಾಂತೇ ತಚ್ಚ ದಂಪತ್ಯೋಸ್ತಯೋರನ್ಯೋನ್ಯದರ್ಶನಮ್ ।
ಆನಂದಬಾಷ್ಪಪೂರ್ಣಾಯಾಂ ವವರ್ಷೇವಾಮೃತಂ ದೃಶಿ ॥ ೨೦೬

207. ಅದೇ ಮೊದಲನೆಯ ಬಾರಿಗೆ ನೋಡಿದ ಮಗ ಉದಯನನನ್ನು ರಾಜನು ತಬ್ಬಿಕೊಂಡನು. ಆಗ ಉಂಟಾದ ರೋಮಾಂಚನದಿಂದ ಬಿಗಿಯಲ್ಪಟ್ಟಂತಿದ್ದ ಮಗನನ್ನು ಹೇಗೋ ಕಷ್ಟದಿಂದ ಬಿಟ್ಟನು.

208. ಅನಂತರ ಉದಯನನನ್ನೂ ರಾಣಿ ಮೃಗಾವತಿಯನ್ನೂ ಕರೆದುಕೊಂಡು ಸಹಸ್ರಾನೀಕನು ಹೊರಟಾಗ ತಪೋವನದ ಎಲ್ಲೆಯವರೆಗೆ ಎಲ್ಲರೂ ಬಂದರು, ಅಲ್ಲಿನ ಜಿಂಕೆಗಳೂ ಕಣ್ಣೀರಿಡುತ್ತಾ ಅನುಸರಿಸಿ ಬಂದವು.

209. ಸಹಸ್ರಾನೀಕಭೂಪಾಲನು ಜಮದಗ್ನಿಯಿಂದ ಬೀಳ್ಕೊಂಡು ಪ್ರಶಾಂತವಾದ ಆ ಆಶ್ರಮದಿಂದ ತನ್ನ ನಗರಕ್ಕೆ ಹೊರಟನು.

210. ಅಗಲಿಕೆಯಲ್ಲಿ ನಡೆದ ಘಟನೆಗಳನ್ನು ಪ್ರಿಯೆಯಿಂದ ಕೇಳುತ್ತಾ, ಅವಳಿಗೆ ತಾನೂ ಹೇಳುತ್ತಾ ತೋರಣಗಳಿಂದಲೂ ಬಾವುಟಗಳಿಂದಲೂ ಕಂಗೊಳಿಸುತ್ತಿದ್ದ ಕೌಶಾಂಬಿಗೆ ಹೋಗಿ ಸೇರಿದನು.

211. ಪೌರಜನರು ರೆಪ್ಪೆಗಳ ಸಾಲುಗಳನ್ನು ಮೇಲೆತ್ತಿದ ಕಣ್ಣುಗಳಿಂದ ಅವನನ್ನು ಕುಡಿದು ಬಿಡುವಂತೆ ನೋಡುತ್ತಿರಲು ಅವನು ಪತ್ನೀಪುತ್ರರೊಡನೆ ಆ ನಗರವನ್ನು ಪ್ರವೇಶಿಸಿದನು.

212. ಉದಯನನ ಗುಣಗಳಿಂದ ಪ್ರೇರಿತನಾಗಿ ಮಹಾರಾಜ ಸಹಸ್ರಾನೀಕನು ವಿಳಂಬವಿಲ್ಲದೆ ಅವನನ್ನು ಯುವರಾಜನನ್ನಾಗಿ ಮಾಡಿ ಅಭಿಷೇಕಗೈದನು.

---

ತತ್ಪೂರ್ವದರ್ಶನಂ ಪುತ್ರಮಾಲಿಂಗ್ಯೋದಯನಂ ಸ ತಮ್ ।
ಮುಮೋಚ ನೃಪತಿಃ ಕೃಚ್ಛ್ರಾದ್ ರೋಮಾಂಚೇನೇವ ಕೀಲಿತಮ್ ॥ ೨೦೭
ತತಃ ಸೋದಯನಾಂ ರಾಜ್ಞೀಂ ತಾಮಾದಾಯ ಮೃಗಾವತೀಮ್ ।
ಆ ತಪೋವನಮುದ್ಬಾಷ್ಪೈರನುಯಾತೋ ಮೃಗೈರಪಿ ॥ ೨೦೮
ಆಮನ್ತ್ರ್ಯ ಜಮದಗ್ನಿಂ ಚ ಪ್ರತಸ್ಥೇ ಸ್ವಾಂ ಪುರೀಂ ಪ್ರತಿ ।
ಪ್ರಶಾಂತಾದಾಶ್ರಮಾತ್ತಸ್ಮಾತ್ ಸಹಸ್ರಾನೀಕಭೂಪತಿಃ ॥ ೨೦೯
ಶೃಣ್ವನ್ ವಿರಹವೃತ್ತಾನಿ ಪ್ರಿಯಾಯಾ ವರ್ಣಯಂಶ್ಚ ಸಃ ।
ಉತ್ತೋರಣಪತಾಕಾಂ ತಾಂ ಕೌಶಾಂಬೀಂ ಪ್ರಾಪ್ತವಾನ್ ಕ್ರಮಾತ್ ॥ ೨೧೦
ಸಮಂ ಚ ಪತ್ನೀಪುತ್ರಾಭ್ಯಾಂ ಪ್ರವಿವೇಶ ಸ ತಾಂ ಪುರೀಮ್ ।
ಪೀಯಮಾನ ಇವೋತ್ಪಕ್ಷ್ಮರಾಜಿಭಿಃ ಪೌರಲೋಚನೈಃ ॥ ೨೧೧
ಅಭ್ಯಷಿಂಚಚ್ಚ ತಂ ತತ್ರ ಝಗಿತ್ಯುದಯನಂ ಸುತಮ್ ।
ಯೌವರಾಜ್ಯೇ ಮಹಾರಾಜಃ ಪ್ರೇರ್ಯಮಾಣಃ ಸ ತದ್ಗುಣೈಃ ॥ ೨೧೨

213. ಮಂತ್ರಾಲೋಚನೆಗಾಗಿ ಅವನಿಗೆ ತನ್ನ ಮಂತ್ರಿಗಳ ಪುತ್ರರಾದ ವಸಂತಕ, ರುಮಣ್ವಂತ, ಯೌಗಂಧರಾಯಣ ಎಂಬುವರನ್ನು ಒದಗಿಸಿದನು.

214. ಆಗ ಪುಷ್ಪವೃಷ್ಟಿಯೊಡನೆ "ಈ ಶ್ರೇಷ್ಠ ಮಂತ್ರಿಗಳ ಸಹಾಯದಿಂದ ಉದಯನನು ಸಮಸ್ತ ಭೂಮಿಯನ್ನೂ ತನ್ನದನ್ನಾಗಿ ಮಾಡಿಕೊಳ್ಳುವನು" ಎಂಬ ದಿವ್ಯವಾಣಿಯು ಆಕಾಶದಲ್ಲಿ ಮೊಳಗಿತು.

215. ಮಗನಿಗೆ ರಾಜ್ಯಭಾರವನ್ನು ಕೊಟ್ಟು ಸಹಸ್ರಾನೀಕನು ಮೃಗಾವತಿಯ ಜೊತೆಯಲ್ಲಿ ಬಹುಕಾಲದಿಂದ ಅಪೇಕ್ಷಿಸಿದ್ದ ಜೀವಲೋಕದ ಸುಖಗಳನ್ನು ಅನುಭವಿಸಿದನು.

216. ಶಾಂತಿಯ ದೂತಿಯಾಗಿ ಜರೆಯು (ಮುದಿತನವು) ಸಹಸ್ರಾನೀಕ ಮಹಾರಾಜನ ಕಿವಿಯ ಕೆಳಗೆ (ನರೆಯ ರೂಪದಲ್ಲಿ) ಬಂದಾಗ ಅವಳನ್ನು ನೋಡಿ ಕೂಡಲೇ ಕೋಪಗೊಂಡಂತೆ ವಿಷಯಸ್ಪೃಹೆಯು (ಇಂದ್ರಿಯ ಸುಖಗಳಲ್ಲಿ ಅಪೇಕ್ಷೆಯು) ದೂರವಾದಳು.

---

ಸ್ವಮಂತ್ರಿಪುತ್ರಾಂಸ್ತಸ್ಮೈ ಸಃ ಮಂತ್ರಹೇತೋಃ ಸಮಾರ್ಪಯತ್ ।
ವಸಂತಕರುಮಣ್ವಂತೌ ತಥಾ ಯೌಗಂಧರಾಯಣಮ್ ॥ ೨೧೩

ಏಭಿರ್ಮಂತ್ರಿವರ್ಯೈರೇಷ ಕೃತ್ಸ್ನಾಂ ಪ್ರಾಪ್ಸ್ಯತಿ ಮೇದಿನೀಮ್ ।
ಇತಿ ವಾಗುದಭೂದ್ ದಿವ್ಯಾ ಪುಷ್ಪವೃಷ್ಟ್ಯಾ ಸಮಂ ತದಾ ॥ ೨೧೪

ತತಃ ಸುತೇ ನ್ಯಸ್ತಭರಃ ಸ ರಾಜಾ ಚಿರಕಾಂಕ್ಷಿತಮ್ ।
ಜೀವಲೋಕಸುಖಂ ಭೇಜೇ ಮೃಗಾವತ್ಯಾ ತಯಾ ಸಹ ॥ ೨೧೫

ಅಥ ತಸ್ಯ ಜರಾಂ ಪ್ರಶಾಂತಿದೂತೀಮ್
　ಉಪಯಾತಾಂ ಕ್ಷಿತಿಪಸ್ಯ ಕರ್ಣಮೂಲಮ್ ।
ಸಹಸೈವ ವಿಲೋಕ್ಯ ಜಾತಕೋಪಾ
　ಬತ ದೂರೇ ವಿಷಯಸ್ಪೃಹಾ ಬಭೂವ ॥ ೨೧೬

217. ಮಂಗಳಮಯನೂ ಪ್ರಜೆಗಳ ಒಲವಿಗೆ ಪಾತ್ರನೂ ಆಗಿದ್ದ ಪುತ್ರ ಉದಯನನನ್ನು ಜಗತ್ತಿನ ಅಭ್ಯುದಯಕ್ಕಾಗಿ ತನ್ನ ರಾಜ್ಯದಲ್ಲಿ ದೃಢವಾಗಿ ನಿಲ್ಲಿಸಿ ಸಹಸ್ರಾನೀಕನು ತನ್ನ ಪ್ರಿಯತಮೆಯೊಡನೆ ಮತ್ತು ಮಂತ್ರಿಗಳೊಡನೆ ಮಹಾಪ್ರಸ್ಥಾನ (ಅಂತಿಮ ಪ್ರಯಾಣ) ಕ್ಕಾಗಿ ಹಿಮಾಲಯ ಪರ್ವತಕ್ಕೆ ಹೋದನು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಕಥಾಮುಖಲಂಬಕದಲ್ಲಿ

ಎರಡನೆಯ ತರಂಗ ಮುಗಿಯಿತು.

---

ತತಸ್ತಂ ಕಲ್ಯಾಣಂ ತನಯಮನುರಕ್ತಪ್ರಕೃತಿಕಂ
ನಿವೇಶ್ಯ ಸ್ವೇ ರಾಜ್ಯೇ ಜಗದುದಯಹೇತೋರುದಯನಮ್ ।
ಸಹಸ್ರಾನೀಕೋಽಸೌ ಸಚಿವಸಹಿತಃ ಸಪ್ರಿಯತಮೋ
ಮಹಾಪ್ರಸ್ಥಾನಾಯ ಕ್ಷಿತಿಪತಿರಗಚ್ಛದ್ಧಿಮಗಿರಿಮ್ ॥ ೨೭೭

ಇತಿ ಮಹಾಕವಿಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಕಥಾಮುಖಲಂಬಕೇ ದ್ವಿತೀಯಸ್ತರಂಗಃ ।

# ಮೂರನೆಯ ತರಂಗ

1. ತಂದೆಯು ಕೊಟ್ಟ ವತ್ಸರಾಜ್ಯವನ್ನು ಪಡೆದು ಕೌಶಾಂಬಿಯಲ್ಲಿ ನೆಲೆಸಿದ ಉದಯನನು ಪ್ರಜೆಗಳನ್ನು ಚೆನ್ನಾಗಿ ಆಳಿದನು.
2. ಯೌಗಂಧರಾಯಣನೇ ಮುಂತಾದ ಮಂತ್ರಿಗಳಲ್ಲಿ (ರಾಜ್ಯದ) ಭಾರವನ್ನಿಟ್ಟು ಆ ದೊರೆಯು ಮೆಲ್ಲಮೆಲ್ಲನೆ ಸುಖಗಳಲ್ಲೇ ಸತತವಾಗಿ ತೊಡಗಿದವನಾದನು.
3. ಯಾವಾಗಲೂ ಬೇಟೆಯನ್ನೂ ವೀಣೆಯನ್ನೂ ಆಶ್ರಯಿಸಿದ ಉದಯನನು ಹಿಂದೆ ವಾಸುಕಿಯು ಕೊಟ್ಟಿದ್ದ ಘೋಷವತಿ(ಎಂಬ ವೀಣೆ) ಯನ್ನು ಹಗಲೂ ರಾತ್ರಿಯೂ ನುಡಿಸತೊಡಗಿದನು.
4. ಅದರ ತಂತಿಯ ಇಂಪಾದ ನಾದದ ಮೋಡಿಯ ಮಂತ್ರದಿಂದ ವಶೀಕರಿಸಿದ ಕಾಡಾನೆಗಳನ್ನು ವಶಪಡಿಸಿಕೊಂಡು ಕಟ್ಟಿಹಾಕಿ ತರುತ್ತಿದ್ದನು.
5. ವೇಶ್ಯಾಸ್ತ್ರೀಯರ ಮುಖಚಂದ್ರರ ಪ್ರತಿಫಲನದಿಂದ ಅಲಂಕೃತವಾದ ಮದ್ಯವನ್ನೂ ಮಂತ್ರಿಗಳ ಮೊಗದ ಕಾಂತಿಯನ್ನೂ ವತ್ಸರಾಜನು ಒಟ್ಟಿಗೆ ಕುಡಿದನು.

---

# ತೃತೀಯಸ್ತರಂಗಃ

ತತಃ ಸ ವತ್ಸರಾಜ್ಯಂ ಚ ಪ್ರಾಪ್ಯ ಪಿತ್ರಾ ಸಮರ್ಪಿತಮ್ ।
ಕೌಶಾಂಬ್ಯವಸ್ಥಿತಃ ಸಮ್ಯಕ್ ಶಶಾಸೋದಯನಃ ಪ್ರಜಾಃ ॥ ೧
ಯೌಗಂಧರಾಯಣಾದ್ಯೇಷು ಭರಂ ವಿನ್ಯಸ್ಯ ಮಂತ್ರಿಷು ।
ಬಭೂವ ಸ ಶನೈ ರಾಜಾ ಸುಖೇಷ್ವೇಕಾಂತತತ್ಪರಃ ॥ ೨
ಸದಾ ಸಿಷೇವೇ ಮೃಗಯಾಂ ವೀಣಾಂ ಘೋಷವತೀಂ ಚ ತಾಮ್ ।
ದತ್ತಾಂ ವಾಸುಕಿನಾ ಪೂರ್ವಂ ನಕ್ತಂದಿನಮವಾದಯತ್ ॥ ೩
ತತ್ತಂತ್ರೀಕಲನಿರ್ಹ್ರಾದಮೋಹಮಂತ್ರವಶೀಕೃತಾನ್ ।
ಆನಿನಾಯ ಚ ಸಂಯಮ್ಯ ಸದಾ ಮತ್ತಾನ್ ವನದ್ವಿಪಾನ್ ॥ ೪
ಸ ವಾರನಾರೀವಕ್ತ್ರೇಂದುಪ್ರತಿಮಾಲಂಕೃತಾಂ ಸುರಾಮ್ ।
ಮಂತ್ರಿಣಾಂ ಚ ಮುಖಚ್ಛಾಯಾಂ ವತ್ಸರಾಜಃ ಸಮಂ ಪಪೌ ॥ ೫

6. 'ನನ್ನ ವಂಶಕ್ಕೂ ಸೊಬಗಿಗೂ ಹೊಂದುವ ಹೆಂಡತಿ ಎಲ್ಲೂ ಇಲ್ಲ. ಆದರೆ ವಾಸವದತ್ತೆ ಎಂಬ ಕನ್ಯೆಯ ಬಗೆಗೆ ಬಹಳವಾಗಿ ಕೇಳಿದ್ದೇನೆ.
7. ಅವಳನ್ನು ಹೊಂದುವುದು ಹೇಗೆ' ಎಂಬ ಒಂದು ಚಿಂತೆ ಅವನಿಗಿತ್ತು. ಉಜ್ಜಯಿನಿಯಲ್ಲಿ ಚಂಡಮಹಾಸೇನ (ಎಂಬ ರಾಜನೂ) (ಅದೇ ವಿಷಯದಲ್ಲಿ) ಯೋಚಿಸುತ್ತಿದ್ದನು.
8. "ನನ್ನ ಮಗಳಿಗೆ ಅನುರೂಪನಾದ ಗಂಡನು ಈ ಜಗತ್ತಿನಲ್ಲಿ ಇಲ್ಲ. ಇದ್ದರೆ ಅದು ಉದಯನ. ಆದರೆ ಅವನು ಯಾವಾಗಲೂ ನನಗೆ ಹಗೆ.
9. ಹೀಗಿರುವಾಗ ಅವನು ಹೇಗೆ ತಾನೆ ನನ್ನ ಅಧೀನನೂ ಅಳಿಯನೂ ಆದಾನು ? ಅದಕ್ಕೆ ಒಂದೇ ಒಂದು ಉಪಾಯವಿದೆ. ಅದೇನೆಂದರೆ ಅವನು ಸದಾ ಅಡವಿಯಲ್ಲಿ ಅಲೆದಾಡುತ್ತಿರುತ್ತಾನೆ.
10. ಬೇಟೆಯ ಚಟವುಳ್ಳ ಆ ದೊರೆ ಒಬ್ಬೊಂಟಿಗನಾಗಿ ಆನೆಗಳನ್ನು ಹಿಡಿಯಲು ಹೋಗುತ್ತಾನೆ. ಅದೊಂದು ದೌರ್ಬಲ್ಯದಿಂದ ಅವನನ್ನು ಯುಕ್ತಿಯಿಂದ ಬಂಧಿಸಿ ತರಿಸುತ್ತೇನೆ.
11. ಸಂಗೀತದಲ್ಲಿ ಪರಿಣತನಾದ ಅವನಿಗೆ (ನನ್ನ) ಈ ಮಗಳನ್ನು ಶಿಷ್ಯೆಯನ್ನಾಗಿ ಮಾಡು ತ್ತೇನೆ. ಆಮೇಲೆ ಅವನ ಕಣ್ಣು ತಾನೇ ಅವಳಿಗೆ ಒಲಿಯುತ್ತದೆ, ಸಂಶಯವೇ ಇಲ್ಲ.

---

ಕುಲರೂಪಾನುರೂಪಾ ಮೇ ಭಾರ್ಯಾ ಕ್ವಾಪಿ ನ ವಿದ್ಯತೇ ।
ಏಕಾ ವಾಸವದತ್ತಾಖ್ಯಾ ಕನ್ಯಕಾ ಶ್ರೂಯತೇ ಪರಮ್ ॥ ೬
ಕಥಂ ಪ್ರಾಪ್ಯೇತ ಸಾ ಚೇತಿ ಚಿಂತಾಮೇಕಾಮುವಾಹ ಸಃ ।
ಸೋಽಪಿ ಚಂಡಮಹಾಸೇನ ಉಜ್ಜಯಿನ್ಯಾಮಚಿಂತಯತ್ ॥ ೭
ತುಲ್ಯೋ ಮದ್ದುಹಿತುರ್ಭರ್ತಾ ಜಗತ್ಯಸ್ಮಿನ್ನ ವಿದ್ಯತೇ ।
ಅಸ್ತಿ ಚೋದಯನೋ ನಾಮ ವಿಪಕ್ಷಃ ಸ ಚ ಮೇ ಸದಾ ॥ ೮
ತತ್ಕಥಂ ನಾಮ ಜಾಮಾತಾ ವಶ್ಯಶ್ಚ ಸ ಭವೇನ್ಮಮ ।
ಉಪಾಯಸ್ತ್ವೇಕ ಏವಾಸ್ತಿ ಯದಟವ್ಯಾಂ ಭ್ರಮತ್ಯಸೌ ॥ ೯
ಏಕಾಕೀ ದ್ವಿರದಾನ್ ಬಧ್ನನ್ ಮೃಗಯಾವ್ಯಸನೀ ನೃಪಃ ।
ತೇನ ಛಿದ್ರೇಣ ತಂ ಯುಕ್ತ್ಯಾ ವಷ್ಟಭ್ಯಾನಾಯಯಾಮ್ಯಹಮ್ ॥ ೧೦
ಗಾಂಧರ್ವಜ್ಞಸ್ಯ ತಸ್ಯೈತಾಂ ಸುತಾಂ ಶಿಷ್ಯೀಕರೋಮಿ ಚ ।
ತತಶ್ಚಾಸ್ಯಾಂ ಸ್ವಯಂ ತಸ್ಯ ಚಕ್ಷುಃ ಸ್ನಿಹ್ಯೇದಸಂಶಯಮ್ ॥ ೧೧

12. ಹೀಗೆ ಅವನು ನನಗೆ ಅಳಿಯನೂ ಅಧೀನನೂ ನಿಶ್ಚಿತವಾಗಿ ಆದಾನು. ಅವನನ್ನು ಅಧೀನನ್ನಾಗಿಸುವುದಕ್ಕೆ ಬೇರೆ ಯಾವ ಉಪಾಯವೂ ಇಲ್ಲ."
13. ಹೀಗೆ ಆಲೋಚಿಸಿ ಅದನ್ನು ಸಾಧಿಸಲು ಅವನು ಚಂಡಿಕಾಲಯಕ್ಕೆ ಹೋಗಿ ಚಂಡಿಯನ್ನು ಪೂಜಿಸಿ ಸ್ತುತಿ ಮಾಡಿ ಆಕೆಗೆ ಹರಕೆಯನ್ನು ಹೊತ್ತನು.
14. "ದೊರೆಯೆ, ನಿನ್ನ ಈ ಆಸೆಯು ಬೇಗನೆ ಈಡೇರುವುದು", ಎಂಬ ಅಶರೀರವಾಣಿಯು ಅಲ್ಲಿ ಅವನಿಗೆ ಕೇಳಿಸಿತು.
15. ಆಗ ಚಂಡಮಹಾಸೇನನು ಸಂತೋಷಪಟ್ಟು ಬುದ್ಧದತ್ತ ಎಂಬ ಮಂತ್ರಿಯೊಡನೆ ಸೇರಿ ಅವನೊಡನೆ ಅದೇ ವಿಷಯವನ್ನು ಕುರಿತು ಸಮಾಲೋಚಿಸಿದನು.
16. "ಉದಯನನು ಅಭಿಮಾನದಿಂದ ಗರ್ವಿತ. ಅವನಿಗೆ ಲೋಭವಿಲ್ಲ. ಅವನನ್ನು ಪ್ರೀತಿಸುವ ಸೇವಕರಿದ್ದಾರೆ, ಹೆಚ್ಚು ಶಕ್ತಿಶಾಲಿ ಕೂಡ. ಆದ್ದರಿಂದ ಅವನು ಸಾಮಾದಿಗಳಿಗೆ (ದಾನ, ಭೇದ, ದಂಡ ಎಂಬ ಉಪಾಯಗಳಿಗೆ) ಬಗ್ಗುವವನಲ್ಲ. ಆದರೂ ಸಾಮದಿಂದ ಪ್ರಯತ್ನಿಸೋಣ."
17. ಹೀಗೆ ಆಲೋಚಿಸಿ ಆ ದೊರೆಯು ಒಬ್ಬ ದೂತನಿಗೆ ಅಪ್ಪಣೆ ಮಾಡಿದನು. 'ಹೋಗು, ವತ್ಸರಾಜನಿಗೆ ಹೇಳಿದೆನೆಂದು ಈ ನುಡಿಗಳನ್ನು ಹೇಳು'
18. "ನನ್ನ ಮಗಳು ಸಂಗೀತದಲ್ಲಿ ನಿನ್ನ ಶಿಷ್ಯೆಯಾಗಲು ಬಯಸಿದ್ದಾಳೆ. ನಿನಗೆ ನಮ್ಮಲ್ಲಿ ಪ್ರೀತಿಯಿದ್ದಲ್ಲಿ ಇಲ್ಲೇ ಬಂದು ಅವಳಿಗೆ ಕಲಿಸು !"

---

ಏವಂ ಸ ಮಮ ಜಾಮಾತಾ ವಶ್ಯಶ್ಚ ನಿಯತಂ ಭವೇತ್ ।
ನಾನ್ಯೋಽಸ್ತ್ಯುಪಾಯಃ ಕೋಽಪ್ಯತ್ರ ಯೇನ ವಶ್ಯೋ ಭವೇಚ್ಚ ಸಃ ॥ ೧೨
ಇತಿ ಸಂಚಿಂತ್ಯ ತತ್ಸಿದ್ಧ್ಯೈ ಸ ಗತ್ವಾ ಚಂಡಿಕಾಗೃಹಮ್ ।
ಚಂಡೀಮಭ್ಯರ್ಚ್ಯ ತುಷ್ಟಾವ ಚಕ್ರೇಽಸ್ಯಾ ಉಪಯಾಚಿತಮ್ ॥ ೧೩
ಏತತ್ ಸಂಪತ್ಸ್ಯತೇ ರಾಜನ್ ಅಚಿರಾದ್ ವಾಂಛಿತಂ ತವ ।
ಇತಿ ಶುಶ್ರಾವ ತತ್ರಾಸಾವಶರೀರಾಂ ಸರಸ್ವತೀಮ್ ॥ ೧೪
ತತಸ್ತುಷ್ಟಃ ಸಮಾಗತ್ಯ ಬುದ್ಧದತ್ತೇನ ಮಂತ್ರಿಣಾ ।
ಸಹ ಚಂಡಮಹಾಸೇನಸ್ತಮೇವಾರ್ಥಮಚಿಂತಯತ್ ॥ ೧೫
ಮಾನೋದ್ಧತೋ ವೀತಲೋಭೋ ರಕ್ತಭೃತ್ಯೋ ಮಹಾಬಲಃ ।
ಅಸಾಧ್ಯೋಽಪಿ ಸ ಸಾಮಾದೇಃ ಸಾಮ್ನಾ ತಾವನ್ನಿರೂಪ್ಯತಾಮ್ ॥ ೧೬
ಇತಿ ಸಂಮಂತ್ರ್ಯ ಸ ನೃಪೋ ದೂತಮೇಕಂ ಸಮಾದಿಶತ್ ।
ಗಚ್ಛ ಮದ್ವಚನಾದ್ ಬ್ರೂಹಿ ವತ್ಸರಾಜಮಿದಂ ವಚಃ ॥ ೧೭
ಮತ್ಪುತ್ರೀ ತವ ಗಾಂಧರ್ವೇ ಶಿಷ್ಯಾ ಭವಿತುಮಿಚ್ಛತಿ ।
ಸ್ನೇಹಸ್ತೇಽಸ್ಮಾಸು ಚೇತ್ತತ್ತ್ವಂ ತಾಮಿಹೈವೈತ್ಯ ಶಿಕ್ಷಯ ॥ ೧೮

19. ಹೀಗೆ ಹೇಳಿ ಅವನು ಕಳುಹಿಸಿದ ದೂತನು ಕೌಶಾಂಬಿಗೆ ಹೋಗಿ ವತ್ಸರಾಜನಿಗೆ ಆ ಸಂದೇಶವನ್ನು ಹಾಗೆಯೇ ನಿವೇದಿಸಿದನು.

20. ದೂತನ ಮೂಲಕ ಆ ಅನುಚಿತವಾದ ಮಾತನ್ನು ಕೇಳಿ ವತ್ಸರಾಜನು ಮಂತ್ರಿ ಯೌಗಂಧರಾಯಣನಿಗೆ ಏಕಾಂತದಲ್ಲಿಂತೆಂದನು.

21. "ಆ ರಾಜನು ದರ್ಪದಿಂದ ನನಗೆ ಏನೀ ಸಂದೇಶವನ್ನಿತ್ತಿದ್ದಾನೆ ? ಇಂಥ ಸಂದೇಶವನ್ನು ಕಳುಹಿಸಿರುವ ಆ ದುರಾತ್ಮನ ಅಭಿಪ್ರಾಯ ಏನಿರಬಹುದು ?"

22. ಹೀಗೆ ವತ್ಸರಾಜನು ಹೇಳಲು ತನ್ನ ದೊರೆಯ ಹಿತದ ಬಗೆಗೆ ನಿಷ್ಠುರನಾಗಿದ್ದ ಮಹಾಮಂತ್ರಿ ಯೌಗಂಧರಾಯಣನು ಹೀಗೆ ಹೇಳಿದನು.

23. "ಮಹಾರಾಜ, ನೀನು ಚಟಗಳಿಗೆ ಈಡಾದವನು ಎಂಬ ಪ್ರಸಿದ್ಧಿ ಭೂಲೋಕದಲ್ಲಿ ಬಳ್ಳಿಯಂತೆ ಹಬ್ಬಿದೆಯಲ್ಲ, ಇದು ಅದರ ಕಷಾಯದಂತೆ ಕಹಿಯಾದ ಫಲ.

24. ನೀನು (ಹೆಣ್ಣಿನಲ್ಲಿ) ಆಸಕ್ತ ಎಂದು ತಿಳಿದು ಕನ್ಯಾರತ್ನದಿಂದ ಪ್ರಲೋಭನೆಯನ್ನೊಡ್ಡಿ ನಿನ್ನನ್ನು ಕಟ್ಟಿ ಒಯ್ದು ತನ್ನವನನ್ನಾಗಿ ಮಾಡಿಕೊಳ್ಳಲು ಚಂಡಮಹಾಸೇನನು ಬಯಸಿದ್ದಾನೆ

25. ಆದ್ದರಿಂದ ನೀನು ಚಟಗಳನ್ನು ಬಿಟ್ಟುಬಿಡು. ಅವುಗಳಲ್ಲಿ ಮುಳುಗಿದ ದೊರೆಗಳನ್ನು ಹಳ್ಳಗಳಲ್ಲಿ ಬಿದ್ದ ಕಾಡಾನೆಗಳನ್ನು ಹಿಡಿಯುವಂತೆ ಸುಲಭವಾಗಿ ಶತ್ರುಗಳು ಹಿಡಿದುಹಾಕುತ್ತಾರೆ."

---

ಇತ್ಯುಕ್ತ್ವಾ ಪ್ರೇಷಿತಸ್ತೇನ ದೂತೋ ಗತ್ವಾ ನ್ಯವೇದಯತ್ ।
ಕೌಶಾಂಬ್ಯಾಂ ವತ್ಸರಾಜಾಯ ಸಂದೇಶಂ ತಂ ತಥೈವ ಸಃ ॥ ೧೯
ವತ್ಸರಾಜೋಽಪಿ ತಚ್ಛ್ರುತ್ವಾ ದೂತಾದನುಚಿತಂ ವಚಃ ।
ಯೌಗಂಧರಾಯಣಸ್ಯೇದಮೇಕಾಂತೇ ಮಂತ್ರಿಣೋಽಬ್ರವೀತ್ ॥ ೨೦
ಕಿಮೇತತ್ತೇನ ಸಂದಿಷ್ಟಂ ಸದರ್ಪಂ ಮಮ ಭೂಭುಜಾ ।
ಏವಂ ಸಂದಿಶತಸ್ತಸ್ಯ ಕೋಽಭಿಪ್ರಾಯೋ ದುರಾತ್ಮನಃ ॥ ೨೧
ಇತ್ಯುಕ್ತೋ ವತ್ಸರಾಜೇನ ತದಾ ಯೌಗಂಧರಾಯಣಃ ।
ಉವಾಚೈನಂ ಮಹಾಮಂತ್ರೀ ಸ ಸ್ವಾಮಿಹಿತನಿಷ್ಠುರಃ ॥ ೨೨
ಭುವಿ ವ್ಯಸನಿತಾಖ್ಯಾತಿಃ ಪ್ರರೂಢಾ ತೇ ಲತೇವ ಯಾ ।
ಇದಂ ತಸ್ಯಾ ಮಹಾರಾಜ ಕಷಾಯಕಟುಕಂ ಫಲಮ್ ॥ ೨೩
ಸ ಹಿ ತ್ವಾಂ ರಾಗಿಣಂ ಮತ್ವಾ ಕನ್ಯಾರತ್ನೇನ ಲೋಭಯನ್ ।
ನೀತ್ವಾ ಚಂಡಮಹಾಸೇನೋ ಬದ್ಧ್ವಾ ಸ್ವೀಕರ್ತುಮಿಚ್ಛತಿ ॥ ೨೪
ತನ್ಮುಂಚ ವ್ಯಸನಾನಿ ತ್ವಂ ಸುಖೇನ ಹಿ ಪರೈರ್ನೃಪಾಃ ।
ಸೀದಂತಸ್ತೇಷು ಗೃಹ್ಯಂತೇ ಖಾತೇಷ್ವಿವ ವನದ್ವಿಪಾಃ ॥ ೨೫

26. ಹೀಗೆ ಮಂತ್ರಿಯು ಹೇಳಿದಾಗ ಧೀರ ವತ್ಸರಾಜನು ಚಂಡಮಹಾಸೇನ ಮಹಾರಾಜನಿಗೆ ಪ್ರತಿದೂತನನ್ನು ಕಳುಹಿಸಿದನು.

27. (ಅವನೊಂದಿಗೆ) ಈ ಸಂದೇಶವನ್ನು ನೀಡಿದನು. "ತಮ್ಮ ಮಗಳಿಗೆ ನನ್ನ ಶಿಷ್ಯೆಯಾಗುವ ಅಪೇಕ್ಷೆಯಿದ್ದರೆ ತಾವು ಅವಳನ್ನೇ ಇಲ್ಲಿಗೆ ಕಳುಹಿಸೋಣ ವಾಗಲಿ."

28. ಹೀಗೆ ಮಾಡಿದ ಮೇಲೆ ವತ್ಸರಾಜನು ಮಂತ್ರಿಗಳಿಗೆ 'ನಾನೇ ಹೋಗಿ ಆ ಚಂಡಮಹಾಸೇನನ್ನು ಕಟ್ಟಿಹಾಕಿ ಇಲ್ಲಿಗೆ ತರುತ್ತೇನೆ' ಎಂದು ಹೇಳಿದನು.

29. ಅದನ್ನು ಕೇಳಿ ಮುಖ್ಯಮಂತ್ರಿ ಯೌಗಂಧರಾಯಣನು ಅವನಿಗೆ ಇಂತೆಂದನು. ರಾಜನ್, ಇದನ್ನು ಮಾಡುವುದು ಶಕ್ಯವಲ್ಲ, ಸರಿಯೂ ಅಲ್ಲ.

30. ಪ್ರಭು, ಅವನು ಪ್ರಭಾವಶಾಲಿಯಾದ ರಾಜ. ನೀನು ಅವನನ್ನು ತನ್ನವನೆಂದು ತಿಳಿಯಲು ಯೋಗ್ಯನು. ಅವನ ಬಗೆಗೆ ಎಲ್ಲವನ್ನೂ ಹೇಳುವೆನು, ಕೇಳು.

## ಪ್ರದ್ಯೋತ ಮಹಾರಾಜನ ಕಥೆ

31. ಭೂಮಿಗೆ ಒಡವೆಯಾಗಿರುವ ಉಜ್ಜಯಿನೀ ಎಂಬ ನಗರವಿದೆ. ಬಿಳಿಯ ಬಣ್ಣ ಬಳಿದಿರುವ ಅರಮನೆಗಳಿಂದ ಅದು ಅಮರಾವತಿಯನ್ನೇ ನೋಡಿ ನಗುತ್ತಿರುವಂತಿದೆ.

---

ಇತ್ಯುಕ್ತೋ ಮಂತ್ರಿಣಾ ಧೀರಃ ಪ್ರತಿದೂತಂ ವ್ಯಸರ್ಜಯತ್ ।
ಸ ವತ್ಸರಾಜಸ್ತಂ ಚಂಡಮಹಾಸೇನನೃಪಂ ಪ್ರತಿ ॥ ೨೬
ಸಂದಿದೇಶ ಚ ಯದ್ಯಸ್ತಿ ವಾಂಛಾ ಮಚ್ಛಿಷ್ಯತಾಂ ಪ್ರತಿ ।
ತ್ವತ್ಪುತ್ರ್ಯಾಸ್ತದಿಹೈವೈಷಾ ಭವತಾ ಪ್ರೇಷ್ಯತಾಮಿತಿ ॥ ೨೭
ಏವಂ ಕೃತ್ವಾ ಚ ಸಚಿವಾನ್ ವತ್ಸರಾಜೋ ಜಗಾದ ಸಃ ।
ಯಾಮಿ ಚಂಡಮಹಾಸೇನಮಿಹ ಬದ್ಧ್ವಾನಯಾಮಿ ತಮ್ ॥ ೨೮
ತಚ್ಛ್ರುತ್ವಾ ತಮುವಾಚಾಗ್ರ್ಯೋ ಮಂತ್ರೀ ಯೌಗಂಧರಾಯಣಃ ।
ನ ಚೈತಚ್ಛಕ್ಯತೇ ರಾಜನ್ ಕರ್ತುಂ ನೈವ ಚ ಯುಜ್ಯತೇ ॥ ೨೯
ಸ ಹಿ ಪ್ರಭಾವವಾನ್ ರಾಜಾ ಸ್ವೀಕಾರ್ಯಶ್ಚ ತವ ಪ್ರಭೋ ।
ತಥಾ ಚ ತದ್ಗತಂ ಸರ್ವಂ ಶೃಣ್ವಿದಂ ಕಥಯಾಮಿ ತೇ ॥ ೩೦
ಅಸ್ತೀಹೋಜ್ಜಯಿನೀ ನಾಮ ನಗರೀ ಭೂಷಣಂ ಭುವಃ ।
ಹಸಂತೀವ ಸುಧಾಧೌತೈಃ ಪ್ರಾಸಾದೈರಮರಾವತೀಮ್ ॥ ೩೧

32. ಜಗತ್ತಿನ ಒಡೆಯ ಶಿವನು ಕೈಲಾಸದ ವಾಸದಲ್ಲಿ ಆಸಕ್ತಿಯನ್ನು ಸಡಿಲಿಸಿ ತಾನೇ ಮಹಾಕಾಲನ ರೂಪದಿಂದ ಆ ನಗರದಲ್ಲಿ ವಾಸ ಮಾಡುತ್ತಿದ್ದಾನೆ.
33. ರಾಜರಲ್ಲೆಲ್ಲ ಶ್ರೇಷ್ಠನಾಗಿದ್ದ ಮಹೇಂದ್ರವರ್ಮನೆಂಬುವನು ಅಲ್ಲಿ ರಾಜನಾಗಿದ್ದನು. ಅವನಿಗೆ ಅನುರೂಪನಾಗಿದ್ದ ಜಯಸೇನ ಎಂಬ ಮಗನಿದ್ದನು.
34. ಆ ಜಯಸೇನನಿಗೆ ಅಪ್ರತಿಮ ತೋಳ್ಬಲದಿಂದ ಕೂಡಿದ ಮಹಾಸೇನನೆಂಬ ರಾಜಶ್ರೇಷ್ಠನು (ಮಗನಾಗಿ) ಹುಟ್ಟಿದನು.
35. ಅವನು ತನ್ನ ರಾಜ್ಯವನ್ನು ಆಳುತ್ತಿದ್ದಾಗ 'ನನಗೆ ಹೊಂದುವ ಖಡ್ಗವೂ ಇಲ್ಲ, ಒಳ್ಳೆಯ ವಂಶದಲ್ಲಿ ಹುಟ್ಟಿದ ಹೆಂಡತಿಯೂ ಇಲ್ಲ' ಎಂದು ಚಿಂತಿಸುತ್ತಿದ್ದನು.
36. ಹೀಗೆ ಚಿಂತಿಸಿ ಆ ರಾಜನು ಚಂಡಿಕೆಯ ದೇವಾಲಯಕ್ಕೆ ಹೋಗಿ ಅಲ್ಲಿ ನಿರಾಹಾರನಾಗಿ ಬಹುಕಾಲ ದೇವಿಯನ್ನು ಆರಾಧಿಸಿದನು.
37. ತನ್ನ ಮಾಂಸಖಂಡಗಳನ್ನೇ ಕತ್ತರಿಸಿ ಹೋಮಕಾರ್ಯವನ್ನು ಮಾಡಿದನು. ಆಗ ಪ್ರಸನ್ನಳಾದ ದೇವಿ ಚಂಡಿಯು ಪ್ರತ್ಯಕ್ಷಳಾಗಿ ಅವನಿಗಿಂತೆಂದಳು.
38. "ಮಗನೇ, ನಿನ್ನಲ್ಲಿ ನನಗೆ ಪ್ರೀತಿಯುಂಟಾಗಿದೆ. ನನ್ನ ಈ ಶ್ರೇಷ್ಠ ಖಡ್ಗವನ್ನು ತೆಗೆದುಕೋ. ಇದರ ಪ್ರಭಾವದಿಂದ ನೀನು ಶತ್ರುಗಳಿಗೆ ಅಜೇಯನಾಗುವೆ.

---

ಯಸ್ಯಾಂ ವಸತಿ ವಿಶ್ವೇಶೋ ಮಹಾಕಾಲವಪುಃ ಸ್ವಯಮ್ ।
ಶಿಥಿಲೀಕೃತಕೈಲಾಸನಿವಾಸವ್ಯಸನೋ ಹರಃ ॥ ೩೨
ತಸ್ಯಾಂ ಮಹೇಂದ್ರವರ್ಮಾಖ್ಯೋ ರಾಜಾಭೂದ್ ಭೂಭೃತಾಂ ವರಃ ।
ಜಯಸೇನಾಭಿಧಾನೋಽಸ್ಯ ಬಭೂವ ಸದೃಶಃ ಸುತಃ ॥ ೩೩
ಜಯಸೇನಸ್ಯ ತಸ್ಯಾಥ ಪುತ್ರೋಽಪ್ರತಿಮದೋರ್ಬಲಃ ।
ಸಮುತ್ಪನ್ನೋ ಮಹಾಸೇನನಾಮಾ ನೃಪತಿಕುಂಜರಃ ॥ ೩೪
ಸೋಽಥ ರಾಜಾ ಸ್ವರಾಜ್ಯಂ ತತ್ ಪಾಲಯನ್ ಸಮಚಿಂತಯತ್ ।
ನ ಮೇ ಖಡ್ಗೋಽನುರೂಪೋಽಸ್ತಿ ನ ಚ ಭಾರ್ಯಾ ಕುಲೋದ್ಗತಾ ॥ ೩೫
ಇತಿ ಸಂಚಿಂತ್ಯ ಸ ನೃಪಶ್ಚಂಡಿಕಾಗೃಹಮಾಗಮತ್ ।
ತತ್ರಾತಿಷ್ಠನ್ನಿರಾಹಾರೋ ದೇವೀಮಾರಾಧಯಂಶ್ಚಿರಮ್ ॥ ೩೬
ಉತ್ಕೃತ್ಯಾಥ ಸ್ವಮಾಂಸಾನಿ ಹೋಮಕರ್ಮ ಸ ಚಾಕರೋತ್ ।
ತತಃ ಪ್ರಸನ್ನಾ ಸಾಕ್ಷಾತ್ ಸಾ ದೇವೀ ಚಂಡೀ ತಮಭ್ಯಧಾತ್ ॥ ೩೭
ಪ್ರೀತಾಸ್ಮಿ ತೇ ಗೃಹಾಣೇಮಂ ಪುತ್ರ ಖಡ್ಗೋತ್ತಮಂ ಮಮ ।
ಏತತ್ ಪ್ರಭಾವಾಚ್ಛತ್ರೂಣಾಮಜೇಯಸ್ತ್ವಂ ಭವಿಷ್ಯಸಿ ॥ ೩೮

39. ಅಂಗಾರಕಾಸುರನ ಮಗಳೂ ತ್ರಿಲೋಕಸುಂದರಿಯೂ ಆದ ಅಂಗಾರವತಿಯೆಂಬ ಕನ್ಯೆಯನ್ನು ಬೇಗನೆ ಭಾರ್ಯೆಯನ್ನಾಗಿ ಪಡೆಯುವೆ.

40. ಮತ್ತೆ ನೀನಿಲ್ಲಿ ಅತ್ಯಂತ ಚಂಡ (ಭಯಾನಕ) ಕಾರ್ಯವನ್ನು ಮಾಡಿರುವುದರಿಂದ ನಿನಗೆ 'ಚಂಡಮಹಾಸೇನ' ಎಂಬ ಹೆಸರು ಬರುವುದು.”

41. ಹೀಗೆ ಹೇಳಿ ದೇವಿಯು ಅವನಿಗೆ ಖಡ್ಗವನ್ನು ಕೊಟ್ಟು ಅದೃಶ್ಯಳಾದಳು. ರಾಜನಿಗೆ ತನ್ನ ಸಂಕಲ್ಪವು ಈಡೇರಿತೆಂದು ಸಂತೋಷವುಂಟಾಯಿತು.

42. ಪ್ರಭು, ಇಂದ್ರನಿಗೆ ವಜ್ರಾಯುಧ ಮತ್ತು ಐರಾವತಗಳು ಹೇಗೋ ಹಾಗೆ ಆ ಮಹಾಸೇನನಿಗೆ ಆ ಖಡ್ಗವೂ ನಡಾಗಿರಿ ಎಂಬ ಮದಿಸಿದ ಆನೆಯೂ ಎರಡು ರತ್ನಗಳಾಗಿವೆ.

43. ಅವೆರಡರ ಪ್ರಭಾವದಿಂದ ಸುಖವಾಗಿದ್ದ ಆ ಚಂಡಮಹಾಸೇನ ಭೂಪಾಲನು ಒಮ್ಮೆ ಬೇಟೆಗಾಗಿ ದೊಡ್ಡ ಕಾಡಿಗೆ ಹೋದನು.

44. ಅಲ್ಲಿ ಅವನು ಅತಿ ದೊಡ್ಡ ಪ್ರಮಾಣದ ಒಂದು ಘೋರ ಕಾಡುಹಂದಿಯನ್ನು ಕಂಡನು. ಅದು ಅಕಸ್ಮಾತ್ತಾಗಿ ಹಗಲಿನಲ್ಲಿ ಕತ್ತಲೆಯು ಉಂಡೆಯ ರೂಪವನ್ನು ಪಡೆದು ಬಂದಂತಿತ್ತು.

---

ಕಿಂ ಚಾಂಗಾರವತೀಂ ನಾಮ ಕನ್ಯಾಂ ತ್ರೈಲೋಕ್ಯಸುಂದರೀಮ್ ।
ಅಂಗಾರಕಾಸುರಸುತಾಂ ಶೀಘ್ರಂ ಭಾರ್ಯಾಮವಾಪ್ಸ್ಯಸಿ ॥ ೩೯
ಅತೀವ ಚಂಡಂ ಕರ್ಮೇಹ ಕೃತಂ ಚೈತದ್ ಯತಸ್ತ್ವಯಾ ।
ಅತಶ್ಚಂಡಮಹಾಸೇನ ಇತ್ಯಾಖ್ಯಾ ತೇ ಭವಿಷ್ಯತಿ॥ ೪೦
ಇತ್ಯುಕ್ತ್ವಾ ದತ್ತಖಡ್ಗಾ ಸಾ ದೇವೀ ತಸ್ಯ ತಿರೋಽಭವತ್ ।
ರಾಜ್ಞಃ ಸಂಕಲ್ಪಸಂಪತ್ತಿಹೃಷ್ಟಿರಾವಿರಭೂತ್ ಪುನಃ ॥ ೪೧
ಸ ಖಡ್ಗೋ ಮತ್ತಹಸ್ತೀಂದ್ರೋ ನಡಾಗಿರಿರಿತಿ ಪ್ರಭೋ ।
ದ್ವೇ ತಸ್ಯ ರತ್ನೇ ಶಕ್ರಸ್ಯ ಕುಲಿಶೈರಾವಣಾವಿವ ॥ ೪೨
ತಯೋಃ ಪ್ರಭಾವಾತ್ ಸುಖಿತಃ ಕದಾಚಿತ್ ಸೋಽಥ ಭೂಪತಿಃ ।
ಅಗಾಚ್ಚಂಡಮಹಾಸೇನೋ ಮೃಗಯಾಯೈ ಮಹಾಟವೀಮ್ ॥ ೪೩
ಅತಿಪ್ರಮಾಣಂ ತತ್ರೈಕಂ ವರಾಹಂ ಘೋರಮೈಕ್ಷತ ।
ನೈಶಂ ತಮ ಇವಾಕಾಂಡೇ ದಿವಾ ಪಿಂಡತ್ವಮಾಗತಮ್॥ ೪೪

45. ಆ ಕಾಡುಹಂದಿಗೆ ರಾಜನ ಚೂಪಾದ ಬಾಣಗಳಿಂದಲೂ ಯಾವ ಗಾಯವೂ ಆಗಲಿಲ್ಲ. ಅವನ ರಥವನ್ನೇ ಮುರಿದುಹಾಕಿ ಓಡಿ ಹೋಗಿ ಅದು ಬಿಲವನ್ನು ಹೊಕ್ಕಿತು.

46. ಕೋಪದಿಂದ ರಾಜನು ರಥವನ್ನು ಬಿಟ್ಟು ಆ ಕಾಡುಹಂದಿಯನ್ನು ಹಿಂಬಾಲಿಸಿ ಕೇವಲ ಧನುಸ್ಸನ್ನೇ ಸಹಾಯವಾಗಿಟ್ಟುಕೊಂಡು ಬಿಲದೊಳಕ್ಕೆ ನುಗ್ಗಿದನು.

47. ಒಳಗೆ ದೂರ ಹೋಗಿ ಅವನು ಸೊಗಸಾದ ದೊಡ್ಡ ಶ್ರೇಷ್ಠ ಪಟ್ಟಣವನ್ನು ಕಂಡನು. ಅದರೊಳಗಿದ್ದ ಕೊಳದ ದಡದಲ್ಲಿ ಆಶ್ಚರ್ಯಪಡುತ್ತಾ ಕುಳಿತುಕೊಂಡನು.

48. ಅಲ್ಲಿರುವಾಗ (ಎಲ್ಲರ) ಸ್ಥೈರ್ಯವನ್ನು ಕೊಡಿಸುವ ಬಾಣವೋ ಎಂಬಂತಿದ್ದ ನೂರಾರು ಹೆಂಗಳೆಯರಿಂದ ಸುತ್ತುವರಿಯಲ್ಪಟ್ಟಿದ್ದ ಕನ್ಯೆಯೊಬ್ಬಳು ಅಲ್ಲಿ ಸಂಚರಿಸುತ್ತಿದ್ದುದನ್ನು ನೋಡಿದನು.

49. ಅವಳೂ ಒಲವಿನ ರಸಧಾರೆಯನ್ನು ಸುರಿಸುತ್ತಿದ್ದ ಕಣ್ಣುಗಳಿಂದ ರಾಜನನ್ನು ನೆನೆಸುವಂತೆ ಮತ್ತೆ ಮತ್ತೆ ನೋಡುತ್ತಾ ಅವನನ್ನು ಸಮೀಪಿಸಿದಳು.

50. ""ಚೆಲುವನೆ, ನೀನು ಯಾರು ? ಯಾವ ಕಾರಣದಿಂದ ಇಲ್ಲಿ ಪ್ರವೇಶಿಸಿದೆ ?" ಎಂದು ಅವಳು ಕೇಳಲು ರಾಜನು ನಡೆದುದೆಲ್ಲವನ್ನೂ ಬಣ್ಣಿಸಿದನು.

51. ಅದನ್ನು ಕೇಳಿ ಅವಳು ಪ್ರೇಮಪೂರ್ಣವಾದ ಕಣ್ಣುಗಳಿಂದ ಕಂಬನಿಗಳ ಧಾರೆಯನ್ನೂ ಹೃದಯದಿಂದ ಅಧೈರ್ಯವನ್ನೂ ಒಟ್ಟಿಗೆ ಬಿಟ್ಟಳು.

---

ಸವರಾಹಃ ಶರೈರಸ್ಯ ತೀಕ್ಷ್ಣೈರಪ್ಯಕೃತವ್ರಣಃ ।
ಆಹತ್ಯ ಸ್ಯಂದನಂ ರಾಜ್ಞಃ ಪಲಾಯ್ಯ ಬಿಲಮಾವಿಶತ್ ॥ ೪೫

ರಾಜಾಪಿ ರಥಮುತ್ಸೃಜ್ಯ ತಮೇವಾನುಸರನ್ ಕ್ರುಧಾ ।
ಧನುರ್ದ್ವಿತೀಯಸ್ತತ್ರೈವ ಪ್ರಾವಿಶತ್ ಸ ಬಿಲಾಂತರಮ್ ॥ ೪೬

ದೂರಂ ಪ್ರವಿಶ್ಯ ಚಾಪಶ್ಯತ್ ಕಾಂತಂ ಪುರವರಂ ಮಹತ್ ।
ಸವಿಸ್ಮಯೋ ನ್ಯಷೀದಚ್ಚ ತದಂತರ್ದೀರ್ಘಿಕಾತಟೇ ॥ ೪೭

ತತ್ರಸ್ಥಃ ಕನ್ಯಕಾಮೇಕಾಮಪಶ್ಯತ್ ಸ್ತ್ರೀಶತಾನ್ವಿತಾಮ್ ।
ಸಂಚರಂತೀಂ ಸ್ಮರಸ್ಯೇವ ಧೈರ್ಯನಿರ್ಭೇದಿನೀಮಿಷುಮ್ ॥ ೪೮

ಸಾಪಿ ಪ್ರೇಮರಸಾಸಾರವರ್ಷಿಣಾ ಚಕ್ಷುಷಾ ಮುಹುಃ ।
ಸ್ನಪಯಂತೀವ ರಾಜಾನಂ ಶನಕೈಸ್ತಮುಪಾಗಮತ್ ॥ ೪೯

ಕಸ್ತ್ವಂ ಸುಭಗ ಕಸ್ಮಾಚ್ಚ ಪ್ರವಿಷ್ಟೋऽಸೀಹ ಸಾಂಪ್ರತಮ್ ।
ಇತ್ಯುಕ್ತಃ ಸ ತಯಾ ರಾಜಾ ಯಥಾತತ್ತ್ವಮವರ್ಣಯತ್ ॥ ೫೦

ತಚ್ಛ್ರುತ್ವಾ ನೇತ್ರಯುಗಲಾತ್ ಸರಾಗಾದಶ್ರುಸಂತತಿಮ್ ।
ಹೃದಯಾದಧೀರತಾಂ ಚಾಪಿ ಸಮಂ ಕನ್ಯಾ ಮುಮೋಚ ಸಾ ॥ ೫೧

52. "ನೀನು ಯಾರು ? ಏಕೆ ಅಳುತ್ತಿರುವೆ ?' ಎಂದು ಆ ರಾಜನು ಕೇಳಲು ಅವಳು ಕಾಮನ ಆದೇಶವನ್ನು ಪರಿಪಾಲಿಸುವವಳಾಗಿ ಇಂತೆಂದಳು.

53. "ಇಲ್ಲಿ ಒಳಗೆ ಪ್ರವೇಶಿಸಿದ ಕಾಡುಹಂದಿಯೇ ಅಂಗಾರಕನೆಂಬ ಅಸುರನು. ದೊರೆ, ನಾನು ಅವನ ಮಗಳು ಅಂಗಾರವತಿ.

54. ಅವನು ವಜ್ರಸಾರಮಯ (ಅವನ ಶರೀರ ವಜ್ರದಂತೆ ಗಟ್ಟಿಯಾಗಿದೆ). ಈ ನೂರು ಜನ ರಾಜಪುತ್ರಿಯರನ್ನು ರಾಜರ ಮನೆಗಳಿಂದ ಎಳೆದುತಂದು ನನ್ನ ಪರಿವಾರವನ್ನಾಗಿ ಮಾಡಿದ್ದಾನೆ

55. ಈ ಮಹಾಸುರನು ಶಾಪದ ಕಾರಣದಿಂದ ರಾಕ್ಷಸನಾಗಿದ್ದಾನೆ. ಇಂದು ಬಾಯಾರಿಕೆಯಿಂದ ಬಳಲಿದ್ದುದರಿಂದ ನೀನು (ಕೈಗೆ) ಸಿಕ್ಕಿದರೂ ನಿನ್ನನ್ನು ಬಿಟ್ಟುಬಿಟ್ಟಿದ್ದಾನೆ

56. ಈಗ ಕಾಡುಹಂದಿಯ ರೂಪವನ್ನು ತಾನೇ ತ್ಯಜಿಸಿ ದಣಿವನ್ನು ಆರಿಸಿಕೊಳ್ಳುತ್ತಿದ್ದಾನೆ. ಮಲಗಿ ಎದ್ದಮೇಲೆ ನಿಶ್ಚಿತವಾಗಿ ನಿನ್ನ ಮೇಲೆ ಪಾಪಕಾರ್ಯವನ್ನು ಆಚರಿಸುವನು.

57. ಹೀಗೆ ನಿನಗೆ ಒಳ್ಳೆಯದನ್ನು ಕಾಣಲಾಗದ ನನ್ನ (ಕಣ್ಣುಗಳಿಂದ) ಕಂಬನಿಗಳು ದುಃಖದಿಂದ ಪ್ರೇರಿತವಾದ ನನ್ನ ಪ್ರಾಣಗಳಂತೆ ಕೆಳಗೆ ಸುರಿಯುತ್ತಿವೆ."

---

ಕಾ ತ್ವಂ ರೋದಿಷಿ ಕಸ್ಮಾಚ್ಚ ಪೃಷ್ಟಾ ತೇನೇತಿ ಭೂಭೃತಾ ।
ಸಾ ತಂ ಪ್ರತ್ಯಬ್ರವೀದೇವಂ ಮನ್ಮಥಾಜ್ಞಾನುವರ್ತಿನೀ ॥ ೫೨
ಯೋ ವರಾಹಃ ಪ್ರವಿಷ್ಟೋಽತ್ರ ಸ ದೈತ್ಯೋಽಂಗಾರಕಾಭಿಧಃ ।
ಅಹಂ ಚೈತಸ್ಯ ತನಯಾ ನಾಮ್ನಾಂಗಾರವತೀ ನೃಪ ॥ ೫೩
ವಜ್ರಸಾರಮಯಶ್ಚಾಸೌ ರಾಜಪುತ್ರೀರಿಮಾಃ ಶತಮ್ ।
ಆಚ್ಛಿದ್ಯ ರಾಜ್ಞಾಂ ಗೇಹೇಭ್ಯಃ ಪರಿವಾರಂ ವ್ಯಧಾನ್ಮಮ ॥ ೫೪
ಕಿಂ ಚೈಷ ರಾಕ್ಷಸೀಭೂತಃ ಶಾಪದೋಷಾನ್ಮಹಾಸುರಃ ।
ತೃಷ್ಣಾಶ್ರಮಾರ್ತಶ್ಚಾದ್ಯ ತ್ವಾಂ ಪ್ರಾಪ್ಯಾಪಿ ತ್ಯಕ್ತವಾನಯಮ್ ॥ ೫೫
ಇದಾನೀಂ ಚಾಸ್ತವಾರಾಹರೂಪೋ ವಿಶ್ರಾಮ್ಯತಿ ಸ್ವಯಮ್ ।
ಸುಪ್ತೋತ್ಥಿತಶ್ಚ ನಿಯತಂ ತ್ವಯಿ ಪಾಪಂ ಸಮಾಚರೇತ್ ॥ ೫೬
ಇತಿ ಮೇ ತವ ಕಲ್ಯಾಣಮಪಶ್ಯಂತ್ಯಾ ಗಲಂತ್ಯಮೀ ।
ಸಂತಾಪಕಥಿತಾಃ ಪ್ರಾಣಾ ಇವ ಬಾಷ್ಪಾಂಬುಬಿಂದವಃ ॥ ೫೭

58. ಅಂಗಾರವತಿಯ ಈ ಮಾತನ್ನು ಕೇಳಿ ಅವಳಿಗೆ ಹೇಳಿದನು. "ನಿನಗೆ ನನ್ನಲ್ಲಿ ಒಲವು ಇರುವುದಾದರೆ ನನ್ನ ಈ ಮಾತನ್ನು ನಡೆಸಿಕೊಡು.

59. ನಿನ್ನ ತಂದೆ ಎಚ್ಚತ್ತುಗೊಂಡ ಅನಂತರ ನೀನು ಹೋಗಿ ಅವನ ಎದುರಿನಲ್ಲಿ ಅಳು. ಆಗ ಖಂಡಿತವಾಗಿ ಅವನು ನಿನ್ನ ಉಮ್ಮಳದ ಕಾರಣವನ್ನು ಕೇಳುವನು.

60. ಆಗ ನೀನು ಅವನಿಗೆ ‘ನಿನ್ನನ್ನು ಯಾರಾದರೂ ಕೊಂದುಹಾಕಿದರೆ ನನ್ನ ಗತಿ ಏನಾಗುವುದೋ ಎಂಬುದೇ ನನ್ನ ಅಳುವಿಗೆ ಕಾರಣ’ ಎಂದು ಹೇಳಬೇಕು.

61. ಹೀಗೆ ಮಾಡಿದರೆ ನಿನಗೂ ನನಗೂ ಒಳ್ಳೆಯದಾಗುವುದು ”ಎಂದ ಮಹಾಸೇನನು ಹೇಳಿದುದನ್ನು ಕೇಳಿ ಹಾಗೆಯೇ ಆಗಲಿ ಎಂದು ಅವಳು ಒಪ್ಪಿಕೊಂಡಳು.

62. ರಾಜನಿಗೇನಾದರೂ ಅಪಾಯವಾಗಬಹುದು ಎಂದು ಸಂಶಯಪಟ್ಟು ಅವನನ್ನು ಗುಟ್ಟಾಗಿ ಅವಿಸಿಟ್ಟು ಆ ಅಸುರಕುವರಿಯು ಮಲಗಿದ್ದ ತನ್ನ ತಂದೆಯ ಬಳಿಗೆ ಹೋದಳು.

63. ಆ ದೈತ್ಯನು ಎಚ್ಚತ್ತುಗೊಂಡ ಕೂಡಲೇ ಅವಳು ಅಳಲಾರಂಭಿಸಿದಳು. ಅವನು ‘ಮಗಳೆ, ಏಕೆ ಅಳುತ್ತಿದ್ದೀಯೆ ?’ ಎಂದು ಅವಳನ್ನು ಕೇಳಿದನು.

64. ‘ಅಪ್ಪ, ಯಾರಾದರೂ ನಿನ್ನನ್ನು ಕೊಂದುಹಾಕಿದರೆ ನನ್ನ ಗತಿ ಏನಾದೀತು’ ಎಂದು ಅವಳು ಶೋಕದಿಂದ ಹೇಳಿದಳು. ಅವನು ಗಟ್ಟಿಯಾಗಿ ನಕ್ಕು ಇಂತೆಂದನು.

---

ಇತ್ಯಂಗಾರವತೀವಾಕ್ಯಂ ಶ್ರುತ್ವಾ ರಾಜಾ ಜಗಾದ ತಾಮ್ ।
ಯದಿ ಮಯ್ಯಸ್ತಿ ತೇ ಸ್ನೇಹಸ್ತದಿದಂ ಮದ್ವಚಃ ಕುರು ॥ ೫೮
ಪ್ರಬುದ್ಧಸ್ಯಾಸ್ಯ ಗತ್ವಾ ತ್ವಂ ರುದಿಹಿ ಸ್ವಪಿತುಃ ಪುರಃ ।
ತತಶ್ಚ ನಿಯತಂ ಸ ತ್ವಾಂ ಪೃಚ್ಛೇದುದ್ವೇಗಕಾರಣಮ್ ॥ ೫೯
ತ್ವಾಂ ಚೇನ್ನಿಪಾತಯೇತ್ ಕಶ್ಚಿತ್ ತತೋ ಮೇ ಕಾ ಗತಿರ್ಭವೇತ್ ।
ಏತದ್ದುಃಖಂ ಮಮೇತ್ಯೇವಂ ಸ ಚ ವಾಚ್ಯಸ್ತ್ವಯಾ ತತಃ ॥ ೬೦
ಏವಂ ಕೃತೇಽಸ್ತಿ ಕಲ್ಯಾಣಂ ತವಾಪಿ ಚ ಮಮಾಪಿ ಚ ।
ಇತ್ಯುಕ್ತಾ ತೇನ ಸಾ ರಾಜ್ಞಾ ತಥೇತ್ಯಂಗೀಚಕಾರ ತಮ್ ॥ ೬೧
ತಂ ಚ ಛನ್ನಮವಸ್ಥಾಪ್ಯ ರಾಜಾನಂ ಪಾಪಶಂಕಿನೀ ।
ಅಗಾದಸುರಕನ್ಯಾ ಸಾ ಪ್ರಸುಪ್ತಸ್ಯಾಂತಿಕಂ ಪಿತುಃ ॥ ೬೨
ಸೋಽಪಿ ದೈತ್ಯಃ ಪ್ರಬುಬುಧೇ ಪ್ರಾರೇಭೇ ಸಾ ಚ ರೋದಿತುಮ್ ।
ಕಿಂ ಪುತ್ರಿ ರೋದಿಷೀತ್ಯೇವಂ ಸ ಚ ತಾಮಬ್ರವೀತ್ತತಃ ॥ ೬೩
ಹನ್ಯಾತ್ ತ್ವಾಂ ಕೋಽಪಿ ಚೇತ್ತಾತ ತದಾ ಮೇ ಕಾ ಗತಿರ್ಭವೇತ್ ।
ಇತ್ಯಾರ್ತ್ಯಾ ತಮುವಾದೀತ್ಸಾ ಸ ವಿಹಸ್ಯ ತತೋಽಬ್ರವೀತ್ ॥ ೬೪

65. "ಮಗಳೆ, ನನ್ನನ್ನು ಯಾರು ಕೊಂದಾರು ? ನಾನು ಪೂರ್ಣವಾಗಿ ವಜ್ರಕಾಯನು. ನನ್ನ ದುರ್ಬಲ ಸ್ಥಾನವು ಎಡಗೈಯಲ್ಲಿದೆ. ಅದನ್ನು ಧನುಸ್ಸು (ಮುಚ್ಚಿ) ಕಾಪಾಡುತ್ತದೆ."

66. ಹೀಗೆ ಆ ದೈತ್ಯನು ತನ್ನ ಮಗಳಿಗೆ ಭರವಸೆಯನ್ನು ನೀಡಿದನು. ಇದೆಲ್ಲವನ್ನೂ ಅಲ್ಲೇ ಅವಿತುಕೊಂಡಿದ್ದ ಅರಸನು ಕೇಳಿಸಿಕೊಂಡನು.

67. ಆಮೇಲೆ ಆ ರಾಕ್ಷಸ (ಅಂಗಾರಕನು) ಎದ್ದು ಸ್ನಾನಮಾಡಿ ಮೌನವನ್ನು ವಹಿಸಿ ಭಗವಾನ್ ಶಿವನನ್ನು ಪೂಜಿಸಲು ತೊಡಗಿದನು.

68. ಆ ಸಮಯದಲ್ಲೇ ಕಾಣಿಸಿಕೊಂಡ ರಾಜನು ಧನುಸ್ಸನ್ನು ಹಿಡಿದೆಳೆದು ವೇಗದಿಂದ ದೈತ್ಯನನ್ನು ಸಮೀಪಿಸಿ ಅವನನ್ನು ಕಾಳಗಕ್ಕೆ ಆಹ್ವಾನಿಸಿದನು.

69. ಮೌನಿಯಾಗಿದ್ದ ಅಂಗಾರಕನೂ ಎಡಗೈಯನ್ನೆತ್ತಿ ಆ ರಾಜನಿಗೆ ಒಂದು ಕ್ಷಣ ತಾಳಿಕೋ ಎಂದು ಆಗ ಸಂಜ್ಞೆ ಮಾಡಿದನು.

70. ರಾಜನ ಕೈಗಳು ಚುರುಕಾಗಿದ್ದುದರಿಂದ ಆ ಕ್ಷಣದಲ್ಲೇ (ರಾಕ್ಷಸನ) ಎಡಗೈಯಲ್ಲಿದ್ದ ಮರ್ಮಸ್ಥಳಕ್ಕೆ ಒಂದು ಬಾಣದಿಂದ ಹೊಡೆದನು.

71. ಮರ್ಮಸ್ಥಳದಲ್ಲಿ ಏಟನ್ನು ತಿಂದ ಆ ಮಹಾರಾಕ್ಷಸ ಅಂಗಾರಕನು ಘೋರವಾಗಿ ಅರಚಿ ಭೂಮಿಯಲ್ಲಿ ಬಿದ್ದನು. ಜೀವ ಹೋಗುತ್ತಿದ್ದಾಗ ಅವನಿಂತೆಂದನು.

---

ಕೋ ಮಾಂ ವ್ಯಾಪಾದಯೇತ್ ಪುತ್ರಿ ಸರ್ವೋ ವಜ್ರಮಯೋ ಹ್ಯಹಮ್ ।
ವಾಮಹಸ್ತೇऽಸ್ತಿ ಮೇ ಛಿದ್ರಂ ತಚ್ಚ ಚಾಪೇನ ರಕ್ಷ್ಯತೇ ॥ ೬೫
ಇತ್ಥಮಾಶ್ವಾಸಯಾಮಾಸ ಸ ದೈತ್ಯಸ್ತಾಂ ನಿಜಾಂ ಸುತಾಮ್ ।
ಏತಚ್ಚ ನಿಖಿಲಂ ತೇನ ರಾಜ್ಞಾ ಛನ್ನೇನ ಶುಶ್ರುವೇ ॥ ೬೬
ತತಃ ಕ್ಷಣಾದಿವೋತ್ಥಾಯ ಕೃತ್ವಾ ಸ್ನಾನಂ ಸ ದಾನವಃ ।
ಕೃತಮೌನಃ ಪ್ರವವೃತೇ ದೇವಂ ಪೂಜಯಿತುಂ ಹರಮ್ ॥ ೬೭
ತತ್ಕಾಲಂ ಪ್ರಕಟೀಭೂಯ ಸ ರಾಜಾ ಕೃಷ್ಟಕಾರ್ಮುಕಃ ।
ಉಪೇತ್ಯ ಪ್ರಸಭಂ ದೈತ್ಯಂ ರಣಾಯಾಹ್ವಯತೇ ಸ್ಮ ತಮ್ ॥ ೬೮
ಸೋऽಪ್ಯುತ್ಕ್ಷಿಪ್ಯ ಕರಂ ವಾಮಂ ಮೌನಸ್ಥಸ್ತಸ್ಯ ಭೂಪತೇಃ ।
ಪ್ರತೀಕ್ಷಸ್ವ ಕ್ಷಣಂ ತಾವದಿತಿ ಸಂಜ್ಞಾಂ ತದಾಕರೋತ್ ॥ ೬೯
ರಾಜಾಪಿ ಲಘುಹಸ್ತತ್ವಾತ್ ಕರೇ ತತ್ರೈವ ತತ್ಕ್ಷಣಮ್ ।
ತಸ್ಮಿನ್ ಮರ್ಮಣಿ ತಂ ದೈತ್ಯಂ ಪೃಷತ್ಕೇನ ಜಘಾನ ಸಃ ॥ ೭೦
ಸ ಚ ಮರ್ಮಾಹತೋ ಘೋರಂ ರಾವಂ ಕೃತ್ವಾ ಮಹಾಸುರಃ ।
ಅಂಗಾರಕೋऽಪತದ್ ಭೂಮೌ ನಿರ್ಯಜ್ಜೀವೋ ಜಗಾದ ಚ ॥ ೭೧

72. "ಬಾಯಾರಿದ ನನ್ನನ್ನು ಹೊಡೆದು ಕೊಂದವನು ನೀರಿನಿಂದ ನನಗೆ ತರ್ಪಣವನ್ನು ಪ್ರತಿವರ್ಷ ಕೊಡಕೂಡದು. ಹಾಗೆ ಮಾಡಿದರೆ ಅವನ ಐವರು ಮಂತ್ರಿಗಳು ಸಾಯುವರು."

73. ಹಾಗೆ ಹೇಳಿ ಆ ದೈತ್ಯನು ಸಾವನ್ನಪ್ಪಿದನು. ರಾಜನು ಅವನ ಮಗಳಾದ ಅಂಗಾರವತಿಯನ್ನು ಕರೆದುಕೊಂಡು ಉಜ್ಜಯಿನಿಗೆ ಹೋದನು.

74. ಅಲ್ಲಿ ಆ ದೈತ್ಯಕನ್ಯೆಯನ್ನು ಮದುವೆಯಾದ ಚಂಡಮಹಾಸೇನ ಭೂಪಾಲನಿಗೆ ಇಬ್ಬರು ಗಂಡುಮಕ್ಕಳು ಹುಟ್ಟಿದರು.

75. ಒಬ್ಬನು ಗೋಪಾಲಕನೆಂಬುವನು. ಎರಡನೆಯವನು ಪಾಲಕನು. ಅವರು ಹುಟ್ಟಿದಾಗ ರಾಜನು ಇಂದ್ರೋತ್ಸವವನ್ನು ನೆರವೇರಿಸಿದನು.

76. ಸಂತುಷ್ಟನಾದ ಇಂದ್ರನು ಅನಂತರ ರಾಜನಿಗೆ ಕನಸಿನಲ್ಲಿ "ನನ್ನ ಅನುಗ್ರಹದಿಂದ ಅಸದೃಶಳಾದ ಮಗಳನ್ನು ಪಡೆಯುವೆ" ಎಂದು ಹೇಳಿದನು.

77. ಅನಂತರ (ಸರಿಯಾದ) ಕಾಲದಲ್ಲಿ ಬ್ರಹ್ಮನಿಂದ ನಿರ್ಮಿತವಾದ ಅಪೂರ್ವವಾದ ಚಂದ್ರನ ಮತ್ತೊಂದು ದೇಹದಂತೆ ಇದ್ದ ಸುಂದರಿಯಾದ ಹೆಣ್ಣು ಮಗು ರಾಜನಿಗೆ ಜನಿಸಿತು.

78. ಆ ಸಂದರ್ಭದಲ್ಲಿ ಆಕಾಶದಿಂದ "ಇವಳಿಗೆ ಮನ್ಮಥದೇವನ ಅವತಾರವಾದ ಮಗನು ಹುಟ್ಟಿ ವಿದ್ಯಾಧರರಿಗೆಲ್ಲ ಒಡೆಯನಾಗುವನು" ಎಂಬ ವಾಣಿಯು ಕೇಳಿಬಂದಿತು.

---

ತೃಷಿತೋಽಹಂ ಹತೋ ಯೇನ ಸ ಮಾಮದ್ಭಿರ್ನ ತರ್ಪಯೇತ್ ।
ಪ್ರತ್ಯಬ್ದಂ ಯದಿ ತತ್ತಸ್ಯ ನಶ್ಯೇಯುಃ ಪಂಚಮಂತ್ರಿಣಃ ॥ ೭೨

ಇತ್ಯುಕ್ತ್ವಾ ಪಂಚತಾಂ ಪ್ರಾಪ ಸ ದೈತ್ಯಃ ಸೋಽಪಿ ತತ್ಸುತಾಮ್ ।
ತಾಮಂಗಾರವತೀಂ ರಾಜಾ ಗೃಹೀತ್ವೋಜ್ಜಯಿನೀಂ ಯಯೌ ॥ ೭೩

ಪರಿಣೀತವತಸ್ತಸ್ಯ ತತ್ರ ತಾಂ ದೈತ್ಯಕನ್ಯಕಾಮ್ ।
ಜಾತೌ ದ್ವೌ ತನಯೌ ಚಂಡಮಹಾಸೇನಸ್ಯ ಭೂಪತೇಃ ॥ ೭೪

ಏಕೋ ಗೋಪಾಲಕೋ ನಾಮ ದ್ವಿತೀಯಃ ಪಾಲಕಸ್ತಥಾ ।
ತಯೋರಿಂದ್ರೋತ್ಸವಂ ಚಾಸೌ ಜಾತಯೋರಕರೋನ್ನೃಪಃ ॥ ೭೫

ತತಸ್ತಂ ನೃಪತಿಂ ಸ್ವಪ್ನೇ ತುಷ್ಟೋ ವಕ್ತಿಸ್ಮ ವಾಸವಃ ।
ಪ್ರಾಪ್ಸ್ಯಸ್ಯನನ್ಯಸದೃಶೀಂ ಮತ್ಪ್ರಸಾದಾತ್ ಸುತಾಮಿತಿ ॥ ೭೬

ತತಃ ಕಾಲೇನ ಜಾತಾಸ್ಯ ರಾಜ್ಞಃ ಕನ್ಯಾ ತು ತನ್ಪಥ ।
ಅಪೂರ್ವಾ ನಿರ್ಮಿತಾ ಧಾತ್ರಾ ಚಂದ್ರಸ್ಯೇವಾಪರಾ ತನುಃ ॥ ೭೭

ಕಾಮದೇವಾವತಾರೋಽಸ್ಯಾಃ ಪುತ್ರೋ ವಿದ್ಯಾಧರಾಧಿಪಃ ।
ಭವಿಷ್ಯತೀತಿ ತತ್ಕಾಲಮುದಭೂದ್ ಭಾರತೀ ದಿವಃ ॥ ೭೮

79. ಇಂದ್ರನು ಸಂತುಷ್ಟನಾಗಿ ಇವಳನ್ನು ನನಗೆ ಕೊಟ್ಟನು ಎಂದು ಮಹಾಸೇನ ಭೂಪತಿಯು ಆ ಮಗಳಿಗೆ ವಾಸವದತ್ತಾ ಎಂದೇ ಹೆಸರನ್ನಿಟ್ಟನು.

80. ಅವಳೀಗ ತಂದೆಯ ಮನೆಯಲ್ಲಿ ವಿವಾಹಯೋಗ್ಯಳಾಗಿ ಸಮುದ್ರಮಥನಕ್ಕಿಂತ ಮುಂಚೆ ಕಡಲಿನ ಹೊಟ್ಟೆಯ ಪೊಟರೆಯಲ್ಲಿ ಇದ್ದ ಲಕ್ಷ್ಮಿಯಂತೆ ಇದ್ದಾಳೆ.

81. ದೇವ, ಚಂಡಮಹಾಸೇನಮಹಾರಾಜನು ಇಂಥ ಪ್ರಭಾವವುಳ್ಳವನಾಗಿದ್ದಾನೆ. ದುರ್ಗದೇಶದಲ್ಲಿರುವವನ್ನು ಜಯಿಸಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಇವನೂ ಜಯಿಸಲು ಅಸಾಧ್ಯ

82. ರಾಜನ್, ಇಷ್ಟೇ ಅಲ್ಲದೆ ಯಾವಾಗಲೂ ಅವನು ತನ್ನ ಮಗಳನ್ನು ನಿನಗೆ ಕೊಡಲು ಇಷ್ಟಪಟ್ಟಿದ್ದಾನೆ. ಅಭಿಮಾನಿಯಾದ ಆ ರಾಜನು ತನ್ನ ಪಕ್ಷದ ಅಭ್ಯುದಯವನ್ನು ಅಪೇಕ್ಷಿಸುತ್ತಾನೆ.

83. ಆ ವಾಸವದತ್ತೆಯನ್ನು ನೀನೇ ಅವಶ್ಯವಾಗಿ ಮದುವೆ ಮಾಡಿಕೊಳ್ಳಬೇಕು ಎಂದುಕೊಂಡಿದ್ದೇನೆ" (ಎಂದು ಯೌಗಂಧರಾಯಣನು ಹೇಳಿದಾಗ) ಕೂಡಲೇ ವಾಸವದತ್ತೆಯು ವತ್ಸರಾಜನ ಹೃದಯವನ್ನಪಹರಿಸಿದಳು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಕಥಾಮುಖಲಂಬಕದಲ್ಲಿ

ಮೂರನೆಯ ತರಂಗ ಮುಗಿಯಿತು.

---

ದತ್ತಾ ಮೇ ವಾಸವೇನೈಷಾ ತುಷ್ಟೇನೇತಿ ಸ ಭೂಪತಿಃ ।
ನಾಮ್ನಾ ವಾಸವದತ್ತಾಂ ತಾಂ ತನಯಾಮಕರೋತ್ತದಾ ॥ ೭೯
ಸಾ ಚ ತಸ್ಯ ಪಿತುರ್ಗೇಹೇ ಪ್ರದೇಯಾ ಸಂಪ್ರತಿ ಸ್ಥಿತಾ ।
ಪ್ರಾಕ್ ಮಂಥಾದಮೃತಸ್ಯೇವ ಕಮಲಾ ಕುಕ್ಷಿಕೋಟರೇ ॥ ೮೦
ಏವಂವಿಧಪ್ರಭಾವಶ್ಚಂಡಮಹಾಸೇನಭೂಪತಿಃ ಸ ಕಿಲ ।
ದೇವ ನ ಶಕ್ಯೋ ಜೇತುಂ ಯಥಾ ತಥಾ ದುರ್ಗದೇಶಸ್ಥಃ ॥ ೮೧
ಕಿಂಚ ಸ ರಾಜನ್ ವಾಂಛತಿ ದಾತುಂ ತುಭ್ಯಂ
ಸದೈವ ತನಯಾಂ ತಾಮ್ ।
ಪ್ರಾರ್ಥಯತೇ ತು ಸ ರಾಜಾ ನಿಜಪಕ್ಷಮಹೋದಯಂ ಮಾನೀ ॥ ೮೨
ಸಾ ಚಾವಶ್ಯಂ ಮನ್ಯೇ ವಾಸವದತ್ತಾ ತ್ವಯೈವ ಪರಿಣೇಯಾ ।
ಸ ಸಪದಿ ವಾಸವದತ್ತಾಹೃತಹೃದಯೋ ವತ್ಸರಾಜೋಽಭೂತ್ ॥ ೮೩

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ ಕಥಾಮುಖಲಂಬಕೇ

ತೃತೀಯಸ್ತರಂಗಃ ।

# ನಾಲ್ಕನೆಯ ತರಂಗ

1. ಈ ಮಧ್ಯದಲ್ಲಿ ವತ್ಸರಾಜನ ಪ್ರತಿದೂತನು ಹೋಗಿ ಚಂಡಮಹಾಸೇನರಾಜನಿಗೆ ಆ ಪ್ರತ್ಯುತ್ತರವನ್ನು ಹೇಳಿದನು.

2–3. ಅದನ್ನು ಕೇಳಿ ಚಂಡಮಹಾಸೇನನು "ಅಭಿಮಾನಿ ವತ್ಸರಾಜನು ಇಲ್ಲಿಗೆ ತಾನಾಗಿ ಬರುವುದಿಲ್ಲವೆಂಬುದು ದಿಟ. ಆದರೆ ಮಗಳನ್ನು ಅಲ್ಲಿಗೆ ಕಳುಹಿಸುವುದೂ ಸರಿಯಲ್ಲ. ಹಾಗೆ ಮಾಡಿದರೆ ಹಗುರತನವಾದೀತು. ಆದ್ದರಿಂದ ಯುಕ್ತಿಯಿಂದಲೇ ಅವನನ್ನು ಕಟ್ಟಿಹಾಕಿ ಇಲ್ಲಿಗೆ ತರಿಸುತ್ತೇನೆ" ಎಂದು ಆಲೋಚಿಸಿದನು.

4. ಹೀಗೆ ಆಲೋಚಿಸಿ ಮಂತ್ರಿಗಳೊಡನೆ ಮಂತ್ರಾಲೋಚನೆ ನಡೆಸಿ ಆ ರಾಜನು ತನ್ನ ಯೋಗ್ಯತೆಗೆ ಸರಿಯಾದ ದೊಡ್ಡ ಯಂತ್ರದ ಆನೆಯನ್ನು ಮಾಡಿಸಿದನು.

5. ಅದರೊಳಗೆ ಗೂಢವಾಗಿ ವೀರಪುರುಷರಿರುವಂತೆ ಮಾಡಿ ವಿಂಧ್ಯಾಟವಿಯಲ್ಲಿ ಆ ಯಂತ್ರದ ಆನೆಯನ್ನು ನಿಲ್ಲಿಸಿದನು.

6. ಆನೆಗಳನ್ನು ಹಿಡಿಯುವ ಗೂಢಚಾರರು ಅದನ್ನು ದೂರದಿಂದ ನೋಡಿದರು.

---

# ಚತುರ್ಥಸ್ತರಂಗಃ

ಅತ್ರಾಂತರೇ ಸ ವತ್ಸೇಶಪ್ರತಿದೂತಸ್ತದಬ್ರವೀತ್ ।
ಗತ್ವಾ ಪ್ರತಿವಚಶ್ಚಂಡಮಹಾಸೇನಾಯ ಭೂಭೃತೇ ॥ ೧
ಸೋಽಪಿ ಚಂಡಮಹಾಸೇನಸ್ತಚ್ಛ್ರುತ್ವೈವ ವ್ಯಚಿಂತಯತ್ ।
ಸ ತಾವದಿಹ ನಾಯಾತಿ ಮಾನೀ ವತ್ಸೇಶ್ವರೋ ಭೃಶಮ್ ॥ ೨
ಕನ್ಯಾ ಹಿ ತತ್ರ ನ ಪ್ರೇಷ್ಯಾ ಭವೇದೇವಂ ಹಿ ಲಾಘವಮ್ ।
ತಸ್ಮಾದ್ ಬದ್ಧ್ವೈವ ತಂ ಯುಕ್ತ್ಯಾ ನೃಪಮಾನಾಯಯಾಮ್ಯಹಮ್ ॥ ೩
ಇತಿ ಸಂಚಿತ್ಯ ಸಂಮಂತ್ರ್ಯ ಸ ರಾಜಾ ಮಂತ್ರಿಭಿಃ ಸಹ ।
ಅಕಾರಯತ್ ಸ್ವಸದೃಶಂ ಮಹಾಂತಂ ಯಂತ್ರಹಸ್ತಿನಮ್ ॥ ೪
ಸ ಚಾಂತರ್ವೀರಪುರುಷೈಃ ಕೃತ್ವಾ ಛನ್ನೈರಧಿಷ್ಠಿತಮ್ ।
ವಿಂಧ್ಯಾಟವ್ಯಾಂ ಸ ನಿದಧೇ ರಾಜಾ ಯಂತ್ರಮಯಂ ಗಜಮ್ ॥ ೫
ತತ್ರ ತಂ ಚಾರಪುರುಷಾಃ ಪಶ್ಯಂತಿ ಸ್ಮ ವಿದೂರತಃ ।
ಗಜಬಂಧುರಸಾಸಕ್ತವತ್ಸರಾಜೋಪಜೀವಿನಃ ॥ ೬

7–8. ಅವರು ವೇಗವಾಗಿ ಬಂದು ವತ್ಸರಾಜನಿಗೆ, "ದೇವ, ನಾವು ವಿಂಧ್ಯಾಟವಿಯಲ್ಲಿ ಅಲೆದಾಡುತ್ತಿದ್ದ ಒಂದು ಆನೆಯನ್ನು ನೋಡಿದೆವು. ಇಷ್ಟು ದೊಡ್ಡ ಭೂಲೋಕದಲ್ಲಿ ಅಂಥ ಇನ್ನೊಂದು ಆನೆಯನ್ನು ನಾವು ನೋಡಿಲ್ಲ. ಶರೀರದಿಂದ ಮುಗಿಲನ್ನೇ ವ್ಯಾಪಿಸಿರುವ ಅದು ಓಡಾಡುವ ವಿಂಧ್ಯಪರ್ವತದಂತೆ ಇದೆ" ಎಂದು ಬಿನ್ನವಿಸಿದರು.

9. ಆಗ ಗೂಢಚಾರರ ಮಾತನ್ನು ಕೇಳಿ ವತ್ಸರಾಜನು ಸಂತುಷ್ಟನಾಗಿ ಅವರಿಗೆ ಲಕ್ಷಹೊನ್ನನ್ನು ಪಾರಿತೋಷಿಕವಾಗಿ ನೀಡಿದನು.

10–11. "ನಡಾಗಿರಿಗೆ ಪ್ರತಿಸ್ಪರ್ಧಿಯಾಗುವ ಆ ದೊಡ್ಡ ಆನೆಯು ನನಗೆ ಸಿಕ್ಕಿದರೆ ಆಗ ಮಹಾಸೇನನೂ ನನ್ನ ಅಧೀನನಾಗುವನು, ಆಗ ಅವನು ತಾನೇ ವಾಸವದತ್ತೆಯನ್ನು ನನಗೆ ಕೊಡುವನು' ಎಂದು ಆಲೋಚಿಸುತ್ತಾ ರಾಜ (ಉದಯನನು) ಆ ಇರುಳನ್ನು ಕಳೆದನು.

12. ಬೆಳಗಾದ ಮೇಲೆ ಆನೆಯ ಆಸೆಯಿಂದ ಮಂತ್ರಿಗಳ ಮಾತನ್ನು ಕಡೆಗಣಿಸಿ ಆ ಚಾರರನ್ನೇ ಮುಂದಿಟ್ಟುಕೊಂಡು ವಿಂಧ್ಯಾಟವಿಯ ಕಡೆಗೆ ಹೊರಟನು.

13. ಹೊರಟ ಲಗ್ನಕ್ಕೆ ಬಂಧನಸಹಿತವಾದ ಕನ್ಯಾಲಾಭ ಎಂದು ಫಲವಿದೆ ಎಂದು ಜ್ಯೋತಿಷಿಗಳು ಹೇಳಿದುದನ್ನು ಅವನು ಲೆಕ್ಕಿಸಲೇ ಇಲ್ಲ.

---

ತೇ ಚ ತ್ವರಿತಮಾಗತ್ಯ ವತ್ಸರಾಜಂ ವ್ಯಜಿಜ್ಞಪನ್ ।
ದೇವ ದೃಷ್ಟೋ ಗಜೋಽಸ್ಮಾಭಿರೇಕೋ ವಿಂಧ್ಯವನೇ ಭ್ರಮನ್ ॥ ೭
ಅಸ್ಮಿನ್ನಿಯತಿ ಭೂಲೋಕೇ ನೈವ ಯೋಽನ್ಯತ್ರ ದೃಶ್ಯತೇ ।
ವರ್ಷ್ಮಣಾ ವ್ಯಾಪ್ತಗಗನೋ ವಿಂಧ್ಯಾದ್ರಿರಿವ ಜಂಗಮಃ ॥ ೮
ತತಶ್ಚಾರವಚಃ ಶ್ರುತ್ವಾ ವತ್ಸರಾಜೋ ಜಹರ್ಷ ಸಃ ।
ತೇಭ್ಯಃ ಸುವರ್ಣಲಕ್ಷಂ ಚ ಪ್ರದದೌ ಪಾರಿತೋಷಿಕಮ್ ॥ ೯
ತಂ ಚೇದ್ ಗಜೇಂದ್ರಂ ಪ್ರಾಪ್ಸ್ಯಾಮಿ ಪ್ರತಿಮಲ್ಲಂ ನಡಾಗಿರೇಃ ।
ತತಶ್ಚಂಡಮಹಾಸೇನೋ ವಶ್ಯೋ ಭವತಿ ಮೇ ಧ್ರುವಮ್ ॥ ೧೦
ತತೋ ವಾಸವದತ್ತಾಂ ತಾಂ ಸ ಸ್ವಯಂ ಮೇ ಪ್ರಯಚ್ಛತಿ ।
ಇತಿ ಸಂಚಿಂತಯನ್ ಸೋಽಥ ರಾಜಾ ತಾಮನಯನ್ನಿಶಾಮ್ ॥ ೧೧
ಪ್ರಾತಶ್ಚ ಮಂತ್ರಿವಚನಂ ನ್ಯಕ್‌ಕೃತ್ವಾ ಗಜತೃಷ್ಣಯಾ ।
ಪುರಸ್ಕೃತ್ಯೈವ ತಾಂಶ್ಚಾರಾನ್ ಯಯೌ ವಿಂಧ್ಯಾಟವೀಂ ಪ್ರತಿ ॥ ೧೨
ಪ್ರಸ್ಥಾನಲಗ್ನಸ್ಯ ಫಲಂ ಕನ್ಯಾಲಾಭಂ ಸಬಂಧನಮ್ ।
ಯದೂಚುರ್ಗಣಕಾಸ್ತಸ್ಯ ತತ್ಸ ನೈವ ವ್ಯಚಾರಯತ್ ॥ ೧೩

14. ವಿಂಧ್ಯಾಟವಿಯನ್ನು ತಲುಪಿದ ಮೇಲೆ ಆನೆಗೆ ಗಾಬರಿಯಾಗಬಹುದು ಎಂಬ ಶಂಕೆಯಿಂದ ವತ್ಸರಾಜನು ಸೈನ್ಯಗಳನ್ನು ದೂರದಲ್ಲೇ ನಿಲ್ಲಿಸಿಬಿಟ್ಟನು.
15. ಚಾರರನ್ನು ಮಾತ್ರ ಜೊತೆಯಲ್ಲಿಟ್ಟುಕೊಂಡು ಘೋಷವತೀವೀಣೆಯನ್ನು ಹಿಡಿದು ತನ್ನ ವ್ಯಸನದಂತೆ ವಿಸ್ತಾರವಾದ ಆ ವಿಂಧ್ಯಾಟವಿಯನ್ನು ಹೊಕ್ಕನು.
16. ದೂರದಿಂದ ಚಾರರು ವಿಂಧ್ಯಪರ್ವತದ ದಕ್ಷಿಣಭಾಗದಲ್ಲಿ ಸತ್ಯವಾದ ಆನೆಯಂತೆ ತೋರುತ್ತಿದ್ದ ಆನೆಯನ್ನು ತೋರಿಸಿದರು. ವತ್ಸರಾಜನು ಅದನ್ನು ನೋಡಿದನು.
17. ಒಬ್ಬೊಂಟಿಗನಾಗಿ ವೀಣೆಯನ್ನು ನುಡಿಸುತ್ತಾ ಇಂಪಾದ ದನಿಯಿಂದ ಹಾಡುತ್ತಾ (ಆನೆಯನ್ನು ಕಟ್ಟಿ ಹಾಕುವ) ಬಂಧನದ (ರೀತಿಗಳ ಬಗ್ಗೆ) ಚಿಂತಿಸುತ್ತಾ ಮೆಲ್ಲಮೆಲ್ಲನೆ (ವತ್ಸರಾಜನು ಆನೆಯ) ಸಮೀಪಕ್ಕೆ ಹೋದನು.
18. ಮನಸ್ಸು ಸಂಗೀತದಲ್ಲಿ ಲೀನವಾಗಿದ್ದುದರಿಂದ ಮತ್ತು ಸಂಜೆಗತ್ತಲಿನ ಕಾರಣದಿಂದ ಅವನು ಆ ಕಾಡಾನೆ ಮಾಯಾಗಜ ಎಂಬುದನ್ನು ಕಂಡುಕೊಳ್ಳಲಿಲ್ಲ.
19. ಆ ಆನೆಯು ಹಾಡಿನ ಮೋಡಿಯಿಂದಲೋ ಎಂಬಂತೆ ಬೀಸಣಿಗೆಯಂತಿದ್ದ ಕಿವಿಗಳನ್ನೆತ್ತರಿಸಿ ಹತ್ತಿರ ಹತ್ತಿರ ಬಂದು ಮತ್ತೆ ದೂರಕ್ಕೆ ಹೋಗುತ್ತಾ ರಾಜನನ್ನು ಹೆಚ್ಚು ದೂರ ಸೆಳೆದೊಯ್ದಿತು.
20. ಇದ್ದಕ್ಕಿದ್ದಂತೆ ಆ ಯಂತ್ರದ ಆನೆಯಿಂದ ಹೊರಗೆ ಧುಮುಕಿದ, ಸುಸಜ್ಜಿತರಾಗಿದ್ದ ಯೋಧರು ವತ್ಸರಾಜನನ್ನು ಸುತ್ತುವರಿದರು.

---

ಪ್ರಾಪ್ಯ ವಿಂಧ್ಯಾಟವೀಂ ತಸ್ಯ ಗಜಸ್ಯ ಕ್ಷೋಭಶಂಕಯಾ ।
ವತ್ಸರಾಜಃ ಸ ಸೈನ್ಯಾನಿ ದೂರಾದೇವ ನ್ಯವಾರಯತ್ ॥ ೧೪

ಚಾರಮಾತ್ರಸಹಾಯಸ್ತು ವೀಣಾಂ ಘೋಷವತೀಂ ದಧತ್ ।
ನಿಜವ್ಯಸನವಿಸ್ತೀರ್ಣಾಂ ತಾಂ ವಿವೇಶ ಮಹಾಟವೀಮ್ ॥ ೧೫

ವಿಂಧ್ಯಸ್ಯ ದಕ್ಷಿಣೇ ಪಾರ್ಶ್ವೇ ದೂರಾಚ್ಚಾರೈಃ ಪ್ರದರ್ಶಿತಮ್ ।
ಗಜಂ ಸತ್ಯಗಜಾಭಾಸಂ ತಂ ದದರ್ಶ ಸ ಭೂಪತಿಃ ॥ ೧೬

ಏಕಾಕೀ ವಾದಯನ್ ವೀಣಾಂ ಚಿಂತಯನ್ ಬಂಧನಾನಿ ಸಃ ।
ಮಧುರಧ್ವನಿ ಗಾಯಂಶ್ಚ ಶನೈರುಪಜಗಾಮ ತಮ್ ॥ ೧೭

ಗಾಂಧರ್ವದತ್ತಚಿತ್ತತ್ವಾತ್ ಸಂಧ್ಯಾಧ್ವಾಂತವಶಾಚ್ಚ ಸಃ ।
ನ ತಂ ವನಗಜಂ ರಾಜಾ ಮಾಯಾಗಜಮಲಕ್ಷಯತ್ ॥ ೧೮

ಸೋಽಪಿ ಹಸ್ತೀ ತಮುತ್ಕರ್ಣತಾಲೋ ಗೀತರಸಾದಿವ ।
ಉಪೇತ್ಯೋಪೇತ್ಯ ವಿಚಲನ್ ದೂರಮಾಕೃಷ್ಟವಾನ್ ನೃಪಮ್ ॥ ೧೯

ತತೋಽಕಸ್ಮಾಚ್ಚ ನಿರ್ಗತ್ಯ ತಸ್ಮಾದ್ಯಂತ್ರಮಯಾದ್ಗಜಾತ್ ।
ವತ್ಸೇಶ್ವರಂ ತಂ ಸಂನದ್ಧಾಃ ಪುರುಷಾಃ ಪರ್ಯವಾರಯನ್ ॥ ೨೦

21. ಅವರನ್ನು ಕಂಡು ಸಿಟ್ಟುಗೊಂಡ ರಾಜನು ಚೂರಿಯನ್ನು ಸೆಳೆದು ಹಿಡಿದು ತನ್ನ ಮುಂದಿದ್ದವರೊಡನೆ ಕಾದಾಡುತ್ತಿದ್ದಾಗ ಬೇರೆಯವರು ಹಿಂಬದಿಯಿಂದ ಅವನನ್ನು ಹಿಡಿದುಹಾಕಿದರು.

22. ಸಂಕೇತದಿಂದ ಬಂದು ಅವರೊಡನೆ ಸೇರಿಕೊಂಡ ಸೈನಿಕರೊಡನೆ ಆ ಯೋಧರು ವತ್ಸರಾಜನನ್ನು ಚಂಡಮಹಾಸೇನನ ಬಳಿಗೆ ಒಯ್ದರು.

23. ಚಂಡಮಹಾಸೇನನು ತಾನೇ ಮುಂದೆ ಬಂದು ವತ್ಸರಾಜನನ್ನು ಸತ್ಕರಿಸಿ ಅವನೊಡನೆ ಉಜ್ಜಯಿನೀನಗರಿಯನ್ನು ಪ್ರವೇಶಿಸಿದನು.

24. ಅವಮಾನವೆಂಬ ಕಲಂಕವನ್ನು ಹೊತ್ತ ಹೊಸ ಚಂದ್ರನಂತೆ ಕಾಣಿಸಿದ ವತ್ಸರಾಜನನ್ನು ಪೌರರು ನೋಡಿದರು.

25. ವತ್ಸರಾಜನ ಗುಣಗಳಿಗೆ ಮಾರುಹೋಗಿದ್ದ ಪೌರರು ಅವನನ್ನೂ ವಧಿಸಲಾಗುತ್ತದೆಯೋ ಎಂಬ ಅನುಮಾನದಿಂದ ಒಟ್ಟುಗೂಡಿ ತಾವೂ ಸಾಯಲು ನಿಶ್ಚಯವನ್ನು ಮಾಡಿದರು.

26. ವತ್ಸರಾಜನು ವಧ್ಯನೆಂದು ನಾನೆಂದುಕೊಂಡಿಲ್ಲ. ಅವನು ಸಂಧಾನಕ್ಕೆ ಅರ್ಹ ಎಂದು ಹೇಳಿ ಚಂಡಮಹಾಸೇನನು ಪೌರರನ್ನು ಕಳವಳದಿಂದ ತಪ್ಪಿಸಿದನು.

27. ಅನಂತರ ಆ ರಾಜನು ತನ್ನ ಮಗಳಾದ ವಾಸವದತ್ತೆಯನ್ನು ಸಂಗೀತಶಿಕ್ಷಣಕ್ಕಾಗಿ ವತ್ಸರಾಜನಿಗೆ (ಶಿಷ್ಯೆಯನ್ನಾಗಿ) ಸಮರ್ಪಿಸಿದನು.

---

ತಾನ್ ದೃಷ್ಟ್ವಾ ನೃಪತಿಃ ಕೋಪಾದಾಕೃಷ್ಟಚ್ಛುರಿಕೋಽಥ ಸಃ ।
ಅಗ್ರಸ್ಥಾನ್ ಯೋಧಯನ್ನನ್ಯೈರೇತ್ಯ ಪಶ್ಚಾದಗೃಹ್ಯತ ॥ ೨೧
ಸಂಕೇತಮಿಲಿತಾಶ್ಚಾನ್ಯೈರ್ಯೋಧಾಸ್ತೈಃ ಸೈನಿಕೈಃ ಸಹ ।
ನಿನ್ಯುರ್ವತ್ಸೇಶ್ವರಂ ಚಂಡಮಹಾಸೇನಾಂತಿಕಂ ಚ ತಮ್ ॥ ೨೨
ಸೋಽಪಿ ಚಂಡಮಹಾಸೇನೋ ನಿರ್ಗತ್ಯಾಗ್ರೇ ಕೃತಾದರಃ ।
ವತ್ಸೇಶೇನ ಸಮಂ ತೇನ ವಿವೇಶೋಜ್ಜಯಿನೀಂ ಪುರೀಮ್ ॥ ೨೩
ಸ ತತ್ರ ದದೃಶೇ ಪೌರೈರವಮಾನಕಲಂಕಿತಃ ।
ಶಶೀವ ಲೋಚನಾನಂದೋ ವತ್ಸರಾಜೋ ನವಾಗತಃ ॥ ೨೪
ತತೋಽಸ್ಯ ಗುಣರಾಗೇಣ ವಧಮಾಶಂಕ್ಯ ತತ್ರ ತೇ ।
ಪೌರಾಃ ಸಂಭೂಯ ಸಕಲಾಶ್ಚಕ್ರುರ್ಮರಣನಿಶ್ಚಯಮ್ ॥ ೨೫
ನ ಮೇ ವತ್ಸೇಶ್ವರೋ ವಧ್ಯಃ ಸಂಧೇಯ ಇತಿ ತಾನ್ ಬ್ರುವನ್ ।
ಸೋಽಥ ಚಂಡಮಹಾಸೇನಃ ಪೌರಾನ್ ಕ್ಷೋಭಾದವಾರಯತ್ ॥ ೨೬
ತತೋ ವಾಸವದತ್ತಾಂ ತಾಂ ಸುತಾಂ ತತ್ರೈವ ಭೂಪತಿಃ ।
ವತ್ಸರಾಜಾಯ ಗಾಂಧರ್ವಶಿಕ್ಷಾಹೇತೋಃ ಸಮಾರ್ಪಯತ್ ॥ ೨೭

28. "ಪ್ರಭು, ಇವಳಿಗೆ ಸಂಗೀತ ಕಲೆಯನ್ನು ಕಲಿಸು, ಅದರಿಂದ ನಿನಗೆ ಶುಭವಾಗುವುದು. ವಿಷಾದ ಪಡಬೇಡ" ಎಂದು ಅವನಿಗೆ ಹೇಳಿದನು.
29. ಆ ಕನ್ಯೆಯನ್ನು ನೋಡಿದ ಕೂಡಲೇ ವತ್ಸರಾಜನ ಮನಸ್ಸು ಎಷ್ಟು ಪ್ರೇಮದಿಂದ ನೆನೆಯಿತೆಂದರೆ, ಅದು ತನ್ನ ಕೋಪವನ್ನು ಮತ್ತೆ ನೋಡಲಿಲ್ಲ.
30. ಅವಳ ಕಣ್ಣೂ ಮನಸ್ಸೂ ಒಟ್ಟಿಗೆ ವತ್ಸರಾಜನ ಕಡೆಗೆ ಹೋದುವು. ನಾಚಿಕೆಯಿಂದ ಕಣ್ಣೇನೋ ಹಿಂದಿರುಗಿತು, ಮನಸ್ಸು ಮಾತ್ರ ಏನಾದರೂ ಅವನನ್ನು ಬಿಟ್ಟು ಬರಲಿಲ್ಲ.
31. ಆಮೇಲೆ ವಾಸವದತ್ತೆಗೆ ಹಾಡನ್ನು ಕಲಿಸುತ್ತಾ ಅವಳಲ್ಲೇ ಕಣ್ಣುಗಳನ್ನು ನೆಟ್ಟು ಸಂಗೀತಶಾಲೆಯಲ್ಲಿ ವತ್ಸರಾಜನು ವಾಸಿಸುತ್ತಿದ್ದನು.
32. ಮಡಿಲಲ್ಲಿ ಘೋಷವತೀ ಎಂಬ ವೀಣೆ, ಕಂಠದಲ್ಲಿ ಗೀತದ ಶ್ರುತಿ, ಎದುರಿನಲ್ಲಿ ಮನಸ್ಸಿಗೆ ಮುದಕೊಡುವ ವಾಸವದತ್ತೆ ಇದ್ದಳು.
33. ವತ್ಸರಾಜನು ಬಂಧನದಲ್ಲಿದ್ದರೂ ವಾಸವದತ್ತೆ ಏಕಾಗ್ರಚಿತ್ತಳಾಗಿ ಲಕ್ಷ್ಮಿಯಂತೆ ಸದಾ ಜೊತೆಯಲ್ಲಿದ್ದು ಅವನ ಸೇವಾತತ್ಪರಳಾಗಿದ್ದಳು.
34. ಈ ಮಧ್ಯದಲ್ಲಿ ವತ್ಸರಾಜನ ಹಿಂಬಾಲಕರು ಕೌಶಾಂಬಿಗೆ ಹಿಂದಿರುಗಿದರು. ರಾಜನು ಬಂಧನಕ್ಕೆ ಸಿಲುಕಿದನು ಎಂದರಿತು ರಾಜ್ಯವೆಲ್ಲ ಕ್ಷೋಭೆಗೊಂಡಿತು.

---

ಉವಾಚ ಚೈನಂ ಗಾಂಧರ್ವಂ ತ್ವಮೇತಾಂ ಶಿಕ್ಷಯ ಪ್ರಭೋ ।
ತತಃ ಪ್ರಾಪ್ಸ್ಯಸಿ ಕಲ್ಯಾಣಂ ಮಾ ವಿಷಾದಂ ಕೃಥಾ ಇತಿ ॥ ೨೮
ತಸ್ಯ ದೃಷ್ಟ್ವಾ ತು ತಾಂ ಕನ್ಯಾಂ ವತ್ಸರಾಜಸ್ಯ ಮಾನಸಮ್ ।
ತಥಾ ಸ್ನೇಹಾರ್ದ್ರಮಭವನ್ನ ಯಥಾ ಮನ್ಯುಮೈಕ್ಷತ ॥ ೨೯
ತಸ್ಯಾಶ್ಚ ಚಕ್ಷುರ್ಮನಸೀ ಸಹ ತಂ ಪ್ರತಿ ಜಗ್ಮತುಃ ।
ಹ್ರಿಯಾ ಚಕ್ಷುರ್ನಿವವೃತೇ ಮನಸ್ತು ನ ಕಥಂಚನ ॥ ೩೦
ಅಥ ವಾಸವದತ್ತಾಂ ತಾಂ ಗಾಪಯಂಸ್ತದ್ಗತೇಕ್ಷಣಃ ।
ತತ್ರ ಗಾಂಧರ್ವಶಾಲಾಯಾಂ ವತ್ಸರಾಜ ಉವಾಸ ಸಃ ॥ ೩೧
ಅಂಕೇ ಘೋಷವತೀ ತಸ್ಯ ಕಂಠೇ ಗೀತಶ್ರುತಿಸ್ತಥಾ ।
ಪುರೋ ವಾಸವದತ್ತಾ ಚ ತಸ್ಥೌ ಚೇತೋವಿನೋದಿನೀ ॥ ೩೨
ಸಾ ಚ ವಾಸವದತ್ತಾಸ್ಯ ಪರಿಚರ್ಯಾಪರಾಭವತ್ ।
ಲಕ್ಷ್ಮೀರಿವ ತದೇಕಾಗ್ರಾ ಬದ್ಧಸ್ಯಾಪ್ಯನಪಾಯಿನೀ ॥ ೩೩
ಅತ್ರಾಂತರೇ ಚ ಕೌಶಾಂಬ್ಯಾಂ ವತ್ಸರಾಜಾನುಗೇ ಜನೇ ।
ಆವೃತ್ತೇ ತಂ ಪ್ರಭುಂ ಬುದ್ಧ್ವಾ ಬದ್ಧಂ ರಾಷ್ಟ್ರಂ ಪ್ರಚುಕ್ಷುಭೇ ॥ ೩೪

35. ವತ್ಸರಾಜನಲ್ಲಿದ್ದ ಪ್ರೀತಿಯಿಂದ ಪ್ರಜೆಗಳೆಲ್ಲ ಸಿಟ್ಟಿಗೆದ್ದು ಎಲ್ಲ ಕಡೆಯಿಂದ ಉಜ್ಜಯಿನಿಗೆ ಮುತ್ತಿಗೆ ಹಾಕಲು ಬಯಸಿದರು.

36–37. "ಶಕ್ತಿಯಿಂದ ಚಂಡಮಹಾಸೇನನನ್ನು ಗೆಲ್ಲಲಾಗದು. ಅವನು ದೊಡ್ಡವನು. (ನಾವು ಹೀಗೆ ಮಾಡಿದರೆ) ವತ್ಸರಾಜನ ದೇಹಕ್ಕೂ ಕ್ಷೇಮ ಆಗಲಾರದು. ಆದ್ದರಿಂದ ಮುತ್ತಿಗೆ ಹಾಕುವುದು ಸರಿಯಲ್ಲ. ಈ ಕಾರ್ಯವನ್ನು ಬುದ್ಧಿಯಿಂದ ಸಾಧಿಸಬೇಕು' ಎಂದು ಹೇಳಿ ರುಮಣ್ವಂತನು ಪ್ರಜೆಗಳು ರೊಚ್ಚಿಗೇಳುವುದನ್ನು ತಡೆದನು.

38. ಇಡೀ ರಾಷ್ಟ್ರವೇ (ವತ್ಸರಾಜನಲ್ಲಿ) ಪ್ರೀತಿಯುಳ್ಳದ್ದಾಗಿರುವುದನ್ನು ನೋಡಿ ಧೀರ ಯೌಗಂಧರಾಯಣನು ರುಮಣ್ವಂತನೇ ಮೊದಲಾದವರಿಗೆ ಹೀಗೆ ಹೇಳಿದನು.

39. "'ನೀವೆಲ್ಲರೂ ಸದಾ ಜಾಗೃತರಾಗಿ ಇಲ್ಲೇ ಇರಬೇಕು. ಈ ರಾಜ್ಯವನ್ನು ರಕ್ಷಿಸಬೇಕು. ಸರಿಯಾದ ಕಾಲದಲ್ಲಿ ಪರಾಕ್ರಮವನ್ನು ತೋರಿಸಬೇಕು.

40. ವಸಂತಕನ ಜೊತೆಯಲ್ಲಿ ನಾನು ಹೋಗಿ ನನ್ನ ಬುದ್ಧಿಶಕ್ತಿಯಿಂದ ವತ್ಸರಾಜನನ್ನು ಬಿಡಿಸಿ ತರುತ್ತೇನೆ. ಇದರಲ್ಲಿ ಸಂಶಯವಿಲ್ಲ.

41. ನೀರಿನ ತಡೆ ಇದ್ದಾಗ ವಿದ್ಯುತ್ತಿನ ಅಗ್ನಿಯ ಬೆಳಕು (ಮಿಂಚಿನ ರೂಪದಲ್ಲಿ) ಬೆಳಗುವ ಹಾಗೆ ಆಪತ್ತಿನಲ್ಲಿ ಯಾವನ ಪ್ರಜ್ಞೆ ಸ್ಫುರಿಸುವುದೋ ಅವನೇ ಧೀರ.

---

ಉಜ್ಜಯಿನ್ಯಾಮವಸ್ಕಂದಂ ದಾತುಮೈಚ್ಛನ್ ಸಮಂತತಃ ।
ವತ್ಸೇಶ್ವರಾನುರಾಗೇಣ ಕ್ರುದ್ಧಾಃ ಪ್ರಕೃತಯಸ್ತದಾ ॥ ೩೫
ನೈವ ಚಂಡಮಹಾಸೇನೋ ಬಲಸಾಧ್ಯೋ ಮಹಾನ್ ಹಿ ಸಃ ।
ನ ಚೈವಂ ವತ್ಸರಾಜಸ್ಯ ಶರೀರೇ ಕುಶಲಂ ಭವೇತ್ ॥ ೩೬
ತಸ್ಮಾನ್ನ ಯುಕ್ತೋಽವಸ್ಕಂದೋ ಬುದ್ಧಿಸಾಧ್ಯಮಿದಂ ಪುನಃ ।
ಇತಿ ಪ್ರಕೃತಯಃ ಕ್ಷೋಭಾನ್ನ್ಯವರ್ತ್ಯಂತ ರುಮಣ್ವತಾ ॥ ೩೭
ತತೋಽನುರಕ್ತಮಾಲೋಕ್ಯ ರಾಷ್ಟ್ರಮವ್ಯಭಿಚಾರಿ ತತ್ ।
ರುಮಣ್ವದಾದೀನಾಹ ಸ್ಮ ಧೀರೋ ಯೌಗಂಧರಾಯಣಃ ॥ ೩೮
ಇಹೈವ ಸರ್ವೈರ್ಯುಷ್ಮಾಭಿಃ ಸ್ಥಾತವ್ಯಂ ಸತತೋದ್ಯತೈಃ ।
ರಕ್ಷಣೀಯಮಿದಂ ರಾಷ್ಟ್ರಂ ಕಾಲೇ ಕಾರ್ಯಶ್ಚ ವಿಕ್ರಮಃ ॥ ೩೯
ವಸಂತಕದ್ವಿತೀಯಶ್ಚ ಗತ್ವಾಹಂ ಪ್ರಜ್ಞಯಾ ಸ್ವಯಂ ।
ವತ್ಸೇಶಂ ಮೋಚಯಿತ್ವಾ ತಮಾನಯಾಮಿ ನ ಸಂಶಯಃ ॥ ೪೦
ಜಲಾಹತೌ ವಿಶೇಷೇಣ ವೈದ್ಯುತಾಗ್ನೇರಿವ ದ್ಯುತಿಃ ।
ಆಪದಿ ಸ್ಫುರತಿ ಪ್ರಜ್ಞಾ ಯಸ್ಯ ಧೀರಃ ಸ ಏವ ಹಿ ॥ ೪೧

42. ಉಪಯೋಗಕ್ಕೆ ಬರುವ, ಸುತ್ತುಗೋಡೆಯ ಭೇದನ ಉಪಾಯಗಳು, ಬೇಡಿಗಳನ್ನು ಮುರಿಯುವುದು, ಅದೃಶ್ಯನಾಗುವ ಪ್ರಯೋಗ ಇವನ್ನೆಲ್ಲ ನಾನು ತಿಳಿದುಕೊಂಡಿದ್ದೇನೆ."

43. ಎಂದು ಹೇಳಿ ಯೌಗಂಧರಾಯಣನು ಪ್ರಜೆಗಳನ್ನು ರುಮಣ್ವಂತನ ಕೈಗೆ ಒಪ್ಪಿಸಿ ವಸಂತಕನೊಡನೆ ಕೌಶಾಂಬಿಗೆ ತೆರಳಿದನು.

44. ವಸಂತಕನೊಡನೆ ಯೌಗಂಧರಾಯಣನು ತನ್ನ ಪ್ರಜ್ಞೆಯಂತೆ *ಸತ್ತ್ವ ಪೂರ್ಣವೂ ತನ್ನ ನೀತಿಯಂತೆ ದುರ್ಗಮವೂ ಆದ ವಿಂಧ್ಯಾಟವಿಯನ್ನು ಪ್ರವೇಶಿಸಿದನು.

45. ಅಲ್ಲಿ ವತ್ಸರಾಜನ ಗೆಳೆಯನಾದ ವಿಂಧ್ಯಪರ್ವತದ ಶಿಖರದಲ್ಲಿ ವಾಸಮಾಡುತ್ತಿದ್ದ ಪುಲಿಂದಕನೆಂಬ ಬೇಡರ ರಾಜನ ಮನೆಗೆ ಹೋದನು.

46. ಮುಂದೆ ಆ ಮಾರ್ಗದಲ್ಲಿ ಬರಲಿದ್ದ ವತ್ಸರಾಜನ ರಕ್ಷಣೆಗಾಗಿ ದೊಡ್ಡ ಸೈನ್ಯದೊಡನೆ ಅವನನ್ನು ಸಜ್ಜುಗೊಳಿಸಿ ನಿಲ್ಲಿಸಿದನು.

47. ಅನಂತರ ವಸಂತಕನ ಜೊತೆಯಲ್ಲಿ ಯೌಗಂಧರಾಯಣನು ಉಜ್ಜಯಿನಿಯಲ್ಲಿದ್ದ ಮಹಾಕಾಲಶ್ಮಶಾನವನ್ನು ತಲುಪಿದನು.

---

ಪ್ರಾಕಾರಭಂಜನಾನ್ ಯೋಗಾನ್ ತಥಾ ನಿಗಡಭಂಜನಾನ್ ।
ಅದರ್ಶನಪ್ರಯೋಗಾಂಶ್ಚ ಜಾನೇಽಹಮುಪಯೋಗಿನಃ ॥ ೪೨

ಇತ್ಯುಕ್ತ್ವಾ ಪ್ರಕೃತೀಃ ಕೃತ್ವಾ ಹಸ್ತನ್ಯಸ್ತಾ ರುಮಣ್ವತಃ ।
ಯೌಗಂಧರಾಯಣಃ ಪ್ರಾಯಾತ್ ಕೌಶಾಂಬ್ಯಾಃ ಸವಸಂತಕಃ ॥ ೪೩

ಪ್ರವಿವೇಶ ಚ ತೇನೈವ ಸಹ ವಿಂಧ್ಯಮಹಾಟವೀಮ್ ।
ಸ್ವಪ್ರಜ್ಞಾಮಿವ ಸತ್ತ್ವಾಢ್ಯಾಂ ಸ್ವ ನೀತಿಮಿವ ದುರ್ಗಮಾಮ್ ॥ ೪೪

ತತ್ರ ವತ್ಸೇಶಮಿತ್ರಸ್ಯ ವಿಂಧ್ಯಪ್ರಾಗ್ಭಾರವಾಸಿನಃ ।
ಗೃಹಂ ಪುಲಿಂದಕಾಖ್ಯಸ್ಯ ಪುಲಿಂದಾಧಿಪತೇರಗಾತ್ ॥ ೪೫

ತಂ ಸಜ್ಜಂ ಸ್ಥಾಪಯಿತ್ವಾ ಚ ಪಥಾ ತೇನ ಗಮಿಷ್ಯತಃ ।
ವತ್ಸರಾಜಸ್ಯ ರಕ್ಷಾರ್ಥಂ ಭೂತಿಸೈನ್ಯಸಮನ್ವಿತಮ್ ॥ ೪೬

ಗತ್ವಾ ವಸಂತಕಸಖಃ ತತೋ ಯೌಗಂಧರಾಯಣಃ ।
ಉಜ್ಜಯಿನ್ಯಾಂ ಮಹಾಕಾಲಶ್ಮಶಾನಂ ಪ್ರಾಪ ಸ ಕ್ರಮಾತ್ ॥ ೪೭

---

* ಸತ್ತ್ವ = ಸಾರ, ಪ್ರಾಣಿ, ಯೌಗಂಧರಾಯಣನ ಪ್ರಜ್ಞೆ ಸಾರವತ್ತಾಗಿತ್ತು. ವಿಂಧ್ಯಾಟವಿಯು ಪ್ರಾಣಿಗಳಿಂದ ತುಂಬಿತ್ತು.

48. ಕತ್ತಲೆಯಂತೆ ಕಪ್ಪಾಗಿದ್ದು ಚಿತೆಗಳ ಹೊಗೆಗಳಂತಿದ್ದ ಹಾಗೂ ಮಾಂಸದ ವಾಸನೆ ಬರುತ್ತಿದ್ದ ಬೇತಾಳಗಳಿಂದ ತುಂಬಿದ್ದ ಸ್ಮಶಾನವನ್ನು ಯೌಗಂಧರಾಯಣನು ಹೊಕ್ಕನು.

49. ಇವನನ್ನು ನೋಡಿದುದರಿಂದಲೇ ಸಂತುಷ್ಟನಾದ ಯೋಗೇಶ್ವರನೆಂಬ ಬ್ರಹ್ಮರಾಕ್ಷಸನು ಆ ಕ್ಷಣದಲ್ಲೇ ಬಂದು ಯೌಗಂಧರಾಯಣನನ್ನು ತನ್ನ ಸ್ನೇಹಿತನನ್ನಾಗಿ ಆರಿಸಿಕೊಂಡನು.

50. ಅವನು ಉಪದೇಶಿಸಿದ ತಂತ್ರದಿಂದ ಯೌಗಂಧರಾಯಣನು ಶೀಘ್ರವಾಗಿ ತನ್ನ ರೂಪವನ್ನು ಬದಲಾಯಿಸಿಕೊಂಡನು.

51. ಅದರಿಂದ ಅವನು ವಿಕಾರವುಳ್ಳ ಗೂನುಬೆನ್ನಿನ ಕುಳ್ಳ ವೃದ್ಧನಾಗಿ, ಹುಚ್ಚನ ವೇಷದಲ್ಲಿ ಬೋಕ್ಕತಲೆಯವನೂ ಆಗಿ ಎಲ್ಲರಿಗೂ ನಗೆಬರಿಸುವಂತಹವನಾದನು.

52. ಅದೇ ತಂತ್ರದಿಂದ ವಸಂತಕನ ರೂಪವನ್ನು (ಬದಲಾಯಿಸಿ) ನಾಡಿಗಳು ಎದ್ದು ಕಾಣುವ, ದೊಡ್ಡ ಹೊಟ್ಟೆಯ, ಉಬ್ಬು ಹಲ್ಲಿನ ಕೆಟ್ಟ ಮುಖವುಳ್ಳವನನ್ನಾಗಿ ಮಾಡಿದನು.

53. ಆಮೇಲೆ ವಸಂತಕನನ್ನು ಅರಮನೆಯ ಬಳಿಗೆ ಮೊದಲು ಕಳುಹಿಸಿ ಆ ರೂಪದಲ್ಲೇ ಯೌಗಂಧರಾಯಣನು ಉಜ್ಜಯಿನಿಯನ್ನು ಹೊಕ್ಕನು.

54. ಕುಣಿಯುತ್ತಾ ಹಾಡುತ್ತಿದ್ದ ಅವನನ್ನು ವಟುಗಳು ಸುತ್ತುವರಿದರು. ಎಲ್ಲರೂ ಕುತೂಹಲದಿಂದ ನೋಡುತ್ತಿದ್ದಂತೆಯೇ ಅವನು ಅರಮನೆಯ ಕಡೆಗೆ ಹೊರಟನು.

---

ವಿವೇಶ ತತ್ರ ವೇತಾಲೈಃ ಕ್ರವ್ಯಗಂಧಿಭಿರಾವೃತಮ್ ।
ಇತಸ್ತತಸ್ತಮಃ ಶ್ಯಾಮೈಶ್ಚಿತಾಧೂಮೈರಿವಾಪರೈಃ ॥ ೪೮

ತತ್ರೈನಂ ದರ್ಶನಪ್ರೀತೋ ಮಿತ್ರಭಾವಾಯ ತತ್ಕ್ಷಣಮ್ ।
ಯೋಗೇಶ್ವರಾಖ್ಯೋ ವೃತವಾನ್ ಅಭ್ಯೇತ್ಯ ಬ್ರಹ್ಮರಾಕ್ಷಸಃ ॥ ೪೯

ತೇನೋಪದಿಷ್ಟಯಾ ಯುಕ್ತ್ಯಾ ತತೋ ಯೌಗಂಧರಾಯಣಃ ।
ಸ ಚಕಾರಾತ್ಮನಃ ಸದ್ಯೋ ರೂಪಸ್ಯ ಪರಿವರ್ತನಮ್ ॥ ೫೦

ಬಭೂವ ತೇನ ವಿಕೃತಃ ಕುಬ್ಜೋ ವೃದ್ಧಶ್ಚ ತತ್ಕ್ಷಣಾತ್ ।
ಉನ್ಮತ್ತವೇಷಃ ಖಲ್ವಾಟೋ ಹಾಸ್ಯಸಂಜನನಃ ಪರಮ್ ॥ ೫೧

ತಯೈವ ಯುಕ್ತ್ಯಾ ಸ ತದಾ ಸಿರಾನದ್ಧಪೃಥೂದರಮ್ ।
ಚಕ್ರೇ ವಸಂತಕಸ್ಯಾಪಿ ರೂಪಂ ದಂತುರದುರ್ಮುಖಮ್ ॥ ೫೨

ತತೋ ರಾಜಕುಲದ್ವಾರಮಾದೌ ಪ್ರೇಷ್ಯ ವಸಂತಕಮ್ ।
ವಿವೇಶೋಜ್ಜಯಿನೀಂ ತಾಂ ಸ ತಾದೃಗ್ ಯೌಗಂಧರಾಯಣಃ ॥ ೫೩

ನೃತ್ಯನ್ ಗಾಯಂಶ್ಚ ತತ್ರಾಸೌ ವಟುಭಿಃ ಪರಿವಾರಿತಃ ।
ದೃಷ್ಟಃ ಸಕೌತುಕಂ ಸರ್ವೈರ್ಯಯೌ ರಾಜಗೃಹಂ ಪ್ರತಿ ॥ ೫೪

55. ಅಲ್ಲಿ ರಾಜನ ಅಂತಃಪುರದವರಿಗೆ ಕುತೂಹಲವನ್ನು ಕೆರಳಿಸಿದ ಅವನ ವಿಷಯವು ಕ್ರಮೇಣ ವಾಸವದತ್ತೆಯ ಕಿವಿಗೂ ಮೆಲ್ಲನೆ ತಲುಪಿತು.

56. ಬೇಗನೆ ಅವಳು ದಾಸಿಯನ್ನು ಕಳುಹಿಸಿ ಯೌಗಂಧರಾಯಣನನ್ನು ತನ್ನ ಸಂಗೀತಶಾಲೆಗೆ ಕರೆಸಿಕೊಂಡಳು. ಹೊಸ ವಯಸ್ಸು ಹಾಸ್ಯದ ಬಗೆಗೆ ಹೆಚ್ಚು ಆದರವನ್ನು ಹೊಂದಿರುವುದಲ್ಲವೆ ?

57. ಹುಚ್ಚನ ವೇಷದಲ್ಲಿದ್ದ ಯೌಗಂಧರಾಯಣನು ಅಲ್ಲಿ ಹೋಗಿ ಬಂಧನದಲ್ಲಿದ್ದ ವತ್ಸರಾಜನನ್ನು ಕಣ್ಣೀರಿಡುತ್ತಾ ನೋಡಿದನು.

58. ವತ್ಸರಾಜನಿಗೆ ಅವನು ಸಂಜ್ಞೆಯನ್ನು ಮಾಡಿದನು. ಮಾರುವೇಷದಲ್ಲಿ ಬಂದಿದ್ದ ಅವನನ್ನು ವತ್ಸರಾಜನೂ ಗುರುತಿಸಿದನು.

59. ಆಮೇಲೆ ಮಂತ್ರಬಲದಿಂದ ಯೌಗಂಧರಾಯಣನು ವಾಸವದತ್ತೆಗೂ ಅವಳ ದಾಸಿಯರಿಗೂ ತಾನು ಕಾಣಿಸದಂತೆ ಅದೃಶ್ಯನಾದನು.

60. ರಾಜನೊಬ್ಬನಿಗೆ ಮಾತ್ರ ಅವನು ಕಾಣಿಸುತ್ತಿದ್ದನು. ಆ ಹೆಂಗಸರೆಲ್ಲ ಆಶ್ಚರ್ಯಪಟ್ಟು "ಆ ಹುಚ್ಚನು ಇದ್ದಕ್ಕಿದ್ದಂತೆ ಎಲ್ಲೋ ಹೋಗಿಬಿಟ್ಟ" ಎಂದು ಮಾತನಾಡಿಕೊಂಡರು.

61. ಆ ಮಾತನ್ನು ಕೇಳಿಸಿಕೊಂಡು ಎದುರಿನಲ್ಲೇ ಅವನನ್ನು ಕಾಣುತ್ತ ಇದು ಯೋಗಬಲದಿಂದ ಸಾಧ್ಯವಾಗಿದೆ ಎಂಬುದನ್ನರಿತು ವತ್ಸರಾಜನು ಯುಕ್ತಿಯಿಂದ ವಾಸವದತ್ತೆಗೆ ಇಂತೆಂದನು.

---

ತತ್ರ ರಾಜಾವರೋಧಾನಾಂ ತೇನಾಸೌ ಕೃತಕೌತುಕಃ ।
ಅಗಾದ್ ವಾಸವದತ್ತಾಯಾಃ ಶನೈಃ ಶ್ರವಣಗೋಚರಮ್ ॥ ೫೫

ಸಾ ತಮಾನಾಯಯಾಮಾಸ ಚೇಟಿಕಾಂ ಪ್ರೇಷ್ಯ ಸತ್ವರಮ್ ।
ಗಾಂಧರ್ವಶಾಲಾಂ ನರ್ಮೈಕಸಾದರಂ ಹಿ ನವಂ ವಯಃ ॥ ೫೬

ಸ ಚ ತತ್ರ ಗತೋ ಬದ್ಧಂ ವತ್ಸರಾಜಂ ದದರ್ಶ ತಮ್ ।
ಉನ್ಮತ್ತವೇಷೋ ವಿಗಲದ್‌ಬಾಷ್ಪೋ ಯೌಗಂಧರಾಯಣಃ ॥ ೫೭

ಚಕಾರ ತಸ್ಮೈ ಸಂಜ್ಞಾಂ ಚ ವತ್ಸರಾಜಾಯ ಸೋಽಪಿ ತಮ್ ।
ಪ್ರತ್ಯಭಿಜ್ಞಾತವಾನ್ ರಾಜಾ ವೇಷಪ್ರಚ್ಛನ್ನಮಾಗತಮ್ ॥ ೫೮

ತತೋ ವಾಸವದತ್ತಾಂ ಚ ತಚ್ಚೇಟೀಃ ಪ್ರತಿ ಚಾತ್ಮನಃ ।
ಅದರ್ಶನಂ ಯುಕ್ತಿಬಲಾದ್ ವ್ಯಧಾದ್ ಯೌಗಂಧರಾಯಣಃ ॥ ೫೯

ರಾಜಾ ತ್ವೇಕೋ ದದರ್ಶೈನಂ ತಾಶ್ಚ ಸರ್ವಾಃ ಸುವಿಸ್ಮಯಮ್ ।
ವದಂತಿ ಸ್ಮ ಗತೋಽಕಸ್ಮಾದುನ್ಮತ್ತಃ ಕ್ವಾಪ್ಯಸಾವಿತಿ ॥ ೬೦

ತಚ್ಛ್ರುತ್ವಾ ತಂ ಚ ದೃಷ್ಟ್ವಾಗ್ರೇ ಮತ್ವಾ ಯೋಗಬಲೇನ ತತ್ ।
ಯುಕ್ತ್ಯಾ ವಾಸವದತ್ತಾಂ ತಾಂ ವತ್ಸರಾಜೋಽಬ್ರವೀದಿದಮ್ ॥ ೬೧

62. "ರಾಜಕುಮಾರಿ, ಸರಸ್ವತೀಪೂಜೆಗೆ (ಸಾಮಗ್ರಿಗಳನ್ನು) ತೆಗೆದುಕೊಂಡು ಬಾ". ಅದನ್ನು ಕೇಳಿ ಅವಳು 'ಹಾಗೆಯೇ ಮಾಡುವೆ' ಎಂದು ಹೇಳಿ ತನ್ನ ಗೆಳತಿಯರೊಡನೆ ಹೊರಟುಹೋದಳು.

63. ಅನಂತರ ಉಚಿತವಾದ ರೀತಿಯಲ್ಲಿ ಯೌಗಂಧರಾಯಣನು ವತ್ಸರಾಜನ ಬಳಿ ಬಂದು ಅವನಿಗೆ ಬೇಡಿಯನ್ನು ಕಳಚಿಹಾಕುವ ಯೋಗ (ಸಾಧನ)ವನ್ನು ಕೊಟ್ಟನು.

64. ವಾಸವದತ್ತೆಯ ವಶೀಕರಣಕ್ಕೆ ಬೇಕಾದ, ವೀಣೆಯ ತಂತಿಗಳಲ್ಲೇ ಇಡಬಹುದಾದ ಯೋಗ (ಸಾಧನ)ಗಳನ್ನೂ ಅವನು ರಾಜನಿಗೆ ಸಮರ್ಪಿಸಿದನು.

65–66. "ರಾಜನ್, ವಸಂತಕನೂ ಇಲ್ಲಿಗೆ ಬಂದಿದ್ದಾನೆ. ಬಾಗಿಲಲ್ಲೇ ವೇಷಾಂತರದಿಂದ ನಿಂತಿದ್ದಾನೆ. ಆ ಬ್ರಾಹ್ಮಣನನ್ನು ನಿನ್ನ ಬಳಿ ಸೇರಿಸಿಕೋ. ವಾಸವದತ್ತೆ ನಿನ್ನಲ್ಲಿ ಸಲಿಗೆಯನ್ನು ಬೆಳೆಸಿಕೊಂಡ ಮೇಲೆ ನಾನು ಹೇಳುವಂತೆ ಮಾಡು. ಈಗ ಹೀಗೆಯೇ ಇದ್ದುಬಿಡು" ಎಂದು ವಿಜ್ಞಾಪಿಸಿಕೊಂಡನು.

67. ಇಷ್ಟು ಹೇಳಿ ಯೌಗಂಧರಾಯಣನು ಬೇಗನೆ ಅಲ್ಲಿಂದ ಹೊರಟುಹೋದನು. ಆಗ ವಾಸವದತ್ತೆಯು ಪೂಜೆ (ಸಾಮಗ್ರಿ)ಯನ್ನು ತೆಗೆದುಕೊಂಡು ಅಲ್ಲಿಗೆ ಬಂದಳು.

68. ಆಮೇಲೆ ರಾಜನು "ಹೊರಬಾಗಿಲಿನಲ್ಲಿ ಬ್ರಾಹ್ಮಣನೊಬ್ಬನು ನಿಂತಿದ್ದಾನೆ. ಸರಸ್ವತೀ ಪೂಜೆಯ ದಕ್ಷಿಣೆಯನ್ನು ಸ್ವೀಕರಿಸಲು ಅವನನ್ನು ಒಳಗೆ ಕರೆಸು" ಎಂದು ವಾಸವದತ್ತೆಗೆ ಹೇಳಿದನು.

---

ಗತ್ವಾ ಸರಸ್ವತೀಪೂಜಾಮಾದಾಯಾಗಚ್ಛ ದಾರಿಕೇ ।
ತಚ್ಛ್ರುತ್ವಾ ಸಾ ತಥೇತ್ಯುಕ್ತ್ವಾ ಸವಯಸ್ಯಾ ವಿನಿರ್ಯಯೌ ॥ ೬೨
ಯಥೋಚಿತಮುಪೇತ್ಯಾಥ ದದೌ ವತ್ಸೇಶ್ವರಾಯ ಸಃ ।
ಯೌಗಂಧರಾಯಣಸ್ತಸ್ಮೈ ಯೋಗಾನ್ ನಿಗಡಭಂಜನಾನ್ ॥ ೬೩
ಅನ್ಯಾನ್ ವಾಸವದತ್ತಾಯಾ ವೀಣಾತಂತ್ರೀನಿಯೋಜಿತಾನ್ ।
ವಶೀಕರಣಯೋಗಾಂಶ್ಚ ರಾಜ್ಞೇಽಸ್ಮೈ ಸ ಸಮಾರ್ಪಯತ್ ॥ ೬೪
ವ್ಯಜಿಜ್ಞಪಚ್ಚ ತಂ ರಾಜನ್ ಇಹಾಯಾತೋ ವಸಂತಕಃ ।
ದ್ವಾರಿ ಸ್ಥಿತೋಽನ್ಯರೂಪೇಣ ತಂ ಕುರುಷ್ವಾಂತಿಕೇ ದ್ವಿಜಮ್ ॥ ೬೫
ಯದಾ ವಾಸವದತ್ತೇಯಂ ತ್ವಯಿ ವಿಸ್ರಂಭಮೇಷ್ಯತಿ ।
ತದಾ ವಕ್ಷ್ಯಾಮಿ ಯದಹಂ ತತ್‌ಕುರ್ಯಾಸ್ತಿಷ್ಠ ಸಾಂಪ್ರತಮ್ ॥ ೬೬
ಇತ್ಯುಕ್ತ್ವಾ ನಿರ್ಯಯೌ ಶೀಘ್ರಂ ತತೋ ಯೌಗಂಧರಾಯಣಃ ।
ಆಗಾದ್ ವಾಸವದತ್ತಾ ಚ ಪೂಜಾಮಾದಾಯ ತತ್‌ಕ್ಷಣಾತ್ ॥ ೬೭
ಸೋಽಥ ತಾಮವದದ್ ರಾಜಾ ಬಹಿರ್ದ್ವಾರಿ ದ್ವಿಜಃ ಸ್ಥಿತಃ ।
ಸರಸ್ವತ್ಯರ್ಚನೇ ಸೋಽಸ್ಮಿನ್ ದಕ್ಷಿಣಾರ್ಥೇ ಪ್ರವೇಶ್ಯತಾಮ್ ॥ ೬೮

69. 'ಆಗಬಹುದು' ಎಂದು ವಾಸವದತ್ತೆಯು ವಿರೂಪವಾದ ಆಕಾರದಲ್ಲಿದ್ದ ವಸಂತಕನನ್ನು ಬಾಗಿಲಿನ ಬಳಿಯಿಂದ ಒಳಕ್ಕೆ ಕರೆತರಿಸಿದಳು.
70. ಅವನನ್ನು ಕರೆತಂದಾಗ ವತ್ಸರಾಜನನ್ನು ನೋಡಿ ಅವನು ಅಳಲಾರಂಭಿಸಿದನು. ಗುಟ್ಟು ಹೊರಬೀಳದಿರಲಿ ಎಂದು ವತ್ಸರಾಜನು ಅವನಿಗಿಂತೆಂದನು.
71. "ಬ್ರಾಹ್ಮಣನೆ, ರೋಗದಿಂದ (ಉಂಟಾಗಿರುವ ನಿನ್ನ) ವಿಕೃತರೂಪವನ್ನು ನಾನು ಸರಿಪಡಿಸುತ್ತೇನೆ, ಅಳಬೇಡ. ನನ್ನ ಬಳಿಯೇ ನೀನು ಇರು."
72. "ದೇವ, ಇದು ಮಹಾನ್ ಅನುಗ್ರಹ" ಎಂದು ವಸಂತಕನು ಹೇಳಿದನು. ಅವನ ವಿಕೃತರೂಪವನ್ನು ಕಂಡು ರಾಜನ ಮುಖದಲ್ಲೂ ನಗೆ ಮೂಡಿತು.
73. ಅದನ್ನು ನೋಡಿ ಅವನ ಅಭಿಪ್ರಾಯವನ್ನರಿತುಕೊಂಡು ವಸಂತಕನೂ ನಗತೊಡಗಿದನು. ಅದರಿಂದ ಅವನ ಮುಖದ ವಿಕಾರ ಇನ್ನೂ ಹೆಚ್ಚಾಯಿತು.
74. ಆಟದ ಗೊಂಬೆಯಂತೆ ನಗುತ್ತಿದ್ದ ಅವನನ್ನು ನೋಡಿ ವಾಸವದತ್ತೆಯೂ ನಕ್ಕಳು ಹಾಗೂ ಸಂತೋಷಪಟ್ಟಳು.
75. ಅನಂತರ ರಾಜಕುಮಾರಿಯು ಹಾಸ್ಯದಿಂದ ವಸಂತಕನನ್ನು ಕುರಿತು "ಬ್ರಾಹ್ಮಣೋತ್ತಮ, ನೀನು ಯಾವ ವಿಜ್ಞಾನವನ್ನು ತಿಳಿದಿರುವೆ ?" ಎಂದು ಕೇಳಿದಳು.

---

ತಥೇತಿ ದ್ವಾರದೇಶಾತ್ ಸ ತತ್ರ ವಾಸವದತ್ತಯಾ ।
ವಿರೂಪಾಮಾಕೃತಿಂ ಬಿಭ್ರದಾನಾಯ್ಯತ ವಸಂತಕಃ ॥ ೬೯
ಸ ಚಾನೀತಸ್ತಮಾಲೋಕ್ಯ ವತ್ಸೇಶಮರುದಚ್ಛುಚಾ ।
ತತಶ್ಚಾಪ್ರತಿಭೇದಾಯ ಸ ರಾಜಾ ನಿಜಗಾದ ತಮ್ ॥ ೭೦
ಹೇ ಬ್ರಹ್ಮನ್ ರೋಗವೈರೂಪ್ಯಂ ಸರ್ವಮೇತದಹಂ ತವ ।
ನಿವಾರಯಾಮಿ ಮಾ ರೋದೀಸ್ತಿಷ್ಠೇಹೈವ ಮಮಾಂತಿಕೇ ॥ ೭೧
ಮಹಾನ್ ಪ್ರಸಾದೋ ದೇವೇತಿ ಸ ಚೋವಾಚ ವಸಂತಕಃ ।
ಸೋಽಥ ತಂ ವಿಕೃತಂ ದೃಷ್ಟ್ವಾ ರಾಜಾ ಸ್ಮಿತಮುಖೋಽಭವತ್ ॥ ೭೨
ತಚ್ಚಾಲೋಕ್ಯಾಶಯಂ ಬುದ್ಧ್ವಾ ತಸ್ಯ ಸೋಽಪಿ ವಸಂತಕಃ ।
ಹಸತಿ ಸ್ಮಾಧಿಕೋದ್ಭೂತವಿರೂಪಾನನವೈಕೃತಃ ॥ ೭೩
ತಂ ಹಸಂತಂ ತಥಾ ದೃಷ್ಟ್ವಾ ಕ್ರೀಡನೀಯಕಸನ್ನಿಭಮ್ ।
ತತ್ರ ವಾಸವದತ್ತಾಪಿ ಜಹಾಸ ಚ ತುತೋಷ ಚ ॥ ೭೪
ತತಃ ಸಾ ನರ್ಮಣಾ ಬಾಲಾ ತಂ ಪಪ್ರಚ್ಛ ವಸಂತಕಮ್ ।
ಕಿಂ ವಿಜ್ಞಾನಂ ವಿಜಾನಾಸಿ ಭೋ ಬ್ರಹ್ಮನ್ ಕಥ್ಯತಾಮಿತಿ ॥ ೭೫

76. “ದೇವಿ, ಕಥೆಗಳನ್ನು ಹೇಳುವುದನ್ನು ಚೆನ್ನಾಗಿ ತಿಳಿದಿದ್ದೇನೆ” ಎಂದು ಅವನೆಂದನು. “ಹಾಗಿದ್ದರೆ ಒಂದು ಕಥೆಯನ್ನು ಹೇಳೋಣವಾಗಲಿ” ಎಂದು ಅವಳು ಹೇಳಿದಳು.

77. ಅದರಂತೆ ರಾಜಕುಮಾರಿಯನ್ನು ರಂಜಿಸಲು ವಸಂತಕನು ಹಾಸ್ಯದ ವಿಚಿತ್ರತೆಯಿಂದ ರಸಭರಿತವಾದ ಈ ಕಥೆಯನ್ನು ಹೇಳಿದನು.

## ಲೋಹಜಂಘನ ಕಥೆ

78. ಕೃಷ್ಣನ ಜನ್ಮಭೂಮಿಯಾದ ಮಥುರಾ ಎಂಬ ನಗರವಿದೆ. ಅದರಲ್ಲಿ ರೂಪಿಣಿಕಾ ಎಂಬ ಪ್ರಸಿದ್ಧಳಾದ ವಾರಾಂಗನೆ (ವೇಶ್ಯೆ)ಇದ್ದಳು.

79. ಮಕರದಂಷ್ಟ್ರಾ ಎಂಬ ಮುದಿ ಕುಂಟಲಗಿತ್ತಿ ಅವಳ ತಾಯಿ. ರೂಪಿಣಿಕೆಯ ಗುಣಗಳಿಂದ ಆಕರ್ಷಿತರಾದ ಹರೆಯದ ಹುಡುಗರ ಕಣ್ಣಿಗೆ ಅವಳು ವಿಷದ ಧಾರೆ.

80. ಪೂಜೆಯ ವೇಳೆಯಲ್ಲಿ ತನ್ನ ಕರ್ತವ್ಯನಿರ್ವಹಣೆಗಾಗಿ ದೇವಾಲಯಕ್ಕೆ ಹೋಗಿದ್ದ ರೂಪಿಣಿಕೆ ದೂರದಿಂದ ಒಬ್ಬ ಪುರುಷನನ್ನು ನೋಡಿದಳು.

81. ಅವಳು ನೋಡಿದ ಆ ಚೆಲುವನು ಅವಳ ಹೃದಯವನ್ನು ಹೊಕ್ಕನು. ಅದುವರೆಗೂ ಅವಳ ತಾಯಿ ಮಾಡಿದ್ದ ಉಪದೇಶಗಳೆಲ್ಲ ಅವಳ ಮನಸ್ಸಿನಿಂದ ದೂರ ಹೋದುವು.

82. ಆಮೇಲೆ ರೂಪಿಣಿಕೆ ತನ್ನ ದಾಸಿಯನ್ನು ಕರೆದು ಇಂತೆಂದಳು—‘ಹೋಗಿ ನಾವು ಹೇಳಿದಂತೆ ಆ ಪುರುಷನಿಗೆ ಇಂದು ನನ್ನ ಮನೆಗೆ ಬರಬೇಕು’ ಎಂದು ಹೇಳು.

---

ಕಥಾಃ ಕಥಯಿತುಂ ದೇವಿ ಜಾನಾಮೀತಿ ಸ ಚಾವದತ್ ।
ಕಥಾಂ ಕಥಯ ತರ್ಹ್ಯೇಕಾಮಿತಿ ಸಾಪಿ ತತೋಽಬ್ರವೀತ್ ॥ ೭೬
ತತಸ್ತಾಂ ರಾಜತನಯಾಂ ರಂಜಯನ್ ಸ ವಸಂತಕಃ ।
ಹಾಸ್ಯವೈಚಿತ್ರ್ಯಸರಸಾಮಿಮಾಮಕಥಯತ್ ಕಥಾಮ್ ॥ ೭೭
ಅಸ್ತೀಹ ಮಥುರಾ ನಾಮ ಪುರೀ ಕಂಸಾರಿಜನ್ಮಭೂಃ ।
ತಸ್ಯಾಂ ರೂಪಿಣಿಕೇತ್ಯಾಸೀತ್ ಖ್ಯಾತಾ ವಾರವಿಲಾಸಿನೀ ॥ ೭೮
ತಸ್ಯಾ ಮಕರದಂಷ್ಟ್ರಾಖ್ಯಾ ಮಾತಾಭೂದ್ ವೃದ್ಧಕುಟ್ಟನೀ ।
ತದ್ಗುಣಾಕೃಷ್ಯಮಾಣಾನಾಂ ಯೂನಾಂ ದೃಶಿ ವಿಷಚ್ಛಟಾ ॥ ೭೯
ಪೂಜಾಕಾಲೇ ಸುರಕುಲಂ ಸ್ವನಿಯೋಗಾಯ ಜಾತು ಸಾ ।
ಗತಾ ರೂಪಿಣಿಕಾ ದೂರಾದೇಕಂ ಪುರುಷಮೈಕ್ಷತ ॥ ೮೦
ಸ ದೃಷ್ಟಃ ಸುಭಗಸ್ತಸ್ಯಾ ವಿವೇಶ ಹೃದಯಂ ತಥಾ ।
ಯಥಾ ಮಾತ್ರಾ ಕೃತಾಸ್ತೇಽಸ್ಮಾದುಪದೇಶಾ ವಿನಿರ್ಯಯುಃ ॥ ೮೧
ಚೇಟಿಕಾಮಥ ಸಾವಾದೀದ್ ಗಚ್ಛ ಮದ್ವಚನಾದಮುಮ್ ।
ಪುರುಷಂ ಬ್ರೂಹಿ ಮದ್ಗೇಹೇ ತ್ವಯಾದ್ಯಾಗಮ್ಯತಾಮಿತಿ ॥ ೮೨

83. ಆಗಲಿ ಎಂದು ಹೇಳಿದ ದಾಸಿಯು ಹೋಗಿ ಅವನಿಗೆ ಆ ಮಾತನ್ನು ಹೇಳಿದಳು. ಆಗ ಸ್ವಲ್ಪ ವಿಮರ್ಶೆಮಾಡಿ ಆ ಮನುಷ್ಯನು ಅವಳಿಗೆ ಹೀಗೆ ಹೇಳಿದನು.

84. "ನಾನು ಲೋಹಜಂಘನೆಂಬ ಬ್ರಾಹ್ಮಣ. ನನ್ನಲ್ಲಿ ಹಣವಿಲ್ಲ. ಶ್ರೀಮಂತರಿಗೆ ಮಾತ್ರ ಲಭ್ಯವಾಗುವ ರೂಪಿಣಿಕೆಯ ಮನೆಯಲ್ಲಿ ನಾನು ಯಾರು ?"

85. 'ಒಡತಿ ನಿನ್ನಿಂದ ಹಣವನ್ನು ಅಪೇಕ್ಷಿಸುವುದಿಲ್ಲ' ಎಂದು ದಾಸಿ ಹೇಳಿದ ಮೇಲೆ ಲೋಹಜಂಘನು 'ಹಾಗಾದರಾಗಲಿ' ಎಂದು ಒಪ್ಪಿದನು.

86. ದಾಸಿಯ ಬಾಯಿಂದ ವಿಷಯವನ್ನರಿತ ರೂಪಿಣಿಕೆಯು ಮನೆಗೆ ಹುಮ್ಮಸ್ಸಿನಿಂದ ಹೋಗಿ ಅವನ ದಾರಿಯಲ್ಲೇ ಕಣ್ಣನ್ನು ನೆಟ್ಟು ನಿಂತುಕೊಂಡಳು.

87. ಕ್ಷಣಕಾಲದಲ್ಲೇ ಲೋಹಜಂಘನು ಅವಳ ಭುವನಕ್ಕೆ ಬಂದನು. ಇವನೆಲ್ಲಿಯವನು ಎಂದು ಕುಂಟಲಗಿತ್ತಿ ಮಕರದಂಷ್ಟ್ರೆಯು ಅವನನ್ನು ನೋಡಿದಳು.

88. ರೂಪಿಣಿಕೆ ಅವನನ್ನು ನೋಡಿ ತಾನೇ ಎದ್ದು ಆದರಪೂರ್ವಕವಾಗಿ ಕಂಠದಲ್ಲಿ ಆಲಿಂಗಿಸಿ ಸಂತೋಷದಿಂದ ವಾಸಗೃಹದೊಳಕ್ಕೆ ಅವನನ್ನು ಕರೆದೊಯ್ದಳು.

89. ಅಲ್ಲಿ ಅವಳು ಲೋಹಜಂಘನ ಸೊಬಗಿನ ಸಂಪತ್ತಿನಿಂದ ವಶೀಕೃತಳಾಗಿ ಜನ್ಮದಲ್ಲಿ (ಇದಕ್ಕಿಂತ) ಬೇರೆ ಯಾವ ಫಲವೂ ಇಲ್ಲ ಎಂದು ಭಾವಿಸಿದಳು.

---

ತಥೇತಿ ಚೇಟಿಕಾ ಸಾ ಚ ಗತ್ವಾ ತಸ್ಮೈ ತದಬ್ರವೀತ್ ।
ತತಃ ಸ ಕಿಂಚಿದ್ ವಿಮೃಶನ್ ಪುರುಷಸ್ತಾಮಭಾಷತ ॥ ೮೩

ಲೋಹಜಂಘಾಭಿಧಾನೋಽಸ್ಮಿ ಬ್ರಾಹ್ಮಣೋ ನಾಸ್ತಿ ಮೇ ಧನಮ್ ।
ತದಾಢ್ಯಜನಲಭ್ಯೇ ಹಿ ಕೋಽಹಂ ರೂಪಿಣಿಕಾಗೃಹೇ ॥ ೮೪

ನ ಧನಂ ವಾಂಛ್ಯತೇ ತ್ವತ್ತಃ ಸ್ವಾಮಿನ್ಯೇತ್ಯುದಿತೇ ತಯಾ ।
ಸ ಲೋಹಜಂಘಸ್ತದ್ವಾಕ್ಯಂ ತಥೇತಿ ಪ್ರತ್ಯಪದ್ಯತ ॥ ೮೫

ತತಶ್ಚೇಟೀಮುಖಾದ್ ಬುದ್ಧ್ವಾ ತಸ್ಯಾಃ ಸಾ ಗೃಹಮುತ್ಸುಕಾ ।
ಗತ್ವಾ ರೂಪಿಣಿಕಾ ತಸ್ಥೌ ತನ್ಮಾರ್ಗನ್ಯಸ್ತಲೋಚನಾ ॥ ೮೬

ಕ್ಷಣಾಚ್ಚ ಲೋಹಜಂಘೋಽಥ ತಸ್ಯಾ ಮಂದಿರಮಾಯಯೌ ।
ಕುತೋಽಯಮಿತಿ ಕುಟ್ಟನ್ಯಾ ದೃಷ್ಟೋ ಮಕರದಂಷ್ಟ್ರಯಾ ॥ ೮೭

ಸಾಪಿ ರೂಪಿಣಿಕಾ ದೃಷ್ಟ್ವಾ ಸ್ವಯಮುತ್ಥಾಯ ಸಾದರಾ ।
ವಾಸವೇಶ್ಮಾಂತರಂ ಹೃಷ್ಟಾ ಕಂಠೇ ಲಗ್ನಾ ನಿನಾಯ ತಮ್ ॥ ೮೮

ತತ್ರ ಸಾ ಲೋಹಜಂಘಸ್ಯ ತಸ್ಯ ಸೌಭಾಗ್ಯಸಂಪದಾ ।
ವಶೀಕೃತಾ ಸತೀ ನಾನ್ಯತ್ ಫಲಂ ಜನ್ಮನ್ಯಮನ್ಯತ ॥ ೮೯

90. ಅವಳು ಬೇರೆ ಎಲ್ಲ ಗಂಡಸರ ಸಂಪರ್ಕವನ್ನೂ ಬಿಟ್ಟುಬಿಟ್ಟಳು. ಅವಳೊಡನೆ ಆ ತರುಣ (ಲೋಹಜಂಘನು) ಅವಳ ಮನೆಯಲ್ಲಿ ಸುಖವಾಗಿದ್ದನು.

91. ಸಮಸ್ತ ವೇಶ್ಯಾವನಿತೆಯರಿಗೆ ಶಿಕ್ಷಣವನ್ನಿತ್ತಿದ್ದ ತಾಯಿ ಮಕರದಂಷ್ಟ್ರೆಯು ಅದನ್ನೆಲ್ಲ ನೋಡಿ ಖಿನ್ನಳಾಗಿ ಏಕಾಂತದಲ್ಲಿ ರೂಪಿಣಿಕೆಗೆ ಹೀಗೆ ಹೇಳಿದಳು.

92. "ಮಗಳೇ, ಏಕೆ ಈ ಬಡಮನುಷ್ಯನನ್ನು ನೀನು ಆಶ್ರಯಿಸಿರುವೆ ? ಒಳ್ಳೆಯ ವೇಶ್ಯೆಯರು ಹೆಣವನ್ನಾದರೂ ಮುಟ್ಟುತ್ತಾರೆಯೇ ವಿನಾ ಹಣವಿಲ್ಲದವನನ್ನು ಮುಟ್ಟುವುದೇ ಇಲ್ಲ.

93. ಪ್ರೇಮವೆಲ್ಲಿ, ವೇಶ್ಯಾವೃತ್ತಿಯೆಲ್ಲಿ ಎಂಬುದನ್ನು ನೀನು ಮರೆತೆಯಾ ? ರಾಗಿಣಿಯಾದ (ಪ್ರೇಮವುಳ್ಳ) ವೇಶ್ಯೆಯು ರಾಗಿಣಿಯಾದ (ಕೆಂಪು ಬಣ್ಣವುಳ್ಳ) ಸಂಜೆಯಂತೆ ಹೆಚ್ಚು ಕಾಲ ಶೋಭಿಸುವುದಿಲ್ಲ.

94. ಗಣಿಕೆಯು ಕೃತಕ ಪ್ರೇಮವನ್ನು ನಟಿಯಂತೆ ಹಣಕ್ಕಾಗಿ ತೋರಿಸಬೇಕು. ಆದ್ದರಿಂದ ಹಣವಿಲ್ಲದ ಈ ಬಡವನನ್ನು ಬಿಡು, ನೀನೇ ನಿನ್ನ ನಾಶವನ್ನು ಮಾಡಿಕೊಳ್ಳಬೇಡ."

95. ತಾಯಿಯ ಈ ಮಾತನ್ನು ಕೇಳಿ ರೋಷದಿಂದ ರೂಪಣಿಕೆ ಹೀಗೆಂದಳು. "ಹಾಗೆಲ್ಲ ಹೇಳಬೇಡ. ಇವನು ನನಗೆ ಪ್ರಾಣಕ್ಕಿಂತಲೂ ಹೆಚ್ಚು ಇಷ್ಟವಾದವನು.

---

ತತಸ್ತಯಾ ನಿವೃತ್ತಾನ್ಯಪುರುಷಾಸಂಗಯಾ ಸಹ ।
ಯಥಾಸುಖಂ ಸ ತತ್ರೈವ ತಸ್ಥೌ ತನ್ಮಂದಿರೇ ಯುವಾ ॥ ೯೦
ತದ್ದೃಷ್ಟ್ವಾ ಶಿಕ್ಷಿತಾಶೇಷವೇಶಯೋಷಿಜ್ಜಗಾದ ಸಾ ।
ಮಾತಾ ಮಕರದಂಷ್ಟ್ರಾ ಸಾ ಖಿನ್ನಾ ರೂಪಣಿಕಾಂ ಮುಹುಃ ॥ ೯೧
ಕಿಮಯಂ ನಿರ್ಧನಃ ಪುತ್ರಿ ಸೇವ್ಯತೇ ಪುರುಷಸ್ತ್ವಯಾ ।
ಶವಂ ಸ್ಪೃಶಂತಿ ಸುಜನಾ ಗಣಿಕಾ ನ ತು ನಿರ್ಧನಮ್ ॥ ೯೨
ಕ್ವಾನುರಾಗಃ ಕ್ವ ವೇಶ್ಯಾತ್ವಮಿತಿ ತೇ ವಿಸ್ಮೃತಂ ಕಥಮ್ ।
ಸಂಧ್ಯೇವ ರಾಗಿಣೀ ವೇಶ್ಯಾ ನ ಚಿರಂ ಪುತ್ರಿ ದೀಪ್ಯತೇ ॥ ೯೩
ನಟೀವ ಕೃತ್ರಿಮಂ ಪ್ರೇಮ ಗಣಿಕಾರ್ಥಾಯ ದರ್ಶಯೇತ್ ।
ತದೇನಂ ನಿರ್ಧನಂ ಮುಂಚ ಮಾ ಕೃಥಾ ನಾಶಮಾತ್ಮನಃ ॥ ೯೪
ಇತಿ ಮಾತುರ್ವಚಃ ಶ್ರುತ್ವಾ ರುಷಾ ರೂಪಣಿಕಾಬ್ರವೀತ್ ।
ಮೈವಂ ವಾದೀರ್ಮಮ ಹ್ಯೇಷ ಪ್ರಾಣೇಭ್ಯೋಽಪ್ಯಧಿಕಃ ಪ್ರಿಯಃ ॥ ೯೫

96. ನ್ನಲ್ಲಿ ಬೇಕಾದಷ್ಟು ಹಣವಿದೆ. ಬೇರೆ ಹಣದಿಂದ ನಾನೇನು ಮಾಡಲಿ ? ಆದ್ದರಿಂದ ಅಮ್ಮ, ಮತ್ತೆ ನೀನು ನನಗೆ ಹೀಗೆ ಹೇಳಬಾರದು."

97. ಅದನ್ನು ಕೇಳಿ ಕೋಪದಿಂದ ಮಕರದಂಷ್ಟ್ರೆ ಲೋಹಜಂಘನನ್ನು ಹೊರಗೆ ಹಾಕುವ ವಿಧಾನದ ಉಪಾಯವನ್ನು ಹುಡುಕುತ್ತಾ ಇದ್ದಳು.

98. ಅವಳು ಅದೇ ಮಾರ್ಗದಲ್ಲಿ ಬರುತ್ತಿದ್ದ, (ತನ್ನ ಹಣವನ್ನು ಕಳೆದುಕೊಂಡು) ಕ್ಷೀಣಕೋಶನಾಗಿದ್ದ ಒಬ್ಬ ರಾಜಪುತ್ರನನ್ನು ಕಂಡಳು. ಅವನನ್ನು ಶಸ್ತ್ರ ಹಿಡಿದಿದ್ದ ಭಟರು ಸುತ್ತುವರಿದಿದ್ದರು.

99–100. ಬೇಗಬೇಗನೆ ಅವನ ಬಳಿ ಹೋಗಿ ಅವನನ್ನು ಏಕಾಂತಕ್ಕೆ ಕರೆದೊಯ್ದು "ನನ್ನ ಮನೆಯನ್ನು ಹಣವೇ ಇಲ್ಲದ ಕಾಮುಕನೊಬ್ಬನು ಆಕ್ರಮಿಸಿಕೊಂಡಿದ್ದಾನೆ. ಆದ್ದರಿಂದ ನೀನಿಂದು ಅಲ್ಲಿಗೆ ಬಾ. ಅವನು ನನ್ನ ಮನೆಯಿಂದ ತೊಲಗುವಂತೆ ಮಾಡು, ನನ್ನ ಮಗಳನ್ನು ಸ್ವೀಕರಿಸು" ಎಂದು ಹೇಳಿದಳು.

101. ಹಾಗೆಯೇ ಆಗಲಿ ಎಂದು ಹೇಳಿ ರಾಜಪುತ್ರನು ಮನೆಯೊಳಗೆ ಪ್ರವೇಶಿಸಿದನು. ಆ ಸಮಯದಲ್ಲಿ ರೂಪಣಿಕೆ ದೇವಾಲಯದಲ್ಲಿದ್ದಳು.

102. ಆಗ ಲೋಹಜಂಘನೂ ಹೊರಗೆ ಎಲ್ಲೋ ಹೋಗಿದ್ದನು. ಒಂದು ಕ್ಷಣದ ಅನಂತರ ಯಾವ ಅನುಮಾನವೂ ಇಲ್ಲದ ಅವನು ಅಲ್ಲಿಗೆ ಬಂದನು.

---

ಧನಮಸ್ತಿ ಚ ಮೇ ಭೂರಿ ಕಿಮನ್ಯೇನ ಕರೋಮ್ಯಹಮ್ ।
ತದಂಬ ನೈವ ವಕ್ತವ್ಯಾ ಭೂಯೋಽಪ್ಯೇವಮಹಂ ತ್ವಯಾ ॥ ೯೬
ತಚ್ಛ್ರುತ್ವಾ ಲೋಹಜಂಘಸ್ಯ ನಿರ್ವಾಸನವಿಧೌ ಕ್ರುಧಾ ।
ತಸ್ಥೌ ಮಕರದಂಷ್ಟ್ರಾ ಸಾ ತಸ್ಯೋಪಾಯಂ ವಿಚಿನ್ವತೀ ॥ ೯೭
ಅಥ ಮಾರ್ಗಾಗತಂ ಕಂಚಿತ್ ಕ್ಷೀಣಕೋಷಂ ದದರ್ಶ ಸಾ ।
ರಾಜಪುತ್ರಂ ಪರಿವೃತಂ ಪುರುಷೈಃ ಶಸ್ತ್ರಪಾಣಿಭಿಃ ॥ ೯೮
ಉಪಗಮ್ಯ ದ್ರುತಂ ತಂ ಚ ನೀತ್ವೈಕಾಂತೇ ಜಗಾದ ಸಾ ।
ನಿರ್ಧನೇನ ಮಮೈಕೇನ ಕಾಮುಕೇನಾವೃತಂ ಗೃಹಮ್ ॥ ೯೯
ತತ್ತ್ವಮಾಗಚ್ಛ ತತ್ರಾದ್ಯ ತಥಾ ಚ ಕುರು ಯೇನ ಸಃ ।
ಗೃಹಾನ್ಮಮ ನಿವರ್ತೇತ ಮದೀಯಾಂ ಚ ಸುತಾಂ ಭಜ ॥ ೧೦೦
ತಥೇತಿ ರಾಜಪುತ್ರೋಽಥ ಪ್ರವಿವೇಶ ಸ ತದ್ಗೃಹಮ್ ।
ತಸ್ಮಿನ್ ಕ್ಷಣೇ ರೂಪಣಿಕಾ ತಸ್ಥೌ ದೇವಕುಲೇ ಚ ಸಾ ॥ ೧೦೧
ಲೋಹಜಂಘಶ್ಚ ತತ್ಕಾಲಂ ಬಹಿಃ ಕ್ವಾಪಿ ಸ್ಥಿತೋಽಭವತ್ ।
ಕ್ಷಣಾಂತರೇ ಚ ನಿಶ್ಶಂಕಸ್ತತ್ರೈವ ಸಮುಪಾಯಯೌ ॥ ೧೦೨

103. ಕೂಡಲೇ ಆ ರಾಜಪುತ್ರನ ಸೇವಕರು ಲೋಹಜಂಘನನ್ನು ಓಡಿಸಿಕೊಂಡು ಬಲವಾಗಿ ಕಾಲಿನಿಂದ ಒದ್ದು ಮೈಕೈಗಳಿಗೆಲ್ಲ ಚೆನ್ನಾಗಿ ಹೊಡೆದರು.

104. ಆಮೇಲೆ ಅವರೇ ಅವನನ್ನು ಮಲ ತುಂಬಿದ ಗುಂಡಿಯಲ್ಲಿ ತಳ್ಳಿದರು. ಲೋಹಜಂಘನು ಹೇಗೋ (ಮೇಲೆದ್ದು) ಅಲ್ಲಿಂದ ಪಲಾಯನ ಮಾಡಿದನು.

105. ಆಮೇಲೆ ಆ ವಿಷಯವನ್ನೆಲ್ಲ ತಿಳಿದುಕೊಂಡ ರೂಪಣಿಕೆಯು ಬಂದು ಶೋಕದಿಂದ ನೊಂದುಬೆಂದಳು. ಅದನ್ನು ನೋಡಿ ರಾಜಪುತ್ರನು ಬಂದ ದಾರಿಯಿಂದ ಹೊರಟುಹೋದನು.

106. ಹೀಗೆ ಕುಂಟಲಗಿತ್ತಿಯಿಂದ ಬಲಾತ್ಕಾರವಾಗಿ ಅವಮಾನಕ್ಕೊಳಗಾದ ಲೋಹಜಂಘನು (ಪ್ರಿಯೆಯಿಂದ) ವಿಯುಕ್ತನೂ ಆಗಿ ಪ್ರಾಣವನ್ನು ಬಿಡಲು ತೀರ್ಥಸ್ಥಳಕ್ಕೆ ಹೋಗಲು ಸಿದ್ಧನಾದನು.

107. ಅಡವಿಯಲ್ಲಿ ಹೋಗುತ್ತಿದ್ದಾಗ ಹೃದಯದಲ್ಲಿ ಕುಂಟಲಗಿತ್ತಿಯ ಮೇಲೆ ಕೋಪದಿಂದ ಲೋಹಜಂಘನ ಹೃದಯವೂ ಬೇಸಿಗೆಯ ಬಿಸಿಲಿನಿಂದ ಅವನ ಚರ್ಮವೂ ಉರಿಯುತ್ತಿದ್ದು ಅವನು ನೆರಳನ್ನು ಬಯಸಿದನು.

108. ಎಲ್ಲಿಯೂ ಮರ ಸಿಗದ ಅವನಿಗೆ ಒಂದು ಆನೆಯ ಶವವು ಸಿಕ್ಕಿತು. ಶರೀರದ ಹಿಂಬದಿಯಿಂದ ಒಳಕ್ಕೆ ನುಗ್ಗಿದ ನರಿಗಳು ಅದರ ಮಾಂಸವನ್ನೆಲ್ಲ ತಿಂದುಹಾಕಿದ್ದುವು.

---

ತತ್ಕ್ಷಣಂ ರಾಜಪುತ್ರಸ್ಯ ತಸ್ಯ ಭೃತ್ಯೈಃ ಪ್ರಧಾವ್ಯ ಸಃ ।
ದೃಢಂ ಪಾದಪ್ರಹಾರಾದ್ಯೈಃ ಸರ್ವೇಷ್ವಂಗೇಷ್ವತಾಡ್ಯತ ॥ ೧೦೩

ತತಸ್ತೈರೇವ ಚಾಮೇಧ್ಯಪೂರ್ಣೇ ಕ್ಷಿಪ್ತಃ ಸ್ವಖಾತಕೇ ।
ಲೋಹಜಂಘಃ ಕಥಮಪಿ ಪ್ರಪಲಾಯಿತವಾಂಸ್ತತಃ ॥ ೧೦೪

ಅಥಾಗತಾ ರೂಪಣಿಕಾ ತದ್‌ಬುದ್ಧ್ವಾ ಶೋಕವಿಹ್ವಲಾ ।
ಸಾಭೂದ್ ವೀಕ್ಷ್ಯಾಥ ಸ ಯಯೌ ರಾಜಪುತ್ರೋ ಯಥಾಗತಮ್ ॥ ೧೦೫

ಲೋಹಜಂಘೋಽಪಿ ಕುಟ್ಟನ್ಯಾ ಪ್ರಸಹ್ಯ ಸ ಖಲೀಕೃತಃ ।
ಗಂತುಂ ಪ್ರವವೃತೇ ತೀರ್ಥಂ ಪ್ರಾಣಾಂಸ್ತ್ಯಕ್ತುಂ ವಿಯೋಗವಾನ್ ॥ ೧೦೬

ಗಚ್ಛನ್ನಟವ್ಯಾಂ ಸಂತಪ್ತಃ ಕುಟ್ಟನೀಮನ್ಯುನಾ ಹೃದಿ ।
ತ್ವಚಿ ಚ ಗ್ರೀಷ್ಮತಾಪೇನ ಚ್ಛಾಯಾಮಭಿಲಲಾಷ ಸಃ ॥ ೧೦೭

ತರುಮಪ್ರಾಪ್ನುವನ್ ಸೋಽಥ ಲೇಭೇ ಹಸ್ತಿಕಲೇವರಮ್ ।
ಜಘನೇನ ಪ್ರವಿಶ್ಯಾಂತರ್ನಿರ್ಮಾಂಸಂ ಜಂಬುಕೈಃ ಕೃತಮ್ ॥ ೧೦೮

109. ಚರ್ಮ ಮಾತ್ರ ಉಳಿದಿದ್ದ ಆ ಆನೆಯ ಶರೀರದ ಒಳಗೆ ಪ್ರವೇಶಿಸಿ ದಣಿದಿದ್ದ ಲೋಹಜಂಘನು ತಂಪಾದ ಗಾಳಿಯಿದ್ದುದರಿಂದ ಅಲ್ಲೇ ನಿದ್ದೆ ಹೋದನು.

110. ಆಗ ಇದ್ದಕ್ಕಿದ್ದಂತೆ ಎದ್ದ ಮೋಡವು ಕ್ಷಣ ಮಾತ್ರದಲ್ಲಿ ಎಲ್ಲ ದಿಕ್ಕಿನಲ್ಲೂ ಹರಡಿ ಧಾರಾಕಾರವಾಗಿ ಮಳೆಯನ್ನು ಸುರಿಸಿತು.

111. ಅದರಿಂದ ಆನೆಯ ಚರ್ಮವು (ನೆನೆದು) ಕುಗ್ಗಿ ಮುಚ್ಚಿಕೊಂಡಿತು. ಒಂದು ಕ್ಷಣದಲ್ಲೇ ಆ ಮಾರ್ಗದಲ್ಲಿ ನೀರಿನ ಪ್ರವಾಹ ದೊಡ್ಡದಾಗಿ ಬಂದಿತು.

112. ಆ ಹೊಳೆಯು ಆನೆಯ ಚರ್ಮವನ್ನು ಸೆಳೆದುತಂದು ಗಂಗಾನದಿಯಲ್ಲಿ ಹಾಕಿತು. ಅದರ ನೀರಿನ ಪ್ರವಾಹವು ಚರ್ಮವನ್ನು ಸಮುದ್ರದ ಮಧ್ಯಕ್ಕೆ ತಂದಿಟ್ಟಿತು.

113. ಗರುಡನ ವಂಶದಲ್ಲಿ ಹುಟ್ಟಿದ ಪಕ್ಷಿಯೊಂದು ಅದನ್ನು ನೋಡಿ ಮಾಂಸವಿರಬಹುದೆಂಬ ಅನುಮಾನದಿಂದ ಹಾರಿ ಬಂದು ಎರಗಿ ಅದನ್ನು ಎತ್ತಿಕೊಂಡು ಸಮುದ್ರದ ಇನ್ನೊಂದು ತೀರಕ್ಕೆ ಒಯ್ದಿತು.

114. ಅಲ್ಲಿ ತನ್ನ ಕೊಕ್ಕಿನಿಂದ ಆನೆಯ ಚರ್ಮವನ್ನು ಸೀಳಿಹಾಕಿ ಒಳಗೆ ಇದ್ದ ಮನುಷ್ಯನನ್ನು ನೋಡಿ ಆ ಪಕ್ಷಿಯು ಪಲಾಯನ ಮಾಡಿ ಹೊರಟು ಹೋಯಿತು.

115. ಆಗ ಪಕ್ಷಿಯು ಮಾಡಿದ ಗಾಬರಿಯ ಶಬ್ದದಿಂದ ಎಚ್ಚರಗೊಂಡ ಲೋಹಜಂಘನು ಅದರ ಕೊಕ್ಕಿನಿಂದ ಮಾಡಿದ್ದ ತೂತಿನಿಂದ ಹೊರಗೆ ಬಂದನು.

---

ಚರ್ಮಾವಶೇಷೇ ತತ್ರಾಂತಃ ಪರಿಶ್ರಾಂತಃ ಪ್ರವಿಶ್ಯ ಸಃ ।
ಲೋಹಜಂಘೋ ಯಯೌ ನಿದ್ರಾಂ ಪ್ರವಿಶದ್ವಾತಶೀತಲೇ ॥ ೧೦೯
ಅಥಾಕಸ್ಮಾತ್ ಸಮುತ್ಥಾಯ ಕ್ಷಣೇನೈವ ಸಮಂತತಃ ।
ಮೇಘಃ ಪ್ರವವೃತೇ ತತ್ರ ಧಾರಾಸಾರೇಣ ವರ್ಷಿತುಮ್ ॥ ೧೧೦
ತೇನ ನಿರ್ವಿವರಂ ಪ್ರಾಪ ಸಂಕೋಚಂ ಹಸ್ತಿಚರ್ಮ ತತ್ ।
ಕ್ಷಣಾಚ್ಚ ತೇನ ಮಾರ್ಗೇಣ ಜಲೌಘೋ ಭೃಶಮಾಯಯೌ ॥ ೧೧೧
ತೇನಾಪಹೃತ್ಯ ಗಂಗಾಯಾಮಕ್ಷೇಪಿ ಗಜಚರ್ಮ ತತ್ ।
ತಜ್ಜಲೌಘೇನ ನೀತ್ವಾ ಚ ಸಮುದ್ರಾಂತರ್ನ್ಯಧೀಯತ ॥ ೧೧೨
ತತ್ರ ದೃಷ್ಟ್ವಾ ಚ ತಚ್ಚರ್ಮ ನಿಪತ್ಯಾಮಿಷಶಂಕಯಾ ।
ಹೃತ್ವಾಬ್ಧೇಃ ಪಾರಮನಯತ್ ಪಕ್ಷೀ ಗರುಡವಂಶಜಃ ॥ ೧೧೩
ತತ್ರ ಚಂಚ್ವಾ ವಿದಾರ್ಯೈತದ್ಗಜಚರ್ಮ ವಿಲೋಕ್ಯ ಚ ।
ಅಂತಃಸ್ಥಂ ಮಾನುಷಂ ಪಕ್ಷೀ ಪಲಾಯ್ಯ ಸ ತತೋ ಯಯೌ ॥ ೧೧೪
ತತಶ್ಚ ಚರ್ಮಣಸ್ತಸ್ಮಾತ್ ಪಕ್ಷಿಸಂರಂಭಬೋಧಿತಃ ।
ತಚ್ಚುಂಚುರಚಿತದ್ವಾರಾಲ್ಲೋಹಜಂಘೋ ವಿನಿರ್ಯಯೌ ॥ ೧೧೫

116. ತಾನು ಸಮುದ್ರದ ಆಚೆಯ ದಡದಲ್ಲಿರುವುದನ್ನು ಕಂಡು ಆಶ್ಚರ್ಯಪಟ್ಟು ಅದುವರೆಗೆ ನಡೆದುದೆಲ್ಲ ನಿದ್ರೆಯಿಲ್ಲದ ಕನಸು ಎಂದು ಅಂದುಕೊಂಡನು.

117. ಅಲ್ಲಿ ಇಬ್ಬರು ಭಯಂಕರ ರಾಕ್ಷಸರನ್ನು ನೋಡಿದನು. ಅವನಿಗೆ ಹೆದರಿಕೆಯಾಯಿತು. ಆ ರಾಕ್ಷಸರೂ ದೂರದಿಂದ ಇವನನ್ನು ಚಕಿತರಾಗಿ ನೋಡಿದರು.

118. ರಾಮನಿಂದ ಉಂಟಾಗಿದ್ದ ಸೋಲನ್ನು ನೆನಪಿಸಿಕೊಂಡು ಲೋಹಜಂಘನೂ ಅದೇ ರೀತಿಯಾಗಿ ಸಮುದ್ರವನ್ನು ದಾಟಿಬಂದ ಮನುಷ್ಯನೆಂಬುದನ್ನು ನೋಡಿ ಮತ್ತೆ ಅವರ ಹೃದಯದಲ್ಲಿ ಭಯ ಉಂಟಾಯಿತು.

119. ಸಮಾಲೋಚನೆ ಮಾಡಿ ಅವರಿಬ್ಬರಲ್ಲೊಬ್ಬನು ಆಗಲೇ ಹೋಗಿ ತಮ್ಮ ಪ್ರಭು ವಿಭೀಷಣನಿಗೆ ಕಂಡದ್ದನ್ನೆಲ್ಲ ಹಾಗೆಯೇ ಬಿನ್ನವಿಸಿದನು.

120. ರಾಜಾ ವಿಭೀಷಣನು ಹಿಂದೆ ರಾಮನ ಪ್ರಭಾವವನ್ನು ನೋಡಿದ್ದವನಾದ್ದರಿಂದ ಮನುಷ್ಯನ ಆಗಮನದಿಂದ ಹೆದರಿ ರಾಕ್ಷಸನಿಗೆ ಹೀಗೆ ಹೇಳಿದನು.

೧೨೧. "ಅಯ್ಯ, ಹೋಗು, ಆ ಮನುಷ್ಯನಿಗೆ ನಮ್ಮ ಮನೆಗೆ ಬರುವ ಅನುಗ್ರಹ ಮಾಡಬೇಕೆಂದು ನಾನು ಹೇಳಿದೆನೆಂದು ಪ್ರೀತಿಯಿಂದ ಹೇಳು.'

---

ದೃಷ್ಟ್ವಾ ಸಮುದ್ರಪಾರಸ್ಥಮಾತ್ಮಾನಂ ಚ ಸವಿಸ್ಮಯಃ ।
ಅನಿದ್ರಸ್ವಪ್ನಮಿವ ತತ್ ಸ ಸಮಗ್ರಮಮನ್ಯತ ॥ ೧೧೬

ಅಥ ದ್ವೌ ರಾಕ್ಷಸೌ ತತ್ರ ಘೋರೌ ಭೀತೋ ದದರ್ಶ ಸಃ ।
ತೌ ಚಾಪಿ ರಾಕ್ಷಸೌ ದೂರಾಚ್ಚಕಿತೌ ತಮಪಶ್ಯತಾಮ್ ॥ ೧೧೭

ರಾಮಾತ್ ಪರಾಭವಂ ಸ್ಮೃತ್ವಾ ತಂ ತಥೈವ ಚ ಮಾನುಷಮ್ ।
ದೃಷ್ಟ್ವಾ ತೀರ್ಣಾಂಬುಧಿಂ ಭೂಯಸ್ತೌ ಭಯಂ ಹೃದಿ ಚಕ್ರತುಃ ॥ ೧೧೮

ಸಂಮಂತ್ರ್ಯ ಚ ತಯೋರ್ಮಧ್ಯಾದೇಕೋ ಗತ್ವಾ ತದೈವ ತಮ್ ।
ವಿಭೀಷಣಾಯ ಪ್ರಭವೇ ಯಥಾದೃಷ್ಟಂ ನ್ಯವೇದಯತ್ ॥ ೧೧೯

ದೃಷ್ಟರಾಮಪ್ರಭಾವಃ ಸನ್ ಸೋಽಪಿ ರಾಜಾ ವಿಭೀಷಣಃ ।
ಮಾನುಷಾಗಮನಾದ್ ಭೀತೋ ರಾಕ್ಷಸಂ ತಮಭಾಷತ ॥ ೧೨೦

ಗಚ್ಛ ಮದ್ವಚನಾದ್ ಭದ್ರ ಪ್ರೀತ್ಯಾ ತಂ ಬ್ರೂಹಿ ಮಾನುಷಮ್ ।
ಆಗಮ್ಯತಾಂ ಗೃಹೇಽಸ್ಮಾಕಂ ಪ್ರಸಾದಃ ಕ್ರಿಯತಾಮಿತಿ ॥ ೧೨೧

೧೨೨. ಹೆದರಿಕೊಂಡಿದ್ದ ಆ ರಾಕ್ಷಸನೂ ಆಗಲಿ ಎಂದು ಹೇಳಿ ಬಂದು ಲೋಹಜಂಘನಿಗೆ ತನ್ನ ಒಡೆಯನ ಅರಿಕೆಯ ಮಾತನ್ನು ಹೇಳಿದನು.

೧೨೩. ಪ್ರಶಾಂತಬುದ್ಧಿಯ ಬ್ರಾಹ್ಮಣ ಲೋಹಜಂಘನೂ ಒಪ್ಪಿಕೊಂಡು ಆ ರಾಕ್ಷಸನೊಡನೆ ಲಂಕೆಗೆ ಹೋದನು.

೧೨೪. ಅಲ್ಲಿ ಚಿನ್ನದ ಅರಮನೆಗಳನ್ನು ಕಂಡು ಆಶ್ಚರ್ಯಪಟ್ಟು ಅನಂತರ ರಾಜನ ಅರಮನೆಯನ್ನು ಪ್ರವೇಶಿಸಿ ವಿಭೀಷಣನನ್ನು ಕಂಡನು.

೧೨೫. ರಾಜನು ಆತಿಥ್ಯ ಮಾಡಿದಾಗ ಲೋಹಜಂಘನು ಆಶೀರ್ವಾದ ಮಾಡಿದನು. ರಾಜ ವಿಭೀಷಣನು "ಬ್ರಾಹ್ಮಣೋತ್ತಮ, ನೀನು ಹೇಗೆ ಈ ದೇಶಕ್ಕೆ ಬಂದೆ' ಎಂದು ಕೇಳಿದನು.

೧೨೬. ಕಪಟಿ ಲೋಹಜಂಘನು ವಿಭೀಷಣನಿಗಿಂತೆಂದನು. "ನಾನು ಮಥುರೆಯಲ್ಲಿ ವಾಸಿಸುವ ಲೋಹಜಂಘನೆಂಬ ವಿಪ್ರನು.

೧೨೭. ಬಡತನದಿಂದ ನೊಂದು ನಾನು ದೇವಾಲಯಕ್ಕೆ ಹೋಗಿ ನಾರಾಯಣನ ಎದುರಿನಲ್ಲಿ ನಿರಾಹಾರನಾಗಿ ನಿಂತು ತಪಸ್ಸು ಮಾಡಿದೆನು.

೧೨೮. ಆ ಮೇಲೆ ಭಗವಾನ್ ನಾರಾಯಣನು ಕನಸಿನಲ್ಲಿ ನನಗೆ "ನೀನು ವಿಭೀಷಣನ ಬಳಿಗೆ ಹೋಗು. ನನ್ನ ಭಕ್ತನಾದ ಅವನು ನಿನಗೆ ಹಣವನ್ನು ಕೊಡುವನು' ಎಂದು ಅಪ್ಪಣೆ ಮಾಡಿದನು.

---

ತಥೇತ್ಯಾಗತ್ಯ ತತ್ತಸ್ಮೈ ಸ್ವಪ್ರಭುಪ್ರಾರ್ಥನಾವಚಃ ।
ಚಕಿತೋ ಲೋಹಜಂಘಾಯ ಶಶಂಸ ಸ ಚ ರಾಕ್ಷಸಃ ॥ ೧೨೨

ಸೋಽಪ್ಯಂಗೀಕೃತ್ಯ ತದ್ವಿಪ್ರೋ ಲೋಹಜಂಘಃ ಪ್ರಶಾಂತಧೀಃ ।
ತೇನೈವ ಸದ್ವಿತೀಯೇನ ಸಹ ಲಂಕಾಂ ತತೋಽಗಮತ್॥ ೧೨೩

ತಸ್ಯಾಂ ಚ ದೃಷ್ಟಸೌವರ್ಣತತ್ತತ್ಪ್ರಾಸಾದವಿಸ್ಮಿತಃ ।
ಪ್ರವಿಶ್ಯ ರಾಜಭವನಂ ಸ ದದರ್ಶ ವಿಭೀಷಣಮ್ ॥ ೧೨೪

ಸೋಽಪಿ ಪಪ್ರಚ್ಛ ರಾಜಾ ತಂ ಕೃತಾತಿಥ್ಯಃ ಕೃತಾಶಿಷಮ್ ।
ಬ್ರಹ್ಮನ್ ಕಥಮಿಮಾಂ ಭೂಮಿಮನುಪ್ರಾಪ್ತೋ ಭವಾನಿತಿ ॥ ೧೨೫

ತತಃ ಸ ಧೂರ್ತೋಽವಾದೀತ್ತು ಲೋಹಜಂಘೋ ವಿಭೀಷಣಮ್ ।
ವಿಪ್ರೋಽಹಂ ಲೋಹಜಂಘಾಖ್ಯೋ ಮಥುರಾಯಾಂ ಕೃತಸ್ಥಿತಿಃ ॥ ೧೨೬

ಸೋಽಹಂ ದಾರಿದ್ರ್ಯಸಂತಪ್ತಸ್ತತ್ರ ನಾರಾಯಣಾಗ್ರತಃ।
ನಿರಾಹಾರಃ ಸ್ಥಿತೋಽಕಾರ್ಷಂ ಗತ್ವಾ ದೇವಕುಲಂ ತಪಃ ॥ ೧೨೭

ವಿಭೀಷಣಾಂತಿಕಂ ಗಚ್ಛ ಮದ್ಭಕ್ತಃ ಸ ಹಿ ತೇ ಧನಮ್ ।
ದಾಸ್ಯತೀತ್ಯಾದಿಶತ್ ಸ್ವಪ್ನೇ ತತೋ ಮಾಂ ಭಗವಾನ್ ಹರಿಃ ॥ ೧೨೮

೧೨೯. "ನಾನೆಲ್ಲಿ, ವಿಭೀಷಣನೆಲ್ಲಿ" ಎಂದು ನಾನು ಹೇಳಿದಾಗ ಆ ಪ್ರಭು ಮತ್ತೆ "ಇಂದೇ ಹೋಗು, ವಿಭೀಷಣನನ್ನು ಕಾಣುವೆ' ಎಂದು ಆಜ್ಞಾಪಿಸಿದನು.

೧೩೦. ಹೀಗೆ ಪ್ರಭು ಹೇಳಿದ ಮೇಲೆ ನನಗೆ ಎಚ್ಚರವಾಗುತ್ತಿದ್ದಂತೆಯೇ ನಾನು ಇಲ್ಲಿ ಸಮುದ್ರದ ಈಚೆಯ ದಡದಲ್ಲಿ ನಿಂತಿದ್ದುದನ್ನು ಕಂಡೆನು. ಬೇರೆ ಏನೂ ನನಗೆ ತಿಳಿಯದು.'

೧೩೧. ಹೀಗೆ ಲೋಹಜಂಘನು ಹೇಳಿದಾಗ ಲಂಕೆಯು ದುರ್ಗಮ ಎಂಬುದನ್ನು ಆಲೋಚಿಸಿ ವಿಭೀಷಣನು ಇವನು ದಿವ್ಯಶಕ್ತಿಯುಳ್ಳವನಾಗಿರಬೇಕು ಎಂದು ಭಾವಿಸಿದನು.

೧೩೨-೧೩೩. "ಸ್ವಲ್ಪ ಇಲ್ಲಿರು, ನಿನಗೆ ಸಂಪತ್ತನ್ನು ನೀಡುವೆನು' ಎಂದು ಹೇಳಿ ಮನುಷ್ಯರನ್ನು ಕೊಂದು ಹಾಕುವ ರಾಕ್ಷಸರ ಕೈಗೆ ಆ ಬ್ರಾಹ್ಮಣನನ್ನು ಒಪ್ಪಿಸಬಾರದು ಎಂದು ಚಿಂತಿಸಿ, ಅಲ್ಲಿದ್ದ ಸ್ವರ್ಣಮೂಲಾದ್ರಿ ಎಂಬ ಬೆಟ್ಟಕ್ಕೆ ರಾಕ್ಷಸರನ್ನು ಕಳುಹಿಸಿ ಗರುಡನ ವಂಶದಲ್ಲಿ ಹುಟ್ಟಿದ್ದ ಒಂದು ತರುಣಪಕ್ಷಿಯನ್ನು ತರಿಸಿದನು.

೧೩೪. ಮಥುರೆಗೆ ಹೋಗಲಿದ್ದ ಲೋಹಜಂಘನಿಗೆ ಆ ಹಕ್ಕಿಯನ್ನು ಹತೋಟಿಗೆ ತಂದುಕೊಳ್ಳಲು ವಿಭೀಷಣನು ಆಗಲೇ ವಾಹನವನ್ನಾಗಿ ಕೊಟ್ಟನು.

೧೩೫. ಲೋಹಜಂಘನು ಲಂಕೆಯಲ್ಲೇ ಅದರ ಮೇಲೆ ಕುಳಿತು ಹಾರುತ್ತಾ ವಿಭೀಷಣನ ಸತ್ಕಾರದಲ್ಲಿ ಸ್ವಲ್ಪ ಕಾಲ ವಿಶ್ರಾಂತಿಯನ್ನು ತೆಗೆದುಕೊಂಡನು.

---

ಕ್ವಾಹಂ ವಿಭೀಷಣಃ ಕ್ವೇತಿ ಮಯೋಕ್ತೇ ಸ ಪುನಃ ಪ್ರಭುಃ ।
ಸಮಾದಿಶದ್ ವ್ರಜಾದ್ಯೈವ ತಂ ದ್ರಕ್ಷ್ಯಸಿ ವಿಭೀಷಣಮ್ ॥ ೧೨೯
ಇತ್ಯುಕ್ತೇ ಪ್ರಭುಣಾ ಸದ್ಯಃ ಪ್ರಬುದ್ಧೋಽಹಮಿಹಾಂಬುಧೇಃ ।
ಪಾರೇಽವಸ್ಥಿತಮಾತ್ಮಾನಮಪಶ್ಯಂ ವೇದ್ಮಿ ನಾಪರಮ್ ॥ ೧೩೦
ಇತ್ಯುಕ್ತೋ ಲೋಹಜಂಘೇನ ಲಂಕಾಮಾಲೋಕ್ಯ ದುರ್ಗಮಾಮ್ ।
ಸತ್ಯಂ ದಿವ್ಯಪ್ರಭಾವೋಽಯಮಿತಿ ಮೇನೇ ವಿಭೀಷಣಃ ॥ ೧೩೧
ತಿಷ್ಠ ದಾಸ್ಯಾಮಿ ತೇ ವಿತ್ತಮಿತ್ಯುಕ್ತ್ವಾ ಬ್ರಾಹ್ಮಣಂ ಚ ತಮ್ ।
ಮತ್ವಾ ಚ ರಕ್ಷಸಾಂ ಹಸ್ತೇ ತಮಪ್ರೇಷ್ಯಂ ನೃಘಾತಿನಾಮ್ ॥ ೧೩೨
ತತ್ರಸ್ಥಾತ್ ಸ್ವರ್ಣಮೂಲಾದ್ರಿಗಿರೇಃ ಸಂಪ್ರೇಷ್ಯ ರಾಕ್ಷಸಾನ್ ।
ಆನಾಯಯತ್ ಪಕ್ಷಿಪೋತಂ ಗರುಡಾನ್ವಯಸಂಭವಮ್ ॥ ೧೩೩
ತಂ ಚಾಸ್ಮೈ ಲೋಹಜಂಘಾಯ ಮಥುರಾಯಾಂ ಗಮಿಷ್ಯತೇ।
ತತ್ಕಾಲಮೇವ ಪ್ರದದೌ ವಶೀಕಾರಾಯ ವಾಹನಮ್ ॥ ೧೩೪
ಲೋಹಜಂಘೋಽಪಿ ಲಂಕಾಯಾಂ ವಾಹಯನ್ನಧಿರುಹ್ಯ ತಮ್ ।
ಕಂಚಿತ್ ಕಾಲಂ ವಿಶಶ್ರಾಮ ಸ ವಿಭೀಷಣಸತ್ಕೃತಃ ॥ ೧೩೫

೧೩೬. ಒಮ್ಮೆ ಲೋಹಜಂಘನು ಕುತೂಹಲದಿಂದ ರಾಕ್ಷಸರಾಜ (ವಿಭೀಷಣ)ನನ್ನು 'ಲಂಕೆಯಲ್ಲಿ ಭೂಮಿಯೆಲ್ಲ ಕಟ್ಟಿಗೆಯಿಂದ ತುಂಬಿರಲು ಕಾರಣವೇನು ?' ಎಂದು ಕೇಳಿದನು.

೧೩೭. ಅದನ್ನು ಕೇಳಿ ವಿಭೂಷಣನು ಅದರ ಚರಿತ್ರೆಯನ್ನಿಂತು ಹೇಳಿದನು. "ಬ್ರಹ್ಮನ್, ನಿನಗೆ ಕುತೂಹಲವಿದ್ದರೆ ಕೇಳು, ಹೇಳುತ್ತೇನೆ.

## ಲಂಕೆ ಕಾಷ್ಠಮಯವಾದ ಕಥೆ

೧೩೮–೧೩೯. ಹಿಂದೆ ಪ್ರತಿಜ್ಞಾಬದ್ಧಳಾಗಿದ್ದ ತಾಯಿಯನ್ನು ನಾಗರ ದಾಸ್ಯದಿಂದ ಬಿಡಿಸಲು ಕಶ್ಯಪನ ಮಗ ಗರುಡನು ಅದಕ್ಕೆ ಬೆಲೆಯಾಗಿದ್ದ ಅಮೃತವನ್ನು ದೇವತೆಗಳಿಂದ ತರಲು ಉದ್ಯುಕ್ತನಾಗಿ, ಶಕ್ತಿಯನ್ನು ಪಡೆಯಲು ಆಹಾರವನ್ನು ಹುಡುಕಿಕೊಂಡು ತಂದೆಯ ಬಳಿಗೆ ಹೋದನು.

೧೪೦. ಅವನು ಯಾಚಿಸಿದಾಗ ತಂದೆಯು "ಶಾಪದಿಂದ ಕೆಳಗುರುಳಿದ ದೊಡ್ಡ ಆನೆ ಮತ್ತು ಆಮೆಗಳೆರಡೂ ಸಮುದ್ರದಲ್ಲಿವೆ. ಮಗನೇ, ಹೋಗು ಅವೆರಡನ್ನೂ ತಿನ್ನು' ಎಂದು ಹೇಳಿದನು.

೧೪೧. ಆಗ ಆ ಗರುಡನು ಹೋಗಿ ಆ ಎರಡು ಆಹಾರಗಳನ್ನು ಎತ್ತಿಕೊಂಡು ದೊಡ್ಡ ಕಲ್ಪವೃಕ್ಷದ ಕೊಂಬೆಯ ಮೇಲೆ ಕುಳಿತನು.

---

ಏಕದಾ ತಂ ಚ ಪಪ್ರಚ್ಛ ರಾಕ್ಷಸೇಂದ್ರಂ ಸಕೌತುಕಃ ।
ಲಂಕಾಯಾಂ ಕಾಷ್ಠಮಯ್ಯೇಷಾ ಕಥಂ ಸರ್ವೈವ ಭೂರಿತಿ ॥ ೧೩೬
ತಚ್ಛ್ರುತ್ವಾ ಸ ಚ ತದ್‌ವೃತ್ತಂ ತಮುವಾಚ ವಿಭೀಷಣಃ ।
ಯದಿ ತೇ ಕೌತುಕಂ ಬ್ರಹ್ಮಂಸ್ತದಿದಂ ಶೃಣು ವಚ್ಮಿ ತೇ ॥ ೧೩೭
ತನ್ಮೂಲ್ಯಭೂತಾಂ ದೇವೇಭ್ಯಃ ಸುಧಾಮಾಹರ್ತುಮುದ್ಯತಃ ।
ಬಲಸ್ಯ ಹೇತೋರ್ಭಕ್ಷ್ಯಾರ್ಥೀ ಸ್ವಪಿತುರ್ನಿಕಟಂ ಯಯೌ ॥ ೧೩೯
ಪುರಾ ಪ್ರತಿಜ್ಞೋಪನತಾಂ ನಾಗಾನಾಂ ದಾಸಭಾವತಃ ।
ನಿಷ್ಕ್ರಷ್ಟುಕಾಮೋ ಜನನೀಂ ಗರುಡಃ ಕಶ್ಯಪಾತ್ಮಜಃ ॥ ೧೩೮
ಸ ಚೈನಂ ಯಾಚಿತೋ□ವಾದೀನ್ಮಹಾಂತೌ ಗಜಕಚ್ಛಪೌ ।
ಅಬ್ಧೌ ಸ್ತಃ ಪುತ್ರ ತೌ ಭುಂಕ್ಷ್ವ ಗಚ್ಛ ಶಾಪಚ್ಯುತಾವಿತಿ ॥ ೧೪೦
ತತಃ ಸ ಗರುಡೋ ಗತ್ವಾ ಭಕ್ಷ್ಯಾವಾದಾಯ ತಾವುಭೌ ।
ಮಹತಃ ಕಲ್ಪವೃಕ್ಷಸ್ಯ ಶಾಖಾಯಾಂ ಸಮುಪಾವಿಶತ್ ॥ ೧೪೧

೧೪೨. ಭಾರದಿಂದ ತಟ್ಟನೆ ಆ ಕೊಂಬೆ ಮುರಿದು ಹೋದಾಗ ಅದರ ಕೆಳಗೆ ಇದ್ದ ತಪಸ್ವಿಗಳಾದ ವಾಲಖಿಲ್ಯರ ಕೋರಿಕೆಯಂತೆ ಗರುಡನು, ಅದನ್ನು ತಾನೆ ಕೊಕ್ಕಿನಿಂದ ಹಿಡಿದು ನಿಲ್ಲಿಸಿದನು.

೧೪೩. ಜನರು ನುಚ್ಚುನುರಿಯಾದಾರು ಎಂಬ ಭೀತಿಯಿಂದ ಗರುಡನು ತನ್ನ ತಂದೆಯ ಆಜ್ಞೆಯಂತೆ ಆ ಕೊಂಬೆಯನ್ನು ತಂದು ಜನರಿಲ್ಲದ ಈ ಜಾಗದಲ್ಲಿ ಕೆಡವಿದನು.

೧೪೪. ಅದರ ಹಿಂಬದಿಯಲ್ಲೇ ಲಂಕೆಯು ರಚಿಸಲ್ಪಟ್ಟಿತು. ಆದ್ದರಿಂದ ಇಲ್ಲಿ ಭೂಮಿ ಕಾಷ್ಠಮಯವಾಗಿದೆ." ಇದನ್ನು ವಿಭೀಷಣನಿಂದ ಕೇಳಿ ಲೋಹಜಂಘನು ಸಂತೋಷಪಟ್ಟನು.

೧೪೫. ಆಮೇಲೆ ಅವನು ಮಥುರೆಗೆ ಹೊರಡಲು ಅಪೇಕ್ಷಿಸಿದಾಗ ವಿಭೀಷಣನು ಅವನಿಗೆ ಬೆಲೆಬಾಳುವ ಅನೇಕ ರತ್ನಗಳನ್ನು ಕೊಟ್ಟನು.

೧೪೬. ಮತ್ತು ಮಥುರೆಯಲ್ಲಿ ದೇವರಿಗಾಗಿ ಚಿನ್ನದ ಕಮಲ, ಗದೆ, ಶಂಖ, ಚಕ್ರಗಳನ್ನೂ ಲೋಹಜಂಘನ ಕೈಯಲ್ಲಿ ಕೊಟ್ಟನು.

೧೪೭–೧೪೮. ಅದೆಲ್ಲವನ್ನೂ ತೆಗೆದುಕೊಂಡು, ವಿಭೀಷಣನು ಮೊದಲೇ ಕೊಟ್ಟಿದ್ದ ಲಕ್ಷಾಂತರ ಯೋಜನಗಳ ಪ್ರಯಾಣ ಮಾಡಬಲ್ಲದಾಗಿದ್ದ ಪಕ್ಷಿಯನ್ನು ಏರಿ ಕುಳಿತು ಆಕಾಶ ಮಾರ್ಗದಲ್ಲಿ ಲಂಕೆಯಿಂದ ಹೊರಟು ಕಡಲನ್ನು ದಾಟಿ ಲೋಹಜಂಘನು ಯಾವ ಕಷ್ಟವೂ ಇಲ್ಲದೆ ಮಥುರೆಗೆ ಬಂದು ಸೇರಿದನು.

---

ತಾಂ ಚ ಶಾಖಾಂ ಭರಾತ್ ಸದ್ಯೋ ಭಗ್ನಾಂ ಚಂಚ್ವಾ ಬಭಾರ ಸಃ ।
ಅಧಃಸ್ಥಿತತಪೋನಿಷ್ಠವಾಲಖಿಲ್ಯಾನುರೋಧತಃ ॥ ೧೪೨
ಲೋಕೋಪಮರ್ದಭೀತೇನ ತೇನಾಥ ಪಿತುರಾಜ್ಞಯಾ ।
ಆನೀಯ ವಿಜನೇ ತ್ಯಕ್ತಾ ಸಾ ಶಾಖೇಹ ಗರುತ್ಮತಾ ॥ ೧೪೩
ತಸ್ಯಾಃ ಪೃಷ್ಠೇ ಕೃತಾ ಲಂಕಾ ತೇನ ಕಾಷ್ಠಮಯೀಹ ಭೂಃ ।
ಏತದ್ವಿಭೀಷಣಾಚ್ಛ್ರುತ್ವಾ ಲೋಹಜಂಘಸ್ತುತೋಷ ಸಃ ॥ ೧೪೪
ತತಸ್ತಸ್ಮೈ ಮಹಾರ್ಘಾಣಿ ರತ್ನಾನಿ ಸುಬಹೂನಿ ಚ ।
ವಿಭೀಷಣೋ ದದಾತಿ ಸ್ಮ ಮಥುರಾಂ ಗಂತುಮಿಚ್ಛತೇ ॥ ೧೪೫
ಭಕ್ತ್ಯಾ ಚ ದೇವಸ್ಯ ಹರೇರ್ಮಥುರಾವರ್ತಿನಃ ಕೃತೇ ।
ಹಸ್ತೇ□ಸ್ಯಾಬ್ಜಗದಾಶಂಖಚಕ್ರಾನ್ ಹೇಮಮಯಾನ್ ದದೌ ॥ ೧೪೬
ತದ್ಗೃಹೀತ್ವಾಖಿಲಂ ತಸ್ಮಿನ್ ವಿಭೀಷಣಸಮರ್ಪಿತೇ ।
ಆರುಹ್ಯ ವಿಹಗೇ ಲಕ್ಷಂ ಯೋಜನಾನಾಂ ಪ್ರಯಾತರಿ ॥ ೧೪೭
ಉತ್ಪತ್ಯ ವ್ಯೋಮಮಾರ್ಗೇಣ ಲಂಕಾಯಾಸ್ತೀರ್ಣವಾರಿಧಿಃ ।
ಸ ಲೋಹಜಂಘೋ ಮಥುರಾಮಕ್ಲೇಶೇನಾಜಗಾಮ ತಾಮ್ ॥ ೧೪೮

೧೪೯. ಅಲ್ಲಿ ನಿರ್ಜನವಾಗಿದ್ದ ಹೊರಗಿನ ವಿಹಾರದಲ್ಲಿ ಆಕಾಶದಿಂದ ಇಳಿದು ತಾನು ತುದಿದ್ದ ರತ್ನರಾಶಿಯನ್ನು ಭದ್ರವಾಗಿರಿಸಿ ಪಕ್ಷಿಯನ್ನು ಕಟ್ಟಿ ಹಾಕಿದನು.

೧೫೦. ಅನಂತರ ಅಂಗಡಿಗೆ ಹೋಗಿ ಒಂದು ರತ್ನವನ್ನು ಮಾರಿ ಬಟ್ಟೆ ಮುಖಾಲಂಕಾರ ಸಾಮಗ್ರಿ ಮತ್ತು ಆಹಾರವನ್ನು ಕೊಂಡನು.

೧೫೧. ವಿಹಾರದಲ್ಲೇ ಊಟ ಮಾಡಿ, ಪಕ್ಷಿಗೂ ಆಹಾರವನ್ನು ಕೊಟ್ಟು ಬಟ್ಟೆಗಳಿಂದಲೂ ಮುಖಪ್ರಸಾಧನಗಳಿಂದಲೂ ಹೂಗಳಿಂದಲೂ ತನ್ನನ್ನು ಅಲಂಕರಿಸಿಕೊಂಡನು.

೧೫೨. ಸಂಜೆಯಾದ ಮೇಲೆ ಶಂಖ, ಚಕ್ರ, ಗದೆಗಳನ್ನು ಧರಿಸಿ ಆ ಪಕ್ಷಿಯನ್ನೇ ಏರಿ ರೂಪಣಿಕೆಯ ಮನೆಗೆ ಬಂದನು.

೧೫೩. ಅಲ್ಲಿ ಮೇಲೆ ಆಕಾಶದಲ್ಲಿ ಸಂಚರಿಸುತ್ತಾ ಸ್ಥಳದ ಪರಿಚಯವಿದ್ದ ಲೋಹಜಂಘನು ಏಕಾಂತದಲ್ಲಿದ್ದ ಪ್ರಿಯೆಗೆ ಕೇಳಿಸುವಂತೆ ಗಂಭೀರವಾದ ಶಬ್ದವನ್ನು ಮಾಡಿದನು.

೧೫೪. ಆ ಶಬ್ದವನ್ನು ಕೇಳಿ ಹೊರಗೆ ಬಂದ ರೂಪಣಿಕೆಯು ರತ್ನಗಳಿಂದ ಕಂಗೊಳಿಸುತ್ತಿದ್ದ, ನಾರಾಯಣನ ವೇಷವನ್ನು ಧರಿಸಿದ್ದ ಅವನನ್ನು ರಾತ್ರಿಯ ಆಕಾಶದಲ್ಲಿ ಕಂಡಳು.

---

ತಸ್ಯಾಂ ಶೂನ್ಯೇ ವಿಹಾರೇ ಚ ಬಾಹ್ಯೇ ವ್ಯೋಮ್ನೋ□ವತೀರ್ಯ ಸಃ ।
ಸ್ಥಾಪಯಾಮಾಸ ರತ್ನೌಘಂ ತಂ ಬಬಂಧ ಚ ಪಕ್ಷಿಣಮ್ ॥ ೧೪೯
ಆಪಣೇ ರತ್ನಮೇಕಂ ಚ ಗತ್ವಾ ವಿಕ್ರೀತವಾಂಸ್ತತಃ ।
ಅಥ ವಸ್ತ್ರಾಂಗರಾಗಾದಿ ಕ್ರೀತವಾನ್ ಭೋಜನಂ ತಥಾ ॥ ೧೫೦
ತದ್ವಿಹಾರೇ ಚ ತತ್ರೈವ ಭುಕ್ತ್ವಾ ದತ್ತ್ವಾ ಚ ಪಕ್ಷಿಣೇ ।
ವಸ್ತ್ರಾಂಗರಾಗಪುಷ್ಪಾದ್ಯೈರಾತ್ಮಾನಂ ತೈರಭೂಷಯತ್ ॥ ೧೫೧
ಪ್ರದೋಷೇ ಚಾಯಯೌ ತಸ್ಯಾಸ್ತತ್ರೈವಾರುಹ್ಯ ಪಕ್ಷಿಣಿ ।
ಗೃಹಂ ರೂಪಣಿಕಾಯಾಸ್ತಾಃ ಶಂಖಚಕ್ರಗದಾ ವಹನ್ ॥ ೧೫೨
ತತ್ರೋಪರಿ ತತಃ ಸ್ಥಿತ್ವಾ ಸ್ಥಾನವಿತ್ ಖೇ ಚರಂಶ್ಚ ಸಃ ।
ಶಬ್ದಂ ಚಕಾರ ಗಂಭೀರಂ ರಹಃಸ್ಥಾಂ ಶ್ರಾವಯನ್ ಪ್ರಿಯಾಮ್ ॥ ೧೫೩
ತಂ ಚ ಶ್ರುತ್ವೈವ ನಿರ್ಯಾತಾ ಸಾಪಶ್ಯದ್ ರತ್ನರಾಜಿತಮ್ ।
ಏನಂ ನಾರಾಯಣಾಕಲ್ಪಂ ವ್ಯೋಮ್ನಿ ರೂಪಣಿಕಾ ನಿಶಿ ॥ ೧೫೪

೧೫೫. ""ನಾನು ಹರಿ, ನಿನಗೋಸ್ಕರ ಇಲ್ಲಿಗೆ ಬಂದಿದ್ದೇನೆ" ಎಂದು ಅವನು ಹೇಳಿದಾಗ ರೂಪಣಿಕೆ ""ದೇವರು ದಯಮಾಡಬೇಕು" ಎಂದು ನಮಸ್ಕರಿಸಿ ಹೇಳಿದಳು.

೧೫೬. ಆಮೇಲೆ ಲೋಹಜಂಘನು ಇಳಿದು ಪಕ್ಷಿಯನ್ನು ಕಟ್ಟಿಹಾಕಿ ಆ ಕಾಂತೆಯೊಡನೆ ವಾಸಭವನವನ್ನು ಹೊಕ್ಕನು.

೧೫೭. ಆಲ್ಲಿ ಸಂಭೋಗಸುಖವನ್ನು ಪಡೆದು ಕ್ಷಣಾಂತರದಲ್ಲಿ ನಿರ್ಗಮಿಸಿ ಪಕ್ಷಿಯನ್ನೇರಿ ಆಕಾಶದಲ್ಲೇ ಹಾರಿ ಹೋದನು.

೧೫೮. 'ನಾನು ದೇವತೆ, ವಿಷ್ಣುವಿನ ಹೆಂಡತಿ, ಮನುಷ್ಯರೊಡನೆ ಮಾತನಾಡುವುದಿಲ್ಲ' ಎಂದು ಬೆಳಗ್ಗೆ ರೂಪಣಿಕಾ ಮೌನವನ್ನು ವಹಿಸಿ ನಿಂತಳು.

೧೫೯. 'ಮಗಳೇ, ಈ ರೀತಿ ನೀನೇಕೆ ಇದ್ದೀಯೆ, ನನಗೆ ಹೇಳು' ಎಂದು ಅವಳ ತಾಯಿ ಮಕರದಂಷ್ಟ್ರೆ ಕೇಳಿದಳು.

೧೬೦. ಅತ್ಯಂತ ಒತ್ತಾಯದಿಂದ ಕೇಳಿದಾಗ ತಾಯಿಗೆ ರೂಪಣಿಕಾ ತನ್ನ ಮೌನದ ಕಾರಣವಾದ ರಾತ್ರಿಯ ವೃತ್ತಾಂತವನ್ನು (ತನಗೂ ತಾಯಿಗೂ ಮಧ್ಯೆ) ಬಟ್ಟೆಯ ತೆರೆಯನ್ನು ಹಾಕಿಸಿ ಹೇಳಿದಳು.

೧೬೧. ಅದನ್ನು ಕೇಳಿದ ಆ ಕುಂಟಲಗಿತ್ತಿಯು ಸಂಶಯಪಟ್ಟು ರಾತ್ರಿ ಪಕ್ಷಿಯನ್ನೇರಿ ಬಂದ ಲೋಹಜಂಘನನ್ನು ತಾನೇ ಕ್ಷಣಕಾಲ ನೋಡಿದಳು.

---

ಅಹಂ ಹರಿರಿಹಾಯಾತಸ್ತ್ವದರ್ಥಮಿತಿ ತೇನ ಸಾ ।
ಉಕ್ತಾ ಪ್ರಣಮ್ಯ ವಕ್ತಿ ಸ್ಮ ದಯಾಂ ದೇವಃ ಕರೋತ್ವಿತಿ ॥ ೧೫೫
ಅಥಾವತೀರ್ಯ ಸಂಯಮ್ಯ ಲೋಹಜಂಘೋ ವಿಹಂಗಮಮ್ ।
ವಿವೇಶ ವಾಸಭವನಂ ಸ ತಯಾ ಕಾಂತಯಾ ಸಹ ॥ ೧೫೬
ತತ್ರ ಸಂಪ್ರಾಪ್ತಸಂಭೋಗಃ ಸ ನಿಷ್ಕ್ರಮ್ಯ ಕ್ಷಣಾಂತರೇ ।
ತಥೈವ ವಿಹಗಾರೂಢೋ ಜಗಾಮ ನಭಸಾ ತತಃ ॥ ೧೫೭
ದೇವತಾ ವಿಷ್ಣುಭಾರ್ಯಾಹಂ ಮರ್ತ್ಯೈಃ ಸಹ ನ ಮಂತ್ರಯೇ ।
ಇತಿ ರೂಪಣಿಕಾ ಪ್ರಾತಸ್ತಸ್ಥೌ ಮೌನಂ ವಿಧಾಯ ಸಾ ॥ ೧೫೮
ಕಸ್ಮಾದೇವಂವಿಧಾ ಪುತ್ರಿ ವರ್ತಸೇ ಕಥ್ಯತಾಂ ತ್ವಯಾ ।
ಇತ್ಯಪೃಚ್ಛ್ಯತ ಸಾ ಮಾತ್ರಾ ತತೋ ಮಕರದಂಷ್ಟ್ರಯಾ ॥ ೧೫೯
ನಿರ್ಬಂಧಪೃಷ್ಟಾ ತಸ್ಯೈ ಚ ಸಾ ಮಾತ್ರೇ ಮೌನಕಾರಣಮ್ ।
ಶಶಂಸ ರಾತ್ರಿವೃತ್ತಾಂತಂ ದಾಪಯಿತ್ವಾಂತರೇ ಪಟಮ್ ॥ ೧೬೦
ಸಾ ತಚ್ಛ್ರುತ್ವಾ ಸಸಂದೇಹಾ ಸ್ವಯಂ ತಂ ಕುಟ್ಟನೀ ನಿಶಿ ।
ದದರ್ಶ ವಿಹಗಾರೂಢಂ ಲೋಹಜಂಘಂ ತತಃ ಕ್ಷಣಮ್ ॥ ೧೬೧

೧೬೨. ಬೆಳಗಾದ ಮೇಲೆ ತೆರೆಯ ಹಿಂದೆ ಇದ್ದ ರೂಪಣಿಕೆಗೆ ಏಕಾಂತದಲ್ಲಿ ನಮಸ್ಕರಿಸಿ ಕುಂಟಲಗಿತ್ತಿ ಮಕರದಂಷ್ಟ್ರೆ ಹೀಗೆ ಬಿನ್ನವಿಸಿದಳು.

೧೬೩. "ಮಗಳೇ, ಭಗವಂತನ ಅನುಗ್ರಹದಿಂದ ನೀನೀಗ ದೇವತೆಯ ಪದವಿಯನ್ನು ಪಡೆದಿರುವೆ. ನಾನು ನಿನ್ನ ತಾಯಿ. ಆದ್ದರಿಂದ ನನಗೆ ಮಗಳಾಗಿ ಅನುಕೂಲವನ್ನು ಮಾಡು.

೧೬೪. ಮುದುಕಿಯಾದ ನಾನು ಈ ದೇಹದಿಂದಲೇ ಸ್ವರ್ಗಕ್ಕೆ ಹೋಗುವ ಹಾಗೆ ಮಾಡಲು ಭಗವಂತನಲ್ಲಿ ವಿಜ್ಞಾಪನೆ ಮಾಡು. ಅನುಗ್ರಹಿಸು.'

೧೬೫. ಹಾಗೆಯೇ ಆಗಲಿ ಎಂದು ರೂಪಣಿಕೆ ರಾತ್ರಿ ಬಂದ ಕಪಟವಿಷ್ಣುವಾದ ಲೋಹಜಂಘನಿಗೆ ಅದೇ ವಿಷಯವನ್ನು ಬಿನ್ನವಿಸಿಕೊಂಡಳು.

೧೬೬. ಆಗ ದೇವರ ವೇಷದಲ್ಲಿದ್ದ ಲೋಹಜಂಘನು ಪ್ರಿಯೆಗೆ ಹೀಗೆ ಹೇಳಿದನು. ""ನಿನ್ನ ತಾಯಿ ಪಾಪಿ, ಅವಳನ್ನು ಎಲ್ಲರೂ ಕಾಣುವಂತೆ ಸ್ವರ್ಗಕ್ಕೆ ಒಯ್ಯುವುದು ಸರಿಯಲ್ಲ.

೧೬೭. ಏಕಾದಶಿಯ ದಿನ ಬೆಳಗ್ಗೆ ಸ್ವರ್ಗದ ಬಾಗಿಲು ತೆರೆಯುತ್ತದೆ. ಆಗ ಅನೇಕ ಶಿವಗಣಗಳು ಅಲ್ಲಿ ಪ್ರವೇಶಿಸುತ್ತಾರೆ.

---

ಪ್ರಭಾತೇ ಚ ಪಟಾಂತಃಸ್ಥಾಮೇತ್ಯ ರೂಪಣಿಕಾಂ ತತಃ ।
ಪ್ರಹ್ವಾ ಮಕರದಂಷ್ಟ್ರಾ ಸಾ ಕುಟ್ಟನೀತಿ ವ್ಯಜಿಜ್ಞಪತ್ ॥ ೧೬೨

ದೇವಸ್ಯಾನುಗ್ರಹಾತ್ ಪುತ್ರಿ ತ್ವಂ ದೇವೀತ್ವಮಿಹಾಗತಾ ।
ಅಹಂ ಚ ತೇ೭ತ್ರ ಜನನೀ ತನ್ಮೇ ದೇಹಿ ಸುತಾಫಲಮ್ ॥ ೧೬೩

ವೃದ್ಧಾನೇನೈವ ದೇಹೇನ ಯಥಾ ಸ್ವರ್ಗಂ ವ್ರಜಾಮ್ಯಹಮ್ ।
ತಥಾ ದೇವಸ್ಯ ವಿಜ್ಞಪ್ತಿಂ ಕುರುಷ್ವಾನುಗೃಹಾಣ ಮಾಮ್ ॥ ೧೬೪

ತಥೇತಿ ಸಾ ರೂಪಣಿಕಾ ತಮೇವಾರ್ಥಂ ವ್ಯಜಿಜ್ಞಪತ್ ।
ವ್ಯಾಜವಿಷ್ಣುಂ ಪುನರ್ನಕ್ತಂ ಲೋಹಜಂಘಮುಪಾಗತಮ್ ॥ ೧೬೫

ತತಸ್ಸ ದೇವವೇಷಸ್ತಾಂ ಲೋಹಜಂಘೋ೭ಬ್ರವೀತ್ ಪ್ರಿಯಾಮ್ ।
ಪಾಪಾ ತೇ ಜನನೀ ಸ್ವರ್ಗಂ ವ್ಯಕ್ತಂ ನೇತುಂ ನ ಯುಜ್ಯತೇ ॥ ೧೬೬

ಏಕಾದಶ್ಯಾಂ ಪುನಃ ಪ್ರಾತರ್ದ್ವಾರಮುದ್ಘಾಟ್ಯತೇ ದಿವಿ ।
ತತ್ರ ಚ ಪ್ರವಿಶಂತ್ಯಗ್ರೇ ಬಹವಃ ಶಾಂಭವಾ ಗಣಾಃ ॥ ೧೬೭

೧೬೮. ಅವರ ಮಧ್ಯದಲ್ಲಿ ಅದೇ ವೇಷವನ್ನು ಧರಿಸಿದ ನಿನ್ನ ತಾಯಿಯೂ ಪ್ರವೇಶವನ್ನು ಪಡೆಯುವಳು. ಆದ್ದರಿಂದ ಕ್ಷೌರದ ಕತ್ತಿಯಿಂದ ಅವಳ ತಲೆಯಲ್ಲಿ ಐದು ಶಿಖೆಗಳಿರುವಂತೆ ಮಾಡು.

೧೬೯. ಅವಳ ಕುತ್ತಿಗೆಯನ್ನು ಬುರುಡೆಗಳ ಹಾರದಿಂದ ಅಲಂಕರಿಸು. ಬಟ್ಟೆಯನ್ನೆಲ್ಲ ಬಿಚ್ಚಿ ಅವಳ ಒಂದು ಪಕ್ಕಕ್ಕೆ ಕಪ್ಪು ಕಾಡಿಗೆ ಇನ್ನೊಂದು ಪಕ್ಕಕ್ಕೆ ಕೆಂಪು ಸಿಂದೂರವನ್ನು ಬಳಿ.

೧೭೦. ಹೀಗೆ ಅವಳು ಗಣದ ಆಕಾರದವಳಾದರೆ ಸುಲಭವಾಗಿ ನಾನು ಅವಳನ್ನು ಸ್ವರ್ಗಕ್ಕೆ ಒಯ್ಯುತ್ತೇನೆ' ಎಂದು ಹೇಳಿ ಒಂದು ಕ್ಷಣ ಅಲ್ಲಿದ್ದು ಲೋಹಜಂಘನು ಹೊರಟು ಹೋದನು.

೧೭೧. ಬೆಳಗಾದ ಮೇಲೆ ರೂಪಣಿಕೆಯು ತಾಯಿಗೆ ಅವನು ಹೇಳಿದ್ದ ರೀತಿಯಲ್ಲೇ ವೇಷವನ್ನು ಮಾಡಿಸಿದಳು. ಮಕರದಂಷ್ಟ್ರೆಯೂ ಸ್ವರ್ಗದ ಕಡೆಯೇ ಮುಖ ಮಾಡಿಕೊಂಡು ನಿಂತಳು.

೧೭೨. ರಾತ್ರಿಯಾಗುತ್ತಿದ್ದಂತೆ ಲೋಹಜಂಘನು ಬಂದನು. ರೂಪಣಿಕೆಯು ತಾಯಿಯನ್ನು ಅವನ ಕೈಗೆ ಒಪ್ಪಿಸಿದಳು.

೧೭೩. ಬೆತ್ತಲೆ ಮೈಯಲ್ಲಿದ್ದು ವಿಕಾರ ವೇಷವನ್ನು ಧರಿಸಿದ್ದ ಆ ಕುಂಟಲಗಿತ್ತಿಯನ್ನು ಕರೆದುಕೊಂಡು ಪಕ್ಷಿಯನ್ನೇರಿ ಅವನು ವೇಗದಿಂದ ಆಕಾಶಕ್ಕೆ ಹಾರಿದನು.

---

ತನ್ಮಧ್ಯೇ ಕೃತತದ್ವೇಷಾ ತ್ವನ್ಮಾತಾಸೌ ಪ್ರವೇಶ್ಯತೇ ।
ತದಸ್ಯಾಃ ಪಂಚಚೂಡಂ ತ್ವಂ ಕ್ಷುರಕ್ಲುಪ್ತಂ ಶಿರಃ ಕುರು ॥ ೧೬೮
ಕಂಠಂ ಕರಂಕಮಾಲಾಢ್ಯಂ ಪಾರ್ಶ್ವಂ ಚೈಕಂ ಸಕಜ್ಜಲಮ್ ।
ಅನ್ಯತ್ ಸಿಂದೂರಲಿಪ್ತಂ ಚ ಕುರ್ವಸ್ಯಾ ವೀತವಾಸಸಃ ॥ ೧೬೯
ಏವಂ ಹ್ಯೇನಾಂ ಗಣಾಕಾರಾಂ ಸುಖಂ ಸ್ವರ್ಗಂ ನಯಾಮ್ಯಹಮ್ ।
ಇತ್ಯುಕ್ತ್ವಾ ಸ ಕ್ಷಣಂ ಸ್ಥಿತ್ವಾ ಲೋಹಜಂಘಸ್ತತೋ□ಗಮತ್ ॥ ೧೭೦
ಪ್ರಾತಶ್ಚ ಸಾ ರೂಪಣಿಕಾ ಯಥೋಕ್ತಂ ತಮಕಾರಯತ್ ।
ವೇಷಂ ಮಾತುರಥೈಷಾಪಿ ತಸ್ಥೌ ಸ್ವರ್ಗೈಕಸಂಮುಖೀ ॥ ೧೭೧
ಆಯಯೌ ಚ ಪುನಸ್ತತ್ರ ಲೋಹಜಂಘೋ ನಿಶಾಮುಖೇ ।
ಸಾ ಚ ರೂಪಣಿಕಾ ತಸ್ಮೈ ಮಾತರಂ ತಾಂ ಸಮಾರ್ಪಯತ್ ॥ ೧೭೨
ತತಃ ಸ ವಿಹಗಾರೂಢಸ್ತಾಮಾದಾಯೈವ ಕುಟ್ಟನೀಮ್ ।
ನಗ್ನಾಂ ವಿಕೃತವೇಷಾಂ ಚ ಜವಾದುದಪತನ್ನಭಃ ॥ ೧೭೩

೧೭೪. ಆಕಾಶದಿಂದ ಅವನು ದೇವಸ್ಥಾನದ ಎದುರಿಗೆ ಇದ್ದ ಎತ್ತರವಾದ ಕಲ್ಲಿನ ಕಂಬವನ್ನು ಕಂಡನು. ಅದರ ಮೇಲೆ ಚಕ್ರದ ಆಕೃತಿಯು ಇತ್ತು.

೧೭೫. ಚಕ್ರ ಮಾತ್ರ ಅವಲಂಬನವಾಗಿದ್ದ ಆ ಕಲ್ಲಿನ ಕಂಬದ ಮೇಲುಭಾಗದಲ್ಲಿ ಅವನು ಮಕರದಂಷ್ಟ್ರೆಯನ್ನು ಇಳಿಸಿದನು. ಅಲ್ಲಿ ಕುಂಟಲಗಿತ್ತಿಯು ಹಿಂದೆ ಅವಳು ಅವನಿಗೆ ಮಾಡಿದ್ದ ಅವಮಾನದ ಸೇಡಿನ ಬಾವುಟದಂತೆ ಕಾಣಿಸುತ್ತಿದ್ದಳು.

೧೭೬. "ಸ್ವಲ್ಪ ಹೊತ್ತು ಇಲ್ಲೇ ಇರು. ಭೂಲೋಕಕ್ಕೆ ಹೋಗಿ ಸನ್ನಿಧಿಯನ್ನು ಅನುಗ್ರಹಿಸುತ್ತೇನೆ" ಎಂದು ಅವಳಿಗೆ ಹೇಳಿ ಅವನು ಕಣ್ಮರೆಯಾದನು.

೧೭೭. ಅಷ್ಟು ಹೊತ್ತಿಗೆ ಜಾಗರಣೆಗಾಗಿ ರಾತ್ರಿಯ ಯಾತ್ರೋತ್ಸವದಲ್ಲಿ ಅಲ್ಲಿ ಸೇರಿದ್ದ ಜನರನ್ನು ಉದ್ದೇಶಿಸಿ ಆಕಾಶದಿಂದಲೇ ಲೋಹಜಂಘನು ಹೀಗೆ ಹೇಳಿದನು.

೧೭೮. ""ಎಲೈ ಜನರೆ, ಇಂದು ಇಲ್ಲಿ ಎಲ್ಲರನ್ನೂ ಕೊಂದು ಹಾಕುವ ಮಹಾಮಾರಿಯು ನಿಮ್ಮ ಮೇಲೆ ಬೀಳುವವಳಿದ್ದಾಳೆ, ಎಲ್ಲರೂ ಹರಿಗೆ ಶರಣಾಗಿ".

೧೭೯. ಆಕಾಶದಿಂದ ಕೇಳಿಸಿದ ಈ ಮಾತನ್ನು ಕೇಳಿ ಮಥುರಾವಾಸಿಗಳೆಲ್ಲರೂ ಭೀತರಾಗಿ ದೇವರನ್ನು ಆಶ್ರಯಿಸಿ ಸ್ವಸ್ತ್ಯಯನ (ಮಂಗಳ ಪಾಠಗಳನ್ನು) ಮಾಡುತ್ತಾ ನಿಂತರು.

---

ಗಗನಸ್ಥಶ್ಚ ತತ್ರೈವ ಪ್ರಾಂಶುಂ ದೇವಕುಲಾಗ್ರತಃ ।
ಸ ದದರ್ಶ ಶಿಲಾಸ್ತಂಭಂ ಚಕ್ರೇಣೋಪರಿ ಲಾಂಛಿತಮ್ ॥ ೧೭೪

ತಸ್ಯ ಪೃಷ್ಠೇ ಚ ಚಕ್ರೈಕಸಾಲಂಬೇ ತಾಂ ನ್ಯವೇಶಯತ್ ।
ಖಲೀಕಾರಪ್ರತೀಕಾರಪತಾಕಾಮಿವ ಕುಟ್ಟನೀಮ್ ॥ ೧೭೫

ಇಹ ತಿಷ್ಠ ಕ್ಷಣಂ ಯಾವತ್ ಸಾಂನಿಧ್ಯಾನುಗ್ರಹಂ ಭುವಿ ।
ಗತ್ವಾ ಕರೋಮೀತ್ಯುಕ್ತ್ವಾ ಚ ತಸ್ಯಾ ದೃಷ್ಟಿಪಥಾದ್ ಯಯೌ ॥ ೧೭೬

ತತಸ್ತತ್ರೈವ ದೇವಾಗ್ರೇ ದೃಷ್ಟ್ವಾ ಜಾಗರಣಾಗತಾನ್ ।
ರಾತ್ರೌ ಯಾತ್ರೋತ್ಸವೇ ಲೋಕಾನ್ ಗಗನಾದೇವಮಬ್ರವೀತ್ ॥ ೧೭೭

ಹೇ ಲೋಕಾ ಇಹ ಯುಷ್ಮಾಕಮುಪರ್ಯದ್ಯ ಪತಿಷ್ಯತಿ ।
ಸರ್ವಸಂಹಾರಿಣೀ ಮಾರೀ ತದೇತ ಶರಣಂ ಹರಿಮ್ ॥ ೧೭೮

ಶ್ರುತ್ವೈತಾಂ ಗಗನಾದ್ ವಾಣೀಂ ಭೀತಾಃ ಸರ್ವೇ􀀀ಪಿ ತತ್ರ ತೇ ।
ಮಾಥುರಾ ದೇವಮಾಶ್ರಿತ್ಯ ತಸ್ಥುಃ ಸ್ವಸ್ತ್ಯಯನಾದೃತಾಃ ॥ ೧೭೯

೧೮೦. ಆಗ ಲೋಹಜಂಘನು ಆಕಾಶದಿಂದ ಇಳಿದು ವಿಷ್ಣುದೇವನ ವೇಷವನ್ನು ಕಳಚಿ ಹಾಕಿ ಜನರ ಮಧ್ಯದಲ್ಲಿ ಯಾರಿಗೂ ವಿಶೇಷವಾಗಿ ಕಾಣಿಸದೆ ನೋಡುತ್ತಾ ನಿಂತನು.

೧೮೧. ಭಗವಂತನು ಇನ್ನೂ ಬರಲಿಲ್ಲ, ನಾನು ಸ್ವರ್ಗಕ್ಕೆ ಹೋಗಲೂ ಇಲ್ಲ ಎಂದು ಕಂಬದ ಮೇಲಿದ್ದ ಕುಂಟಲಗಿತ್ತಿಯು ಚಿಂತೆ ಮಾಡತೊಡಗಿದಳು.

೧೮೨. ಮೇಲೆ ನಿಂತಿರಲು ಆಗದೆ ಕೆಳಗಿದ್ದ ಜನಕ್ಕೆ ಕೇಳಿಸುವಂತೆ ಅವಳು —'ಹಾ ಹಾ ಅಯ್ಯೋ, ನಾನು ಬಿದ್ದೆ' ಎಂದು ಕಿರುಚಿದಳು.

೧೮೩. ಅದನ್ನು ಕೇಳಿದ ದೇವರ ಮುಂದೆ ನಿಂತಿದ್ದ ಜನರು ಆ ಮಾರಿ ಬಿದ್ದೇ ಬಿಟ್ಟಳು ಎಂದು ಹೆದರಿ ವ್ಯಾಕುಲರಾಗಿ 'ದೇವಿ, ಬೀಳಬೇಡ, ಬೇಡ' ಎಂದು ಕೂಗಿದರು.

೧೮೪. ಆಬಾಲವೃದ್ಧ ಮಥುರಾನಿವಾಸಿಗಳು ಮಾರಿ ಬೀಳುವಳೆಂಬ ಭಯದಿಂದ ಬೆದರಿ ಹೇಗೋ ಆ ರಾತ್ರಿಯನ್ನು ಕಳೆದರು.

೧೮೫. ಬೆಳಗಾದ ಮೇಲೆ ಆ ಅವಸ್ಥೆಯಲ್ಲಿದ್ದ ಕುಂಟಲಗಿತ್ತಿಯನ್ನು ನೋಡಿ ಎಲ್ಲ ಜನರೂ ರಾಜನೂ ಅವಳನ್ನು ಗುರುತಿಸಿದರು.

೧೮೬. ಜನರ ಭಯ ತೊಲಗಿತು, ಎಲ್ಲರೂ ನಗತೊಡಗಿದರು. ಈ ವಾರ್ತೆಯನ್ನು ಕೇಳಿ ರೂಪಣಿಕಾ ಅಲ್ಲಿಗೆ ಬಂದಳು.

---

ಸೋಽಪಿ ವ್ಯೋಮ್ನೋಽವತೀರ್ಯೈವ
ಲೋಹಜಂಘೋಽವಲೋಕಯನ್ ।
ತಸ್ಥಾವದೃಷ್ಟಸ್ತನ್ಮಧ್ಯೇ ದೇವವೇಷಂ ನಿವಾರ್ಯ ತಮ್ ॥ ೧೮೦
ಅದ್ಯಾಪಿ ನಾಗತೋ ದೇವೋ ನ ಚ ಸ್ವರ್ಗಮಹಂ ಗತಾ ।
ಇತಿ ಚ ಸ್ತಂಭಪೃಷ್ಠಸ್ಥಾ ಕುಟ್ಟನ್ಯೇವಮಚಿಂತಯತ್ ॥ ೧೮೧
ಅಶಕ್ನುವತ್ಯುಪರಿ ಸ್ಥಾತುಂ ಶ್ರಾವಯಂತೀ ಜನಾನಧಃ ।
ಹಾ ಹಾಹಂ ಪತಿತಾಸ್ಮೀತಿ ಸಾ ಚುಕ್ರೋದ ಚ ಬಿಭ್ಯತೀ ॥ ೧೮೨
ತಚ್ಛ್ರುತ್ವಾ ಪತಿತಾ ಸೇಯಂ ಮಾರೀತ್ಯಾಶಂಕ್ಯ ಚಾಕುಲಾಃ ।
ದೇವಿ ಮಾ ಮಾ ಪತೇತ್ಯೂಚುಸ್ತೇ ದೇವಾಗ್ರಗತಾ ಜನಾಃ ॥ ೧೮೩
ತತಃ ಸಬಾಲವೃದ್ಧಾಸ್ತೇ ಮಾಥುರಾಸ್ತಾಂ ವಿಭಾವರೀಮ್ ।
ಮಾರೀ ಪಾತಭಯೋದ್‌ಭ್ರಾಂತಾಃ ಕಥಮಪ್ಯತ್ಯವಾಹಯನ್ ॥ ೧೮೪
ಪ್ರಾತಶ್ಚ ದೃಷ್ಟ್ವಾ ಸ್ತಂಭಸ್ಥಾಂ ಕುಟ್ಟನೀ ತಾಂ ತಥಾವಿಧಾಮ್ ।
ಪ್ರತ್ಯಭಿಜ್ಞಾತವಾನ್ ಸರ್ವಃ ಪೌರಲೋಕಃ ಸರಾಜಕಃ ॥ ೧೮೫
ಅತಿಕ್ರಾಂತಭಯೇ ತತ್ರ ಜಾತಹಾಸೇಽಖಿಲೇ ಜನೇ ।
ಆಯಯೌ ಶ್ರುತವೃತ್ತಾಂತಾ ತತ್ರ ರೂಪಣಿಕಾಥ ಸಾ ॥ ೧೮೬

೧೮೭. ಅವಳು ಕಂಬದ ಮೇಲಿದ್ದ ತನ್ನ ತಾಯಿಯನ್ನು ನೋಡಿ ನಾಚಿಕೆಪಟ್ಟು ಅಲ್ಲಿದ್ದ ಜನರ ನೆರವಿನಿಂದ ಅವಳನ್ನು ಇಳಿಸಿದಳು.

೧೮೮. ಅಲ್ಲಿದ್ದ ಎಲ್ಲರೂ ಕುತೂಹಲದಿಂದ ಪ್ರಶ್ನಿಸಿದಾಗ ಮಕರದಂಷ್ಟ್ರೆಯು ಅವರಿಗೆ ಎಲ್ಲವನ್ನೂ ನಡೆದಂತೆಯೇ ಹೇಳಿದಳು.

೧೮೯. ಆ ರೀತಿ ನಡೆದ ಅದ್ಭುತವು 'ಸಿದ್ಧರ ಚರಿತ್ರೆ' ಎಂದು ಭಾವಿಸಿ ರಾಜ, ವಿಪ್ರರು, ವೈಶ್ಯರು ಮತ್ತು ಇತರರೆಲ್ಲರೂ ಈ ವಾಕ್ಯವನ್ನು ಹೇಳಿದರು.

೧೯೦. ""ಅನೇಕ ಕಾಮುಕರನ್ನು ವಂಚಿಸಿದ ಇವಳಿಗೆ ಮೋಸ ಮಾಡಿದ ಮನುಷ್ಯನು ಈಗ ಪ್ರಕಟಗೊಳ್ಳಲಿ. ಅವನಿಗೆ ಪಟ್ಟಾಭಿಷೇಕ ಮಾಡುತ್ತೇವೆ."

೧೯೧. ಅದನ್ನು ಕೇಳಿದ ಲೋಹಜಂಘನು ತನ್ನನ್ನು ತೋರಿಸಿಕೊಂಡನು. ಅವರು ಪ್ರಶ್ನಿಸಿದಾಗ ತನ್ನ ವೃತ್ತಾಂತವನ್ನೆಲ್ಲ ಮೊದಲಿನಿಂದ ಆರಂಭಿಸಿ ಬಣ್ಣಿಸಿದನು.

೧೯೨. ಜನರಿಗೆಲ್ಲ ಆಶ್ಚರ್ಯವನ್ನುಂಟುಮಾಡುವಂತಹ, ವಿಭೀಷಣನು ಕಳುಹಿಸಿದ್ದ ಶಂಖ, ಚಕ್ರ ಮುಂತಾದ ಕಾಣಿಕೆಯನ್ನು ಅವನು ದೇವರಿಗೆ ಕೊಟ್ಟನು.

೧೯೩. ಕೂಡಲೇ ಅವನಿಗೆ ಪಟ್ಟವನ್ನು ಕಟ್ಟಿ ಮಥುರಾನಗರದ ನಿವಾಸಿಗಳೆಲ್ಲ ಸಂತೋಷದಿಂದ ರಾಜನ ಅಪ್ಪಣೆಯಂತೆ ರೂಪಣಿಕೆಯನ್ನು ಅವನ ಅಧೀನಕ್ಕೆ ಒಪ್ಪಿಸಿದರು.

---

ಸಾ ಚ ದೃಷ್ಟ್ವಾ ಸವೈಲಕ್ಷ್ಯಾ ಸ್ತಂಭಾಗ್ರಾಜ್ಜನನೀಂ ನಿಜಾಮ್ ।
ತಾಮವಾತಾರಯತ್ ಸದ್ಯಸ್ತತ್ರಸ್ಥೈಶ್ಚ ಜನೈಃ ಸಹ ॥ ೧೮೭
ತತಃ ಸಾ ಕುಟ್ಟನೀ ತತ್ರ ಸರ್ವೈಸ್ತೈಃ ಸಕುತೂಹಲೈಃ ।
ಅಪೃಚ್ಛ್ಯತ ಯಥಾವೃತ್ತಂ ಸಾಪಿ ತೇಭ್ಯಃ ಶಶಂಸ ತತ್ ॥ ೧೮೮
ತತಃ ಸಿದ್ಧಾದಿಚರಿತಂ ತನ್ಮತ್ವಾದ್ಭುತಕಾರಕಮ್ ।
ಸರಾಜವಿಪ್ರವಣಿಜೋ ಜನಾಸ್ತೇ ವಾಕ್ಯಮಬ್ರುವನ್ ॥ ೧೮೯
ಯೇನೇಯಂ ವಿಪ್ರಲಬ್ಧಾ ಹಿ ವಂಚಿತಾನೇಕಕಾಮುಕಾ ।
ಪ್ರಕಟಃ ಸೋ□ಸ್ತು ತಸ್ಯೇಹ ಪಟ್ಟಬಂಧೋ ವಿಧೀಯತೇ ॥ ೧೯೦
ತಚ್ಛ್ರುತ್ವಾ ಲೋಹಜಂಘಶ್ಚ ತತ್ರಾತ್ಮಾನಮದರ್ಶಯತ್ ।
ಪೃಷ್ಟಶ್ಚಾಮೂಲತಸ್ಸರ್ವಂ ವೃತ್ತಾಂತಂ ತಮವರ್ಣಯತ್ ॥ ೧೯೧
ದದೌ ಚ ತತ್ರ ದೇವಾಯ ಶಂಖಚಕ್ರಾದ್ಯುಪಾಯನಮ್ ।
ವಿಭೀಷಣೇನ ಪ್ರಹಿತಂ ಜನವಿಸ್ಮಯಕಾರಕಮ್ ॥ ೧೯೨
ಅಥ ತಸ್ಯ ಸಪದಿ ಪಟ್ಟಂ ಬದ್ಧ್ವಾ ಸಂತುಷ್ಯ ಮಾಥುರಾಃ ಸರ್ವೇ ।
ಸ್ವಾಧೀನಾಂ ರೂಪಣಿಕಾಂ ರಾಜಾದೇಶೇನ ತಾಂ ಚಕ್ರುಃ ॥ ೧೯೩

೧೯೪. ಹೀಗೆ ಪ್ರಿಯೆಯೊಡನೆ ಅನೇಕ ರತ್ನರಾಶಿಗಳಿಂದ ಸಮೃದ್ಧವಾದ ಕೋಷವನ್ನು ಹೊಂದಿದ್ದ ಆ ಲೋಹಜಂಘನು ಕುಂಟಲಗಿತ್ತಿಯು ಮಾಡಿದ್ದ ಅವಮಾನಕ್ಕೆ ಸೇಡನ್ನು ತೀರಿಸಿಕೊಂಡು ಸುಖವಾಗಿ ವಾಸ ಮಾಡಿದನು.

೧೯೫. ಈ ರೀತಿಯಾಗಿ ರೂಪಾಂತರಗೊಂಡಿದ್ದ ವಸಂತಕನ ಬಾಯಿಂದ ಕಥೆಯನ್ನು ಕೇಳಿ ಬಂಧನದಲ್ಲಿದ್ದ ವತ್ಸರಾಜನ ಬಳಿ ಇದ್ದ ವಾಸವದತ್ತೆ ಪರಮಾನಂದವನ್ನು ಹೊಂದಿದಳು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಕಥಾಪೀಠಲಂಬಕದಲ್ಲಿ

ನಾಲ್ಕನೆಯ ತರಂಗ ಮುಗಿಯಿತು.

---

ತತಶ್ಚ ತತ್ರ ಪ್ರಿಯಯಾ ಸಮಂ ತದಾ
ಸಮೃದ್ಧಕೋಷೋ ಬಹುರತ್ನಸಂಚಯೈಃ ।
ಸ ಲೋಹಜಂಘಃ ಪ್ರತಿಕೃತ್ಯ ಕುಟ್ಟನೀ –
ನಿಕಾರಮನ್ಯಂ ನ್ಯವಸದ್ ಯಥಾಸುಖಮ್ ॥ ೧೯೪
ಇತ್ಯನ್ಯರೂಪಸ್ಯ ವಸಂತಕಸ್ಯ ಮುಖಾತ್ಸಮಾಕರ್ಣ್ಯ ಕಥಾಮವಾಪಿ ।
ಬದ್ಧಸ್ಯ ವತ್ಸಾಧಿಪತೇಃ ಸಮೀಪೇ ತೋಷಃ ಪರೋ ವಾಸವದತ್ತಯಾಂತಃ ॥
೧೯೫

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ ಕಥಾಮುಖಲಂಬಕೇ

ಚತುರ್ಥಸ್ತರಂಗಃ ।

## ಐದನೆಯ ತರಂಗ

೧ ಆನಂತರ ವಾಸವದತ್ತೆಯು ತಂದೆಯ ಬಗೆಗೆ ಅನಾಸಕ್ತಳಾಗಿ ಮೆಲ್ಲ ಮೆಲ್ಲನೆ ವತ್ಸರಾಜನಲ್ಲಿ ಗಾಢವಾದ ಮೃದು ಭಾವನೆಯನ್ನು ಹೊಂದತೊಡಗಿದಳು.

೨. ಅನಂತರ ಯೌಗಂಧರಾಯಣನು ಬೇರೆಯವರೆಲ್ಲರಿಗೂ ಅದೃಶ್ಯನಾಗಿ ವತ್ಸರಾಜನ ಬಳಿಗೆ ಬಂದನು.

೩. ವಸಂತಕನ ಎದುರಿಗೆ ಬೇರೆ ಯಾರೂ ಇಲ್ಲದೆ ಇದ್ದಾಗ ಯೌಗಂಧರಾಯಣನು ಅವನಿಗಿಂತು ಹೇಳಿದನು. "ರಾಜನ್, ಚಂಡಮಹಾಸೇನನು ನಿನ್ನನ್ನು ಮಾಯೆಯಿಂದ ಬಂಧಿಸಿದ್ದಾನೆ!

೪. ಮಗಳನ್ನು ಕೊಟ್ಟು ಸಂಮಾನವನ್ನು ಮಾಡಿ ಅವನು ನಿನ್ನ ಬಿಡುಗಡೆ ಮಾಡ ಬಯಸಿದ್ದಾನೆ. ಅದರ ಬದಲು ನಾವೇ ಅವನ ಮಗಳನ್ನು ಸ್ವಯಂ ಅಪಹರಿಸಿಕೊಂಡು ಹೋಗೋಣ.

೫ ಹೀಗೆ ಮಾಡಿದರೆ ಅವನ ಗರ್ವಕ್ಕೆ ತಕ್ಕ ಪ್ರತೀಕಾರ ಮಾಡಿದಂತೆ ಆಗುತ್ತದೆ. ಹೇಡಿತನದಿಂದ ಉಂಟಾಗುವ ಲಘುತ್ವವೂ ನಮಗೆ ಆಗ ಇರುವುದಿಲ್ಲ.

---

## ಪಂಚಮಸ್ತರಂಗಃ

ಅಥ ವಾಸವದತ್ತಾ ಸಾ ಶನೈರ್ವತ್ಸೇಶ್ವರಂ ಪ್ರತಿ ।
ಗಾಢಂ ಬಬಂಧ ಸದ್ಭಾವಂ ಪಿತೃಪಕ್ಷಪರಾಙ್ಮುಖೀ ॥ ೧
ತತೋ ವತ್ಸೇಶನಿಕಟಂ ಪುನರ್ಯೌಗಂಧರಾಯಣಃ ।
ವಿವೇಶಾದರ್ಶನಂ ಕೃತ್ವಾ ಸರ್ವಾನನ್ಯಾನ್ ಜನಾನ್ ಪ್ರತಿ ॥ ೨
ವಸಂತಕಸಮಕ್ಷಂ ಚ ವಿಜನೇ ತಂ ವ್ಯಜಿಜ್ಞಪತ್ ।
ರಾಜನ್ ಬದ್ಧೋ ಭವಾಂಶ್ಚಂಡಮಹಾಸೇನೇನ ಮಾಯಯಾ ॥ ೩
ಸುತಾಂ ಚ ದತ್ತ್ವಾ ಸಂಮಾನ್ಯ ತ್ವಾಮಯಂ ಮೋಕ್ತುಮಿಚ್ಛತಿ ।
ತದಸ್ಯೈನಾಂ ಸ್ವಯಂ ಹೃತ್ವಾ ಗಚ್ಛಾಮಸ್ತನಯಾಂ ವಯಮ್ ॥ ೪
ಏವಂ ಹ್ಯಸ್ಯ ಪ್ರತೀಕಾರೋ ದೃಪ್ತಸ್ಯ ವಿಹಿತೋ ಭವೇತ್ ।
ಅಪೌರುಷಕೃತಂ ಲೋಕೇ ನೈವ ಸ್ಯಾಲ್ಲಾಘವಂ ಚ ನಃ ॥ ೫

೬ ದೊರೆ ತನ್ನ ಮಗಳಾದ ವಾಸವದತ್ತೆಗೆ ಚಂಡಮಹಾಸೇನನು ಕೊಟ್ಟಿರುವ ಭದ್ರಾವತೀ ಎಂಬ ಹೆಣ್ಣಾನೆಯಂತೂ ಇದ್ದೇ ಇದೆ.

೭ ಅದನ್ನು ವೇಗದಿಂದ ಅನುಸರಿಸುವುದಕ್ಕೆ ನಡಾಗಿರಿ (ಎಂಬ ಗಂಡಾನೆ) ಯನ್ನು ಬಿಟ್ಟು ಬೇರೆ ಯಾವ ಆನೆಗೂ ಸಾಧ್ಯವಿಲ್ಲ. ನಡಾಗಿರಿಯು ಭದ್ರಾವತಿಯನ್ನು ನೋಡಿದರೆ, ಯಾವ ಕಾದಾಟಕ್ಕೂ ಹೋಗುವುದಿಲ್ಲ.

೮ ಆ ಭದ್ರಾವತಿಗೆ ಆಷಾಢಕ ಎಂಬ ಮಾವುತನಿದ್ದಾನೆ. ಅವನಿಗೆ ಯಥೇಚ್ಛವಾಗಿ ಹಣವನ್ನು ಕೊಟ್ಟು ನಮ್ಮವನನ್ನಾಗಿ ಮಾಡಿಕೊಂಡು ಇರಿಸಿದ್ದೇನೆ.

೯. ಆ ಹೆಣ್ಣಾನೆಯನ್ನೇರಿ ವಾಸವದತ್ತೆಯೊಡನೆ ನೀನು ಇರುಳಲ್ಲಿ ಆಯುಧಸಹಿತನಾಗಿ ಗುಟ್ಟಾಗಿ ಇಲ್ಲಿಂದ ತಪ್ಪಿಸಿಕೊಂಡು ಹೋಗಬೇಕು.

೧೦. ಇಲ್ಲಿರುವ ಮಾವಟಿಗರ ನಾಯಕನು ಆನೆಗಳ ಆಶಯವನ್ನು ಅರಿತಿದ್ದು ಆಗ ನಡಾಗಿರಿಗೆ ಅದು ಬೇಗನೆ ಚೇತರಿಸಿಕೊಳ್ಳಲು ಆಗದಷ್ಟು ಹೆಂಡವನ್ನು ಕುಡಿಸಿ ಮತ್ತು ಬರುವಂತೆ ಮಾಡಬೇಕು.

೧೧. ನಾನು ನಿನ್ನ ಮಿತ್ರ ಪುಲಿಂದಕನು ಬಳಿಗೆ ದಾರಿಯಲ್ಲಿ ನಿನ್ನ ರಕ್ಷಣೆಗಾಗಿ ಮುಂಚೆಯೇ ಹೋಗಿರುತ್ತೇನೆ" ಎಂದು ಹೇಳಿ ಯೌಗಂಧರಾಯಣನು ಅಲ್ಲಿಂದ ತೆರಳಿದನು.

೧೨. ಏನೇನು ಮಾಡಬೇಕೆಂಬುದನ್ನು ವತ್ಸರಾಜನು ಮನಸ್ಸಿನಲ್ಲಿ ದೃಢಪಡಿಸಿಕೊಂಡನು. ಆಮೇಲೆ ವಾಸವದತ್ತೆ ಅವನ ಬಳಿ ಬಂದಳು.

---

ಅಸ್ತಿ ಚೈತೇನ ದತ್ತಾಸ್ಯಾಸ್ತನಯಾಯಾಃ ಕರೇಣುಕಾ ।
ರಾಜ್ಞಾ ವಾಸವದತ್ತಾಯಾ ನಾಮ್ನಾ ಭದ್ರಾವತೀ ನೃಪ ॥ ೬
ಸಾ ಚಾನುಗಂತುಂ ವೇಗೇನ ಶಕ್ಯಾ ನಾನ್ಯೇನ ದಂತಿನಾ ।
ಮುಕ್ತ್ವಾ ನಡಾಗಿರಿಂ ಸೋऽಪಿ ತಾಂ ದೃಷ್ಟ್ವೈವ ನ ಯುಧ್ಯತೇ ॥ ೭
ತಸ್ಯಾಶ್ಚಾಷಾಢಕೋ ನಾಮ ಹಸ್ತ್ಯಾರೋಹೋऽತ್ರ ವಿದ್ಯತೇ ।
ಸ ಚ ದತ್ತ್ವಾ ಧನಂ ಭೂರಿ ಸ್ವೀಕೃತ್ಯ ಸ್ಥಾಪಿತೋ ಮಯಾ ॥ ೮
ತದಾರುಹ್ಯ ಕರೇಣುಂ ತಾಂ ಸಹ ವಾಸವದತ್ತಯಾ ।
ಸಾಯುಧೇನಾಪಯಾತವ್ಯಂ ನಕ್ತಂ ಗುಪ್ತಮಿತಸ್ತ್ವಯಾ ॥ ೯
ಇಹತ್ಯಶ್ಚ ಮಹಾಮಾತ್ರೋ ದ್ವಿರದೇಂಗಿತವಿತ್ತದಾ ।
ಮದ್ಯೇನ ಕ್ಷೀಬತಾಂ ನೇಯೋ ನೈತಚ್ಚೇತಯತೇ ಯಥಾ ॥ ೧೦
ಪುಲಿಂದಕಸ್ಯ ಸಖ್ಯುಸ್ತೇ ಪಾರ್ಶ್ವಮಗ್ರೇ ಚ ಯಾಮ್ಯಹಮ್ ।
ಮಾರ್ಗರಕ್ಷಾರ್ಥಮಿತ್ಯುಕ್ತ್ವಾ ಯಯೌ ಯೌಗಂಧರಾಯಣಃ ॥ ೧೧
ವತ್ಸರಾಜೋऽಪಿ ತತ್ಸರ್ವಂ ಕರ್ತವ್ಯಂ ಹೃದಯೇ ವ್ಯಧಾತ್ ।
ಅಥ ವಾಸವದತ್ತಾ ಸಾ ತಸ್ಯಾಂತಿಕಮುಪಾಯಯೌ ॥ ೧೨

೧೩. ಅವಳೊಡನೆ ಸಲಿಗೆಯ ಮಾತುಗಳನ್ನಾಡುತ್ತಾ ವತ್ಸರಾಜನು ಯೌಗಂಧರಾಯಣನು ಹೇಳಿದ್ದನ್ನು ಅವಳಿಗೆ ಹೇಳಿದನು.

೧೪. ಅವಳು ಅದನ್ನೆಲ್ಲ ಅರಿತುಕೊಂಡು, ಹೊರಡಲು ನಿಶ್ಚಯಿಸಿ ಮಾವಟಿಗ ಆಷಾಢಕನನ್ನು ಕರೆಸಿ ಅವನನ್ನು ಸಜ್ಜುಗೊಳಿಸಿದಳು.

೧೫. ದೇವಪೂಜೆಯ ಹೆಸರಿನಲ್ಲಿ ಅವಳು ಮತ್ತು ಬರಿಸುವ ಮದ್ಯವನ್ನು ಕೊಟ್ಟು ಎಲ್ಲ ಮಾವಟಿಗರನ್ನೂ ಅವರ ನಾಯಕನನ್ನೂ ಮದದಲ್ಲಿ ಮೈಮರೆಯುವಂತೆ ಮಾಡಿದಳು.

೧೬. ಆಮೇಲೆ ಆಷಾಢಕನು ಮುಸುಕಿದ್ದ ಮೋಡಗಳ ಶಬ್ದದಿಂದ ತುಂಬಿದ್ದ ಸಂಜೆಯಲ್ಲಿ ಆ (ಭದ್ರಾವತಿಯೆಂಬ) ಹೆಣ್ಣಾನೆಯನ್ನು (ಪ್ರಯಾಣಕ್ಕೆ) ಸಜ್ಜುಗೊಳಿಸಿ ಕರೆದುಕೊಂಡು ಬಂದನು.

೧೭. ಹೆಣ್ಣಾನೆಯನ್ನು ಸಿದ್ಧಪಡಿಸುವಾಗ ಅದು ಶಬ್ದ ಮಾಡಿತು. ಆನೆಗಳ ದನಿಯನ್ನು ಚೆನ್ನಾಗಿ ಅರಿತಿದ್ದ ಮಾವಟಿಗರ ನಾಯಕನು ಆ ಶಬ್ದವನ್ನು ಆಲಿಸಿದನು.

೧೮. ಇಂದು ಅರವತ್ಮೂರು ಯೋಜನಗಳಷ್ಟು ದೂರ ಹೋಗುತ್ತೇನೆ ಎಂದು ಹೆಣ್ಣಾನೆ ಹೇಳುತ್ತಿದೆ ಎಂದು ಅವನು ಮತ್ತು ಹೆಚ್ಚಾದುದರಿಂದ ತೊದಲು ಮಾತಿನಲ್ಲಿ ಹೇಳಿದನು.

೧೯. ಆದರೆ ಮತ್ತನಾಗಿದ್ದ ಅವನ ಮನಸ್ಸು ವಿಚಾರ ಮಾಡಲು ಸಮರ್ಥವಾಗಿರಲಿಲ್ಲ. ಮತ್ತರಾಗಿದ್ದ ಬೇರೆ ಮಾವಟಿಗರು ಅವನ ಮಾತನ್ನು ಕೇಳಿಸಿಕೊಳ್ಳಲೇ ಇಲ್ಲ.

---

ತತಸ್ತಾಸ್ತಾಃ ಸವಿಸ್ರಂಭಾಃ ಕಥಾಃ ಕುರ್ವಂಸ್ತಯಾ ಸಹ ।
ಯೌಗಂಧರಾಯಣೋಕ್ತಂ ಚ ತಸ್ಯೈ ರಾಜಾ ಶಶಂಸ ಸಃ ॥ ೧೩
ಸಾ ಚ ತತ್ ಪ್ರತಿಪದ್ಯೈವ ನಿಶ್ಚಿತ್ಯ ಗಮನಂ ಪ್ರತಿ ।
ಆನಾಯ್ಯಾಷಾಢಕಂ ಸಜ್ಜಂ ಹಸ್ತ್ಯಾರೋಹಂ ಚಕಾರ ತತ್ ॥ ೧೪
ದೇವಪೂಜಾಪದೇಶೇನ ದತ್ತ್ವಾ ಮದ್ಯಂ ಮದಾನ್ವಿತಮ್ ।
ಸರ್ವಾಧೋರಣಸಂಯುಕ್ತಂ ಮಹಾಮಾತ್ರಂ ಚ ಸಾಕರೋತ್ ॥ ೧೫
ತತಃ ಪ್ರದೋಷೇ ವಿಲಸನ್ಮೇಘಶಬ್ದಸಮಾಕುಲೇ ।
ಆಷಾಢಕಃ ಕರೇಣುಂ ತಾಂ ಸಜ್ಜೀಕೃತ್ಯಾನಿನಾಯ ಸಃ ॥ ೧೬
ಸಜ್ಜ್ಯಮಾನಾ ಚ ಸಾ ಶಬ್ದಂ ಚಕಾರ ಕರಿಣೀ ಕಿಲ ।
ತಂ ಚ ಹಸ್ತಿರುತಾಭಿಜ್ಞೋ ಮಹಾಮಾತ್ರೋಽಥ ಸೋಽಶೃಣೋತ್ ॥ ೧೭
ತ್ರಿಷಷ್ಟಿಯೋಜನಾನ್ಯದ್ಯ ಯಾಸ್ಯಾಮೀತ್ಯಾಹ ಹಸ್ತಿನೀ ।
ಇತ್ಯುವಾಚ ಸ ಚೋದ್ದಾಮಮದವಿಸ್ಖಲಿತಾಕ್ಷರಮ್ ॥ ೧೮
ವಿಚಾರಾರ್ಹಂ ಪುನಸ್ತಸ್ಯ ಮತ್ತಸ್ಯಾಭೂನ್ನ ಮಾನಸಮ್ ।
ತಚ್ಚ ಹಸ್ತಿಪಕಾಃ ಕ್ಷೀಬಾಸ್ತದ್ವಾಕ್ಯಂ ನೈವ ಶುಶ್ರುವುಃ ॥ ೧೯

೨೦–೨೧. ಆಮೇಲೆ ತನ್ನ ವೀಣೆಯನ್ನು ತೆಗೆದುಕೊಂಡು, ಯೌಗಂಧರಾಯಣನು ಕಲಿಸಿದ್ದ ವಿಧಾನಗಳಿಂದ ಸಂಕೋಲೆಗಳನ್ನು ಕಳಚಿಹಾಕಿ ವಾಸವದತ್ತೆಯು ಕೊಟ್ಟ ತನಗೆ ಇಷ್ಟಬಂದ ಆಯುಧಗಳನ್ನೂ ಎತ್ತಿಕೊಂಡು ವಸಂತಕನೊಡನೆ ವತ್ಸರಾಜನು ಆ ಹೆಣ್ಣಾನೆಯ ಮೇಲೆ ಹತ್ತಿ ಕುಳಿತನು.

೨೨. ಅನಂತರ ರಹಸ್ಯವನ್ನು ಕಾಪಾಡುವ ಆಪ್ತಸಖಿ ಕಾಂಚನಮಾಲೆಯೊಡನೆ ವಾಸವದತ್ತೆಯೂ ಅದೇ ಆನೆಯ ಮೇಲೆ ಹತ್ತಿ ಕುಳಿತಳು.

೨೩. ಅನಂತರ ವತ್ಸರಾಜನು ಮಾವಟಿಗನನ್ನು ಐದನೆಯವನನ್ನಾಗಿ ಇಟ್ಟುಕೊಂಡು ಆ ರಾತ್ರಿಯಲ್ಲಿ ಮದಿಸಿದ ಆನೆಗಳು ಕೆಡವಿಹಾಕಿದ್ದ ಕೋಟೆ ಗೋಡೆಯ ದಾರಿಯಿಂದ ಉಜ್ಜಯಿನೀ ಪಟ್ಟಣದಿಂದ ಹೊರಟನು.

೨೪. ಆ ಜಾಗದಲ್ಲಿ ಕಾವಲುಗಾರರಾಗಿ ನಿಂತಿದ್ದ ವೀರಬಾಹು, ತಾಲಭಟ ಎಂಬ ಇಬ್ಬರು ವೀರ ರಾಜಕುವರರನ್ನು ವತ್ಸರಾಜನು ಸುಲಭವಾಗಿ ಕೊಂದು ಹಾಕಿದನು.

೨೫. ಅನಂತರ ಅವನು ತನ್ನ ಪ್ರಿಯೆಯೊಂದಿಗೆ ಸಂತೋಷದಿಂದ (ಆನೆಯ ಮೇಲೆ) ಕುಳಿತು, ಆಷಾಢಕನು ಅಂಕುಶವನ್ನು ಹಿಡಿದಿರಲು ವೇಗದಿಂದ ಪಯಣ ಬೆಳೆಸಿದನು.

೨೬. ಇತ್ತ ಉಜ್ಜಯನಿಯಲ್ಲಿ ಇಬ್ಬರು ಪ್ರಾಕಾರದ ಕಾವಲುಗಾರರು ಕೊಲ್ಲಲ್ಪಟ್ಟಿರುವುದನ್ನು ನೋಡಿದ ನಗರರಕ್ಷಕಭಟರು ಕಳವಳಗೊಂಡು ರಾತ್ರಿಯಲ್ಲೇ ರಾಜನಿಗೆ ವಿಷಯವನ್ನು ತಿಳಿಸಿದರು.

---

ತತಶ್ಚ ವತ್ಸರಾಜೋಽತ್ರ ವೀಣಾಮಾದಾಯ ತಾಂ ನಿಜಾಮ್ ।
ಯೌಗಂಧರಾಯಣಾತ್ ಪ್ರಾಪ್ತೈರ್ಯೋಗೈಃ ಸ್ರಂಸಿತಬಂಧನಃ ॥ ೨೦
ಉಪನೀತಪ್ರಹರಣಃ ಸ್ವೈರಂ ವಾಸವದತ್ತಯಾ ।
ಕರೇಣುಕಾಯಾಮಾರೋಹತ್ ಸ ತಸ್ಯಾಂ ಸವಸಂತಕಃ ॥ ೨೧
ತತೋ ವಾಸವದತ್ತಾಪಿ ಸಹ ಕಾಂಚನಮಾಲಯಾ ।
ಸಖ್ಯಾ ರಹಸ್ಯಧಾರಿಣ್ಯಾ ತಸ್ಯಾಮೇವಾರುರೋಹ ಸಾ ॥ ೨೨
ಅಥೋಜ್ಜಯಿನ್ಯಾ ನಿರಗಾತ್ ಸ ಹಸ್ತಿಪಕಪಂಚಮಃ ।
ವತ್ಸೇಶೋ ನಿಶಿ ಮತ್ತೇಭಭಿನ್ನಪ್ರಾಕಾರವರ್ತ್ಮನಾ ॥ ೨೩
ತತ್‌ಸ್ಥಾನರಕ್ಷಿಣೌ ವೀರೌ ಸ್ವೈರಂ ಸ ಹತವಾನ್ ನೃಪಃ ।
ವೀರಬಾಹುಂ ತಥಾ ತಾಲಭಟಂ ರಾಜಸುತಾವುಭೌ ॥ ೨೪
ತತಃ ಪ್ರತಸ್ಥೇ ವೇಗೇನ ಸ ರಾಜಾ ದಯಿತಾಸಖಃ ।
ಹೃಷ್ಟಃ ಕರೇಣುಕಾರೂಢೋ ದಧತ್ಯಾಷಾಢಕೇಽಂಕುಶಮ್ ॥ ೨೫
ಉಜ್ಜಯಿನ್ಯಾಂ ಚ ತೌ ದೃಷ್ಟ್ವಾ ಹತೌ ಪ್ರಾಕಾರರಕ್ಷಿಣೌ ।
ರಾಜ್ಞೇ ನ್ಯವೇದಯನ್ ರಾತ್ರೌ ಕ್ಷುಭಿತಾಃ ಪುರರಕ್ಷಿಣಃ ॥ ೨೬

೨೭. ಆಗ ಕ್ರಮವಾಗಿ ಹುಡುಕಾಟ ಮಾಡಿದ ಚಂಡಮಹಾಸೇನನು ವಾಸವದತ್ತೆಯನ್ನು ವತ್ಸರಾಜನು ಅಪಹರಿಸಿ ಪಲಾಯನ ಮಾಡಿದ್ದಾನೆ ಎಂಬುದನ್ನು ತಿಳಿದುಕೊಂಡನು.

೨೮. ನಗರದಲ್ಲೆಲ್ಲ ಕೋಲಾಹಲ ಉಂಟಾಯಿತು. ಮಹಾಸೇನನ ಮಗ ಪಾಲಕನೆಂಬುವನು ನಡಾಗಿರಿ ಎಂಬ ಆನೆಯ ಮೇಲೇರಿ ವತ್ಸರಾಜನನ್ನು ಹಿಂಬಾಲಿಸಿದನು.

೨೯. ಅವನು ಬರುತ್ತಿದ್ದಾಗ ದಾರಿಯಲ್ಲೇ ವತ್ಸರಾಜನು ಬಾಣಗಳಿಂದ ಯುದ್ಧವನ್ನಾರಂಭಿಸಿದನು. ಆ (ಭದ್ರಾವತಿಯೆಂಬ) ಹೆಣ್ಣಾನೆಯನ್ನು ನೋಡಿ ನಡಾಗಿರಿಯು ದಾಳಿ ಮಾಡಲಿಲ್ಲ.

೩೦. ತಂದೆಯ ಆದೇಶದಂತೆ ಗೋಪಾಲಕನೆಂಬ ಸಹೋದರನು ಹಿಂದಿನಿಂದ ಬಂದು ಇಂಗಿತಜ್ಞನಾದ ಪಾಲಕನನ್ನು ಹಿಂದಕ್ಕೆ ತಿರುಗಿಸಿದನು.

೩೧. ಆಗ ವತ್ಸರಾಜನೂ ನಿಶ್ಚಿಂತನಾಗಿ ಪಯಣ ಮಾಡಲಾರಂಭಿಸಿದನು. ಅವನು ಮುಂದೆ ಹೋಗುತ್ತಿದ್ದಂತೆ ಮೆಲ್ಲನೆ ಇರುಳು ಕಳೆಯಿತು.

೩೨. ಆಮೇಲೆ ಮಧ್ಯಾಹ್ನದ ವೇಳೆಗೆ ವಿಂಧ್ಯಾಟವಿಗೆ ವತ್ಸರಾಜನು ತಲುಪುವಷ್ಟರಲ್ಲಿ ಅರವತ್ಮೂರು ಯೋಜನಗಳನ್ನು ದಾಟಿದ್ದ ಆನೆಗೆ ಬಹಳ ಬಾಯಾರಿಕೆಯಾಯಿತು.

೩೩. ರಾಜನು ಭಾರ್ಯೆಯೊಡನೆ ಆನೆಯಿಂದ ಇಳಿದನು. ಆನೆ ನೀರು ಕುಡಿದು ಅದರಲ್ಲಿದ್ದ ದೋಷದಿಂದ ಕ್ಷಣ ಮಾತ್ರದಲ್ಲಿ ಸತ್ತು ಹೋಯಿತು.

---

ಸೋಽನ್ವಿಷ್ಯ ಕ್ರಮಾಚ್ಚಂಡಮಹಾಸೇನಃ ಪಲಾಯಿತಮ್ ।
ಹೃತವಾಸವದತ್ತಂ ತಂ ವತ್ಸರಾಜಮಬುಧ್ಯತ ॥ ೨೭
ತತ್ಸುತಃ ಪಾಲಕಾಖ್ಯೋಽಥ ಜಾತಕೋಲಾಹಲೇ ಪುರೇ ।
ಅನ್ವಧಾವತ್ ಸ ವತ್ಸೇಶಮಧಿರುಹ್ಯ ನಡಾಗಿರಿಮ್ ॥ ೨೮
ವತ್ಸೇಶೋಽಪಿ ತಮಾಯಾಂತಂ ಪಥಿ ಬಾಣೈರಯೋಧಯತ್ ।
ನಡಾಗಿರಿಃ ಕರೇಣುಂ ತಾಂ ದೃಷ್ಟ್ವಾ ನ ಪ್ರಜಹಾರ ಚ ॥ ೨೯
ತತಃ ಸ ಪಾಲಕೋ ಭ್ರಾತ್ರಾ ಪಶ್ಚಾದೇತ್ಯ ನ್ಯವರ್ತ್ಯತ ।
ಗೋಪಾಲಕೇನ ವಾಕ್ಯಜ್ಞಃ ಪಿತೃಕಾರ್ಯಾನುರೋಧಿನಾ ॥ ೩೦
ವತ್ಸರಾಜೋಽಪಿ ವಿಸ್ರಬ್ಧಂ ಗಂತುಂ ಪ್ರವವೃತೇ ತತಃ ।
ಗಚ್ಛತಸ್ತಸ್ಯ ಶನಕೈಃ ಶರ್ವರೀ ಪರ್ಯಹೀಯತ ॥ ೩೧
ತತೋ ವಿಂಧ್ಯಾಟವೀಂ ಪ್ರಾಪ್ಯ ಮಧ್ಯಾಹ್ನೇ ತಸ್ಯ ಭೂಪತೇಃ ।
ತ್ರಿಷಷ್ಟಿಯೋಜನಾಯಾತಾ ತೃಷಿತಾಭೂತ್ ಕರೇಣುಕಾ ॥ ೩೨
ಅವತೀರ್ಣೇ ಸಭಾರ್ಯೇ ಚ ರಾಜ್ಞಿ ತಸ್ಮಿನ್ ಜಲಾನಿ ಸಾ ।
ಪೀತ್ವಾ ತದ್ದೋಷತಃ ಪ್ರಾಪ ಪಂಚತಾಂ ಹಸ್ತಿನೀ ಕ್ಷಣಾತ್ ॥ ೩೩

೩೪. ವತ್ಸರಾಜನೂ ವಾಸವದತ್ತೆಯೂ ದುಃಖಿತರಾದರು. ಆಗ ವತ್ಸರಾಜನು ಆಕಾಶದಲ್ಲಿ ಮೊಳಗಿದ ಈ ಮಾತುಗಳನ್ನು ಕೇಳಿಸಿಕೊಂಡನು.

೩೫. 'ರಾಜನ್, ನಾನು ಮಾಯಾವತಿಯೆಂಬ ವಿದ್ಯಾಧರಿ. ಇಷ್ಟು ಕಾಲದವರೆಗೆ ಶಾಪದಿಂದ ನಾನು ಹೆಣ್ಣಾನೆಯಾಗಿದ್ದೆನು.

೩೬. ವತ್ಸರಾಜ, ಇಂದು ನಾನು ನಿನಗೆ ಉಪಕಾರ ಮಾಡಿರುವೆನು. ಮುಂದೆ ಹುಟ್ಟಲಿರುವ ನಿನ್ನ ಮಗನಿಗೂ ಉಪಕಾರ ಮಾಡುವೆನು.

೩೭. ಈಗ ನಿನ್ನ ಪತ್ನಿಯಾಗಿರುವ ಈ ವಾಸವದತ್ತೆಯೂ ಮನುಷ್ಯಳಲ್ಲ. ಇವಳು ದೇವತೆ. ಕಾರಣಾಂತರದಿಂದ ಭೂಮಿಯಲ್ಲಿ ಅವತರಿಸಿದ್ದಾಳೆ.'

೩೮. ಅದನ್ನು ಕೇಳಿ ಸಂತುಷ್ಟನಾದ ವತ್ಸರಾಜನು ತನ್ನ ಮಿತ್ರ ಪುಲಿಂದಕನಿಗೆ ತನ್ನ ಆಗಮನದ ವಾರ್ತೆಯನ್ನು ತಿಳಿಸಲು ವಸಂತಕನನ್ನು ವಿಂಧ್ಯಪರ್ವತದ ತಪ್ಪಲಿಗೆ ಕಳುಹಿಸಿದನು.

೩೯. ಮತ್ತೆ ತಾನೂ ಪಾದಚಾರಿಯಾಗಿ ಪ್ರಿಯೆಯೊಡನೆ ಮೆಲ್ಲನೆ ಅಲ್ಲಿಗೆ ಹೋಗಲಾರಂಭಿಸಿದನು. ಆಗ ದರೋಡೆಕೋರರು ಅವನನ್ನು ಸುತ್ತುವರಿದರು.

೪೦. ಧನುಸ್ಸನ್ನು ಹಿಡಿದು ನೂರೈದು ಜನ ದರೋಡೆಕೋರರನ್ನು ವಾಸವದತ್ತೆಯ ಎದುರಿಗೇ ವತ್ಸರಾಜನು ವಧಿಸಿದನು.

---

ವಿಷಣ್ಣೋಽಥ ಸ ವತ್ಸೇಶಃ ಸಹ ವಾಸವದತ್ತಯಾ ।
ಗಗನಾದುದ್ಗತಾಮೇತಾಂ ಶೃಣೋತಿ ಸ್ಮ ಸರಸ್ವತೀಮ್ ॥ ೩೪
ಅಹಂ ಮಾಯಾವತೀ ನಾಮ ರಾಜನ್ ವಿದ್ಯಾಧರಾಂಗನಾ ।
ಇಯಂತಂ ಕಾಲಮಭವಂ ಶಾಪದೋಷೇಣ ಹಸ್ತಿನೀ ॥ ೩೫
ಉಪಕಾರಂ ಚ ವತ್ಸೇಶ ತವಾದ್ಯ ಕೃತವತ್ಯಹಮ್ ।
ಕರಿಷ್ಯಾಮಿ ಚ ಭೂಯೋಽಪಿ ತ್ವತ್ಪುತ್ರಸ್ಯ ಭವಿಷ್ಯತಃ ॥ ೩೬
ಏಷಾ ವಾಸವದತ್ತಾ ಚ ಪತ್ನೀ ತೇ ನೈವ ಮಾನುಷೀ ।
ದೇವೀಯಂ ಕಾರಣವಶಾದವತೀರ್ಣಾ ಕ್ಷಿತಾವಿತಿ ॥ ೩೭
ತತಃ ಸ ಹೃಷ್ಟೋ ವ್ಯಸೃಜದ್ ವಿಂಧ್ಯಸಾನುಂ ವಸಂತಕಮ್ ।
ಪುಲಿಂದಕಾಯ ಸುಹೃದೇ ವಕ್ತುಂ ಸ್ವಾಗಮನಂ ನೃಪಃ ॥ ೩೮
ಸ್ವಯಂ ಚ ಪಾದಚಾರೀ ಸನ್ ಸ ಶನೈರ್ದಯಿತಾನ್ವಿತಃ ।
ತತ್ರೈವ ಗಚ್ಛನ್ನುತ್ಥಾಯ ದಸ್ಯುಭಿಃ ಪರ್ಯವಾರ್ಯತ ॥ ೩೯
ಧನುರ್ದ್ವಿತೀಯೋ ದಸ್ಯೂನಾಂ ತೇಷಾಂ ಪಂಚೋತ್ತರಂ ಶತಮ್ ।
ಪುರೋ ವಾಸವದತ್ತಾಯಾ ವತ್ಸರಾಜಃ ಸ ಚಾವಧೀತ್ ॥ ೪೦

೪೧ ಅಷ್ಟು ಹೊತ್ತಿಗೆ ಅವನ ಮಿತ್ರ, ಯೌಗಂಧರಾಯಣನ ಗೆಳೆಯ ಪುಲಿಂದಕನು ವಸಂತಕನನ್ನು ಮುಂದಿಟ್ಟುಕೊಂಡು ಅಲ್ಲಿಗೆ ಬಂದನು.

೪೨. ಆ ಭಿಲ್ಲರಾಜನು ಉಳಿದ ದರೋಡೆಕೋರರನ್ನು ಓಡಿಸಿ ವತ್ಸರಾಜನಿಗೆ ನಮಸ್ಕರಿಸಿ ಅವನನ್ನು ಅವನ ಪತ್ನಿಯೊಡನೆ ತನ್ನ ಹಳ್ಳಿಗೆ ಕರೆದುಕೊಂಡು ಹೋದನು.

೪೩. ಕಾಡಿನ ದರ್ಭೆಹುಲ್ಲಿನಿಂದ ವಾಸವದತ್ತೆಯ ಪಾದಗಳು ಸೀಳಿದ್ದುವು. ಅವಳೊಡನೆ ವತ್ಸರಾಜನು ಆ ರಾತ್ರಿಯಲ್ಲಿ ಅಲ್ಲಿ ವಿಶ್ರಾಂತಿ ತೆಗೆದುಕೊಂಡನು.

೪೪. ಯೌಗಂಧರಾಯಣನು ಮೊದಲೇ ದೂತನನ್ನು ಕಳುಹಿಸಿ ಸೇನಾಪತಿ ರುಮಣ್ವಂತನಿಗೆ ವಿಷಯವನ್ನು ತಿಳಿಸಿದ್ದುದರಿಂದ ರುಮಣ್ವಂತನು ವತ್ಸರಾಜನ ಬಳಿಗೆ ಬೆಳಗ್ಗೆ ಬಂದನು.

೪೫. ದಿಗಂತವನ್ನೆಲ್ಲ ವ್ಯಾಪಿಸಿದಂತಿದ್ದ ಸೈನ್ಯವೂ ಅಲ್ಲಿಗೆ ಬಂದಿತು. ಅದರಿಂದ ವಿಂಧ್ಯಾಟವಿಗೂ ಜನಜಂಗುಳಿಯ ಸ್ವಾರಸ್ಯವೇನೆಂದು ತಿಳಿಯುವಂತಾಯಿತು.

೪೬. ಆ ಅಡವಿಯ ಪ್ರದೇಶದಲ್ಲಿದ್ದ ತನ್ನ ಸೈನ್ಯವನ್ನು ಪ್ರವೇಶಿಸಿ ಉಜ್ಜಯಿನಿಯ ಸುದ್ದಿಯನ್ನು ತಿಳಿಯಲು ವತ್ಸರಾಜನು (ಆಸಕ್ತನಾಗಿ) ನಿಂತನು.

೪೭. ಯೌಗಂಧರಾಯಣನ ಮಿತ್ರನಾಗಿದ್ದ ಒಬ್ಬ ವ್ಯಾಪಾರಿಯು ಉಜ್ಜಯಿನಿಯಿಂದ ವತ್ಸರಾಜನ ಬಳಿ ಬಂದು ಹೀಗೆ ಹೇಳಿದನು.

---

ತತ್ಕ್ಷಣಂ ಸೋಽಸ್ಯ ರಾಜ್ಞೋಽತ್ರ ಮಿತ್ರಂ ಚಾಗಾತ್ ಪುಲಿಂದಕಃ ।
ಯೌಗಂಧರಾಯಣಸಖೋ ವಸಂತಕಪುರಃಸರಃ ॥ ೪೧
ಸ ತಾನ್ ದಸ್ಯೂನ್ನಿವಾರ್ಯಾನ್ಯಾನ್ ವತ್ಸೇಶಂ ಪ್ರಣಿಪತ್ಯ ತಮ್ ।
ನಯತಿ ಸ್ಮ ನಿಜಾಂ ಪಲ್ಲೀಂ ಭಿಲ್ಲರಾಜಃ ಸವಲ್ಲಭಾಮ್ ॥ ೪೨
ತತ್ರ ತಾಂ ರಾತ್ರಿಮಾರಣ್ಯದರ್ಭಪಾಟಿತಪಾದಯಾ ।
ಸ ವತ್ಸೇಶೋ ವಿಶಶ್ರಾಮ ಸಹ ವಾಸವದತ್ತಯಾ ॥ ೪೩
ಪ್ರಾತಃ ಸೇನಾಪತಿಶ್ಚಾಸ್ಯ ರುಮಣ್ವಾನ್ ಪ್ರಾಪದಂತಿಕಮ್ ।
ಯೌಗಂಧರಾಯಣೇನ ಪ್ರಾಗ್ ದೂತಂ ಸಂಪ್ರೇಷ್ಯ ಬೋಧಿತಃ ॥ ೪೪
ಆಗಾಚ್ಚ ಕಟಕಂ ಸರ್ವಂ ತಥಾ ವ್ಯಾಪ್ತದಿಗಂತರಮ್ ।
ಯಥಾ ವಿಂಧ್ಯಾಟವೀ ಪ್ರಾಪ ಸಾ ಸಂಬಂಧರಸಜ್ಞತಾಮ್ ॥ ೪೫
ಪ್ರವಿಶ್ಯ ಕಟಕೇ ತಸ್ಮಿನ್ ತಸ್ಯಾಮೇವಾಟವೀಭುವಿ ।
ತಸ್ಥಾವುಜ್ಜಯಿನೀವಾರ್ತಾಂ ಜ್ಞಾತುಂ ವತ್ಸೇಶ್ವರೋಽಥ ಸಃ ॥ ೪೬
ತತ್ರಸ್ಥಂ ಚ ತಮಭ್ಯಾಗಾದುಜ್ಜಯಿನ್ಯಾ ವಣಿಕ್ ತದಾ ।
ಯೌಗಂಧರಾಯಣಸುಹೃತ್ ಸ ಚಾಗತ್ಯಾಬ್ರವೀದಿದಮ್ ॥ ೪೭

೪೮. "ದೇವ, ಚಂಡಮಹಾಸೇನನು ಅಳಿಯನಾದ ನಿನ್ನಲ್ಲಿ ಸಂತುಷ್ಟನಾಗಿದ್ದಾನೆ. ಅವನು ನಿನ್ನ ಬಳಿಗೆ ದೂತನನ್ನೂ ಕಳುಹಿಸಿದ್ದಾನೆ.

೪೯. ಆ ದೂತನು ಬಂದು ಸ್ವಲ್ಪ ಹಿಂದೆ ನಿಂತಿದ್ದಾನೆ. ನಾನು ಅವನಿಗಿಂತಲೂ ಮುಂದೆ ತ್ವರೆಯಿಂದ ಗುಟ್ಟಾಗಿ ನಿನಗೆ (ವಿಷಯವನ್ನು) ವಿಜ್ಞಾಪಿಸಲು ಬಂದೆನು".

೫೦. ಇದನ್ನು ಕೇಳಿ ಸಂತುಷ್ಟನಾದ ವತ್ಸರಾಜನು ವಾಸವದತ್ತೆಗೂ ಎಲ್ಲ ವಿಷಯವನ್ನೂ ಹೇಳಿದನು. ಅವಳೂ ಬಹಳ ಸಂತೋಷಗೊಂಡಳು.

೫೧. ಬಂಧುಗಳನ್ನೆಲ್ಲ ಪರಿತ್ಯಜಿಸಿ ಬಂದಿದ್ದು ಮದುವೆಗೆ ತ್ವರೆಪಡುತ್ತಿದ್ದ ವಾಸವದತ್ತೆಗೆ ನಾಚಿಕೆಯೂ ಔತ್ಸುಕ್ಯವೂ ಉಂಟಾಗುತ್ತಿದ್ದುವು.

೫೨. ಆಗ ಮನಸ್ಸಿನ ವಿನೋದಕ್ಕಾಗಿ ಅವಳು ಹತ್ತಿರದಲ್ಲಿದ್ದ ವಸಂತಕನಿಗೆ 'ಯಾವುದಾದರೊಂದು ಕಥೆಯನ್ನು ಹೇಳು' ಎಂದಳು.

೫೩. ಮುಗ್ಧವಾದ ನೋಟದ ವಾಸವದತ್ತೆಗೆ ಧೀಮಂತ ವಸಂತಕನು ಪತಿಭಕ್ತಿಯನ್ನು ಹೆಚ್ಚಿಸುವ ಈ ಕಥೆಯನ್ನು ಹೇಳಿದನು.

## ಗುಹಸೇನನೆಂಬ ವ್ಯಾಪಾರಿಯ ಕಥೆ

೫೪. ಈ ಲೋಕದಲ್ಲಿ ತಾಮ್ರಲಿಪ್ತಿ ಎಂದು ಪ್ರಸಿದ್ಧವಾದ ಒಂದು ನಗರವಿದೆ. ಅದರಲ್ಲಿ ತುಂಬ ಶ್ರೀಮಂತನಾದ ಧನದತ್ತನೆಂಬ ವ್ಯಾಪಾರಿ ಇದ್ದನು.

---

ದೇವ ಚಂಡಮಹಾಸೇನಃ ಪ್ರೀತೋ ಜಾಮಾತರಿ ತ್ವಯಿ ।
ಪ್ರೇಷಿತಶ್ಚ ಪ್ರತೀಹಾರಸ್ತೇನೇಹ ಭವದಂತಿಕಮ್ ॥ ೪೮
ಸ ಚಾಗಚ್ಛನ್ ಸ್ಥಿತಃ ಪಶ್ಚಾದಹಮಗ್ರತ ಏವ ತು ।
ಪ್ರಚ್ಛನ್ನಃ ಸತ್ವರಂ ದೇವಂ ವಿಜ್ಞಾಪಯಿತುಮಾಗತಃ ॥ ೪೯
ಏತಚ್ಛ್ರುತ್ವಾ ಸ ವತ್ಸೇಶೋ ಜಹರ್ಷ ಚ ಶಶಂಸ ಚ ।
ಸರ್ವಂ ವಾಸವದತ್ತಾಯಾಃ ಸಾಪಿ ಹರ್ಷಮಗಾತ್ ಪರಮ್ ॥ ೫೦
ಕೃತಬಂಧುಪರಿತ್ಯಾಗಾ ವಿವಾಹವಿಧಿಸತ್ವರಾ ।
ಅಥ ವಾಸವದತ್ತಾ ಸಾ ಸಲಜ್ಜಾ ಚೋತ್ಸುಕಾ ತಥಾ ॥ ೫೧
ತತಃ ಸ್ವಾತ್ಮವಿನೋದಾಯ ನಿಕಟಸ್ಥಂ ವಸಂತಕಮ್ ।
ಸಾ ಜಗಾದ ಕಥಾ ಕಾಚಿತ್ ತ್ವಯಾ ಮೇ ವರ್ಣ್ಯತಾಮಿತಿ ॥ ೫೨
ಸ ಚ ಮುಗ್ಧದೃಶಸ್ತಸ್ಯಾಃ ಭರ್ತೃಭಕ್ತಿವಿವರ್ಧಿನೀಮ್ ।
ವಸಂತಕಸ್ತದಾ ಧೀಮಾನ್ ಇಮಾಮಕಥಯತ್ ಕಥಾಮ್ ॥ ೫೩
ಅಸ್ತೀಹ ನಗರೀ ಲೋಕೇ ತಾಮ್ರಲಿಪ್ತೀತಿ ವಿಶ್ರುತಾ ।
ತಸ್ಯಾಂ ಚ ಧನದತ್ತಾಖ್ಯೋ ವಣಿಗಾಸೀನ್ಮಹಾಧನಃ ॥ ೫೪

೫೫. ಮಕ್ಕಳಿಲ್ಲದ ಅವನು ಅನೇಕ ಬ್ರಾಹ್ಮಣರನ್ನು ಒಟ್ಟುಗೂಡಿಸಿ ನಮಸ್ಕರಿಸಿ ""ನನಗೆ ಬೇಗನೆ ಒಬ್ಬ ಮಗನು ಹುಟ್ಟುವಂತೆ ಮಾಡಿರಿ" ಎಂದು ಹೇಳಿದನು.

೫೬. ಆ ವಿಪ್ರರು ಅವನಿಗೆ ಹೀಗೆಂದರು. ""ಇದೇನೂ ಕಷ್ಟವಾದುದಲ್ಲ. ದ್ವಿಜರು ವೇದೋಕ್ತ ಕರ್ಮಗಳಿಂದ ಎಲ್ಲವನ್ನೂ ಸಾಧಿಸಬಲ್ಲರು.

೫೭. ಹಿಂದೆ ಮಕ್ಕಳಿಲ್ಲದ ಒಬ್ಬ ರಾಜನಿದ್ದನು. ಅವನ ಅಂತಃಪುರದಲ್ಲಿ ಒಂದು ನೂರ ಐದು ಮಡದಿಯರಿದ್ದರು.

೫೮. ಪುತ್ರಕಾಮೇಷ್ಟಿಯನ್ನು ಮಾಡಿದುದರಿಂದ ಅವನಿಗೆ 'ಜಂತು' ಎಂಬ ಮಗನು ಹುಟ್ಟಿದನು. ರಾಜನ ಸಮಸ್ತ ಪತ್ನಿಯರಿಗೂ ಆ ಮಗನು ಕಣ್ಣುಗಳಿಗೆ ಹೊಸ ಚಂದ್ರೋದಯದಂತೆ ಶೋಭಿಸಿದನು.

೫೯. ಮೊಳಕಾಲುಗಳಿಂದ ಅಂಬೆಗಾಲಿಡುತ್ತಿದ್ದ ಆ ಮಗುವಿನ ತೊಡೆಯನ್ನು ಯಾವಾಗಲೋ ಒಮ್ಮೆ ಇರುವೆ ಕಚ್ಚಿತು. ಮಗು ಗಾಬರಿಪಟ್ಟು ಕಿಟಾರನೆ ಕಿರಿಚಿತು.

೬೦. ಅಷ್ಟರಿಂದಲೇ ಅಂತಃಪುರದಲ್ಲಿ ತಳಮಳ ಉಂಟಾಗಿ ಗಲಿಬಿಲಿಯಾಯಿತು. ಹಳ್ಳಿಯ ಮುಗ್ಧನಂತೆ ರಾಜನು 'ಮಗನೇ ಮಗನೇ' ಎಂದು ಕೂಗಿ ಅತ್ತನು.

೬೧. ಒಂದು ಕ್ಷಣದಲ್ಲೇ ಇರುವೆಯನ್ನು ಕಿತ್ತೆಸೆದಾಗ ಮಗು ಸಮಾಧಾನವನ್ನು ಹೊಂದಿತು. ಆಗ ರಾಜನು ತನ್ನ ದುಃಖಕ್ಕೆ ಒಂದೇ ಮಗು ಇರುವುದು ಕಾರಣವೆಂದು ಏಕಪುತ್ರತ್ವವನ್ನು ಹಳಿದನು.

---

ಸ ಚಾಪುತ್ರೋ ಬಹೂನ್ ವಿಪ್ರಾನ್ ಸಂಘಟ್ಯ ಪ್ರಣತೋ□ಬ್ರವೀತ್ ।
ತಥಾ ಕುರುತ ಪುತ್ರೋ ಮೇ ಯಥಾ ಸ್ಯಾದಚಿರಾದಿತಿ ॥ ೫೫
ತತಸ್ತಮೂಚುರ್ವಿಪ್ರಾಸ್ತೇ ನೈತತ್ ಕಿಂಚನ ದುಷ್ಕರಮ್ ।
ಸರ್ವಂ ಹಿ ಸಾಧಯಂತೀಹ ದ್ವಿಜಾಃ ಶ್ರೌತೇನ ಕರ್ಮಣಾ ॥ ೫೬
ತಥಾ ಚ ಪೂರ್ವಮಭವದ್ರಾಜಾ ಕಶ್ಚಿದಪುತ್ರಕಃ ।
ಪಂಚೋತ್ತರಂ ಶತಂ ಚಾಭೂತ್ ತಸ್ಯಾಂತಃ ಪುರಯೋಷಿತಾಮ್ ॥ ೫೭
ಪುತ್ರೀಯೇಷ್ಟ್ಯಾ ಚ ತಸ್ಯೈಕೋ ಜಂತುರ್ನಾಮ ಸುತೋ□ಜನಿ ।
ತತ್ಪತ್ನೀನಾಮಶೇಷಾಣಾಂ ನೂತನೇಂದೂದಯೋ ದೃಶಿ ॥ ೫೮
ಜಾನುಭ್ಯಾಂ ಪರ್ಯಟಂತಂ ಚ ಬಾಲಂ ಜಾತು ಪಿಪೀಲಿಕಾ ।
ಊರುದೇಶೇ ದದಂಶೈನಂ ಮುಕ್ತಚೂತ್ಕಾರಕಾತರಮ್ ॥ ೫೯
ತಾವತಾ ತುಮುಲಾಕ್ರಾಂತಮಂತಃಪುರಮಜಾಯತ ।
ರಾಜಾಪಿ ಪುತ್ರ ಪುತ್ರೇತಿ ಚಕ್ರಂದ ಪ್ರಾಕೃತೋ ಯಥಾ ॥ ೬೦
ಕ್ಷಣಾತ್ತಸ್ಮಿನ್ ಸಮಾಶ್ವಸ್ತೇ ಬಾಲೇ□ ಪಾಸ್ತಪಿಪೀಲಿಕೇ ।
ದುಃಖೈಕಕಾರಣಂ ರಾಜಾ ಸ ನಿನಿಂದೈಕಪುತ್ರತಾಮ್ ॥ ೬೧

೬೨. ಆ ದುಃಖದಿಂದ ಅವನು ಬ್ರಾಹ್ಮಣರನ್ನು ' ನನಗೆ ಬಹಳ ಪುತ್ರರಾಗುವುದಕ್ಕೆ ಏನಾದರೂ ಉಪಾಯವಿದೆಯೇ ?' ಎಂದು ಪ್ರಶ್ನಿಸಿದನು.

೬೩–೬೪. "ರಾಜನ್, ನಿನಗೆ ಇದಕ್ಕೆ ಒಂದು ಉಪಾಯವಿದೆ. ಈ ನಿನ್ನ ಮಗುವನ್ನು ಕೊಂದು ಅದರ ಮಾಂಸವನ್ನೆಲ್ಲ ಬೆಂಕಿಯಲ್ಲಿ ಹೋಮ ಮಾಡಬೇಕು. ಅದರ ಗಂಧವನ್ನು ಮೂಸಿ ನೋಡಿದರೆ ನಿನ್ನ ಎಲ್ಲ ರಾಣಿಯರೂ ಮಕ್ಕಳನ್ನು ಹೆರುತ್ತಾರೆ' ಎಂದು ಬ್ರಾಹ್ಮಣರು ಹೇಳಿದರು. ಇದನ್ನು ಕೇಳಿದ ರಾಜನು ಅವರು ಹೇಳಿದ್ದನ್ನೆಲ್ಲ ಹಾಗೇ ನಡೆಸಿದನು.

೬೫. ತನ್ನ ಪತ್ನಿಯರ ಸಂಖ್ಯೆಗೆ ಸಮವಾಗಿ ಮಕ್ಕಳನ್ನು ರಾಜನು ಪಡೆದನು. ಆದ್ದರಿಂದ ನಿನಗೂ ಹೋಮದಿಂದ ಮಕ್ಕಳಾಗುವಂತೆ ಮಾಡುತ್ತೇವೆ.'

೬೬. ಹೀಗೆ ಬ್ರಾಹ್ಮಣರು ಧನದತ್ತನಿಗೆ ಹೇಳಿ ನಿಗದಿತ ದಕ್ಷಿಣೆಯ ಹೋಮವನ್ನು ಮಾಡಿದರು. ಆ ವ್ಯಾಪಾರಿಗೆ ಮಗನೂ ಹುಟ್ಟಿದನು.

೬೭. ಗುಹಸೇನನೆಂಬ ಹೆಸರಿನಿಂದ ಆ ಹುಡುಗನು ಚೆನ್ನಾಗಿ ಬೆಳೆದನು. ತಂದೆ ಧನದತ್ತನು ಅವನಿಗಾಗಿ ತಕ್ಕ ಹೆಂಡತಿಯನ್ನು ಹುಡುಕಲಾರಂಭಿಸಿದನು.

೬೮. ವ್ಯಾಪಾರದ ನೆವದಿಂದ ತಂದೆಯು ಮಗನ ಜೊತೆಯಲ್ಲಿ ಸೊಸೆಯನ್ನು ಹುಡುಕುವ ಕಾರಣಕ್ಕಾಗಿ ಬೇರೆ ದ್ವೀಪಕ್ಕೆ ಹೋದನು.

---

ಅಸ್ತಿ ಕಶ್ಚಿದುಪಾಯೋ ಮೇ ಯೇನ ಸ್ಯುರ್ಬಹವಃ ಸುತಾಃ ।
ಇತಿ ತತ್ಪರಿತಾಪೇನ ಪಪ್ರಚ್ಛ ಬ್ರಾಹ್ಮಣಾಂಶ್ಚ ಸಃ ॥ ೬೨
ತೇ ತಂ ಪ್ರತ್ಯಬ್ರುವನ್ ರಾಜನ್ನುಪಾಯೋಽತ್ರ ತವಾಸ್ತ್ಯಯಮ್ ।
ಹತ್ವೈತಂ ತ್ವತ್ಸುತಂ ವಹ್ನೌ ತನ್ಮಾಂಸಂ ಹೂಯತೇಽಖಿಲಮ್ ॥ ೬೩
ತದ್ಗಂಧಾಘ್ರಾಣತೋ ರಾಜ್ಞ್ಯಃ ಸರ್ವಾಃ ಪ್ರಾಪ್ಸ್ಯಂತಿ ತೇ ಸುತಾನ್ ।
ಏತಚ್ಛ್ರುತ್ವಾ ಸ ರಾಜಾ ತತ್ ತಥಾ ಸರ್ವಮಕಾರಯತ್ ॥ ೬೪
ಸಪತ್ನೀಸಮಸಂಖ್ಯಾಂಶ್ಚ ಸ ಪುತ್ರಾನ್ ಪ್ರಾಪ್ತವಾನ್ನೃಪಃ ।
ಅತಸ್ತವಾಪಿ ಹೋಮೇನ ಸಾಧಯಾಮೋ ವಯಂ ಸುತಮ್ ॥ ೬೫
ಇತ್ಯುಕ್ತ್ವಾ ಧನದತ್ತಂ ತೇ ಬ್ರಾಹ್ಮಣಾಃ ಕ್ಲೃಪ್ತದಕ್ಷಿಣಮ್ ।
ಹೋಮಂ ಚಕ್ರುಸ್ತತಸ್ತಸ್ಯ ವಣಿಜೋ ಜಾತವಾನ್ ಸುತಃ ॥ ೬೬
ಗುಹಸೇನಾಭಿಧಾನಶ್ಚ ಸ ಬಾಲೋ ವವೃಧೇ ಕ್ರಮಾತ್ ।
ಪಿತಾಥ ಧನದತ್ತೋಽಸ್ಯ ಭಾರ್ಯಾಮನ್ವಿಷ್ಯತಿ ಸ್ಮ ಸಃ ॥ ೬೭
ತತಃ ಸ ತತ್ಪಿತಾ ತೇನ ತನಯೇನ ಸಮಂ ಯಯೌ ।
ದ್ವೀಪಾಂತರಂ ಸ್ನುಷಾಹೇತೋರ್ವಾಣಿಜ್ಯಾವ್ಯಪದೇಶತಃ ॥ ೬೮

೧೯. ಅಲ್ಲಿ ಧರ್ಮಗುಪ್ತನೆಂಬ ಶ್ರೇಷ್ಠ ವಣಿಜನ ಮಗಳಾದ ದೇವಸ್ಮಿತಾ ಎಂಬ ಕನ್ಯೆಯನ್ನು ತನ್ನ ಮಗ ಗುಹಸೇನನಿಗಾಗಿ (ಧನದತ್ತನು) ಬೇಡಿದನು.

೨೦. ಆದರೆ ಧರ್ಮಗುಪ್ತನು ಮಗಳಲ್ಲಿ ಹೆಚ್ಚು ಅಕ್ಕರೆಯಿದ್ದ ಕಾರಣದಿಂದ ತಾಮ್ರಲಿಪ್ತಿಯು ದೂರವೆಂದು ಆಲೋಚಿಸಿ ಈ ಸಂಬಂಧವನ್ನು ಒಪ್ಪಿಕೊಳ್ಳಲಿಲ್ಲ.

೨೧. ಆ ದೇವಸ್ಮಿತೆಯಾದರೋ ಗುಹಸೇನನನ್ನು ನೋಡಿ ಅವನ ಗುಣಗಳಿಗೆ ಮನಸೋತು ತನ್ನ ಬಂಧುಗಳನ್ನು ಬಿಟ್ಟು (ಅವನ ಜೊತೆಯಲ್ಲಿ) ಹೋಗಲು ನಿಶ್ಚಯ ಮಾಡಿದಳು.

೨೨. ಸಖಿಯ ಮುಖಾಂತರ ಸಂಕೇತವನ್ನು ಮಾಡಿ ಅವಳು ತಂದೆಯ ಜೊತೆಯಲ್ಲಿದ್ದ ಪ್ರಿಯನೊಡನೆ ರಾತ್ರಿಯಲ್ಲಿ ಆ ದ್ವೀಪದಿಂದ ಹೊರಟು ಹೋದಳು.

೨೩. ತಾಮ್ರಲಿಪ್ತಿಯನ್ನು ತಲುಪಿ ಮದುವೆ ಮಾಡಿಕೊಂಡ ಆ ದಂಪತಿಗಳ ಮನಸ್ಸು ಪರಸ್ಪರ ಪ್ರೇಮಪಾಶದಿಂದ ಕಟ್ಟಲ್ಪಟ್ಟಿತು.

೨೪. ತಂದೆಯು ಕಣ್ಣು ಮುಚ್ಚಿದ ಮೇಲೆ ಬಂಧುಗಳು ಗುಹಸೇನನ್ನು ಕಟಾಹದ್ವೀಪಕ್ಕೆ ಹೋಗಬೇಕೆಂದು ಪ್ರೇರಿಸಿದರು.

೨೫. ಅವನ ಪ್ರಯಾಣಕ್ಕೆ ಹೆಂಡತಿಯು ಒಪ್ಪಿಗೆಯನ್ನು ನೀಡಲಿಲ್ಲ. ಅನ್ಯಸ್ತ್ರೀಯರ ಸಂಗವು ಪತಿಗೆ ಉಂಟಾಗಬಹುದು ಎಂದು ಸಂಶಯಪಟ್ಟು ದೇವಸ್ಮಿತಾ ಬಹಳ ಈರ್ಷ್ಯೆ ಪಡುತ್ತಿದ್ದಳು.

---

ತತ್ರ ದೇವಸ್ಮಿತಾಂ ನಾಮ ಧರ್ಮಗುಪ್ತಾದ್ ವಣಿಗ್ವರಾತ್ ।
ಸ್ವಪುತ್ರಗುಹಸೇನಸ್ಯ ಕೃತೇ ಕನ್ಯಾಮಯಾಚತ ॥ ೧೯
ಧರ್ಮಗುಪ್ತಸ್ತು ಸಂಬಂಧಂ ನ ತಮಂಗೀಚಕಾರ ಸಃ ।
ಆಲೋಚ್ಯ ತಾಮ್ರಲಿಪ್ತಿಂ ತಾಂ ದೂರಾಂ ದುಹಿತೃವತ್ಸಲಃ ॥ ೨೦
ಸಾ ತು ದೇವಸ್ಮಿತಾ ದೃಷ್ಟ್ವಾ ಗುಹಸೇನಂ ತದೈವ ತಮ್ ।
ತದ್ಗುಣಾಕೃಷ್ಟಚಿತ್ತತ್ವಾದ್ಬಂಧುತ್ಯಾಗೈಕನಿಶ್ಚಯಾ ॥ ೨೧
ಸಖೀಮುಖೇನ ಕೃತ್ವಾ ಚ ಸಂಕೇತಂ ಸಹ ತೇನ ಸಾ ।
ಪ್ರಿಯೇಣ ಪಿತೃಯುಕ್ತೇನ ರಾತ್ರೌ ದ್ವೀಪಾತ್ ತತೋ ಯಯೌ ॥ ೨೨
ತಾಮ್ರಲಿಪ್ತೀಮಥ ಪ್ರಾಪ್ಯ ತಯೋಃ ಕೃತವಿವಾಹಯೋಃ ।
ಜಾಯಾಪತ್ಯೋರ್ಮಿಥಃ ಪ್ರೇಮಪಾಶಬದ್ಧಮಭೂನ್ಮನಃ ॥ ೨೩
ಅಥಾಸ್ತಂ ಪಿತರಿ ಪ್ರಾಪ್ತೇ ಪ್ರೇರಿತೋ□ಭೂತ್ ಸ ಬಂಧುಭಿಃ ।
ಕಟಾಹದ್ವೀಪಗಮನೇ ಗುಹಸೇನೋ ಯದೃಚ್ಛಯಾ ॥ ೨೪
ತಚ್ಚಾಸ್ಯ ಗಮನಂ ಭಾರ್ಯಾ ತದಾ ನಾಂಗೀಚಕಾರ ಸಾ ।
ಸೇರ್ಷ್ಯಾ ದೇವಸ್ಮಿತಾ ಕಾಮಮನ್ಯಸ್ತ್ರೀಸಂಗಶಂಕಿನೀ ॥ ೨೫

೭೬. ಹೆಂಡತಿಗೆ ಇಷ್ಟವಿಲ್ಲ. ಆದರೆ ಬಂಧುಗಳು ಹುರಿದುಂಬಿಸುತ್ತಿದ್ದಾರೆ. ಹಾಗಿರುವಾಗ ಗುಹಸೇನನು ತಾನೇನು ಮಾಡಬೇಕೆಂದು ನಿಶ್ಚಯಿಸುವುದರಲ್ಲಿ ಅಶಕ್ತನಾದನು.

೭೭. ಅನಂತರ ದೇವಸ್ಥಾನಕ್ಕೆ ಹೋಗಿ ನಿರಾಹಾರನಾಗಿ ವ್ರತವನ್ನಾಚರಿಸಿದನು. ಈ ವಿಷಯದಲ್ಲಿ ದೇವರು ಉಪಾಯವನ್ನು ಸೂಚಿಸಲಿ ಎಂದು ಅವನು ನಿರ್ಣಯಿಸಿದನು.

೭೮. ಅದೇ ರೀತಿ ದೇವಸ್ಮಿತೆಯೂ ಅವನೊಡನೆ ವ್ರತವನ್ನು ಆಚರಿಸಿದಳು. ಆಗ ಶಿವನು ಆ ದಂಪತಿಗಳಿಗೆ ಸ್ವಪ್ನದಲ್ಲಿ ದರ್ಶನವನ್ನಿತ್ತನು.

೭೯–೮೦. ದೇವನು ಎರಡು ಕೆಂಪು ಕಮಲಗಳನ್ನು ಕೊಟ್ಟು ಅವರನ್ನು ಕುರಿತು, "ನೀವಿಬ್ಬರೂ ಒಂದೊಂದು ಕಮಲವನ್ನು ಹಿಡಿದುಕೊಳ್ಳಿರಿ. ಪರಸ್ಪರ ದೂರದಲ್ಲಿದ್ದಾಗ (ಇಬ್ಬರಲ್ಲಿ) ಒಬ್ಬರು ಶೀಲಭ್ರಷ್ಟರಾದರೆ ಆಗ ಇನ್ನೊಬ್ಬರ ಕೈಯಲ್ಲಿದ್ದ ಕಮಲವು ಬಾಡುತ್ತದೆ. ಇಲ್ಲದಿದ್ದರೆ ಬಾಡುವುದಿಲ್ಲ." ಎಂದು ಹೇಳಿದನು.

೮೧. ಇದನ್ನು ಕೇಳಿದ ದಂಪತಿಗಳು ಎಚ್ಚರಗೊಂಡು ಪರಸ್ಪರರ ಕೈಯಲ್ಲಿ ಒಬ್ಬೊಬ್ಬರ ಹೃದಯಗಳೋ ಎಂಬಂತಿದ್ದ ಕೆಂದಾವರೆಗಳನ್ನು ಕಂಡರು.

೮೨. ಅನಂತರ ಗುಹಸೇನನು ತಾವರೆಯನ್ನು ಕೈಯಲ್ಲಿ ಹಿಡಿದು ಪ್ರಯಾಣವನ್ನು ಬೆಳೆಸಿದನು. ದೇವಸ್ಮಿತೆಯು (ತಾಮ್ರಲಿಪ್ತಿಯಲ್ಲಿ) ಪದ್ಮದಲ್ಲೇ ಕಣ್ಣನ್ನು ನೆಟ್ಟು ಅಲ್ಲಿಯೇನಿಂತಳು.

---

ತತಃ ಪತ್ನ್ಯಾಮನಿಚ್ಛಂತ್ಯಾಂ ಪ್ರೇರಯತ್ಸು ಚ ಬಂಧುಷು ।
ಕರ್ತವ್ಯನಿಶ್ಚಯೇ ಮೂಢೋ ಗುಹಸೇನೋ ಬಭೂವ ಸಃ ॥ ೭೬
ಅಥ ಗತ್ವಾ ನಿರಾಹಾರಶ್ಚಕ್ರೇ ದೇವಕುಲೇ ವ್ರತಮ್ ।
ಉಪಾಯಮಿಹ ದೇವೋ ಮೇ ನಿರ್ದಿಶತ್ವಿತಿ ಚಿಂತಯನ್ ॥ ೭೭
ಸಾಪಿ ದೇವಸ್ಮಿತಾ ತದ್ವತ್ ತೇನ ಸಾರ್ಧಂ ವ್ಯಧಾದ್ ವ್ರತಮ್ ।
ತತೋ􀀀ನಯೋಃ ಶಿವಃ ಸ್ವಪ್ನೇ ದಂಪತ್ಯೋರ್ದರ್ಶನಂ ದದೌ ॥ ೭೮
ದ್ವೇ ಚ ರಕ್ತಾಂಬುಜೇ ದತ್ತ್ವಾ ಸ ದೇವಸ್ತಾವಭಾಷತ ।
ಹಸ್ತೇ ಗೃಹೀತಮೇಕೈಕಂ ಪದ್ಮಮೇತದುಭಾವಪಿ ॥ ೭೯
ದೂರಸ್ಥತ್ವೇ􀀀ಪಿ ಯದ್ಯೇಕಃ ಶೀಲತ್ಯಾಗಂ ಕರಿಷ್ಯತಿ ।
ತದನ್ಯಸ್ಯ ಕರೇ ಪದ್ಮಂ ಮ್ಲಾನಿಮೇಷ್ಯತಿ ನಾನ್ಯಥಾ ॥ ೮೦
ಏತಚ್ಛ್ರುತ್ವಾ ಪ್ರಬುಧ್ಯೈವ ದಂಪತೀ ತಾವಪಶ್ಯತಾಮ್ ।
ಅನ್ಯೋನ್ಯಸ್ಯೇವ ಹೃದಯಂ ಹಸ್ತಸ್ಥಂ ರಕ್ತಮಂಬುಜಮ್ ॥ ೮೧
ತತಃ ಸ ಚಕ್ರೇ ಪ್ರಸ್ಥಾನಂ ಗುಹಸೇನೋ ಧೃತಾಂಬುಜಃ ।
ಸಾ ತು ದೇವಸ್ಮಿತಾ ತತ್ರ ತಸ್ಥೌ ಪದ್ಮಾರ್ಪಿತೇಕ್ಷಣಾ ॥ ೮೨

೮೩. ಗುಹಸೇನನು ಬೇಗನೆ ಕಟಾಹದ್ವೀಪವನ್ನು ಸೇರಿ ರತ್ನಗಳ ಕೊಳ್ಳುವಿಕೆ ಹಾಗೂ ಮಾರಾಟವನ್ನು ಮಾಡಲಾರಂಭಿಸಿದನು.

೮೪. ಅವನ ಕೈಯಲ್ಲಿ ಯಾವಾಗಲೂ ಇರುತ್ತಿದ್ದ ಎಂದೂ ಬಾಡದ ತಾವರೆಯನ್ನು ನೋಡಿ ನಾಲ್ವರು ವ್ಯಾಪಾರಿಪುತ್ರರು ಆಶ್ಚರ್ಯಪಟ್ಟರು.

೮೫. ಅವರು ಜಾಣತನದಿಂದ ಅವನನ್ನು ಮನೆಗೆ ಒಯ್ದು ಸಾಕಷ್ಟು ಹೆಂಡವನ್ನು ಕುಡಿಸಿ ಪದ್ಮದ ವೃತ್ತಾಂತವನ್ನು ಕುರಿತು ಕೇಳಿದರು. ಮತ್ತನಾಗಿದ್ದ ಅವನು ಎಲ್ಲವನ್ನೂ ಹೇಳಿದನು.

೮೬–೮೭. ಆ ನಾಲ್ವರು ಪಾಪಿಗಳಾದ ವ್ಯಾಪಾರಿಗಳ ಪುತ್ರರು ಗುಹಸೇನನು ದೀರ್ಘಕಾಲ ರತ್ನಾದಿಗಳನ್ನು ಕೊಳ್ಳುವುದರಲ್ಲೂ ಮಾರುವುದರಲ್ಲೂ ನಿರತನಾಗಿರುವುದರಿಂದ ಏತನ್ಮಧ್ಯೆ ಅವನ ಹೆಂಡತಿಯ ಶೀಲವನ್ನು ಕೆಡಿಸಲು ಮಾತನಾಡಿಕೊಂಡು, ಯಾರಿಗೂ ತಿಳಿಯದಂತೆ ಬೇಗನೆ ತಾಮ್ರಲಿಪ್ತಿಗೆ ಹೋದರು.

೮೮. ಅಲ್ಲಿ ಆ ಕಾರ್ಯಕ್ಕೆ ಉಪಾಯವನ್ನು ಹುಡುಕುತ್ತಾ ಅವರು ಬುದ್ಧನ ಆಲಯದಲ್ಲಿದ್ದ ಯೋಗಕರಂಡಿಕಾ ಎಂಬ ಹೆಸರಿನ ಸಂನ್ಯಾಸಿನಿಯನ್ನು ಆಶ್ರಯಿಸಿದರು.

೮೯. "ಭಗವತಿ, ನಮ್ಮ ಇಷ್ಟವನ್ನು ನೀನು ಸಾಧಿಸಿಕೊಟ್ಟರೆ ನಿನಗೆ ಅಪಾರವಾದ ಹಣವನ್ನು ಕೊಡುವೆವು' ಎಂದು ಪ್ರೀತಿಪೂರ್ವಕವಾಗಿ ಅವಳಿಗೆ ಹೇಳಿದರು.

---

ಗುಹಸೇನೋಽಪಿ ತಂ ಪ್ರಾಪ ಕಟಾಹದ್ವೀಪಮಾಶು ಸಃ ।
ಕರ್ತುಂ ಪ್ರವವೃತೇ ಚಾತ್ರ ರತ್ನಾನಾಂ ಕ್ರಯವಿಕ್ರಯೌ ॥ ೮೩
ಹಸ್ತೇ ಚ ತಸ್ಯ ತದ್ ದೃಷ್ಟ್ವಾ ಸದೈವಾಮ್ಲಾನಮಂಬುಜಮ್ ।
ತತ್ರ ಕೇಚಿದ್ ವಣಿಕ್‌ಪುತ್ರಾಶ್ಚತ್ವಾರೋ ವಿಸ್ಮಯಂ ಯಯುಃ ॥ ೮೪
ತೇ ಯುಕ್ತ್ಯಾ ತಂ ಗೃಹಂ ನೀತ್ವಾ ಪಾಯಯಿತ್ವಾ ಭೃಶಂ ಮಧು ।
ಪಪ್ರಚ್ಛುಃ ಪದ್ಮವೃತ್ತಾಂತಂ ಸೋಽಪಿ ಕ್ಷೀಬಃ ಶಶಂಸ ತತ್ ॥ ೮೫
ತತಸ್ತಂ ಚಿರನಿರ್ವಾಹ್ಯರತ್ನಾದಿಕ್ರಯವಿಕ್ರಯಮ್ ।
ವಿಚಿಂತ್ಯ ಗುಹಸೇನಂ ತೇ ಚತ್ವಾರೋಽಪಿ ವಣಿಕ್ಸುತಾಃ ॥ ೮೬
ಸಂಮಂತ್ರ್ಯ ಕೌತುಕಾತ್ ಪಾಪಾಸ್ತದ್ಭಾರ್ಯಾಶೀಲವಿಪ್ಲವಮ್ ।
ಚಿಕೀರ್ಷವೋ ಯಯುಃ ಶೀಘ್ರಂ ತಾಮ್ರಲಿಪ್ತೀಮಲಕ್ಷಿತಾಃ ॥ ೮೭
ತತ್ರೋಪಾಯಂ ವಿಚಿನ್ವಂತಃ ಸುಗತಾಯತನಸ್ಥಿತಾಮ್ ।
ಪ್ರವ್ರಾಜಿಕಾಮುಪಾಜಗ್ಮುರ್ನಾಮ್ನಾ ಯೋಗಕರಂಡಿಕಾಮ್ ॥ ೮೮
ಪ್ರೀತಿಪೂರ್ವಂ ಚ ತಾಮೂಚುರ್ಭಗವತ್ಯಸ್ಮದೀಪ್ಸಿತಮ್ ।
ಸಾಧ್ಯತೇ ಚೇತ್ತ್ವಯಾ ತತ್ತೇ ದಾಸ್ಯಾಮೋಽರ್ಥಾನ್ ಬಹೂನಿತಿ ॥ ೮೯

೯೦–೯೧. ತರುಣರಾದ ನಿಮಗೆ ನಿಶ್ಚಿತವಾಗಿ ಯಾವಳೋ ಹೆಂಗಸು ಬೇಕಾಗಿದ್ದಾಳೆ. ಅವಳಾರೋ ಹೇಳಿ, (ನಿಮ್ಮ ಇಷ್ಟಾರ್ಥವನ್ನು) ಸಾಧಿಸಿ ಕೊಡುತ್ತೇನೆ. ನನಗೆ ಹಣದ ಆಸೆ ಏನೂ ಇಲ್ಲ. ನನಗೆ ತುಂಬ ಬುದ್ಧಿಮತಿಯಾದ ಸಿದ್ಧಿಕರೀ ಎಂಬ ಶಿಷ್ಯೆ ಇದ್ದಾಳೆ. ಅವಳ ಅನುಗ್ರಹದಿಂದ ನನಗೆ ಲೆಕ್ಕವಿಲ್ಲದಷ್ಟು ಹಣ ಸಿಕ್ಕಿದೆ, ಎಂದು ಅವಳು ಹೇಳಿದಳು.

೯೨. ಶಿಷ್ಯೆಯ ಅನುಗ್ರಹದಿಂದ ನಿನಗೆ ಅಪಾರ ಹಣವು ಹೇಗೆ ಸಿಕ್ಕಿತು ಎಂದು ಆ ವಣಿಕ್ಪುತ್ರರು ಕೇಳಿದಾಗ ಸಂನ್ಯಾಸಿನಿಯು ಹೇಳಲಾರಂಭಿಸಿದಳು.

## ಸಿದ್ಧಿಕರಿಯ ಕಥೆ

೯೩. "'ಮಕ್ಕಳೇ, ನಿಮಗೆ ಕುತೂಹಲವಿದ್ದರೆ ಕೇಳಿರಿ, ನಿಮಗಾಗಿ ವರ್ಣಿಸುತ್ತೇನೆ. ಹಿಂದೆ ಇಲ್ಲಿಗೆ ಯಾವನೋ ವ್ಯಾಪಾರಿಯು ಉತ್ತರಾಪಥದಿಂದ ಬಂದಿದ್ದನು.

೯೪. ಅವನು ಇಲ್ಲಿದ್ದಾಗ ನನ್ನ ಶಿಷ್ಯೆಯು ರೂಪ ಬದಲಾವಣೆ ಮಾಡಿಕೊಂಡು ಹೋಗಿ ಅವನ ಮನೆಯಲ್ಲಿ ಕೆಲಸದವಳಾಗಿ ಸೇರಿಕೊಂಡಳು.

೯೫. ಆ ವ್ಯಾಪಾರಿಯನ್ನು ನಂಬಿಸಿ ಅವನ ಮನೆಯಿಂದ ಚಿನ್ನದ ರಾಶಿಯನ್ನೆಲ್ಲ ಕದ್ದು ಗುಟ್ಟಾಗಿ ಬೆಳಗಿನ ಜಾವದಲ್ಲಿ ಅವಳು ಹೊರಟು ಬಂದಳು.

---

ಸಾಪ್ಯುವಾಚ ಧ್ರುವಂ ಯೂನಾಂ ಕಾಪಿ ಸ್ತ್ರೀ ವಾಂಛಿತೇಹ ವಃ ।
ತದ್ ಬ್ರೂತ ಸಾಧಯಾಮ್ಯೇವ ಧನಲಿಪ್ಸಾ ಚ ನಾಸ್ತಿ ಮೇ ॥ ೯೦
ಅಸ್ತಿ ಸಿದ್ಧಿಕರೀ ನಾಮ ಶಿಷ್ಯಾ ಮೇ ಬುದ್ಧಿಶಾಲಿನೀ ।
ತತ್ಪ್ರಸಾದೇನ ಸಂಪ್ರಾಪ್ತಮಸಂಖ್ಯಂ ಹಿ ಧನಂ ಮಯಾ ॥ ೯೧
ಕಥಂ ಶಿಷ್ಯಾಪ್ರಸಾದೇನ ಭೂರಿ ಪ್ರಾಪ್ತಂ ಧನಂ ತ್ವಯಾ ।
ಇತಿ ತೈಃ ಸಾ ವಣಿಕ್ಪುತ್ರೈಃ ಪೃಷ್ಟಾ ಪ್ರಾವ್ರಾಜಿಕಾಬ್ರವೀತ್ ॥ ೯೨
ಕೌತುಕಂ ಯದಿ ತತ್ಪುತ್ರಾಃ ಶ್ರೂಯತಾಂ ವರ್ಣಯಾಮಿ ವಃ ।
ಇಹ ಕೋऽಪಿ ವಣಿಕ್ ಪೂರ್ವಮಾಯಯಾವುತ್ತರಾಪಥಾತ್ ॥ ೯೩
ತಸ್ಯೇಹಸ್ಥಸ್ಯ ಮಚ್ಛಿಷ್ಯಾ ಸಾ ಗತ್ವಾ ಶಿಶ್ರಿಯೇ ಗೃಹೇ ।
ಯುಕ್ತ್ಯಾ ಕರ್ಮಕರೀಭಾವಂ ಕೃತರೂಪವಿವರ್ತನಾ ॥ ೯೪
ವಿಶ್ವಾಸ್ಯ ವಣಿಜಂ ತಂ ಚ ತದ್ಗೃಹಾತ್ ಸ್ವರ್ಣಸಂಚಯಮ್ ।
ಸರ್ವಂ ಮುಷಿತ್ವಾ ಪ್ರಚ್ಛನ್ನಂ ಪ್ರತ್ಯೂಷೇ ಸಾಥ ನಿರ್ಯಯೌ ॥ ೯೫

೯೬. ನಗರದಿಂದ ನಿರ್ಗಮಿಸಿದ ಅವಳು ಸಂಶಯಾಸ್ಪದವಾಗಿ ಬೇಗ ಬೇಗನೆ ನಡೆಯುತ್ತಿದ್ದುದನ್ನು ನೋಡಿ ಕೈಯಲ್ಲಿ ಮೃದಂಗವನ್ನು ಹಿಡಿದಿದ್ದ ಒಬ್ಬ ದೊಂಬರವನು ಹಣವನ್ನು ಕದ್ದುಕೊಳ್ಳಲು ದಡದಡನೆ ಅವಳನ್ನು ಹಿಂಬಾಲಿಸಿದನು.

೯೭. ಆಲದ ಮರದ ಕೆಳಗೆ ಬಂದಾಗ ಆ ದೊಂಬರವನು ಸಮೀಪಕ್ಕೆ ಬಂದುದನ್ನು ನೋಡಿ ವಂಚಕಿ ಸಿದ್ಧಿಕರಿಯು ದೈನ್ಯದಿಂದ ತುಂಬಿದ್ದವಳಂತೆ ಹೀಗೆಂದಳು.

೯೮. ""ಅಯ್ಯಾ ಪುಣ್ಯಾತ್ಮ ಗಂಡನೊಡನೆ ಜಗಳವಾಡಿ ನಾನು ಮನೆಯನ್ನು ಬಿಟ್ಟು ಬಂದಿದ್ದೇನೆ. ನಾನು ಸಾಯುವುದಕ್ಕಾಗಿ ನೀನು ನೇಣನ್ನು ಕಟ್ಟಿಕೊಡು."

೯೯. "ಇವಳು ನೇಣು ಹಾಕಿಕೊಂಡು ಸಾಯಲಿ ; ಈ ಹೆಂಗಸನ್ನು ನಾನೇಕೆ ಕೊಲ್ಲಬೇಕು ?' ಎಂದು ಆಲೋಚಿಸಿ ಆ ದೊಂಬರವನು ಮರಕ್ಕೆ ನೇಣನ್ನು ಬಿಗಿದನು.

೧೦೦. ಆಮೇಲೆ ಸಿದ್ಧಿಕರಿಯು ಮುಗ್ಧಳಂತೆ ಅವನನ್ನು ಕುರಿತು ""ನೇಣು ಹಾಕಿಕೊಳ್ಳುವುದು ಹೇಗೆ ಎಂಬುದನ್ನು ತೋರಿಸಿಕೊಡು" ಎಂದು ಹೇಳಿದಳು.

೧೦೧. ಆಗ ದೊಂಬರವನು ಮೃದಂಗವನ್ನು ಪಾದಗಳ ಕೆಳಗೆ ಇಟ್ಟು (ನಿಂತುಕೊಂಡು) ತನ್ನ ಕುತ್ತಿಗೆಗೆ ನೇಣನ್ನು ಹಾಕಿಕೊಂಡು 'ಹೀಗೆ ಮಾಡಬೇಕು' ಎಂದು ಹೇಳಿದನು.

---

ನಗರೀನಿರ್ಗತಾಂ ದೃಷ್ಟ್ವಾ ಶಂಕಾಶೀಘ್ರಗತಿಂ ಚ ತಾಮ್ ।
ಮೃದಂಗಹಸ್ತೋ ಮೋಷಾಯ ಡೋಂಬಃ ಕೋಽಪ್ಯನ್ವಗಾದ್
ದ್ರುತಮ್ ॥ ೯೬

ನ್ಯಗ್ರೋಧಸ್ಯ ತಲಂ ಪ್ರಾಪ್ಯ ಸಾ ದೃಷ್ಟ್ವಾ ತಮುಪಾಗತಮ್ ।
ಡೋಂಬಂ ಸಿದ್ಧಿಕರೀ ಧೂರ್ತಾ ಸದೈನ್ಯೇವೇದಮಬ್ರವೀತ್ ॥ ೯೭

ಭರ್ತ್ರಾ ಸಹಾದ್ಯ ಕಲಹಂ ಕೃತ್ವಾಹಂ ನಿರ್ಗತಾ ಗೃಹಾತ್ ।
ಮರ್ತುಂ ತದ್ ಭದ್ರ ಪಾಶೋಽತ್ರ ತ್ವಯಾ ಮೇ ಬಧ್ಯತಾಮಿತಿ ॥ ೯೮

ಪಾಶೇನ ಮ್ರಿಯತಾಮೇಷಾ ಕಿಮೇನಾಂ ಹನ್ಮ್ಯಹಂ ಸ್ತ್ರಿಯಮ್ ।
ಮತ್ವೇತಿ ತತ್ರ ವೃಕ್ಷೇಽಸೌ ಡೋಂಬಃ ಪಾಶಮಸಜ್ಜಯತ್ ॥ ೯೯

ತತಃ ಸಿದ್ಧಿಕರೀ ಡೋಂಬಂ ಸಾ ಮುಗ್ಧೇವ ಜಗಾದ ತಮ್ ।
ಕ್ರಿಯತೇ ಕಥಮುದ್ಬಂಧಸ್ತ್ವಯಾ ಮೇ ದರ್ಶ್ಯತಾಮಿತಿ ॥ ೧೦೦

ತತಃ ಸ ಡೋಂಬಸ್ತು ದತ್ತ್ವಾ ಮೃದಂಗಂ ಪಾದಯೋರಧಃ ।
ಇತ್ಥಂ ಕ್ರಿಯತ ಇತ್ಯುಕ್ತ್ವಾ ಸ್ವಕಂಠೇ ಪಾಶಮಾರ಼್ಯತ್ ॥ ೧೦೧

೧೦೨. ಸಿದ್ಧಿಕರಿಯಾದರೋ ತತ್‌ಕ್ಷಣವೇ ಮೃದಂಗವನ್ನು ಕಾಲಿನಿಂದ ಒದ್ದು ಒಡೆದಳು. (ಕಾಲುಗಳಿಗೆ ಆಧಾರವಿಲ್ಲದೆ) ದೊಂಬರವನೇ ನೇಣಿಗೆ ಸಿಕ್ಕಿ ಸತ್ತು ಹೋದನು.

೧೦೩. ತನ್ನ ಸಮಸ್ತ ಆಸ್ತಿಯನ್ನೂ ಅಪಹರಿಸಿಕೊಂಡು ಹೋಗಿದ್ದ ಸಿದ್ಧಿಕರಿಯನ್ನು ಹುಡುಕುತ್ತಾ ಬಂದ ವ್ಯಾಪಾರಿಯು ಅಷ್ಟು ಹೊತ್ತಿಗೆ ಅವಳನ್ನು ದೂರದಿಂದ ನೋಡಿಬಿಟ್ಟನು.

೧೦೪. ಅವನು ಬರುತ್ತಿದ್ದುದನ್ನು ನೋಡಿದ ಸಿದ್ಧಿಕರಿಯು ಅವನಿಗೆ ಕಾಣದಂತೆ ಮರವನ್ನು ಹತ್ತಿ ಕೊಂಬೆಯ ಮೇಲೆ ಎಲೆಗಳ ರಾಶಿಯಲ್ಲಿ ಅಡಗಿಕೊಂಡು ಕುಳಿತಳು.

೧೦೫. ಭೃತ್ಯರೊಡಗೂಡಿ ವ್ಯಾಪಾರಿಯು ಬಂದು ಅಲ್ಲಿ ನೋಡಿದಾಗ ನೇಣು ಹಾಕಿಕೊಂಡಿದ್ದ ದೊಂಬನನ್ನು ಕಂಡನೇ ಹೊರತು ಆ ಸಿದ್ಧಿಕರಿಯನ್ನು ಎಲ್ಲೂ ಕಾಣಲಿಲ್ಲ

೧೦೬. ಅವಳು ಮರವನ್ನೇರಿ ಕುಳಿತಿರಬಾರದೇಕೆ ಎಂದು ಆಲೋಚಿಸಿ ತತ್‌ಕ್ಷಣವೇ ವ್ಯಾಪಾರಿಯ ಭೃತ್ಯನೊಬ್ಬನು ಆ ಮರವನ್ನು ಹತ್ತಿದನು.

---

ಸಾಪಿ ಸಿದ್ಧಿಕರೀ ಸದ್ಯಸ್ತಂ ಮೃದಂಗಮಚೂರ್ಣಯತ್ ।
ಪಾದಾಘಾತೇನ ಡೋಂಬೋಽಥ ಸೋಽಪಿ ಪಾಶೇ ವ್ಯಪದ್ಯತ ॥ ೧೦೨
ತತ್ಕಾಲಮಾಗತೋಽನ್ವೇಷ್ಟುಂ ವೃಕ್ಷಮೂಲೇ ದದರ್ಶ ಸಃ ।
ಮುಷಿತಾಶೇಷಕೋಶಾಂ ತಾಂ ದೂರಾತ್ ಸಿದ್ಧಿಕರೀಂ ವಣಿಕ್ ॥ ೧೦೩
ಸಾಪಿ ದೃಷ್ಟ್ವಾ ತಮಾಯಾಂತಂ ವೃಕ್ಷೇ ತಸ್ಮಿನ್ನಲಕ್ಷಿತಮ್ ।
ಆರುಹ್ಯ ತಸ್ಥೌ ಶಾಖಾಯಾಂ ಪತ್ರೌಘಚ್ಛನ್ನವಿಗ್ರಹಾ ॥ ೧೦೪
ಸ ಚಾಗತ್ಯ ವಣಿಗ್ ಯಾವತ್ ಸಭೃತ್ಯಃ ಪಾಶಬಂಧನಮ್ ।
ಡೋಂಬಮೇವ ತಮುದ್ರಾಕ್ಷೀನ್ನತು ಸಿದ್ಧಿಕರೀಂ ಕ್ವಚಿತ್ ॥ ೧೦೫
ಮಾ ನಾಮ ವೃಕ್ಷಮಾರೂಢಾ ಸಾ ಭವೇದಿತಿ ತತ್‌ಕ್ಷಣಮ್ ।
ಏಕೋಽಸ್ಯ ವಣಿಜೋ ಭೃತ್ಯಸ್ತರುಮಾರೋಹತಿ ಸ್ಮ ತಮ್ ॥ ೧೦೬

೧೦೭–೧೦೮. ಆಗ ಸಿದ್ಧಿಕರಿಯು ""ಚೆಲುವ, ಯಾವಾಗಲೂ ನನಗೆ ನಿನ್ನಲ್ಲೇ ಪ್ರೀತಿ. ನೀನೇ ಮರವನ್ನೇರಿ ಬಂದೆ. ಈ ಹಣವೆಲ್ಲ ನಿನ್ನದೇ, ಬಾ. ನನ್ನನ್ನೂ ಪಡೆದುಕೋ" ಎಂದು ಹೇಳಿ ಅವನನ್ನು ತಬ್ಬಿಕೊಂಡು ಮುಖಕ್ಕೆ ಮುತ್ತಿಟ್ಟು ಆ ದಡ್ಡಬುದ್ಧಿಯ ವ್ಯಾಪಾರಿ ಸೇವಕನ ನಾಲಿಗೆಯನ್ನು ಹಲ್ಲುಗಳಿಂದ ಕಚ್ಚಿ ಕತ್ತರಿಸಿ ಹಾಕಿದಳು.

೧೦೯. ಬಾಯಿಂದ ರಕ್ತವನ್ನು ಕಕ್ಕುತ್ತಾ ನೋವಿನಿಂದ ನರಳುತ್ತಾ ಆ ಭೃತ್ಯನು ಲಲ್ಲಲ್ಲ ಎಂದು ಏನೋ ಅಸ್ಪಷ್ಟವಾಗಿ ಒದರುತ್ತಾ ಮರದಿಂದ ಕೆಳಗೆ ಉರುಳಿದನು.

೧೧೦. ಅದನ್ನು ನೋಡಿ ಹೆದರಿದ ವ್ಯಾಪಾರಿಯು 'ಇವನನ್ನು ಭೂತ ಮೆಟ್ಟಿಕೊಂಡಿದೆ' ಎಂದು ಭಾವಿಸಿ ಬೆದರಿ ಭೃತ್ಯಸಮೇತನಾಗಿ ಅಲ್ಲಿಂದ ಓಡಿಹೋಗಿ ಮನೆ ಸೇರಿಕೊಂಡನು.

೧೧೧. ಆ ತಾಪಸಿ ಸಿದ್ಧಿಕರಿಯೂ ಮರದಿಂದ ಇಳಿದು ಅವನಂತೆಯೇ ಹೆದರಿಕೊಂಡು ಹಣವನ್ನೆಲ್ಲ ಹೊತ್ತುಕೊಂಡು ಮನೆಗೆ ಬಂದಳು.

೧೧೨. ನನ್ನ ಶಿಷ್ಯೆ ಇಂಥ ಬುದ್ಧಿಶಾಲಿನಿ. ಮಕ್ಕಳೇ, ಹೀಗೆ ಅವಳ ಅನುಗ್ರಹದಿಂದ ನನಗೆ ಹಣವು ಸಿಕ್ಕಿತು."

೧೧೩. ಇಷ್ಟನ್ನು ಆ ವ್ಯಾಪಾರಿಪುತ್ರರಿಗೆ ಹೇಳಿ ಆ ಸಂನ್ಯಾಸಿನಿಯು ಅದೇ ಸಮಯ ಅಲ್ಲಿಗೆ ಬಂದ ತನ್ನ ಶಿಷ್ಯೆ ಸಿದ್ಧಿಕರಿಯನ್ನು ಅವರಿಗೆ ತೋರಿಸಿದಳು.

---

ಸದಾ ತ್ವಯ್ಯೇವ ಮೇ ಪ್ರೀತಿರಿಹಾರೂಢಸ್ತ್ವಮೇವ ಚ ।
ತತ್ ಸುಂದರ ತವೈವೇದಂ ಧನಮೇಹಿ ಭಜಸ್ವ ಮಾಮ್ ॥ ೧೦೭
ಇತ್ಯುಕ್ತ್ವಾಲಿಂಗ್ಯ ಚುಂಬಂತೀ ಸಾಸ್ಯ ಸಿದ್ಧಿಕರೀ ಮುಖಮ್ ।
ವಣಿಗ್ಭೃತ್ಯಸ್ಯ ದಶನೈರ್ಜಿಹ್ವಾಂ ಮೂಢಧಿಯೋ□ ಚ್ಛಿನತ್ ॥ ೧೦೮
ಸ ಪಪಾತ ವ್ಯಥಾಕ್ರಾಂತೋ ಮುಖೇನ ರುಧಿರಂ ವಮನ್ ।
ವೃಕ್ಷಾತ್ತಸ್ಮಾಲ್ಲಲಲ್ಲೇತಿ ಕಿಮಪ್ಯಸ್ಫುಟಂ ವದನ್ ॥ ೧೦೯
ತದ್ ದೃಷ್ಟ್ವಾ ಸ ವಣಿಗ್ಭೀತೋ ಭೂತಗ್ರಸ್ತಮವೇತ್ಯ ತಮ್ ।
ಸ್ವಗೃಹಂ ಭೃತ್ಯಸಹಿತಃ ಪಲಾಯ್ಯೈವ ತತೋ ಯಯೌ ॥ ೧೧೦
ಅಥಾವತೀರ್ಯ ವೃಕ್ಷಾಗ್ರಾತ್ ತದ್ವದ್ ಭೀತಾ ಚ ತಾಪಸೀ ।
ಆಗಾದ್ ಗೃಹಂ ಸಮಾದಾಯ ತತ್ ಸಾ ಸಿದ್ಧಿಕರೀ ಧನಮ್ ॥ ೧೧೧
ಏವಂ ವಿಧಾ ಹಿ ಮಚ್ಛಿಷ್ಯಾ ಬಹುಪ್ರಜ್ಞಾನಶಾಲಿನೀ ।
ಏವಂ ಚ ತತ್ಪ್ರಸಾದೇನ ಪುತ್ರಾಃ ಪ್ರಾಪ್ತಂ ಮಯಾ ಧನಮ್ ॥ ೧೧೨
ಇತ್ಯುಕ್ತ್ವಾ ತಾನ್ ವಣಿಕ್ಪುತ್ರಾನ್ ಅಥ ಪ್ರವ್ರಾಜಿಕಾ ನಿಜಾಮ್ ।
ತತ್ಕಾಲಮಾಗತಾಂ ಶಿಷ್ಯಾಮೇತೇಭ್ಯಸ್ತಾಮದರ್ಶಯತ್ ॥ ೧೧೩

೧೧೪. ಆಮೇಲೆ ಅವರಿಗಿಂತೆಂದಳು. 'ಮಕ್ಕಳೇ, ಈಗ ವಸ್ತುಸ್ಥಿತಿಯನ್ನು ಹೇಳಿರಿ. ನಿಮಗೆ ಯಾವ ಹೆಂಗಸು ಬೇಕಾಗಿದ್ದಾಳೆ ? ಅವಳು ನಿಮಗೆ ಬೇಗ ಸಿಗುವಂತೆ ಮಾಡುತ್ತೇನೆ'

೧೧೫. ಅವಳ ಮಾತನ್ನು ಕೇಳಿದ ಅವರು '"ಗುಹಸೇನನೆಂಬ ವ್ಯಾಪಾರಿಯ ಹೆಂಡತಿ ದೇವಸ್ಮಿತಾ ಎಂಬವಳಿದ್ದಾಳಷ್ಟೆ ಅವಳೊಡನೆ ನಮ್ಮ ಸಮಾಗಮವಾಗುವಂತೆ ಮಾಡು" ಎಂದು ಹೇಳಿದರು.

೧೧೬. ಅದನ್ನು ಕೇಳಿ ಆ ಸಂನ್ಯಾಸಿನಿಯು ಆ ಕೆಲಸವನ್ನು ಮಾಡಿಕೊಡುವುದಾಗಿ ಪ್ರತಿಜ್ಞೆ ಮಾಡಿದಳು. ಆ ವಣಿಕ್ಪುತ್ರರ ವಾಸಕ್ಕೆ ತನ್ನ ಮನೆಯನ್ನೇ ಕೊಟ್ಟಳು.

೧೧೭. ಗುಹಸೇನನ ಮನೆಯಲ್ಲಿದ್ದ ಜನರನ್ನು ತಿಂಡಿತೀರ್ಥಗಳಿಂದ ಸಂತೋಷಪಡಿಸಿ ಸಂನ್ಯಾಸಿನಿಯು ಶಿಷ್ಯೆಯೊಡನೆ ಆ ಮನೆಯೊಳಕ್ಕೆ ಹೋದಳು.

೧೧೮. ಅವಳು ದೇವಸ್ಮಿತೆಯ ವಾಸದ ಕೋಣೆಯ ಬಾಗಿಲ ಬಳಿ ಬಂದಾಗ ಅಲ್ಲಿ ಸರಪಳಿಯಿಂದ ಕಟ್ಟಲಾಗಿದ್ದ ಹೆಣ್ಣು ನಾಯಿಯು ಹಿಂದೆಂದೂ ಇಲ್ಲದಷ್ಟು ಜೋರಾಗಿ ಅವಳನ್ನು ಅಡ್ಡಗಟ್ಟಿತು.

೧೧೯. ಅನಂತರ ಅವಳನ್ನು ನೋಡಿದ ದೇವಸ್ಮಿತೆಯು ಇವಳೇತಕ್ಕೆ ಬಂದಿರಬಹುದು ಎಂದು ಆಲೋಚಿಸಿ ದಾಸಿಯನ್ನು ಕಳುಹಿಸಿ ತಾನೇ ಅವಳನ್ನು ಒಳಕ್ಕೆ ಕರೆಸಿದಳು.

---

ಜಗಾದ ಚೈತಾಸ್ತತ್ಪುತ್ರಾಃ ಸದ್ಭಾವಂ ವದತಾಧುನಾ ।
ಕಾಂ ಸ್ತ್ರಿಯಂ ವಾಂಛಥ ಕ್ಷಿಪ್ರಂ ತಾಮಹಂ ಸಾಧಯಾಮಿ ವಃ ॥ ೧೧೪
ತಚ್ಛ್ರುತ್ವಾ ತೇ ಚ ತಾಮೂಚುರ್ಯೈಷಾ ದೇವಸ್ಮಿತಾಭಿಧಾ ।
ಗುಹಸೇನವಣಿಗ್ಭಾರ್ಯಾ ತಯಾ ನಃ ಸಂಗಮಂ ಕುರು ॥ ೧೧೫
ಶ್ರುತ್ವೇತಿ ಪ್ರತಿಜಜ್ಞೇ ತತ್ಕಾರ್ಯಂ ಪ್ರವ್ರಾಜಿಕಾಥ ಸಾ ।
ವಣಿಕ್ಸುತಾನಾಂ ಚೈತೇಷಾಂ ಸ್ವಗೃಹಂ ಸ್ಥಿತಯೇ ದದೌ ॥ ೧೧೬
ರಂಜಯಿತ್ವಾಥ ತತ್ರತ್ಯಂ ಜನಂ ಭಕ್ಷ್ಯಾದಿದಾನತಃ ।
ಗುಹಸೇನಗೃಹಂ ತತ್ಸಾ ವಿವೇಶ ಸಹ ಶಿಷ್ಯಯಾ ॥ ೧೧೭
ತತೋ ದೇವಸ್ಮಿತಾವಾಸಗೃಹದ್ವಾರಮುಪಾಗತಾಮ್ ।
ತಾಂ ಶುನೀ ಶೃಂಖಲಾಬದ್ಧಾ ರುರೋಧಾಪೂರ್ವರೋದಿನೀ ॥ ೧೧೮
ತತೋ ದೇವಸ್ಮಿತಾ ದೃಷ್ಟ್ವಾ ಸಾ ತಾಂ ಪ್ರಾವೇಶಯತ್ ಸ್ವಯಮ್ ।
ಕಿಮಾಗತಾ ಸ್ಯಾದೇಷೇತಿ ವಿಚಿಂತ್ಯ ಪ್ರೇಷ್ಯ ಚೇಟಿಕಾಮ್ ॥ ೧೧೯

೧೨೦. ಒಳಗೆ ಬಂದು ಆ ಪಾಪಿ ಸಂನ್ಯಾಸಿನಿಯು ಆಶೀರ್ವಾದವನ್ನು ಮಾಡಿದಳು. ದೇವಸ್ಮಿತೆಯು ಯಾವ ಕಪಟವನ್ನೂ ಅರಿಯದೆ ಆದರ ಮಾಡಿದಾಗ ಸಂನ್ಯಾಸಿನಿ ಇಂತೆಂದಳು.

೧೨೧. ""ನಿನ್ನನ್ನು ನೋಡಬೇಕೆಂಬ ಇಚ್ಛೆ ಸದಾ ನನಗೆ ಇತ್ತು. ಇಂದು ಆ ಆಸೆ ಮತ್ತೆ ಚಿಗುರಿದೆ. ಸ್ವಪ್ನದಲ್ಲಿ ನೀನು ನನಗೆ ಕಾಣಿಸಿದೆ. ಆದ್ದರಿಂದ ಉತ್ಕಂಠಿತಳಾಗಿ ನಾನು ನಿನ್ನನ್ನು ನೋಡಲು ಬಂದಿದ್ದೇನೆ.

೧೨೨. ನೀನು ಗಂಡನಿಂದ ದೂರವಾಗಿರುವುದನ್ನು ನೋಡಿ ನನ್ನ ಮನಸ್ಸು ನೊಂದುಕೊಳ್ಳುತ್ತಿದೆ. ಪ್ರಿಯನ ಸುಖವಿಲ್ಲದೆ ಚೆಲುವೂ ಹರೆಯವೂ ವ್ಯರ್ಥವಲ್ಲವೆ ?"

೧೨೩. ಈ ರೀತಿಯಾದ ಮಾತುಗಳಿಂದ ಆ ಪತಿವ್ರತೆಯಲ್ಲಿ ನಂಬಿಕೆಯನ್ನು ಹುಟ್ಟಿಸಿ ತನ್ನ ಮನೆಗೆ ಆಹ್ವಾನಿಸಿ ಆ ಸಂನ್ಯಾಸಿನಿ ಹಿಂದಿರುಗಿದಳು.

೧೨೪. ಮಾರನೆಯ ದಿನ ಮೆಣಸಿನ ಪುಡಿ ತುಂಬಿದ್ದ ಮಾಂಸದ ತುಂಡನ್ನು ತೆಗೆದುಕೊಂಡು ಅವಳು ಮತ್ತೆ ದೇವಸ್ಮಿತೆಯ ಮನೆಗೆ ಹೋದಳು.

೧೨೫. ಬಾಗಿಲಿನಲ್ಲಿದ್ದ ಹೆಣ್ಣುನಾಯಿಗೆ ಆ ಮಾಂಸದ ತುಂಡನ್ನು ಕೊಟ್ಟಳು. ಆ ನಾಯಿಯು ಮೆಣಸು ತುಂಬಿದ್ದ ಆ ಮಾಂಸದ ತುಂಡನ್ನು ಕೂಡಲೇ ತಿಂದು ಬಿಟ್ಟಿತು.

---

ಪ್ರವಿಷ್ಟಾ ಚಾಶಿಷಂ ದತ್ತ್ವಾ ಕೃತ್ವಾ ವ್ಯಾಜಕೃತಾದರಾಮ್ ।
ಸಾ ತಾಂ ದೇವಸ್ಮಿತಾಂ ಸಾಧ್ವೀಂ ಪಾಪಾ ಪ್ರವ್ರಾಜಿಕಾಬ್ರವೀತ್ ॥ ೧೨೦
ಸದೈವ ತ್ವದ್ದಿದೃಕ್ಷಾ ಮೇ ಭವತ್ಯದ್ಯ ಪುನರ್ಮಯಾ ।
ಸ್ವಪ್ನೇ ದೃಷ್ಟಾಸಿ ತೇನಾಹಮುತ್ಕಾ ತ್ವಾಂ ದ್ರಷ್ಟುಮಾಗತಾ ॥ ೧೨೧
ಭರ್ತ್ರಾ ವಿನಾಕೃತಾಂ ತ್ವಾಂ ಚ ದೃಷ್ಟ್ವಾ ಮೇ ದೂಯತೇ ಮನಃ ।
ಪ್ರಿಯೋಪಭೋಗವಂಧ್ಯೇ ಹಿ ವಿಫಲೇ ರೂಪಯೌವನೇ ॥ ೧೨೨
ಇತ್ಯಾದಿಭಿರ್ವಚೋಭಿಸ್ತಾಂ ಸಾಧ್ವೀಮಾಶ್ವಾಸ್ಯ ಸಾ ಚಿರಮ್ ।
ಆಮನ್ತ್ರ್ಯ ಚಾಯಯೌ ತಾವದ್ ಗೃಹಂ ಪ್ರವ್ರಾಜಿಕಾ ನಿಜಮ್ ॥ ೧೨೩
ದ್ವಿತೀಯೇಽಹ್ನಿ ಗೃಹೀತ್ವಾ ಚ ಮರಿಚಕ್ಷೋದನಿರ್ಭರಮ್ ।
ಮಾಂಸಖಂಡಂ ಪುನಃ ಸಾ ತದ್ ಯಯೌ ದೇವಸ್ಮಿತಾಗೃಹಮ್ ॥ ೧೨೪
ದ್ವಾರಶುನ್ಯೈ ದದೌ ತಸ್ಯೈ ಮಾಂಸಖಂಡಂ ಚ ತತ್ರ ತಮ್ ।
ಸಾಪಿ ತಂ ಭಕ್ಷಯಾಮಾಸ ಸದ್ಯಃ ಸಮರಿಚಂ ಶುನೀ ॥ ೧೨೫

೧೨೬. ಮೆಣಸಿನ ಕಾರದಿಂದ ಆ ಹೆಣ್ಣು ನಾಯಿಯ ಕಣ್ಣುಗಳಿಂದ ಒಂದೇ ಸಮನೆ ನೀರು ಉಕ್ಕಿ ಹರಿಯಲಾರಂಭಿಸಿತು. ಮೂಗೂ ಸುರಿಯಿತು.

೧೨೭. ಆ ಕಪಟ ಸಂನ್ಯಾಸಿನಿಯು ಆಗಲೇ ದೇವಸ್ಮಿತೆಯ ಬಳಿಗೆ ಹೋಗಿ ಅವಳ ಆತಿಥ್ಯವನ್ನು ಸ್ವೀಕರಿಸಿ ಅಳಲಾರಂಭಿಸಿದಳು.

೧೨೮. ದೇವಸ್ಮಿತೆಯು (ಅದರ ಕಾರಣವನ್ನು) ಕೇಳಿದಾಗ ಎಷ್ಟೋ ಕಷ್ಟಪಟ್ಟು ಅವಳು ಹೇಳಿದಳು. "ಮಗಳೇ, ಈಗ ಹೊರಗೆ ಇರುವ (ನಿನ್ನ) ನಾಯಿ ಅಳುತ್ತಿರುವುದನ್ನು ನೋಡು.

೧೨೯. ಇಂದು ಆ ನಾಯಿಗೆ ನಾನು ಅದರ ಪೂರ್ವಜನ್ಮದಲ್ಲಿ ಜೊತೆಯಲ್ಲಿದ್ದುದು ತಿಳಿದು ಅದು ಅಳುತ್ತಿದೆ. ಮರುಕದಿಂದ ನನಗೂ ಕಣ್ಣೀರು ಉಕ್ಕುತ್ತಿದೆ.'

೧೩೦. ಅದನ್ನು ಕೇಳಿ ಹೊರಗಡೆ ನಾಯಿಯೂ ಅಳುವಂತಿದ್ದುದನ್ನು ಕಂಡು 'ಏನಿದು ಅಚ್ಚರಿ' ಎಂದು ದೇವಸ್ಮಿತೆ ಒಂದು ಕ್ಷಣಕಾಲ ಚಿಂತಿಸಿದಳು.

೧೩೧. ಆಮೇಲೆ ಸಂನ್ಯಾಸಿನಿ ಇಂತೆಂದಳು. "ಮಗಳೇ, ಹಿಂದಿನ ಜನ್ಮದಲ್ಲಿ ನಾನೂ ಈ ನಾಯಿಯೂ ಯಾರೋ ಒಬ್ಬ ಬ್ರಾಹ್ಮಣನ ಇಬ್ಬರು ಹೆಂಡಂದಿರಾಗಿದ್ದೆವು.

೧೩೨. ಆ ನಮ್ಮ ಗಂಡನಾದರೋ ರಾಜನ ಆದೇಶದಿಂದ ಮತ್ತೆ ಮತ್ತೆ ದೂತಕಾರ್ಯದಿಂದ ಇಲ್ಲಿ ಅಲ್ಲಿ ದೇಶಾಂತರಗಳಿಗೆ ಪಯಣಿಸುತ್ತಿದ್ದನು.

---

ತತೋ ಮರಿಚದೋಷೇಣ ತಸ್ಯಾ ದೃಗ್ಭ್ಯಾಮವಾರಿತಮ್ ।
ಅಶ್ರು ಪ್ರವವೃತೇ ತಸ್ಯಾಃ ಪ್ರಸ್ನೌತಿ ಸ್ಮ ಚ ನಾಸಿಕಾ ॥ ೧೨೬
ಸಾಪಿ ಪ್ರವ್ರಾಜಿಕಾ ತಸ್ಮಿನ್ ಕ್ಷಣೇ ದೇವಸ್ಮಿತಾಂತಿಕಮ್ ।
ಪ್ರವಿಶ್ಯ ತತ್ಕೃತಾತಿಥ್ಯಾ ಪ್ರಾರೇಭೇ ರೋದಿತುಂ ಶಠಾ ॥ ೧೨೭
ಪೃಷ್ಟಾ ಚ ದೇವಸ್ಮಿತಯಾ ಸಾ ಕೃಚ್ಛ್ರಾದೇವಮಬ್ರವೀತ್ ।
ಪುತ್ರಿ ಸಂಪ್ರತಿ ಪಶ್ಯೈತಾಂ ಬಹಿಃ ಪ್ರರುದತೀಂ ಶುನೀಮ್ ॥ ೧೨೮
ಏಷಾ ಹ್ಯದ್ಯಪರಿಜ್ಞಾಯ ಮಾಂ ಜನ್ಮಾಂತರಸಂಗತಾಮ್ ।
ಪ್ರವೃತ್ತಾ ರೋದಿತುಂ ತೇನ ಕೃಪಯಾಶ್ರು ಮಮೋದ್ಗತಮ್ ॥ ೧೨೯
ತಚ್ಛ್ರುತ್ವಾ ಬಹಿರಾಲೋಕ್ಯ ಶುನೀಂ ತಾಂ ರುದತೀಮಿವ ।
ಕಿಮೇತಚ್ಚಿತ್ರಮಿತಿ ಸಾ ದಧ್ಯೌ ದೇವಸ್ಮಿತಾ ಕ್ಷಣಮ್ ॥ ೧೩೦
ಪ್ರವ್ರಾಜಿಕಾಥ ಸಾವಾದೀತ್ ಪುತ್ರಿ ಪೂರ್ವತ್ರ ಜನ್ಮನಿ ।
ಅಹಮೇಷಾ ಚ ಭಾರ್ಯೇ ದ್ವೇ ವಿಪ್ರಸ್ಯಾಭೂವ ಕಸ್ಯಚಿತ್ ॥ ೧೩೧
ಸ ಚಾವಯೋಃ ಪತಿರ್ದೂರಂ ದೇಶಾಂತರಮಿತಸ್ತತಃ ।
ವಾರಂ ವಾರಂ ಪ್ರಯಾತಿ ಸ್ಮ ರಾಜಾದೇಶೇನ ದೂತ್ಯಯಾ ॥ ೧೩೨

೧೩೩. ಅವನು ಪ್ರವಾಸಕ್ಕೆ ಹೋಗಿದ್ದಾಗ ನಾನು ಸ್ವೇಚ್ಛೆಯಿಂದ ಗಂಡಸರೊಡನೆ ಸಂಗಮವನ್ನು ಮಾಡುತ್ತಿದ್ದೆನು. ಭೌತಿಕವಾದ ಇಂದ್ರಿಯಗಳ ಸಮೂಹವನ್ನು ನಾನು ಉಪಭೋಗಗಳಿಲ್ಲದಂತಾಗಿಸಿ ವಂಚಿಸಲಿಲ್ಲ.

೧೩೪. ಈ ಭೌತಿಕ ಇಂದ್ರಿಯಗಳಿಗೆ ದ್ರೋಹವನ್ನು ಮಾಡದೆ ಇರುವುದೇ ಪರಮಧರ್ಮವಲ್ಲವೆ ? ಮಗಳೇ, ಅದರಿಂದಲೇ ನಾನು ಈ ಜನ್ಮದಲ್ಲಿ ಪೂರ್ವಜನ್ಮದ ಸ್ಮರಣೆಯನ್ನು ಹೊಂದಿರುವವಳಾಗಿ ಹುಟ್ಟಿದ್ದೇನೆ.

೧೩೫. ಇವಳಾದರೋ ಆಗ ಅಜ್ಞಾನದಿಂದ ಶೀಲವನ್ನು ಕಾಪಾಡಿಕೊಂಡಳು. ಅದರಿಂದ ನಾಯಿಯ ಹೊಟ್ಟೆಯಲ್ಲಿ ಹುಟ್ಟಿದಳು. ಆದರೂ ಅವಳಿಗೆ ಹಿಂದಿನ ಜನ್ಮದ ನೆನಪಿದೆ.'

೧೩೬. ಆದರೆ ಒಳ್ಳೆಯ ಪ್ರಜ್ಞೆಯಿದ್ದ ದೇವಸ್ಮಿತಾ 'ಇದೆಂಥ ಧರ್ಮ ! ಇವಳೆಲ್ಲೋ ಕಪಟದಿಂದ ರಚನೆ ಮಾಡಿದ್ದಾಳಷ್ಟೆ' ಎಂದು ಆಲೋಚಿಸಿ ಸಂನ್ಯಾಸಿನಿಗೆ ಹೀಗೆ ಹೇಳಿದಳು.

೧೩೭. ""ಭಗವತಿ, ಇಲ್ಲಿಯವರೆಗೆ ನನಗೆ ಈ ಧರ್ಮ ಗೊತ್ತಿರಲಿಲ್ಲ. ಆದ್ದರಿಂದ ನೀನೇ ನನಗೆ ಸುಂದರನಾದ ಗಂಡಸಿನೊಡನೆ ಸಂಗಮವನ್ನೇರ್ಪಡಿಸು"

೧೩೮. ಆಗ ಸಂನ್ಯಾಸಿನಿಯು, ""ಬೇರೆ ದ್ವೀಪದಿಂದ ಬಂದ ಕೆಲವರು ವಣಿಕ್ಪುತ್ರರು ಈ ಊರಿನಲ್ಲಿದ್ದಾರೆ. ಅವರನ್ನು ನಿನಗಾಗಿ ಕರೆದು ತರುತ್ತೇನೆ" ಎಂದು ಹೇಳಿದಳು.

---

ತತ್ಪ್ರವಾಸೇ ಚ ಕುರ್ವಂತ್ಯಾ ಸ್ವೇಚ್ಛಂ ಪುರುಷಸಂಗಮಮ್ ।
ಮಯಾ ಭೂತೇಂದ್ರಿಯಗ್ರಾಮೋ ನೋಪಭೋಗೈರವಂಚ್ಯತ ॥ ೧೩೩

ಭೂತೇಂದ್ರಿಯಾನಭಿದ್ರೋಹೋ ಧರ್ಮೋ ಹಿ ಪರಮೋ ಮತಃ ।
ಅತೋ ಜಾತಿಸ್ಮರಾ ಪುತ್ರಿ ಜಾತಾಹಮಿಹ ಜನ್ಮನಿ ॥ ೧೩೪

ಏಷಾ ತು ಶೀಲಮೇವೈಕಂ ರರಕ್ಷಾಜ್ಞಾನತಸ್ತದಾ ।
ತೇನ ಶ್ವಯೋನೌ ಪತಿತಾ ಕಿಂತು ಜಾತಿಂ ಸ್ಮರತ್ಯಸೌ ॥ ೧೩೫

ಕೋ􏰀ಯಂ ಧರ್ಮೋ ಧ್ರುವಂ ಧೂರ್ತರಚನೇಯಂ ಕೃತಾನಯಾ ।
ಇತಿ ಸಂಚಿಂತ್ಯ ಸುಪ್ರಜ್ಞಾ ಸಾ ತಾಂ ದೇವಸ್ಮಿತಾಬ್ರವೀತ್ ॥ ೧೩೬

ಇಯಚ್ಚಿರಂ ಮಯಾ ಧರ್ಮೋ ನ ಜ್ಞಾತೋ ಭಗವತ್ಯಯಮ್ ।
ತತ್ ತ್ವಂ ಕೇನಾಪಿ ಕಾಂತೇನ ಪುಂಸಾ ಮೇ ಸಂಗಮಂ ಕುರು ॥ ೧೩೭

ತತಃ ಪ್ರಾವ್ರಾಜಿಕಾವಾದೀತ್ ಕೇಚಿದ್ ದ್ವೀಪಾಂತರಾಗತಾಃ ।
ಇಹ ಸ್ಥಿತಾ ವಣಿಕ್ಪುತ್ರಾಸ್ತಾಂಸ್ತೇ ತಾನಾನಯಾಮಿ ತೇ ॥ ೧೩೮

೧೫೯. ಹೀಗೆ ಹೇಳಿ ಸಂತೋಷದಿಂದ ಸಂನ್ಯಾಸಿನಿಯು ತನ್ನ ಮನೆಗೆ ಹೋದಳು. ದೇವಸ್ಮಿತೆಯಾದರೋ ತನ್ನ ದಾಸಿಯರಿಗೆ ಮುಕ್ತಾಗಿ ಹೀಗೆಂದಳು.

೧೬೦–೧೬೧. "ನನ್ನ ಗಂಡನ ಕೈಯಲ್ಲಿದ್ದ ತಾವರೆಯು ಎಂದೂ ಬಾಡದಿರುವುದನ್ನು ಕಂಡು ಅವನಿಗೆ ಮದ್ಯಪಾನ ಮಾಡಿಸಿ ಕುತೂಹಲದಿಂದ ಪ್ರಶ್ನೆ ಮಾಡಿ ವೃತ್ತಾಂತವನ್ನು ತಿಳಿದು ನನ್ನ ಶೀಲವನ್ನು ಕೆಡಿಸಲು ಆ ದ್ವೀಪದಿಂದ ಯಾರೋ ಕಪಟಿ ವಣಿಕ್ಪುತ್ರರು ಇಲ್ಲಿಗೆ ಬಂದಿದ್ದಾರೆ. ಅವರು ಈ ಕೆಟ್ಟ ತಾಪಸಿಯನ್ನು ಕಳುಹಿಸಿದ್ದಾರೆ.

೧೬೨. ಆದ್ದರಿಂದ ಬೇಗನೆ ದತ್ತೂರಿ ಬೆರೆಸಿರುವ ಮದ್ಯವನ್ನು ತನ್ನಿರಿ. ಎಲ್ಲಾದರೂ ಹೋಗಿ ಕಬ್ಬಿಣದಿಂದ ನಾಯಿಯ ಕಾಲುಗಳನ್ನು ಮಾಡಿಸಿರಿ".

೧೬೩. ಹೀಗೆ ದೇವಸ್ಮಿತೆ ಹೇಳಿದಾಗ ದಾಸಿಯರು ಅಂತೆಯೇ ಮಾಡಿದರು. ಮತ್ತೊಬ್ಬ ಚೇಟಿಯು ಒಡತಿಯ ಮಾತಿನಂತೆ ತನ್ನನ್ನು ಒಡತಿಯಂತೆ ಅಲಂಕರಿಸಿಕೊಂಡಳು.

೧೬೪. ಆ ಸಂನ್ಯಾಸಿನಿಯು ನಾನು ಮೊದಲು ತಾನು ಮೊದಲು ಎಂದು ಹಾತೊರೆಯುತ್ತಿದ್ದ ಆ ನಾಲ್ವರು ವಣಿಕ್ಪುತ್ರರಲ್ಲಿ ಒಬ್ಬನನ್ನು ಕರೆದುಕೊಂಡು ಬಂದಳು.

---

ಇತ್ಯುಕ್ತ್ವಾ ಸಾ ಪ್ರಮುದಿತಾ ಯಯೌ ಪ್ರವ್ರಾಜಿಕಾ ಗೃಹಮ್ ।
ಸಾ ಚ ದೇವಸ್ಮಿತಾ ಸ್ವೈರಂ ಸ್ವಚೇಟೀರಿತ್ಯಭಾಷತ ॥ ೧೫೯
ನೂನಂ ದೃಷ್ಟ್ವಾ ತದಮ್ಲಾನಂ ಹಸ್ತೇ ಮದ್ಭರ್ತುರಂಬುಜಮ್ ।
ಪೃಷ್ಟ್ವಾ ಚ ತಂ ಯಥಾವೃತ್ತಂ ಮದ್ಯಪಂ ಜಾತು ಕೌತುಕಾತ್ ॥ ೧೬೦
ಮದ್ವಿಪ್ಲುಸಾಯ ಕೇ□ಪ್ಯೇತೇ ದ್ವೀಪಾತ್ತಸ್ಮಾದಿಹಾಗತಾಃ ।
ವಣಿಕ್ಪುತ್ರಾಃ ಶಠಾಸ್ತೈಶ್ಚ ಪ್ರಯುಕ್ತೇಯಂ ಕುತಾಪಸೀ ॥ ೧೬೧
ತದ್ಧತ್ತೂರಕಸಂಯುಕ್ತಂ ಮದ್ಯಮಾನಯತ ದ್ರುತಮ್ ।
ಗತ್ವಾಥ ಕಾರಯಧ್ವಂ ಚ ಶುನಃ ಪಾದಮಯೋಮಯಮ್ ॥ ೧೬೨
ಇತಿ ದೇವಸ್ಮಿತೋಕ್ತಾಸ್ತಾಶ್ಚೇಟ್ಯಶ್ಚಕ್ರುಸ್ತಥೈವ ತತ್ ।
ಏಕಾ ಚ ಚೇಟೀ ತದ್ರೂಪಂ ತದ್ವಾಕ್ಯಾದಕರೋತ್ತದಾ ॥ ೧೬೩
ಸಾಪಿ ಪ್ರವ್ರಾಜಿಕಾ ತಸ್ಮಾದ್ವಣಿಕ್ಪುತ್ರಚತುಷ್ಟಯಾತ್ ।
ಅಹಂಪ್ರಥಮಿಕಾದಿಷ್ಟಾದಾದಾಯೈಕಮಥಾಯಯೌ ॥ ೧೬೪

೧೫೫. ಅವನನ್ನು ತನ್ನ ಶಿಷ್ಯೆಯಂತೆ ವೇಷ ತೊಡಿಸಿ ಮರೆಮಾಡಿ ಸಾಯಂಕಾಲ ದೇವಸ್ಮಿತೆಯ ಮನೆಯೊಳಕ್ಕೆ ಕರೆದು ತಂದು ಸಂನ್ಯಾಸಿನಿಯು ಯಾರಿಗೂ ಕಾಣದಂತೆ ಹೊರಗೆ ಬಂದು ಹೊರಟು ಹೋದಳು.

೧೫೬. ದೇವಸ್ಮಿತೆಯ ವೇಷದಲ್ಲಿದ್ದ ದಾಸಿಯು ಆ ವಣಿಕ್ಪುತ್ರನಿಗೆ ದತ್ತೂರಿ ಸಹಿತವಾಗಿದ್ದ ಹೆಂಡವನ್ನು ಪ್ರೀತಿಪೂರ್ವಕವಾಗಿ ಕುಡಿಸಿದಳು.

೧೫೭. ತನ್ನ ಅಹಂಕಾರದಿಂದಲೋ ಎಂಬಂತೆ ಆ ಹೆಂಡದಿಂದ ಅವನ ಸಂಜ್ಞೆಯು ಕಳೆದು ಹೋಯಿತು. ದಾಸಿಯರು ಅವನ ಬಟ್ಟೆ ಇತ್ಯಾದಿಗಳನ್ನು ಕಳಚಿ ಬೆತ್ತಲೆ ಮಾಡಿದರು.

೧೫೮. ಅವನ ಹಣೆಯಲ್ಲಿ ನಾಯಿಕಾಲಿನ ಗುರುತನ್ನು ಮಾಡಿ ರಾತ್ರಿಯಲ್ಲೇ ಅವರು ಕೊಳಕು ತುಂಬಿದ್ದ ಹಳ್ಳದಲ್ಲಿ ಅವನನ್ನು ತಳ್ಳಿದರು.

೧೫೯. ರಾತ್ರಿಯ ಕೊನೆಯ ಯಾಮದಲ್ಲಿ ಸಂಜ್ಞೆ ಮರಳಿದಾಗ ತನ್ನ ಪಾಪದಿಂದಲೇ ಒದಗಿ ಬಂದ ಅವೀಚಿ ಎಂಬ ನರಕದಲ್ಲೋ ಎಂಬಂತೆ ಆ ಹಳ್ಳದಲ್ಲಿ ತಾನು ಬಿದ್ದಿದ್ದುದು ಅವನಿಗೆ ತಿಳಿಯಿತು.

೧೬೦. ಅನಂತರ ದಿಗಂಬರನಾಗಿದ್ದ ಆ ವಣಿಕ್ಪುತ್ರನು ಎದ್ದು ಸ್ನಾನ ಮಾಡಿ ತನ್ನ ಹಣೆಯಲ್ಲಿದ್ದ ಗುರುತನ್ನು ಸವರಿಕೊಳ್ಳುತ್ತಾ ಸಂನ್ಯಾಸಿನಿಯ ಮನೆಗೆ ಹೋದನು.

---

ಸ್ವಶಿಷ್ಯಾವೇಷಸಂಛನ್ನಂ ತಂ ಚ ದೇವಸ್ಮಿತಾಗೃಹೇ ।
ತತ್ರ ಸಾಯಂ ಪ್ರವೇಶ್ಯೈವ ನಿರ್ಗತ್ಯಾಪ್ರಕಟಂ ಯಯೌ ॥ ೧೫೫
ತತೋಽತ್ರ ತಂ ವಣಿಕ್ಪುತ್ರಂ ತತ್ಸಧತ್ತೂರಕಂ ಮಧು ।
ಚೇಟೀ ದೇವಸ್ಮಿತಾವೇಷಾ ಸಾ ಸಾದರಮಪಾಯಯತ್ ॥ ೧೫೬
ತೇನ ಸೋಽವಿನಯೇನೇವ ಮಧುನಾ ಹೃತಚೇತನಃ ।
ಹೃತ್ವಾ ವಸ್ತ್ರಾದಿ ಚೇಟೀಭಿಸ್ತತ್ರ ಚಕ್ರೇ ದಿಗಂಬರಃ ॥ ೧೫೭
ಶುನಃ ಪಾದೇನ ದತ್ತಾಂಕಂ ಲಲಾಟೇ ತಾಭಿರೇವ ಚ ।
ನೀತ್ವಾ ಸೋಽಶುಚಿಸಂಪೂರ್ಣೇ ಕ್ಷಿಪ್ತೋಽಭೂತ್ ಖಾತಕೇ ನಿಶಿ ॥ ೧೫೮
ಯಾಮೇಽಥ ಪಶ್ಚಿಮೇ ಸಂಜ್ಞಾಂಲಬ್ಧ್ವಾತ್ಮಾನಂ ದದರ್ಶ ಸಃ ।
ಸ್ವಪಾಪೋಪನತೇ ಮಗ್ನಮವೀಚಾವಿವ ಖಾತಕೇ ॥ ೧೫೯
ಅಥೋತ್ಥಾಯ ಕೃತಸ್ನಾನೋ ಲಲಾಟೇಽಂಕಂ ಪರಾಮೃಶನ್ ।
ನಗ್ನಃ ಸನ್ ಸ ವಣಿಕ್ಪುತ್ರೋ ಯಯೌ ಪ್ರವ್ರಾಜಿಕಾಗೃಹಮ್ ॥ ೧೬೦

೧೫೧. ತಾನೊಬ್ಬನೇ ನಗೆಪಾಟಲಾಗಬಾರದು ಎಂದು ಯೋಚಿಸಿ ಅವನು ಉಳಿದ ಸ್ನೇಹಿತರಿಗೆ ""ಅಲ್ಲಿಂದ ಬರುತ್ತಿದ್ದಾಗ (ಕಳ್ಳರು) ನನ್ನನ್ನು ದೋಚಿದರು" ಎಂದು ಹೇಳಿದನು.

೧೫೨. ರಾತ್ರಿಯೆಲ್ಲ ನಿದ್ದೆಯಿಲ್ಲದೆ ಇದ್ದುದರಿಂದ ಮತ್ತು ಅತಿಯಾಗಿ ಕುಡಿದಿದ್ದರಿಂದ ನನಗೆ ತಲೆನೋವು ಎಂದು ಹೇಳಿಕೊಂಡು ಬೆಳಗ್ಗೆ (ನಾಯಿಕಾಲಿನ) ಚಿಹ್ನೆಯಿದ್ದ ತಲೆಯನ್ನು ಬಟ್ಟೆಯಿಂದ ಸುತ್ತಿಕೊಂಡು ಇದ್ದುಬಿಟ್ಟನು.

೧೫೩. ಅದೇ ರೀತಿಯಾಗಿ ಎರಡನೆಯ ವಣಿಕ್ಪುತ್ರನೂ ಸಂಜೆ ದೇವಸ್ಮಿತೆಯ ಮನೆಗೆ ಹೋಗಿ ಅಪಮಾನವನ್ನು ಹೊಂದಿದನು.

೧೫೪. ಅವನೂ ಬೆತ್ತಲೆಯಾಗಿ ಹಿಂದಿರುಗಿ ""ನಾನು ಆಭರಣಗಳನ್ನೆಲ್ಲ ಅಲ್ಲೇ ಇಟ್ಟು ಬಂದರೂ ದರೋಡೆಕೋರರು ನನ್ನನ್ನು ದೋಚಿದರು" ಎಂದು ಹೇಳಿದನು.

೧೫೫. ಬೆಳಗಾದ ಮೇಲೆ ಅವನೂ ತಲೆನೋವಿನ ನೆವದಿಂದ ತಲೆಗೆ ಪಟ್ಟಿಯನ್ನು ಸುತ್ತಿಕೊಂಡು ಚಿಹ್ನೆಯನ್ನು ಹೊಂದಿದ್ದ ತನ್ನ ಹಣೆಯನ್ನು ಮರೆಮಾಚಿದನು.

೧೫೬. ಈ ರೀತಿಯಾಗಿ ಆ ಎಲ್ಲ ವಣಿಕ್ಪುತ್ರರೂ ಗುಟ್ಟನ್ನು ಮುಚ್ಚಿಟ್ಟು ಕ್ರಮವಾಗಿ ಆಪಮಾನವನ್ನೂ (ಹಣೆಯ ಮೇಲೆ ನಾಯಿಕಾಲಿನ) ಗುರುತನ್ನೂ, ಹಣದ ಹಾನಿಯನ್ನೂ ಅನುಭವಿಸಿ ನಾಚಿಕೆಗೆ ಈಡಾದರು.

---

ಮಮೈವೈಕಸ್ಯ ಹಾಸ್ಯತ್ವಂ ಮಾ ಭೂದಿತಿ ಸ ತತ್ರ ತಾನ್ ।
ಆಗಚ್ಛನ್ ಮುಷಿತೋಽಸ್ಮೀತಿ ಸಖೀನ್ ಅನ್ಯಾನ್ ಅಭಾಷತ ॥ ೧೫೧
ಜಾಗರೇಣಾತಿಪಾನೇನ ಶಿರೋರ್ತಿಂ ವ್ಯಪದಿಶ್ಯ ಚ ।
ಪ್ರಾತಃ ಸ ತಸ್ಥೌ ವಸ್ತ್ರೇಣ ವೇಷ್ಟಯಿತ್ವಾಂಕಿತಂ ಶಿರಃ ॥ ೧೫೨
ತಥೈವ ಚ ಪುನಃ ಸಾಯಂ ದ್ವಿತೀಯೋಽಪಿ ವಣಿಕ್ಸುತಃ ।
ಏತ್ಯ ದೇವಸ್ಮಿತಾಗೇಹಂ ಖಲೀಕಾರಮವಾಪ್ತವಾನ್ ॥ ೧೫೩
ಸೋಽಪ್ಯೇತ್ಯ ನಗ್ನೋ ವಕ್ತಿ ಸ್ಮ ತತ್ರೈವಾಭರಣಾನ್ಯಹಮ್ ।
ಸ್ಥಾಪಯಿತ್ವಾಪಿ ನಿರ್ಯಾತೋ ಮುಷಿತಸ್ತಸ್ಕರೈರಿತಿ ॥ ೧೫೪
ಪ್ರಾತಃ ಸೋಽಪಿ ಶಿರಃಶೂಲವ್ಯಪದೇಶೇನ ವೇಷ್ಟನಮ್ ।
ಕೃತ್ವಾ ಪ್ರಚ್ಛಾದಯಾಮಾಸ ಲಲಾಟತಲಮಂಕಿತಮ್ ॥ ೧೫೫
ಏವಂ ಸಾಪಹ್ನವಾಃ ಸರ್ವೇ ವಣಿಕ್ಪುತ್ರಾಃ ಕ್ರಮೇಣ ತೇ ।
ಪ್ರಾಪುಃ ಸಾಂಕಂ ಖಲೀಕಾರಮರ್ಥನಾಶಂ ಚ ಲಜ್ಜಿತಾಃ ॥ ೧೫೬

೧೫೭. ಈ ಸಂನ್ಯಾಸಿನಿಗೂ ಹೀಗೆ (ಅವಮಾನ) ಆಗಲಿ ಎಂದು ಅವರು ತಮಗಾದ ಅವಮಾನವನ್ನು ಪ್ರಕಟಪಡಿಸದೆ ಅಲ್ಲಿಂದ ಹೊರಟು ಹೋದರು.

೧೫೮. ನನ್ನ ಉದ್ದೇಶ ಈಡೇರಿತು ಎಂದು ಸಂತೊಷಪಟ್ಟ ಸಂನ್ಯಾಸಿನಿ ಇನ್ನೊಂದು ದಿನ ಶಿಷ್ಯೆಯೊಡನೆ ದೇವಸ್ಮಿತೆಯ ಮನೆಗೆ ಹೋದಳು.

೧೫೯. ಅಲ್ಲಿ ದೇವಸ್ಮಿತೆಯು ಅವಳನ್ನು ಆದರಿಸಿ ದತ್ತೂರಿ ಬೆರೆಸಿದ್ದ ಹೆಂಡವನ್ನು ಸಂತೋಷದಿಂದ ತಂದಂತೆ ಮಾಡಿ ಅವರಿಬ್ಬರಿಗೂ ಕುಡಿಸಿದಳು.

೧೬೦. ಮತ್ತಾಗಿದ್ದ ಅವಳಿಗೂ ಶಿಷ್ಯೆಗೂ ಕಿವಿಮೂಗುಗಳನ್ನು ಕತ್ತರಿಸಿ ಕೊಳಕು ಕೆಸರಿನೊಳಕ್ಕೆ ಅವರಿಬ್ಬರನ್ನೂ ಆ ಪತಿವ್ರತೆಯು ತಳ್ಳಿಸಿದಳು.

೧೬೧. ಆ ವಣಿಕ್ಪುತ್ರರು (ತಮ್ಮ ದೇಶಕ್ಕೆ) ಹೋಗಿ ಅವಳ ಗಂಡನನ್ನು ಎಂದಾದರೂ ಕೊಂದುಬಿಟ್ಟಾರು ಎಂದು ಕಳವಳಗೊಂಡಿದ್ದ ಅವಳು ಆ ವೃತ್ತಾಂತವನ್ನು ತನ್ನ ಅತ್ತೆಗೆ ಬಣ್ಣಿಸಿ ಹೇಳಿದಳು.

೧೬೨. ""ಮಗಳೇ, ನೀನು ಮಾಡಿದ್ದೇನೋ ಒಳ್ಳೆಯದೇ, ಆದರೆ ನನ್ನ ಮಗನಿಗೆ ಎಂದಾದರೂ (ಅದರಿಂದ) ಕೆಟ್ಟದ್ದಾಗಬಹುದು" ಎಂದು ಅತ್ತೆಯು ಹೇಳಿದಳು.

೧೬೩. ಆಗ ದೇವಸ್ಮಿತೆಯು ""ಹಿಂದೆ ಶಕ್ತಿಮತಿಯು ತನ್ನ ಬುದ್ಧಿಶಕ್ತಿಯಿಂದ ಗಂಡನನ್ನು ಹೇಗೆ ರಕ್ಷಿಸಿಕೊಂಡಳೋ ಹಾಗೆಯೇ ನಾನೂ ಗಂಡನನ್ನು ಕಾಪಾಡಿಕೊಳ್ಳುವೆನು" ಎಂದು ಹೇಳಿದಳು.

---

ಅಸ್ಯಾ ಅಪಿ ಭವತ್ವೇವಮಿತಿ ತೇ ಚ ಖಲೀಕೃತಿಮ್ ।
ತಸ್ಯಾಃ ಪ್ರವ್ರಜಿಕಾಯಾಸ್ತಾಮಪ್ರಕಾಶ್ಯ ತತೋ ಯಯುಃ ॥ ೧೫೭

ಸಾಥ ಪ್ರವ್ರಾಜಿಕಾನ್ಯೇದ್ಯುರ್ಜಗಾಮ ಸಹ ಶಿಷ್ಯಯಾ ।
ಕೃತಪ್ರಯೋಜನಾಸ್ಮೀತಿ ಹೃಷ್ಟಾ ದೇವಸ್ಮಿತಾಗೃಹಮ್ ॥ ೧೫೮

ತತ್ರ ದೇವಸ್ಮಿತಾ ಸಾ ತಾಂ ಕೃತ್ವಾದರಮಪಾಯಯತ್ ।
ಮಧು ಧತ್ತೂರಸಂಯುಕ್ತಂ ಪರಿತೋಷಾದಿವಾಹೃತಮ್ ॥ ೧೫೯

ತೇನ ಮತ್ತಾಂ ಸಶಿಷ್ಯಾಂ ಚ ಛಿನ್ನಶ್ರವಣನಾಸಿಕಾಮ್ ।
ತಾಮಪ್ಯಶುಚಿಪಂಕಾಂತಃ ಕ್ಷೇಪಯಾಮಾಸ ಸಾ ಸತೀ ॥ ೧೬೦

ಗತ್ವಾ ಮೈತೇ ವಣಿಕ್ಪುತ್ರಾಃ ಪತಿಂ ಹನ್ಯುಃ ಕದಾಚನ ।
ಇತ್ಯಾಕುಲಾ ಚ ಸಾ ಶ್ವಶ್ರ್ವಾಸ್ತಂ ವೃತ್ತಾಂತಮವರ್ಣಯತ್ । ೧೬೧

ತತಃ ಶ್ವಶ್ರೂರವಾದೀತ್ತಾಂ ಪುತ್ರಿ ಸಾಧು ಕೃತಂ ತ್ವಯಾ ।
ಕಿಂ ತು ಪುತ್ರಸ್ಯ ಮೇ ತಸ್ಯ ಕದಾಚಿದಹಿತಂ ಭವೇತ್ ॥ ೧೬೨

ತತೋ ದೇವಸ್ಮಿತಾವೋಚದ್ ಯಥಾ ಶಕ್ತಿಮತೀ ಪತಿಮ್ ।
ರರಕ್ಷ ಪ್ರಜ್ಞಯಾ ಪೂರ್ವಮಮುಂ ರಕ್ಷಾಮ್ಯಹಂ ತಥಾ ॥ ೧೬೩

೧೬೪. "ಮಗಳೇ, ಶಕ್ತಿಮತಿಯು ಗಂಡನನ್ನು ಹೇಗೆ ರಕ್ಷಿಸಿದಳು, ಹೇಳು" ಎಂದು ಅತ್ತೆಯು ಕೇಳಿದಾಗ ದೇವಸ್ಮಿತೆಯು ಹೇಳತೊಡಗಿದಳು.

## ಶಕ್ತಿಮತಿಯ ಕಥೆ

೧೬೫. ನಮ್ಮ ದೇಶದಲ್ಲಿ ಒಂದು ನಗರದೊಳಗೆ ಪ್ರಭಾವಶಾಲಿಯಾದ ಮಣಿಭದ್ರನೆಂಬ ಮಹಾಯಕ್ಷನನ್ನು ಹಿಂದಿನವರು ಪ್ರತಿಷ್ಠಾಪಿಸಿದ್ದಾರೆ.

೧೬೬. ಅಲ್ಲಿನ ಪ್ರಜೆಗಳು ತಮ್ಮ ತಮ್ಮ ಇಷ್ಟಾರ್ಥಗಳ ಸಿದ್ಧಿಗೋಸ್ಕರ ಆಯಾ ಕಾಣಿಕೆಗಳ ಮೂಲಕ ಹರಕೆಗಳನ್ನು ಅವನಿಗೆ ತಂದು ಒಪ್ಪಿಸುತ್ತಾರೆ.

೧೬೭–೧೬೮. ರಾತ್ರಿಯ ವೇಳೆಯಲ್ಲಿ ಅಲ್ಲಿ ಯಾವ ಗಂಡಸು ಪರಸ್ತ್ರೀಯೊಡನೆ ಸಿಕ್ಕಿ ಬೀಳುವನೋ ಅವನನ್ನು ಯಕ್ಷನ ಗರ್ಭಗುಡಿಯಲ್ಲಿ ಆ ಹೆಂಗಸಿನೊಡನೆ ಇಟ್ಟು ಬೆಳಗಾದ ಮೇಲೆ ಸ್ತ್ರೀಸಹಿತವಾಗಿ ರಾಜಸಭೆಯಲ್ಲಿ (ಹಾಜರು ಪಡಿಸಿ) ಅವನ ಚರಿತ್ರೆಯನ್ನು ಪ್ರಕಟವಾಗಿ ಹೇಳಿ ಆಮೇಲೆ ದಂಡಿಸುತ್ತಾರೆ ಎಂಬುದು ವಸ್ತು ಸ್ಥಿತಿ.

೧೬೯. ಒಮ್ಮೆ ಸಮುದ್ರದತ್ತನೆಂಬ ವ್ಯಾಪಾರಿಯು ರಾತ್ರಿಯಲ್ಲಿ ಬೇರೆಯವನ ಹೆಂಡತಿಯೊಡನೆ ಕೂಡಿದ್ದು ನಗರರಕ್ಷಕನ ಕೈಗೆ ಸಿಕ್ಕಿಬಿದ್ದನು.

---

ಕಥಂ ಶಕ್ತಿಮತೀ ಪುತ್ರಿ ರರಕ್ಷ ಪತಿಮುಚ್ಯತಾಮ್ ।
ಇತಿ ಪೃಷ್ಟಾ ತಯಾ ಶ್ವಶ್ವ್ರಾ ಸಾಥ ದೇವಸ್ಮಿತಾಬ್ರವೀತ್ ॥ ೧೬೪
ಅಸ್ಮದ್ದೇಶೇ ಪುರಸ್ಯಾಂತರ್ಮಣಿಭದ್ರ ಇತಿ ಶ್ರುತಃ ।
ಪೂರ್ವೈಃ ಕೃತಪ್ರತಿಷ್ಠೋಽಸ್ತಿ ಮಹಾಯಕ್ಷಃ ಪ್ರಭಾವಿತಃ ॥ ೧೬೫
ತಸ್ಯೋಪಯಾಚಿತಾನ್ಯೇವ ತತ್ರತ್ಯಾಃ ಕುರ್ವತೇ ಜನಾಃ ।
ತತ್ತದ್ವಾಂಛಿತಸಂಸಿದ್ಧಿಹೇತೋಸ್ತೈಸ್ತೈರುಪಾಯನೈಃ ॥ ೧೬೬
ಯೋ ನರಃ ಪ್ರಾಪ್ಯತೇ ತತ್ರ ರಾತ್ರೌ ಸಹ ಪರಸ್ತ್ರಿಯಾ ।
ಸ್ಥಾಪ್ಯತೇ ಸೋಽಸ್ಯ ಯಕ್ಷಸ್ಯ ಗರ್ಭಾಗಾರೇ ತಯಾ ಸಮಮ್ ॥ ೧೬೭
ಪ್ರಾತಸ್ತಸ್ಯೈವ ಸಸ್ತ್ರೀಕಃ ಸ ನೀತ್ವಾ ರಾಜಸಂಸದಿ ।
ಪ್ರಕಟೀಕೃತ್ಯ ತದ್‌ವೃತ್ತಂ ನಿಗೃಹ್ಯತ ಇತಿ ಸ್ಥಿತಿಃ ॥ ೧೬೮
ಏಕದಾ ತತ್ರ ನಕ್ತಂ ಚ ಸಂಗತಃ ಪರಜಾಯಯಾ ।
ವಣಿಕ್ ಸಮುದ್ರದತ್ತಾಖ್ಯಃ ಪ್ರಾಪ್ತೋಽಭೂತ್ ಪುರರಕ್ಷಿಣಾ ॥ ೧೬೯

೧೭೦. ಆ ವ್ಯಾಪಾರಿಯನ್ನು ಪರಸ್ತ್ರೀಯೊಡನೆ ಯಕ್ಷದೇವನ ಗರ್ಭಗುಡಿಯೊಳಗೆ ತಳ್ಳಿ ಬಾಗಿಲಿಗೆ ಭದ್ರವಾಗಿ ಅಗುಳಿಯನ್ನು ಹಾಕಿದರು.

೧೭೧. ಆ ಕ್ಷಣದಲ್ಲೇ ಪತಿವ್ರತೆಯೂ ಮಹಾಪ್ರಾಜ್ಞೆಯೂ ಆಗಿದ್ದ ವ್ಯಾಪಾರಿಯ ಪತ್ನಿ ಶಕ್ತಿಮತೀ ಎಂಬುವಳು ಈ ವೃತ್ತಾಂತವನ್ನು ತಿಳಿದುಕೊಂಡಳು.

೧೭೨. ಆ ಧೀರೆ ಬೇರೆ ವೇಷವನ್ನು ಧರಿಸಿ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಸಖಿಯರೊಡನೆ ಆ ಯಕ್ಷನ ಆಲಯಕ್ಕೆ ಆತ್ಮವಿಶ್ವಾಸದಿಂದ ಹೊರಟಳು.

೧೭೩. ಅಲ್ಲಿಗೆ ಹೋದ ಶಕ್ತಿಮತಿಗೆ ಅರ್ಚಕನು ದಕ್ಷಿಣೆ ಸಿಗುವುದೆಂಬ ಆಸೆಯಿಂದ ನಗರರಕ್ಷಕನಿಗೆ ಹೇಳಿ ಗರ್ಭಗುಡಿಯ ಬಾಗಿಲನ್ನು ತೆರೆದು ಪ್ರವೇಶವನ್ನು ಒದಗಿಸಿದನು.

೧೭೪. ಅವಳು ಪ್ರವೇಶಿಸಿ ಅಲ್ಲಿ ತನ್ನ ಗಂಡನು ಪರಸ್ತ್ರೀಯೊಡನೆ ಇದ್ದುದನ್ನು ನೋಡಿದಳು. ಅವನಿಗೆ ನಾಚಿಕೆಯಾಯಿತು. ಆ ಪರಸ್ತ್ರೀಗೆ ತನ್ನ ವೇಷವನ್ನು ತೊಡಿಸಿ 'ತಪ್ಪಿಸಿಕೊಂಡು ಹೋಗು' ಎಂದು ಅವಳಿಗೆ ಶಕ್ತಿಮತಿಯು ಹೇಳಿದಳು.

೧೭೫. ಆ ಹೆಣ್ಣು ಇವಳ ವೇಷವನ್ನು ತೊಟ್ಟು ರಾತ್ರಿಯಲ್ಲೇ ಹೊರಗೆ ಬಂದು ಅಲ್ಲಿಂದ ನಿರ್ಗಮಿಸಿದಳು. ಶಕ್ತಿಮತಿಯಾದರೋ ತನ್ನ ಗಂಡನೊಡನೆ ಒಳಗೆ ಉಳಿದುಕೊಂಡಳು.

---

ನೀತ್ವಾ ಚ ತೇನ ಕ್ಷಿಪ್ತೋಽಭೂತ್ ಸಪರಸ್ತ್ರೀಕ ಏವ ಸಃ ।
ಯಕ್ಷದೇವಗೃಹೇ ತಸ್ಮಿನ್ ದೃಢದತ್ತಾರ್ಗಲೇ ವಣಿಕ್ ॥ ೧೭೦
ತತ್ಕ್ಷಣಂ ವಣಿಜಶ್ಚಾಸ್ಯ ಮಹಾಪ್ರಾಜ್ಞಾ ಪತಿವ್ರತಾ ।
ಭಾರ್ಯಾ ಶಕ್ತಿಮತೀ ನಾಮ ತಂ ವೃತ್ತಾಂತಮಬುಧ್ಯತ ॥ ೧೭೧
ಸಾಥ ಧೀರಾನ್ಯರೂಪೇಣ ತದ್ಯಕ್ಷಾಯತನಂ ನಿಶಿ ।
ಪೂಜಾಮಾದಾಯ ಸಾಶ್ವಾಸಂ ಸಖೀಜನಯುತಾ ಯಯೌ ॥ ೧೭೨
ತತ್ರೈತ್ಯ ದಕ್ಷಿಣಾಲೋಭಾದೇತಸ್ಯಾ ಏವ ಪೂಜಕಃ ।
ದದೌ ಪ್ರವೇಶಮುದ್ಘಾಟ್ಯ ದ್ವಾರಮುಕ್ತ್ವಾ ನರಾಧಿಪಮ್ ॥ ೧೭೩
ಸಾ ಚ ಪ್ರವಿಶ್ಯ ಸಸ್ತ್ರೀಕೇ ದೃಷ್ಟೇ ಪತ್ಯೌ ವಿಲಕ್ಷಿತೇ ।
ಸ್ವಂ ವೇಷಂ ಕಾರಯಿತ್ವಾ ತಾಂ ನಿರ್ಯಾಹೀತ್ಯವದತ್ ಸ್ತ್ರಿಯಮ್ ॥ ೧೭೪
ಸಾ ಚ ನಿರ್ಗತ್ಯ ರಾತ್ರೌ ಸ್ತ್ರೀ ತದ್ವೇಷೈವ ತತೋ ಯಯೌ ।
ತಸ್ಥೌ ಶಕ್ತಿಮತೀ ತತ್ರ ತೇನ ಭರ್ತ್ರಾ ಸಮಂ ತು ಸಾ ॥ ೧೭೫

೧೭೬ ಬೆಳಗ್ಗೆ ರಾಜನ ಅಧಿಕಾರಿಗಳು ಬಂದು ವಿಚಾರಣೆ ಮಾಡಿದಾಗ ಆ ವ್ಯಾಪಾರಿಯು ತನ್ನ ಪತ್ನಿಯೊಡನೆಯೇ ಇದ್ದುದನ್ನು ಎಲ್ಲರೂ ಕಂಡರು.

೧೭೭ ಅದನ್ನು ತಿಳಿದು ರಾಜನು ನಗರರಕ್ಷಕನನ್ನೇ ದಂಡಿಸಿ ಆ ವ್ಯಾಪಾರಿಗೆ ಮೃತ್ಯುವಿನ ಬಾಯಿಂದ ಬಿಡುಗಡೆ ಮಾಡಿದಂತೆ ಆ ಯಕ್ಷಾಲಯದಿಂದ ಬಿಡುಗಡೆ ಮಾಡಿಸಿದನು.

೧೭೮. ಹೀಗೆ ಹಿಂದೆ ಶಕ್ತಿಮತಿಯು ತನ್ನ ಬುದ್ಧಿಶಕ್ತಿಯಿಂದ ಪತಿಯನ್ನು ಕಾಪಾಡಿಕೊಂಡಳು. ಹಾಗೆಯೇ ನಾನೂ ಹೋಗಿ ಜಾಣತನದಿಂದ ಗಂಡನನ್ನು ಕಾಪಾಡುತ್ತೇನೆ."

೧೭೯. ಹೀಗೆ ಏಕಾಂತದಲ್ಲಿ ಅತ್ತೆಗೆ ಹೇಳಿ ತಪಸ್ವಿನಿಯಾದ ದೇವಸ್ಮಿತೆಯು ತನ್ನ ದಾಸಿಯರೊಡನೆ ವ್ಯಾಪಾರಿಯ ವೇಷವನ್ನು ತೊಟ್ಟುಕೊಂಡಳು.

೧೮೦. ಅವಳು ಹಡಗನ್ನೇರಿ ವ್ಯಾಪಾರ ವಹಿವಾಟಿನ ಹೆಸರಿನಲ್ಲಿ ಅಲ್ಲಿಂದ ತನ್ನ ಗಂಡನು ಇದ್ದ ಕಟಾಹದ್ವೀಪಕ್ಕೆ ತೆರಳಿದಳು.

೧೮೧. ಅಲ್ಲಿಗೆ ಹೋದ ಮೇಲೆ ವ್ಯಾಪಾರಿಗಳ ಮಧ್ಯದಲ್ಲಿದ್ದ, ಮೂರ್ತಿವೆತ್ತ ಆತ್ಮವಿಶ್ವಾಸದಂತಿದ್ದ ತನ್ನ ಗಂಡ ಗುಹಸೇನನನ್ನು ಹೊರಗಿನಿಂದ ಆಕೆ ಕಂಡಳು.

---

ಪ್ರಾತಶ್ಚ ರಾಜಾಧಿಕೃತೈರೇತ್ಯ ಯಾವನ್ನಿರೂಪ್ಯತೇ ।
ತಾವತ್ ಸ್ವಪತ್ನ್ಯೈವ ಯುತಃ ಸರ್ವೈಃ ಸ ದದೃಶೇ ವಣಿಕ್ ॥ ೧೭೬
ತದ್‌ಬುದ್ಧ್ವಾ ಯಕ್ಷಭವನಾನ್‌ಮೃತ್ಯೋರಿವ ಮುಖಾನ್ನೃಪಃ ।
ದಂಡಯಿತ್ವಾ ಪುರಾಧ್ಯಕ್ಷಂ ವಣಿಜಂ ತಮಮೋಚಯತ್ ॥ ೧೭೭
ಏವಂ ಶಕ್ತಿಮತೀ ಪೂರ್ವಂ ರರಕ್ಷ ಪ್ರಜ್ಞಯಾ ಪತಿಮ್ ।
ಅಹಂ ತಥೈವ ಭರ್ತಾರಂ ಗತ್ವಾ ರಕ್ಷಾಮಿ ಯುಕ್ತಿತಃ ॥ ೧೭೮
ಇತಿ ದೇವಸ್ಮಿತಾ ಶ್ವಶ್ರೂಂ ರಹ ಉಕ್ತ್ವಾ ತಪಸ್ವಿನೀ ।
ಸ್ವಚೇಟಿಕಾಭಿಃ ಸಹಿತಾ ವಣಿಗ್ವೇಷಂ ಚಕಾರ ಸಾ ॥ ೧೭೯
ಆರುಹ್ಯ ಚ ಪ್ರವಹಣಂ ವಣಿಜ್ಯಾವ್ಯಾಜತಸ್ತತಃ ।
ಕಟಾಹದ್ವೀಪಮಗಮದ್ ಯತ್ರ ಸೋಽಸ್ಯಾಃ ಪತಿಃ ಸ್ಥಿತಃ ॥ ೧೮೦
ಗತ್ವಾ ತಂ ಚ ಪತಿಂ ತತ್ರ ವಣಿಙ್ಮಧ್ಯೇ ದದರ್ಶ ಸಾ ।
ಗುಹಸೇನಂ ಸಮಾಶ್ವಾಸಮಿವ ಮೂರ್ತಿಧರಂ ಬಹಿಃ ॥ ೧೮೧

೧೮೨. ಗಂಡಸಿನ ವೇಷದಲ್ಲಿದ್ದ ಅವಳನ್ನು ಅವನೂ ದೂರದಿಂದ ಕುಡಿದು ಬಿಡುವವನಂತೆ ನೋಡಿ, 'ನನ್ನ ಒಲವಿನ ಪತ್ನಿಯಂತೆ ಕಾಣುವ ಈ ವ್ಯಾಪಾರಿಯು ಯಾರಿರಬಹುದು?' ಎಂದು ಯೋಚಿಸಿದನು.

೧೮೩. ದೇವಸ್ಮಿತೆಯು (ಕಟಾಹ ದ್ವೀಪದ) ರಾಜನ ಬಳಿಗೆ ಹೋಗಿ ""ನಾನೊಂದು ವಿಜ್ಞಾಪನೆಯನ್ನು ಮಾಡಬೇಕಾಗಿದೆ, ಅದಕ್ಕಾಗಿ ಎಲ್ಲ ಪ್ರಜೆಗಳನ್ನೂ ಒಟ್ಟಿಗೆ ಸೇರಿಸೋಣವಾಗಲಿ" ಎಂದು ಬಿನ್ನವಿಸಿದಳು.

೧೮೪. ಆಗ ರಾಜನು ಕುತೂಹಲದಿಂದ ಎಲ್ಲ ಪೌರರನ್ನೂ ಒಟ್ಟುಗೂಡಿಸಿ 'ನಿನ್ನ ವಿಜ್ಞಾಪನೆ ಏನು' ಎಂದು ವ್ಯಾಪಾರಿಯ ವೇಷದಲ್ಲಿದ್ದ ದೇವಸ್ಮಿತೆಯನ್ನು ಕೇಳಿದನು.

೧೮೫. ಆಗ ದೇವಸ್ಮಿತೆಯು ""ನನ್ನ ನಾಲ್ವರು ದಾಸರು ಓಡಿಹೋಗಿ ಇಲ್ಲಿಗೆ ಬಂದು ಈ ಜನರ ಮಧ್ಯದಲ್ಲಿದ್ದಾರೆ. ಮಹಾರಾಜರು ಅವರನ್ನು ನನ್ನ ವಶಕ್ಕೆ ಕೊಡಬೇಕು" ಎಂದು ಹೇಳಿದಳು.

೧೮೬. ಆಗ ರಾಜನು ""ಪೌರರೆಲ್ಲ ಇಲ್ಲಿದ್ದಾರೆ. ನಿನ್ನ ದಾಸರನ್ನು ಗುರುತಿಸಿ ಅವರನ್ನೆಲ್ಲ ವಶಕ್ಕೆ ತೆಗೆದುಕೋ" ಎಂದು ಹೇಳಿದನು.

---

ಸೋಽಪಿ ತಾಂ ಪುರುಷಾಕಾರಾಂ ದೂರಾದ್ ದೃಷ್ಟ್ವಾ ಪಿಬನ್ನಿವ।
ಪ್ರಿಯಾಯಾಃ ಸದೃಶಃ ಕೋಽಯಂ ವಣಿಕ್ ಸ್ಯಾದಿತ್ಯಚಿಂತಯತ್ ॥ ೧೮೨
ಸಾ ಚ ದೇವಸ್ಮಿತಾ ತತ್ರ ಭೂಪಂ ಗತ್ವಾ ವ್ಯಜಿಜ್ಞಪತ್ ।
ವಿಜ್ಞಪ್ತಿರ್ಮೇಽಸ್ತಿ ತತ್ಸರ್ವಾಃ ಸಂಘಟ್ಯಂತಾಂ ಪ್ರಜಾ ಇತಿ ॥ ೧೮೩
ತತಃ ಸರ್ವಾನ್ ಸಮಾನೀಯ ರಾಜಾ ಪೌರಾನ್ ಸಕೌತುಕಃ ।
ಕಾ ತೇ ವಿಜ್ಞಪ್ತಿರಸ್ತೀತಿ ವಣಿಗ್ವೇಷಾಮುವಾಚ ತಾಮ್ ॥ ೧೮೪
ತತೋ ದೇವಸ್ಮಿತಾವಾದೀದಿಹ ಮಧ್ಯೇ ಮಮ ಸ್ಥಿತಾಃ ।
ಪಲಾಯ್ಯ ದಾಸಾಶ್ಚತ್ವಾರಸ್ತಾನ್ ಮೇ ದೇವಃ ಪ್ರಯಚ್ಛತು ॥ ೧೮೫
ಅಥ ತಾಮವದದ್ರಾಜಾ ಸರ್ವೇ ಪೌರಾ ಇಮೇ ಸ್ಥಿತಾಃ ।
ತತ್ ಸರ್ವಾನ್ ಪ್ರತ್ಯಭಿಜ್ಞಾಯ ನಿಜಾನ್ ದಾಸಾನ್ ಗೃಹಾಣ ತಾನ್ ॥ ೧೮೬

೧೮೭. ಆಗ ಅವಳು ಹಿಂದೆ ತನ್ನ ಮನೆಯಲ್ಲಿ ಅಪಮಾನಕ್ಕೆ ಒಳಗಾಗಿದ್ದು ತಲೆಯಲ್ಲಿ ಮುಂಡಾಸನ್ನು ಸುತ್ತಿಕೊಂಡಿದ್ದ ಆ ನಾಲ್ವರು ವಣಿಕ್ಪುತ್ರರನ್ನು ಹಿಡಿದು ತರಿಸಿದಳು.

೧೮೮. ಅಲ್ಲಿದ್ದ ವ್ಯಾಪಾರಿಗಳು ಸಿಟ್ಟಾಗಿ 'ಇವರೆಲ್ಲರೂ ಸಮುದ್ರವ್ಯಾಪಾರಿಗಳ ಮಕ್ಕಳು. ಇವರು ನಿನ್ನ ದಾಸರು ಹೇಗಾಗುತ್ತಾರೆ ?' ಎಂದು ಅವಳನ್ನು ಕೇಳಿದರು.

೧೮೯. ಆಗ ಅವಳು ಅವರಿಗೆ "ನಿಮಗೆ ನಂಬಿಕೆಯಿಲ್ಲದಿದ್ದರೆ ಇವರ ಹಣೆಯನ್ನು ನೋಡಿರಿ. ಅಲ್ಲಿ ಇವರೆಲ್ಲರಿಗೂ ನಾನು ನಾಯಿಕಾಲಿನ ಮುದ್ರೆಯನ್ನೊತ್ತಿಸಿದ್ದೇನೆ" ಎಂದು ಹೇಳಿದಳು.

೧೯೦. ""ಆಗಲಿ" ಎಂದು ಹೇಳಿ ಆ ನಾಲ್ವರ ಮುಂಡಾಸುಗಳನ್ನು ಬಿಚ್ಚಿ ನೋಡಿದಾಗ ಅವರ ಹಣೆಯ ಮೇಲಿದ್ದ ನಾಯಿಕಾಲಿನ ಗುರುತುಗಳು ಎಲ್ಲರಿಗೂ ಕಂಡವು.

೧೯೧. ವ್ಯಾಪಾರಿಗಳ ಗುಂಪಿಗೆ ನಾಚಿಕೆಯಾಯಿತು. ವಿಸ್ಮಿತನಾದ ದೊರೆ ತಾನೇ 'ಇದೆಲ್ಲ ಏನು?' ಎಂದು ದೇವಸ್ಮಿತೆಯನ್ನು ಕೇಳಿದನು.

೧೯೨. ಅವಳು ನಡೆದುದೆಲ್ಲವನ್ನೂ ಹೇಳಿದಳು. ಜನರೆಲ್ಲ ನಕ್ಕರು. ರಾಜನು 'ನ್ಯಾಯಾನುಗುಣವಾಗಿ ಅವರು ನಿನ್ನ ದಾಸರು' ಎಂದು ಅವಳಿಗೆ ಹೇಳಿದನು.

---

ತತಸ್ತಯಾ ಜಗೃಹಿರೇ ಸ್ವಗೃಹೇ ಪ್ರಾಕ್ ಖಲೀಕೃತಾಃ ।
ವಣಿಕ್‌ಸುತಾಸ್ತೇ ಚತ್ವಾರಃ ಶಿರಃಸ್ವಾಬದ್ಧಶಾಟಕಾಃ ॥ ೧೮೭
ಸಾರ್ಥವಾಹಸುತಾ ಏತೇ ಕಥಂ ದಾಸಾ ಭವಂತಿ ತೇ ।
ಇತಿ ಕ್ರುದ್ಧಾಶ್ಚ ತಾಮೂಚುಸ್ತತ್ರಸ್ಥಾ ವಣಿಜಸ್ತದಾ ॥ ೧೮೮
ತತಃ ಪ್ರತ್ಯಬ್ರವೀತ್ ಸಾ ತಾನ್ ಯದಿ ನ ಪ್ರತ್ಯಯೋऽಸ್ತಿ ವಃ ।
ಲಲಾಟಂ ಪ್ರೇಕ್ಷ್ಯತಾಮೇಷಾಂ ಶುನಃ ಪಾದಾಂಕಿತಂ ಮಯಾ ॥ ೧೮೯
ತಥೇತಿ ತೇಷಾಮುನ್ಮೋಚ್ಯ ಚತುರ್ಣಾಂ ಶೀರ್ಷಪಟ್ಟಕಾನ್ ।
ಸರ್ವೇऽಪಿ ದದೃಶುಸ್ತತ್ರ ಶುನಃ ಪಾದಂ ಲಲಾಟಗಮ್ ॥ ೧೯೦
ಲಜ್ಜಿತೇऽಥ ವಣಿಗ್ಗ್ರಾಮೇ ರಾಜಾ ಸಂಜಾತವಿಸ್ಮಯಃ ।
ಕಿಮೇತದಿತಿ ಪಪ್ರಚ್ಛ ಸ ತಾಂ ದೇವಸ್ಮಿತಾಂ ಸ್ವಯಮ್ ॥ ೧೯೧
ಸಾ ಶಶಂಸ ಯಥಾವೃತ್ತಂ ಸರ್ವೇಪಿ ಜಹಸುರ್ಜನಾಃ ।
ನ್ಯಾಯ್ಯಾಸ್ತೇ ಭವತೀದಾಸಾ ಇತಿ ತಾಂ ಚಾವದನ್ನೃಪಃ ॥ ೧೯೨

೧೯೩. ಆಗ ಬೇರೆ ವ್ಯಾಪಾರಿಗಳು ಆ ನಾಲ್ವರ ದಾಸ್ಯವನ್ನು ಬಿಡಿಸಲು ಪತಿವ್ರತೆಯಾದ ಅವಳಿಗೆ ಭಾರಿ ಪ್ರಮಾಣದ ಹಣವನ್ನು ಕೊಟ್ಟರು. ರಾಜನಿಗೂ ದಂಡವನ್ನು ತೆತ್ತರು.

೧೯೪. ಆ ಹಣವನ್ನು ತೆಗೆದುಕೊಂಡು, ತನ್ನ ಪತಿಯನ್ನು ಕರೆದುಕೊಂಡು ಎಲ್ಲ ಸಜ್ಜನರ ಹೊಗಳಿಕೆಗೆ ಪಾತ್ರಳಾಗಿ ದೇವಸ್ಮಿತೆಯು ತನ್ನ ನಗರವಾದ ತಾಮ್ರಲಿಪ್ತಿಗೆ ಹಿಂದಿರುಗಿದಳು. ಮತ್ತೆ ಎಂದೂ ಅವಳಿಗೆ ಗಂಡನ ವಿಯೋಗ ಉಂಟಾಗಲಿಲ್ಲ.

೧೯೫. ದೇವಿ, ಹೀಗೆ ದೊಡ್ಡ ವಂಶದಲ್ಲಿ ಹುಟ್ಟಿದ ಸ್ತ್ರೀಯರು ಬೇರೆ ಎಲ್ಲೂ ಮನಸ್ಸನ್ನಿಡದೆ ಶುದ್ಧವೂ ಧೈರ್ಯಪೂರ್ಣವೂ ಆದ ನಡತೆಯಿಂದ ಯಾವಾಗಲೂ ಗಂಡನನ್ನು ಪೂಜಿಸುತ್ತಾರೆ. ಪತಿಯೇ ಸತಿಯರಿಗೆ ಎಲ್ಲರಿಗಿಂತ ಹೆಚ್ಚಾದ ದೇವರಲ್ಲವೆ ?

---

ತತೋಽನ್ಯೇ ವಣಿಜಸ್ತೇಷಾಂ ಚತುರ್ಣಾಂ ದಾಸ್ಯಮುಕ್ತಯೇ ।
ದದುಸ್ತಸ್ಯೈ ಧನಂ ಭೂರಿ ಸಾಧ್ವ್ಯೈ ದಂಡಂ ಚ ಭೂಪತೇಃ ॥ ೧೯೩

ಆದಾಯ ತದ್ಧನಮವಾಪ್ಯ ಪತಿಂ ಚ ತಂ ಸ್ವಂ
ದೇವಸ್ಮಿತಾ ಸಕಲಸಜ್ಜನ ಪೂಜಿತಾ ಸಾ ।
ಪ್ರತ್ಯಾಯಯೌ ನಿಜಪುರೀಮಥ ತಾಮ್ರಲಿಪ್ತಿಂ
ನಾಸ್ಯಾ ಬಭೂವ ಚ ಪುನಃ ಪ್ರಿಯವಿಪ್ರಯೋಗಃ ॥ ೧೯೪

ಇತಿ ಸ್ತ್ರಿಯೋ ದೇವ ಮಹಾಕುಲೋದ್ಗತಾ
ವಿಶುದ್ಧಧೀರೈಶ್ಚರಿತೈರುಪಾಸತೇ ।
ಸದೈವ ಭರ್ತಾರಮನನ್ಯಮಾನಸಾಃ ಪತಿಃ ಸತೀನಾಂ
ಪರಮಂ ಹಿ ದೈವತಮ್ ॥ ೧೯೫

೧೯೬ ವಸಂತಕನ ಬಾಯಿಂದ ದಾರಿಯಲ್ಲಿ ಈ ವಿಶದವಾದ ಕಥೆಯನ್ನು ಕೇಳಿ ವಾಸವದತ್ತೆಯು ತಾನು ಆಗ ತಾನೆ ಬಿಟ್ಟು ಬಂದಿದ್ದ ತಂದೆಯ ಮನೆಯ ಮೇಲೆ ಹಿಂದೆ ಗಾಢವಾದ ಪ್ರೀತಿಯನ್ನಿಟ್ಟುಕೊಂಡಿದ್ದ ಮತ್ತು ನಾಚಿಕೆಗೊಂಡಿದ್ದ ತನ್ನ ಮನಸ್ಸನ್ನು ಪತಿ ವತ್ಸರಾಜನ್ನಲ್ಲಿ ಭಕ್ತಿತತ್ಪರವನ್ನಾಗಿ ಮಾಡಿದಳು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಕಥಾಮುಖಲಂಬಕದಲ್ಲಿ

ಐದನೆಯ ತರಂಗ ಮುಗಿಯಿತು.

---

ಇತ್ಯಾಕರ್ಣ್ಯ ವಸಂತಕಸ್ಯ ವದನಾದೇತಾಮುದಾರಾಂ ಕಥಾಂ
ಮಾರ್ಗೇ ವಾಸವದತ್ತಯಾ ನವಪರಿತ್ಯಕ್ತೇ ಪಿತುರ್ವೇಶ್ಮನಿ ।
ತಲ್ಲಜ್ಜಾಸದನಂ ವಿಧಾಯ ವಿದಧೇ ವತ್ಸೇಶ್ವರೇ ಭರ್ತರಿ
ಪ್ರಾಕ್ ಪ್ರೌಢಪ್ರಣಯಾವಬದ್ಧಮಪಿ ತದ್ ಭಕ್ತ್ಯೇಕತಾನಂ ಮನಃ ॥ ೧೯೬

ಇತಿ ಮಹಾಕವಿ ಶ್ರೀಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ ಕಥಾಮುಖಲಂಬಕೇ

ಪಂಚಮಸ್ತರಂಗಃ ।

# ಆರನೆಯ ತರಂಗ

೧ ವಿಂಧ್ಯಪರ್ವತದ ಬಳಿ ವತ್ಸರಾಜನು ಬೀಡುಬಿಟ್ಟಿದ್ದಾಗ ಚಂಡಮಹಾಸೇನನ ದೂತನು ಅವನ ಬಳಿಗೆ ಬಂದನು.

೨. ಅವನು ಬಂದು ನಮಸ್ಕರಿಸಿ ವತ್ಸರಾಜನಿಗೆ ಹೀಗೆ ಹೇಳಿದನು. ""ರಾಜನ್ ! ಚಂಡಮಹಾಸೇನನು ನಿನಗೆ ಈ ಸಂದೇಶವನ್ನು ಕಳುಹಿಸಿದ್ದಾನೆ.

೩ 'ವಾಸವದತ್ತೆಯನ್ನು ನೀನೇ ಒಯ್ದಿರುವುದು ಉಚಿತವಾಗಿದೆ. ಅದಕ್ಕಾಗಿಯೇ ನಿನ್ನನ್ನಿಲ್ಲಿಗೆ ಕರೆಸಿದ್ದುದು.

೪. ನೀನು ಬಂಧನದಲ್ಲಿದ್ದಾಗಲೇ ವಾಸವದತ್ತೆಯನ್ನು ನಿನಗೆ ಕೊಟ್ಟರೆ ನಿನಗೆ ನಮ್ಮಲ್ಲಿ ಪ್ರೀತಿ ಉಂಟಾಗಲಾರದು ಎಂದು ಸಂಶಯಪಟ್ಟು ನಾನು ನಿನಗೆ ಸ್ವಯಂ ಅವಳನ್ನು ಕೊಡಲಿಲ್ಲವಷ್ಟೇ.

೫ ರಾಜನ್, ಈಗ ನನ್ನ ಮಗಳ ಮದುವೆ ಶಾಸ್ತ್ರವಿರುದ್ಧವಾಗಿ ಆಗಬಾರದು. ಆದ್ದರಿಂದ ಸ್ವಲ್ಪ ನೀನು ಕಾಯಬೇಕು.

---

# ಷಷ್ಠಸ್ತರಂಗಃ

ಅಥ ವಿಂಧ್ಯಾಂತರೇ ತತ್ರ ವತ್ಸರಾಜಸ್ಯ ತಿಷ್ಠತಃ ।
ಪಾರ್ಶ್ವಂ ಚಂಡಮಹಾಸೇನಪ್ರತೀಹಾರಃ ಸಮಾಯಯೌ ॥ ೧
ಸ ಚಾಗತ್ಯ ಪ್ರಣಮ್ಯೈನಂ ರಾಜಾನಮಿದಮಬ್ರವೀತ್ ।
ರಾಜಾ ಚಂಡಮಹಾಸೇನಸ್ತ್ವಾ ಸಂದಿಷ್ಟವಾನಿದಮ್ ॥ ೨
ಯುಕ್ತಂ ವಾಸವದತ್ತಾ ಯತ್ ಸ್ವಯಮೇವ ತ್ವಯಾ ಹೃತಾ ।
ತದರ್ಥಮೇವ ಹಿ ಮಯಾ ತ್ವಮಾನೀತ ಇಹಾಭವಃ ॥ ೩
ಸಂಯತಸ್ಯ ಚ ನೈವೇಹ ದತ್ತೈಷಾ ತೇ ಮಯಾ ಸ್ವಯಮ್ ।
ನೈವಮಸ್ಮಾಸು ತೇ ಪ್ರೀತಿರ್ಭವೇದಿತಿ ವಿಶಂಕಿನಾ ॥ ೪
ತದಿದಾನೀಮವಿಧಿನಾ ಮಮಾಸ್ಯಾ ದುಹಿತುರ್ಯಥಾ ।
ನ ವಿವಾಹೋ ಭವೇದ್ರಾಜನ್ ಪ್ರತೀಕ್ಷೇಥಾಸ್ತಥಾ ಮನಾಕ್ ॥ ೫

೬ ನನ್ನ ಮಗ ಗೋಪಾಲಕನು ಅತ್ಯಲ್ಪ ಕಾಲದಲ್ಲೇ ಅಲ್ಲಿಗೆ ಬರುವನು. ಅವನು ತಂಗಿಯ ಮದುವೆಯನ್ನು ಶಾಸ್ತ್ರೋಕ್ತವಾಗಿ ನೆರವೇರಿಸುವನು.'

೭ ಈ ಸಂದೇಶವನ್ನು ವತ್ಸರಾಜನಿಗೆ ನಿವೇದಿಸಿ ಆ ದೂತನು ವಾಸವದತ್ತೆಗೆ ಎಲ್ಲ ವಿಷಯಗಳನ್ನೂ ತಿಳಿಸಿದನು.

೮ ಇದರಿಂದ ಆನಂದಭರಿತಳಾಗಿದ್ದ ವಾಸವದತ್ತೆಯೊಡನೆ ವತ್ಸರಾಜನು ಸಂತುಷ್ಟನಾಗಿ ಕೌಶಾಂಬಿಗೆ ಹೋಗಲು ಮನಸ್ಸು ಮಾಡಿದನು.

೯. "ಗೋಪಾಲಕನು ಬರುವವರೆಗೆ ನೀವಿಬ್ಬರೂ ಇಲ್ಲೇ ಕಾದಿರಿ. ಅವನ ಜೊತೆಯಲ್ಲೇ ಅನಂತರ ಕೌಶಾಂಬಿಗೆ ಬನ್ನಿರಿ."

೧೦. ಎಂದು ಹೇಳಿ ಮಾವನು ಕಳುಹಿಸಿದ್ದ ದೂತನನ್ನೂ ತನ್ನ ಮಿತ್ರ ಪುಲಿಂದಕನನ್ನೂ ವತ್ಸರಾಜನು ಅಲ್ಲೇ ಇರುವಂತೆ ಮಾಡಿದನು.

೧೧–೧೪. ಅನಂತರ ವಾಸವದತ್ತೆಯೊಡನೆ ವತ್ಸರಾಜನು ಮಾರನೆಯ ದಿನ ಬೆಳಗ್ಗೆ ತನ್ನ ನಗರಕ್ಕೆ ಹೊರಟನು. ಅವನನ್ನು ವಿಂಧ್ಯಪರ್ವತದ ಚಲಿಸುವ ಶಿಖರಗಳಂತಿದ್ದ ಶ್ರೇಷ್ಠ ಆನೆಗಳು ಚಿಲುಮೆಯಂತೆ ಮದೋದಕವನ್ನು ಸುರಿಸುತ್ತಾ ಅನುಸರಿಸಿದವು. ವಂದಿಮಾಗಧರ ಶಬ್ದವನ್ನು ಮೀರಿಸುವಂತಿದ್ದ ಕುದುರೆಗಳ ಹೆಜ್ಜೆಗಳ ಹೊಡೆತದ ಶಬ್ದದಿಂದ ಭೂಮಿಯು ಅವನನ್ನು ಸ್ತುತಿಸುತ್ತಿದೆಯೋ ಎಂಬಂತೆ ತೋರುತ್ತಿತ್ತು. ಆಕಾಶವನ್ನು ಮೀರಿಸಿ ಏಳುತ್ತಿದ್ದ ಸೇನೆಯ ಧೂಳಿನ ರಾಶಿಗಳಿಂದ ರೆಕ್ಕೆಗಳಿರುವ ಬೆಟ್ಟಗಳು ಮತ್ತೆ ಮೇಲೇರುತ್ತಿರುವುವೇನು ಎಂಬ ಸಂಶಯವನ್ನು ಇಂದ್ರನಿಗೆ ಹುಟ್ಟಿಸುತ್ತಿದ್ದವು.

---

ಗೋಪಾಲಕೋ ಹಿ ನಚಿರಾದತ್ರೈವೈಷ್ಯತಿ ಮತ್ಸುತಃ ।
ಸ ಚಾಸ್ಯಾಃ ಸ್ವಸುರುದ್ವಾಹಂ ಯಥಾವಿಧಿ ವಿಧಾಸ್ಯತಿ ॥ ೬
ಇತೀಮಂ ವತ್ಸರಾಜಾಯ ಸಂದೇಶಮವಧಾರ್ಯ ಸಃ ।
ತತ್ತದ್‌ವಾಸವದತ್ತಾಯೈ ಪ್ರತೀಹಾರೋ ನ್ಯವೇದಯತ್ ॥ ೭
ತತಃ ಸಾನಂದಯಾ ಸಾಕಂ ತಯಾ ವಾಸವದತ್ತಯಾ ।
ಹೃಷ್ಟೋ ವತ್ಸೇಶ್ವರಶ್ಚಕ್ರೇ ಕೌಶಂಬೀಗಮನೇ ಮನಃ ॥ ೮
ಗೋಪಾಲಕಸ್ಯಾಗಮನಂ ಪ್ರತೀಕ್ಷೇಥಾಂ ಯುವಾಮಿಹ ।
ತೇನೈವ ಸಹ ಪಶ್ಚಾಚ್ಚ ಕೌಶಾಂಬೀಮಾಗಮಿಷ್ಯಥಃ ॥ ೯
ಇತ್ಯುಕ್ತ್ವಾ ಸ್ಥಾಪಯಾಮಾಸ ಸ ತತ್ರೈವ ಮಹೀಪತಿಃ ।
ಶ್ವಾಶುರಂ ತಂ ಪ್ರತೀಹಾರಂ ಸ್ವಮಿತ್ರಂ ಚ ಪುಲಿಂದಕಮ್ ॥ ೧೦
ತತೋ�ನುಯಾತೋ ನಾಗೇಂದ್ರೈಃ ಸ್ರವದ್ಭಿರ್ಮದನಿರ್ಝರಾನ್ ।
ಅನುರಾಗಾಗತೈರ್ವಿಂಧ್ಯಪ್ರಾಗ್ಭಾರೈರಿವ ಜಂಗಮೈಃ ॥ ೧೧

೧೫. ಎರಡು ಮೂರು ದಿನಗಳಲ್ಲಿ ಅವನು ತನ್ನ ದೇಶಕ್ಕೆ ತಲುಪಿ ಒಂದು ರಾತ್ರಿ ರುಮಣ್ವಂತನ ಮನೆಯಲ್ಲಿದ್ದು ದಣಿವನ್ನಾರಿಸಿಕೊಂಡನು.

೧೬. ಮಾರನೆಯ ದಿನ ತನ್ನ ಪ್ರಿಯೆಯೊಡನೆ ವತ್ಸರಾಜನು ಕೌಶಾಂಬಿಯನ್ನು ಪ್ರವೇಶಿಸಿದನು. ದೀರ್ಘಕಾಲಾನಂತರ ಅವನಿಗೆ ಅಂಥ ಸಂಭ್ರಮವು ದೊರಕಿತ್ತು. ಜನರು ದಾರಿಯ ಕಡೆ ಮುಖಮಾಡಿ ಉತ್ಸುಕರಾಗಿ ನಿಂತಿದ್ದರು.

೧೭. ಆಗ ಸ್ತ್ರೀಯರು ಮಂಗಳಸ್ನಾನವನ್ನೂ ಅಲಂಕಾರವನ್ನೂ ಆರಂಭಿಸಿದುದರಿಂದ, ಬಹುಕಾಲದ ಅನಂತರ ವಸಂತ ಬಂದಾಗ ಶೋಭಿಸುವ ನಾರಿಯಂತೆ ಆ ನಗರಿಯು ಶೋಭಿಸಿತು.

೧೮. ಶೋಕವನ್ನೆಲ್ಲ ತಗ್ಗಿಸಿಕೊಂಡ ಪೌರಜನರು ಮಿಂಚಿನೊಡನೆ ಕೂಡಿದ ಮೋಡವನ್ನು ನವಿಲುಗಳು ನೋಡುವಂತೆ ವಧುವಿನೊಡನೆ ಬಂದ ವತ್ಸರಾಜನನ್ನು ನೋಡಿದರು.

೧೯. ಎತ್ತರವಾದ ಭವನಗಳ ಮೇಲುಭಾಗದಲ್ಲಿದ್ದ ಪೌರನಾರಿಯರು ಆಕಾಶಗಂಗೆಯ ದಡದಲ್ಲಿ ಅರಳಿದ ಚಿನ್ನದ ಬಣ್ಣದ ತಾವರೆಗಳ ಚೆಲುವನ್ನು ಹೊಂದಿದ್ದ ಮುಖಗಳಿಂದ ಆಕಾಶವನ್ನು ಮುಚ್ಚಿದರು.

---

ತುರಂಗಸೈನ್ಯಸಂಘಾತಖುರಾಘಾತಸಶಬ್ದಯಾ ।
ಸ್ತೂಯಮಾನ ಇವೋತ್ಕ್ರಾಂತವಂದಿಸಂದರ್ಭಯಾ ಭುವಾ ॥ ೧೨
ನಭೋವಿಲಂಘಿಭಿಃ ಸೇನಾರಜೋರಾಶಿಭಿರುದ್ಧತೈಃ ।
ಸಪಕ್ಷಭೂಭೃದುಲ್ಲಾಸಶಂಕಾಂ ಕುರ್ವನ್ ಶತಕ್ರತೋಃ ॥ ೧೩
ಸ ಪ್ರತಸ್ಥೇ ತತೋ ದೇವ್ಯಾ ಸಹ ವಾಸವದತ್ತಯಾ ।
ಸ್ವಪುರೀಂ ಪ್ರತಿ ರಾಜೇಂದ್ರಃ ಪ್ರಾತರೇವಾಪರೇಽಹನಿ ॥ ೧೪
ತತಶ್ಚ ದಿವಸೈರ್ದ್ವಿತ್ರೈರ್ವಿಷಯಂ ತಮವಾಪ್ಯ ಸಃ ।
ವಿಶಶ್ರಾಮ ನಿಶಾಮೇಕಾಂ ರುಮಣ್ವನ್ಮಂದಿರೇ ನೃಪಃ ॥ ೧೫
ಅನ್ಯೇದ್ಯುಸ್ತಾಂ ಚ ಕೌಶಾಂಬೀಂ ಚಿರಾತ್ ಪ್ರಾಪ್ತಮಹೋತ್ಸವಃ ।
ಮಾರ್ಗೋತ್ಸುಕೋನ್ಮುಖಜನಾಂ ಪ್ರವಿವೇಶ ಪ್ರಿಯಾಸಖಃ ॥ ೧೬
ತದಾ ಚ ಸ್ತ್ರೀಭಿರಾರಬ್ಧಮಂಗಲಸ್ನಾನಮಂಡನಾ ।
ಚಿರಾದುಪಾಗತೇ ಪತ್ಯೌ ಬಭೌ ನಾರೀವ ಸಾ ಪುರೀ ॥ ೧೭
ದದೃಶುಶ್ಚಾತ್ರ ಪೌರಾಸ್ತಂ ವತ್ಸರಾಜಂ ವಧೂಸಖಮ್ ।
ಪ್ರಶಾಂತಶೋಕಾಃ ಶಿಖಿನಃ ಸವಿದ್ಯುತಮಿವಾಂಬುದಮ್ ॥ ೧೮
ಹರ್ಮ್ಯಾಗ್ರಸ್ಥಾಶ್ಚ ಪಿದಧುಃ ಪೌರನಾರ್ಯೋ ಮುಖೈರ್ನಭಃ ।
ವ್ಯೋಮಗಂಗಾತಟೋತ್ಫುಲ್ಲಹೇಮಾಂಬುರುಹವಿಭ್ರಮೈಃ ॥ ೧೯

೨೦. ಅನಂತರ ಉದಯನನು ಇನ್ನೊಬ್ಬ ರಾಜಲಕ್ಷ್ಮಿಯಂತಿದ್ದ ವಾಸವದತ್ತೆಯೊಡನೆ ತನ್ನ ಅರಮನೆಯನ್ನು ಹೊಕ್ಕನು.

೨೧. ಸೇವೆಯನ್ನು ಮಾಡಲು ಬಂದಿದ್ದ ರಾಜರಿಂದ ತುಂಬಿತುಳುಕುತ್ತಿದ್ದ ಅರಮನೆಯು ಮಾಗಧರು ಮಂಗಳಗೀತೆಗಳನ್ನು ಹಾಡುತ್ತಿರಲು ಮಲಗಿದ್ದು ಎಚ್ಚರಗೊಂಡಿತೋ ಎಂಬಂತೆ ಶೋಭಿಸುತ್ತಿತ್ತು.

೨೨. ಆಮೇಲೆ ವಾಸವದತ್ತೆಯ ಸೋದರ ಗೋಪಾಲಕನು ದೂತನನ್ನೂ ಪುಲಿಂದಕನನ್ನೂ ಜೊತೆಮಾಡಿಕೊಂಡು ಬೇಗನೆ (ಕೌಶಾಂಬಿಗೆ) ಬಂದನು.

೨೩. ರಾಜಾ ಉದಯನನು ಅವನನ್ನು ಎದುರುಗೊಂಡು ಸ್ವಾಗತಿಸಿದನು. ಇನ್ನೊಂದು ಆನಂದವು ಬಂದಂತೆ ಬಂದ ಅವನನ್ನು ಹರ್ಷದಿಂದ ಕಣ್ಣುಗಳನ್ನು ಅರಳಿಸಿ ವಾಸವದತ್ತೆ ಬರಮಾಡಿಕೊಂಡಳು.

೨೪. ಈ ಸೋದರನನ್ನು ನೋಡುವ ಅವಳಿಗೆ ನಾಚಿಯುಂಟಾಗಬಾರದು ಎಂಬಂತೆ ಅವಳ ಕಣ್ಣುಗಳನ್ನು ಕಂಬನಿಯು ಆವರಿಸಿತು.

೨೫. ಆಮೇಲೆ ತಂದೆಯ ಸಂದೇಶದ ವಾಕ್ಯಗಳಿಂದ ಹುರುಪುಗೊಂಡು ಅವಳು ತನ್ನ ಕಡೆಯವರೊಡನೆ ಮತ್ತೆ ಸೇರಿಕೊಂಡ ತನ್ನನ್ನು ಧನ್ಯಳೆಂದು ತಿಳಿದುಕೊಂಡಳು.

೨೬. ಮಾರನೆಯ ದಿನ ವಾಸವದತ್ತಾ—ವತ್ಸರಾಜರ ಮದುವೆಯ ಮಹೋತ್ಸವದಲ್ಲಿ ಗೋಪಾಲಕನು ತೊಡಗಿಕೊಂಡನು.

---

ತತಃ ಸ್ವಂ ರಾಜಭವನಂ ವತ್ಸರಾಜೋ ವಿವೇಶ ಸಃ ।
ನೃಪಶ್ರಿಯೇವಾಪರಯಾ ಸಹ ವಾಸವದತ್ತಯಾ ॥ ೨೦
ಸೇವಾಗತನೃಪಾಕೀರ್ಣಂ ಮಾಗಧೋದ್ಗೀತಮಂಗಲಮ್ ।
ಸುಪ್ತಪ್ರಬುದ್ಧಮಿವ ತದ್‌ರೇಜೇ ರಾಜಗೃಹಂ ತದಾ ॥ ೨೧
ಅಥ ವಾಸವದತ್ತಾಯಾ ಭ್ರಾತಾ ಗೋಪಾಲಕೋ□ಚಿರಾತ್ ।
ಆಯಯೌ ಸಹ ಕೃತ್ವಾ ತೌ ಪ್ರತೀಹಾರಪುಲಿಂದಕೌ ॥ ೨೨
ಕೃತಪ್ರತ್ಯುದ್ಗಮಂ ರಾಜ್ಞಾ ತಮಾನಂದಮಿವಾಪರಮ್ ।
ಪ್ರಾಪ ವಾಸವದತ್ತಾ ಸಾ ಪ್ರಹರ್ಷೋತ್ಫುಲ್ಲಲೋಚನಾ ॥ ೨೩
ಅಮುಂ ಭ್ರಾತರಮೇತಸ್ಯಾಃ ಪಶ್ಯಂತ್ಯಾ ಮಾ ಸ್ಮ ಭೂತ್ ತ್ರಪಾ ।
ಇತ್ಯೇವ ತಸ್ಯಾಸ್ತತ್ಕಾಲಂ ರುರೋಧಾಶ್ರು ವಿಲೋಚನೇ ॥ ೨೪
ಪಿತೃಸಂದೇಶವಾಕ್ಯೈಶ್ಚ ತೇನ ಪ್ರೋತ್ಸಾಹಿತಾಥ ಸಾ ।
ಮೇನೇ ಕೃತಾರ್ಥಮಾತ್ಮಾನಂ ಸ್ವಜನೇನ ಸಮಾಗತಮ್ ॥ ೨೫
ತತೋ ಯಥಾವದ್ ವವೃತೇ ತಸ್ಯಾ ವತ್ಸೇಶ್ವರಸ್ಯ ಚ ।
ವ್ಯಗ್ರೋ ಗೋಪಾಲಕೋ□ನ್ಯೇದ್ಯುಸ್ತತ್ರೋದ್ವಾಹಮಹೋತ್ಸವೇ ॥ ೨೬

೨೭. ಪ್ರೀತಿಯ ಬಳ್ಳಿಯಲ್ಲಿ ಹೊಸದಾಗಿ ಮೂಡಿದ ಹೊಳೆಯುವ ಚಿಗುರಿನಂತಿದ್ದ ವಾಸವದತ್ತೆಯ ಕೈಯನ್ನು ವತ್ಸರಾಜನು ಹಿಡಿದನು.

೨೮–೨೯. ಒಂದೇ ಸಮನೆ ಸಂಮೋಹನಾಸ್ತ್ರ ವಾಯವ್ಯಾಸ್ತ್ರ ವಾರುಣಾಸ್ತ್ರಗಳಿಂದ ಮನ್ಮಥನು ಹೊಡೆದಿದ್ದರಿಂದಲೋ ಎಂಬಂತೆ ನಲ್ಲನ ಕೈಯ ಸ್ಪರ್ಶದ ಗಾಢವಾದ ಆನಂದದಿಂದ ಕಣ್ಣು ಮುಚ್ಚಿದ ಅವಳ ಮೈ ನಡುಗಿತು, ಬೆವರಿನಿಂದ ಅವಳ ಅಂಗಗಳು ತೊಯ್ದುವು, ಒತ್ತಾದ ರೋಮಾಂಚನವು ಅವಳನ್ನು ಆವರಿಸಿತು.

೩೦. ಬೆಂಕಿಯ ಸುತ್ತಲೂ ಪ್ರದಕ್ಷಿಣೆಯನ್ನು ಮಾಡುವಾಗ ಹೊಗೆಯಿಂದ ನಸುಗೆಂಪಾದ ಅವಳ ಕಣ್ಣುಗಳಲ್ಲಿ ಮದಿರೆಯು ಮದದಿಂದ ಉಂಟಾಗುವ ಮಾಧುರ್ಯದ ರೂಪರೇಖೆಗಳನ್ನು ಹಾಕಿದಂತಿತ್ತು.

೩೧. ಗೋಪಾಲಕನು ಕೊಟ್ಟ ರತ್ನಗಳಿಂದಲೂ, ರಾಜರ ಕಾಣಿಕೆಗಳಿಂದಲೂ ಧನಕೋಶವು ತುಂಬಿದುದರಿಂದ ವತ್ಸರಾಜನು ವಾಸ್ತವವಾದ ರಾಜರಾಜತ್ವವನ್ನು (ಕುಬೇರತ್ವವನ್ನು) ಪಡೆದುಕೊಂಡನು.

೩೨. ವಿವಾಹಾನಂತರದಲ್ಲಿ ಆ ವಧೂವರರು ಮೊದಲು ಜಗತ್ತಿನ ಕಣ್ಣಿನಲ್ಲಿ ಪ್ರವೇಶಿಸಿದರು, ಆಮೇಲೆ ತಮ್ಮ ವಾಸದ ಮನೆಯಲ್ಲಿ ಪ್ರವೇಶಿಸಿದರು.

೩೩. ಅನಂತರ ವತ್ಸರಾಜನು ತಾನೇ ನಡೆಸಿದ ಉತ್ಸವದಲ್ಲಿ ಗೋಪಾಲಕನನ್ನೂ ಪುಲಿಂದಕನನ್ನೂ ಪಟ್ಟವಸ್ತ್ರಾದಿಗಳನ್ನು ಕೊಟ್ಟು ಸನ್ಮಾನಿಸಿದನು.

---

ರತಿವಲ್ಲೀ ನವೋದ್ಭಿನ್ನಮಿವ ಪಲ್ಲವಮುಜ್ಜ್ವಲಮ್ ।
ಪಾಣಿಂ ವಾಸವದತ್ತಾಯಾಃ ಸೋಽಥ ವತ್ಸೇಶ್ವರೋಽಗ್ರಹೀತ್ ॥ ೨೭
ಸಾಪಿ ಪ್ರಿಯಕರಸ್ಪರ್ಶಸಾಂದ್ರಾನಂದನಿಮೀಲಿತಾ ।
ಸಕಂಪಸ್ವೇದದಿಗ್ಧಾಂಗೀ ಗಾಢರೋಮಾಂಚಚರ್ಚಿತಾ ॥ ೨೮
ಸುಸಂಮೋಹನವಾಯವ್ಯವಾರುಣಾಸ್ತ್ರೈರ್ನಿರಂತರೈಃ ।
ವಿದ್ಧೇವ ಪುಷ್ಪಚಾಪೇನ ತತ್ಕ್ಷಣಂ ಸಮಲಕ್ಷ್ಯತ ॥ ೨೯
ದೃಶಿ ಧೂಮಾಭಿತಾಮ್ರಾಯಾಂ ತಸ್ಯಾ ವಹ್ನಿಪ್ರದಕ್ಷಿಣೇ ।
ಮದಿರಾ ಮದಮಾಧುರ್ಯಸೂತ್ರಪಾತಮಿವಾಕರೋತ್ ॥ ೩೦
ಗೋಪಾಲಕಾರ್ಪಿತೈ ರತ್ನೈ ರಾಜ್ಞಾಂ ಚೋಪಾಯನೈಸ್ತದಾ ।
ಪೂರ್ಣಕೋಷೋ ದಧೌ ಸತ್ಯಾಂ ವತ್ಸೇಶೋ ರಾಜರಾಜತಾಮ್ ॥ ೩೧
ನಿರ್ವರ್ತಿತವಿವಾಹೌ ತಾವಾದೌ ಲೋಕಸ್ಯ ಚಕ್ಷುಷಿ ।
ವಧೂವರೌ ವಿವಿಶತುಃ ಪಶ್ಚಾತ್ ಸ್ವೇ ವಾಸವೇಶ್ಮನಿ ॥ ೩೨
ಅಥ ಸಂಮಾನಯಾಮಾಸ ಪಟ್ಟಬಂಧಾದಿನಾ ಸ್ವಯಮ್ ।
ನಿಜೋತ್ಸವೇ ವತ್ಸರಾಜೋ ಗೋಪಾಲಕಪುಲಿಂದಕೌ ॥ ೩೩

೩೪. (ಬಂದಿದ್ದ) ರಾಜರ ಹಾಗೂ ಪೌರರ ಯಥೋಚಿತವಾದ ಸಂಮಾನವನ್ನು ಮಾಡುವುದಕ್ಕೆ ವತ್ಸರಾಜನು ಯೌಗಂಧರಾಯಣನನ್ನೂ ರುಮಣ್ವಂತನನ್ನೂ ನಿಯೋಜಿಸಿದ್ದನು.

೩೫. ಆಗ ಯೌಗಂಧರಾಯಣನು ರುಮಣ್ವಂತನಿಗೆ ಇಂತೆಂದನು ""ರಾಜನು ನಮ್ಮನ್ನು ಕಷ್ಟದ ಕೆಲಸದಲ್ಲಿ ತೊಡಗಿಸಿದ್ದಾನೆ. ಏಕೆಂದರೆ ಜನರ ಮನಸ್ಸನ್ನು ಅರಿತು ಹಿಡಿಯುವುದು ಕಷ್ಟ

೩೬. ಚಿಕ್ಕ ಹುಡುಗ ಕೂಡ ಸಂತೋಷಪಡಿಸದಿದ್ದರೆ ಖಂಡಿತವಾಗಿ ರೋಷವನ್ನು ಹುಟ್ಟಿಸಬಲ್ಲ. ಮಿತ್ರನೆ, ಈ ಕಾರಣದಿಂದ ವಿನಷ್ಟಕನೆಂಬ ಹುಡುಗನ ಈ ಕಥೆಯನ್ನು ಕೇಳು.

## ವಿನಷ್ಟಕನ ಕಥೆ

೩೭. ಹಿಂದೆ ರುದ್ರಶರ್ಮನೆಂಬ ಬ್ರಾಹ್ಮಣನಿದ್ದನು. ಆ ಗೃಹಸ್ಥನಿಗೆ ಇಬ್ಬರು ಹೆಂಡತಿಯರಿದ್ದರು.

೩೮. ಅವರಿಬ್ಬರಲ್ಲೊಬ್ಬಳು ಮಗುವನ್ನು ಹೆತ್ತು ಸತ್ತುಹೋದಳು. ಅನಂತರ ಅವನು ಆ ಮಗುವನ್ನು ಇನ್ನೊಬ್ಬ ತಾಯಿಯ ಕೈಯಲ್ಲಿ ಕೊಟ್ಟನು.

೩೯. ಆ ಮಗು ಸ್ವಲ್ಪ ಬೆಳೆಯುತ್ತಿದ್ದಂತೆಯೇ ಆ ತಾಯಿಯು ಅದಕ್ಕೆ (ಜಿಡ್ಡಿಲ್ಲದ) ಒರಟಾದ ಒಣ ಆಹಾರವನ್ನು ಕೊಡಲಾರಂಭಿಸಿದಳು. ಅದರಿಂದ ಆ ಹುಡುಗನು ಧೂಳುಮೆತ್ತಿದ ಶರೀರದವನೂ ದೊಡ್ಡ ಹೊಟ್ಟೆಯವನೂ ಆದನು.

---

ರಾಜ್ಞಾಂ ಸಂಮಾನನಾರ್ಥಂ ಚ ಪೌರಾಣಾಂ ಚ ಯಥೋಚಿತಮ್ ।
ಯೌಗಂಧರಾಯಣಸ್ತೇನ ರುಮಣ್ವಾಂಶ್ಚ ನ್ಯಯುಜ್ಯತ ॥ ೩೪

ತತೋಽಬ್ರವೀದ್ ರುಮಣ್ವಂತಮೇವಂ ಯೌಗಂಧರಾಯಣಃ ।
ರಾಜ್ಞಾ ಕಷ್ಟೇ ನಿಯುಕ್ತೌ ಸ್ವೋ ಲೋಕಚಿತ್ತಂ ಹಿ ದುರ್ಗ್ರಹಮ್ ॥ ೩೫

ಅರಂಜಿತಶ್ಚ ಬಾಲೋಽಪಿ ರೋಷಮುತ್ಪಾದಯೇದ್ ಧ್ರುವಮ್ ।
ತಥಾ ಚ ಶೃಣ್ವಿಮಾಂ ಬಾಲವಿನಷ್ಟಕಥಾಂ ಸಖೇ ॥ ೩೬

ಬಭೂವ ರುದ್ರಶರ್ಮಾಖ್ಯಃ ಕಶ್ಚಿನ ಬ್ರಾಹ್ಮಣಃ ಪುರಾ ।
ಬಭೂವತುಶ್ಚ ತಸ್ಯ ದ್ವೇ ಗೃಹಿಣ್ಯೌ ಗೃಹಮೇಧಿನಃ ॥ ೩೭

ಏಕಾ ಸುತಂ ಪ್ರಸೂಯೈವ ತಸ್ಯ ಪಂಚತ್ವಮಾಯಯೌ ।
ತತ್ಸುತೋಽಪರಮಾತುಶ್ಚ ಹಸ್ತೇ ತೇನಾರ್ಪಿತೋಽಥ ಸಃ ॥ ೩೮

ಸಾ ಚ ಕಿಂಚಿದ್ವಿವೃದ್ಧಸ್ಯ ರೂಕ್ಷಂ ತಸ್ಯಾಶನಂ ದದೌ ।
ಸೋಽಪಿ ತೇನಾಭವದ್ ಬಾಲೋ ಧೂಸರಾಂಗಃ ಪೃಥೂದರಃ ॥ ೩೯

೪೦. "ತಾಯಿಯಿಲ್ಲದ ಈ ನನ್ನ ಮಗನನ್ನು ನೀನೇಕೆ ಉಪೇಕ್ಷಿಸಿದೆ' ಎಂದು ತನ್ನ ಇನ್ನೊಬ್ಬಳು ಹೆಂಡತಿಯನ್ನು ರುದ್ರಶರ್ಮನು ಕೇಳಿದನು.

೪೧. "ಎಷ್ಟು ಜಿಡ್ಡಿನ ಪದಾರ್ಥಗಳನ್ನು ತಿಂದರೂ ಇವನು ಏಕೋ ಹೀಗೇ ಇದ್ದಾನೆ. ಇವನಿಗೆ ನಾನೇನು ಮಾಡುವುದು' ಎಂದು ಅವಳು ಹೇಳಿದಳು.

೪೨. ಆ ಬ್ರಾಹ್ಮಣನೂ 'ಇವನ ಸ್ವಭಾವವೇ ಹಾಗೆ' ಎಂದು ಭಾವಿಸಿದನು. ಹೆಂಗಸರ ಸುಳ್ಳು ಸುಳ್ಳಾದ ಮುದ್ದು ಮಾತುಗಳನ್ನು ಯಾವನು ತಾನೆ ಅಸತ್ಯವೆಂದು ತಿಳಿದುಕೊಳ್ಳುತ್ತಾನೆ?

೪೩. ಹುಡುಗನಾಗಿದ್ದಾಗಲೇ ಇವನು ಹಾಳಾದ ಎಂದು ಆ ಬಾಲಕನು 'ಬಾಲವಿನಷ್ಟಕ' ಎಂದು ತಂದೆಯ ಮನೆಯಲ್ಲಿ ಹೆಸರನ್ನು ಪಡೆದನು.

೪೪. "ಈ ಮಲತಾಯಿಯು ನನ್ನನ್ನು ಯಾವಾಗಲೂ ಕಡೆಗಣಿಸುತ್ತಾಳೆ. ಇವಳಿಗೆ ಏನಾದರೂ ಸರಿಯಾದ ಪ್ರತೀಕಾರ ಮಾಡುವುದು ಲೇಸು'

೪೫. ಎಂದು ಆ ಬಾಲವಿನಷ್ಟಕನೂ ಯೋಚಿಸಿದನು. ವಯಸ್ಸು ಐದು ವರ್ಷಗಳು ಕಳೆದಿದ್ದರೂ ಅವನಿಗೆ, ಪಾಪ, ಅಷ್ಟು ಬುದ್ಧಿ.

೪೬. ಅರಮನೆಯಿಂದ ತಂದೆ ಬಂದಾಗ ಅವನು ಏಕಾಂತದಲ್ಲಿ 'ಅಪ್ಪ ನನಗೆ ಇಬ್ಬರು ಅಪ್ಪಂದಿರಿದ್ದಾರೆ' ಎಂದು ಅಸ್ಪಷ್ಟವಾದ ತೊದಲು ಮಾತಿನಿಂದ ಹೇಳಿದನು.

---

ಮಾತೃಹೀನಸ್ತ್ವಯಾಯಂ ಮೇ ಕಥಂ ಶಿಶುರುಪೇಕ್ಷಿತಃ ।
ಇತಿ ತಾಮಪರಾಂ ಪತ್ನೀಂ ರುದ್ರಶರ್ಮಾಥ ಸೋಽಭ್ಯಧಾತ್ ॥ ೪೦
ಸೇವ್ಯಮಾನೋಽಪಿ ಹಿ ಸ್ನೇಹೈರೀದೃಗೇವ ಕಿಮಪ್ಯಸೌ ।
ಕಿಂ ಕರೋಮ್ಯಹಮಸ್ಯೇತಿ ಸಾಪ್ಯೇವಂ ಪತಿಮಬ್ರವೀತ್ ॥ ೪೧
ನೂನಮೇವಂಸ್ವಭಾವೋಽಯಮಿತಿ ಮೇನೇ ಚ ಸ ದ್ವಿಜಃ ।
ಸ್ತ್ರೀಣಾಮಲೀಕಮುಗ್ಧಂ ಹಿ ವಚಃ ಕೋ ಮನ್ಯತೇ ಮೃಷಾ ॥ ೪೨
ಬಾಲ ಏವ ವಿನಷ್ಟೋಽಯಮಿತಿ ಬಾಲವಿನಷ್ಟಕಃ ।
ನಾಮ್ನಾ ಸ ಬಾಲಕಸ್ತತ್ರ ಸಂವೃತ್ತೋಽಭೂತ್ ಪಿತುರ್ಗೃಹೇ ॥ ೪೩
ಅಸಾವಪರಮಾತಾ ಮಾಂ ಕದರ್ಥಯತಿ ಸರ್ವದಾ ।
ವರಂ ಪ್ರತಿಕ್ರಿಯಾಂ ಕಾಂಚಿತ್ ತದೇತಸ್ಯಾಃ ಕರೋಮ್ಯಹಮ್ ॥ ೪೪
ಇತಿ ಸಂಚಿಂತಯಾಮಾಸ ಸೋಽಥ ಬಾಲವಿನಷ್ಟಕಃ ।
ವ್ಯತೀತಪಂಚವರ್ಷೋಽಪಿ ವಯಸಾ ಬತ ಬುದ್ಧಿಮಾನ್ ॥ ೪೫
ಅಥಾಗತಂ ರಾಜಕುಲಾಜ್ಜಗಾದ ಪಿತರಂ ರಹಃ ।
ತಾತ ದ್ವೌ ಮಮ ತಾತೌ ಸ್ತ ಇತ್ಯವಿಸ್ಪಷ್ಟಯಾ ಗಿರಾ ॥ ೪೬

೪೭. ಆ ಹುಡುಗನು ಪ್ರತಿದಿನವೂ ಹೀಗೆ ಹೇಳತೊಡಗಿದನು. ಅವನ ತಂದೆಯು 'ಈ ನನ್ನ ಹೆಂಡತಿ ಉಪಪತಿಯನ್ನಿಟ್ಟುಕೊಂಡಿದ್ದಾಳೆ' ಎಂದು ಸಂಶಯಪಟ್ಟು ಅವಳನ್ನು ಮುಟ್ಟುವುದನ್ನೂ ಬಿಟ್ಟನು.

೪೮. ಯಾವ ತಪ್ಪೂ ಇಲ್ಲದೆ ಗಂಡನೇಕೆ ನನ್ನ ಮೇಲೆ ಮುನಿಸಿಕೊಂಡಿದ್ದಾನೆ ಎಂದು ಚಿಂತಿಸಿದ ಅವಳು ಈ ಬಾಲವಿನಷ್ಟಕನೇ ಏನೋ ಮಾಡಿರಬೇಕು ಎಂದು ಅಂದುಕೊಂಡಳು.

೪೯. ಪ್ರೀತಿಯಿಂದ ಅವನಿಗೆ ಸ್ನಾನ ಮಾಡಿಸಿ ಜಿಡ್ಡು ಹಾಕಿದ ಊಟವನ್ನು ಕೊಟ್ಟು ಮಡಿಲಲ್ಲಿ ಕೂಡಿಸಿಕೊಂಡು ಅವಳು ಬಾಲವಿನಷ್ಟಕನನ್ನು ಪ್ರಶ್ನಿಸಿದಳು.

೫೦. "ಮಗನೇ, ಅಪ್ಪ ರುದ್ರಶರ್ಮನಿಗೆ ನನ್ನ ಮೇಲೆ ಸಿಟ್ಟು ಬರುವಂತೆ ನೀನೇಕೆ ಮಾಡಿದೆ?' ಅದನ್ನು ಕೇಳಿ ಬಾಲವಿನಷ್ಟಕನು ಮಲತಾಯಿಗೆ ಹೀಗೆ ಹೇಳಿದನು.

೫೧. ""ನೀನು ನನ್ನ ಬಗೆಗೆ ಶಾಂತಳಾಗದಿದ್ದರೆ, ಇನ್ನೂ ಹೆಚ್ಚು ಇಂಥದನ್ನು ನಿನಗೆ ಮಾಡಲಿದ್ದೇನೆ. ನಿನ್ನ ಮಕ್ಕಳನ್ನು ಚೆನ್ನಾಗಿ ಪೋಷಿಸುವ ನೀನು ನನ್ನನ್ನೇಕೆ ಗೋಳಾಡಿಸುವೆ?"

೫೨. ಅದನ್ನು ಕೇಳಿ ಅವಳು ತಗ್ಗಿ ಆಣೆಯಿಟ್ಟು ಅವನಿಗೆ ""ಮತ್ತೆಂದೂ ಹೀಗೆ ಮಾಡುವುದಿಲ್ಲ. ನನ್ನ ಗಂಡನನ್ನು ಪ್ರಸನ್ನನನ್ನಾಗಿ ಮಾಡು" ಎಂದು ಹೇಳಿದಳು.

---

ಏವಂ ಪ್ರತ್ಯಹಮಾಹ ಸ್ಮ ಸ ಬಾಲಃ ಸೋಽಪಿ ತತ್ಪಿತಾ ।
ತಾಂ ಸೋಪಪತಿಮಾಶಂಕ್ಯ ಭಾರ್ಯಾಂ ಸ್ಪರ್ಶೇಽಪ್ಯವರ್ಜಯತ್ ॥ ೪೭
ಸಾಪಿ ದಧ್ಯೌ ವಿನಾ ದೋಷಂ ಕಸ್ಮಾನ್ಮೇ ಕುಪಿತಃ ಪತಿಃ ।
ಕಿಂಚಿದ್ ಬಾಲವಿನಷ್ಟೇನ ಕೃತಂ ಕಿಂಚಿದ್ ಭವೇದಿತಿ ॥ ೪೮
ಸಾದರಂ ಸ್ನಪಯಿತ್ವಾ ಚ ದತ್ತ್ವಾ ಸ್ನಿಗ್ಧಂ ಚ ಭೋಜನಮ್ ।
ಕೃತ್ವೋತ್ಸಂಗೇ ಚ ಪಪ್ರಚ್ಛ ಸಾ ತಂ ಬಾಲವಿನಷ್ಟಕಮ್ ॥ ೪೯
ಪುತ್ರ ಕಿಂ ರೋಷಿತಸ್ತಾತೋ ರುದ್ರಶರ್ಮಾ ತ್ವಯಾ ಮಯಿ ।
ತಚ್ಛ್ರುತ್ವೈವ ಸ ತಾಂ ಬಾಲೋ ಜಗಾದಾಪರಮಾತರಮ್ ॥ ೫೦
ಅತೋಽಧಿಕಂ ತೇ ಕರ್ತಾಸ್ಮಿ ನ ಚೇದದ್ಯಾಪಿ ಶಾಮ್ಯಸಿ ।
ಸ್ವಪುತ್ರಪೋಷಿಣೀ ಕಸ್ಮಾತ್ ತ್ವಂ ಮಾಂ ಕ್ಲಿಶ್ನಾಸಿ ಸರ್ವದಾ ॥ ೫೧
ತಚ್ಛ್ರುತ್ವಾ ಪ್ರಣತಾ ಸಾ ತಂ ಬಭಾಷೇ ಶಪಥೋತ್ತರಮ್ ।
ಪುನರ್ನೈವಂ ಕರಿಷ್ಯಾಮಿ ತತ್ ಪ್ರಸಾದಯ ಮೇ ಪತಿಮ್ ॥ ೫೨

೫೩. ಆಗ ಆ ಹುಡುಗನು "'ಹಾಗಾದರೆ ನನ್ನ ಅಪ್ಪ ಬಂದಾಗ ನಿನ್ನ ದಾಸಿಯರಲ್ಲೊಬ್ಬಳು ಒಂದು ಕನ್ನಡಿಯನ್ನು ತೋರಿಸಲಿ. ಮುಂದೆ ಏನು ಮಾಡಬೇಕೆಂಬುದು ನನಗೆ ಗೊತ್ತು" ಎಂದು ಹೇಳಿದನು.

೫೪. ಹಾಗೆಯೇ ಆಗಲಿ ಎಂದು ಮಲತಾಯಿಯು ಒಬ್ಬ ಚೇಟಿಯನ್ನು ಹಾಗೆ ಮಾಡಲು ಆದೇಶಿಸಿದಳು. ರುದ್ರಶರ್ಮನು ಬಂದ ಕ್ಷಣದಲ್ಲೇ ಅವಳು ಕನ್ನಡಿಯನ್ನು ತಂದು ತೋರಿಸಿದಳು.

೫೫. ಆಗ ಹುಡುಗನು ಆಗಲೇ ತಂದೆಯ ಪ್ರತಿಬಿಂಬವನ್ನು ತೋರಿಸಿ ""ಅಪ್ಪ, ನನ್ನ ಇನ್ನೊಬ್ಬ ಅಪ್ಪ ಇವನೇ" ಎಂದು ಹೇಳಿದನು.

೫೬. ಅದನ್ನು ಕೇಳಿದ ಕೂಡಲೆ ರುದ್ರಶರ್ಮನ ಸಂಶಯ ದೂರವಾಯಿತು. ನಿಷ್ಕಾರಣವಾಗಿ ತಾನು ದೂಷಿಸಿದ್ದ ಪತ್ನಿಯ ಬಗೆಗೆ ಅವನು ಆ ಕೂಡಲೇ ಪ್ರಸನ್ನನಾದನು.

೫೭. ಹೀಗೆ ಒಬ್ಬ ಹುಡುಗನೂ ಬೇಸರಪಟ್ಟರೆ ತೊಂದರೆಯನ್ನುಂಟು ಮಾಡಬಹುದು. ಹೀಗಿರುವಾಗ ನಾವು ಎಲ್ಲರನ್ನೂ ಚೆನ್ನಾಗಿ ಸಂತೋಷಪಡಿಬೇಕಾಗಿದೆ.

೫೮. ಹೀಗೆ ಹೇಳಿ ಯೌಗಂಧರಾಯಣನು ರುಮಣ್ವಂತನ ಜೊತೆಯಲ್ಲಿ ನಿಂತು ವತ್ಸರಾಜೋತ್ಸವದಲ್ಲಿ ಎಲ್ಲ ಜನರನ್ನೂ ಸಂಮಾನಿಸಿದನು.

---

ತತಃ ಸ ಬಾಲೋಽವಾದೀತ್ತಾಂ ತರ್ಹ್ಯಾಯಾತಸ್ಯ ಮತ್ಪಿತುಃ ।
ಆದರ್ಶಂ ದರ್ಶಯತ್ವೇಕಾ ತ್ವಚ್ಚೇಟೀ ವೇದ್ಮ್ಯಹಂ ಪರಮ್ ॥ ೫೩

ತಥೇತ್ಯುಕ್ತ್ವಾ ತಯಾ ಚೇಟೀ ನಿಯುಕ್ತಾ ರುದ್ರಶರ್ಮಣಃ ।
ಆಗತಸ್ಯ ಕ್ಷಣಾತ್ತಸ್ಯ ದರ್ಶಯಾಮಾಸ ದರ್ಪಣಮ್ ॥ ೫೪

ತತ್ರ ತಸ್ಯೈವ ತತ್ಕಾಲಂ ಪ್ರತಿಬಿಂಬಂ ಸ ದರ್ಶಯನ್ ।
ಸೋಽಯಂ ದ್ವಿತೀಯಸ್ತಾತೋ ಮೇ ತಾತೇತ್ಯಾಹ ಸ್ಮ ಬಾಲಕಃ ॥ ೫೫

ತಚ್ಛ್ರುತ್ವಾ ವಿಗತಾಶಂಕಸ್ತಾಮಕಾರಣದೂಷಿತಾಮ್ ।
ಪತ್ನೀಂ ಪ್ರತಿ ಪ್ರಸನ್ನೋಽಭೂದ್ರುದ್ರಶರ್ಮಾ ತದೈವ ಸಃ ॥ ೫೬

ಏವಮುತ್ಪಾದಯೇದ್ ದೋಷಂ ಬಾಲೋಽಪಿ ವಿಕೃತಿಂ ಗತಃ ।
ತದಯಂ ರಂಜನೀಯೋ ನಃ ಸಮ್ಯಕ್ ಪರಿಕರೋಽಖಿಲಃ ॥ ೫೭

ಇತ್ಯುಕ್ತ್ವಾ ಸರುಮಣ್ವತ್ಕಃ ಸೋಽಥ ಯೌಗಂಧರಾಯಣಃ ।
ಸರ್ವಂ ಸಂಮಾನಯಾಮಾಸ ವತ್ಸರಾಜೋತ್ಸವೇ ಜನಮ್ ॥ ೫೮

೫೯. ಎಲ್ಲ ರಾಜಸಮೂಹವನ್ನೂ ಅವರಿಬ್ಬರೂ ಹೇಗೆ ಸಂತೋಷಪಡಿಸಿದರೆಂದರೆ ಪ್ರತಿಯೊಬ್ಬ ರಾಜನೂ 'ಇವರಿಬ್ಬರೂ ನನ್ನನ್ನೇ ಮುಖ್ಯವಾಗಿ ಉಪಚರಿಸುತ್ತಿದ್ದಾರೆ' ಎಂದು ಭಾವಿಸುತ್ತಿದ್ದನು.

೬೦. ರಾಜನೂ ಅವರಿಬ್ಬರು ಸಚಿವರಿಗೂ ವಸಂತಕನಿಗೂ ತನ್ನ ಕೈಗಳಿಂದಲೇ ಬಟ್ಟೆ ಪ್ರಸಾಧನಸಾಮಗ್ರಿ ಮತ್ತು ಆಭರಣಗಳನ್ನೂ ಕೊಟ್ಟು ಹಾಗೂ ಗ್ರಾಮದಾನ ಮಾಡಿ ಸತ್ಕರಿಸಿದನು.

೬೧. ಮದುವೆಯ ಮಹೋತ್ಸವವನ್ನು ಆಚರಿಸಿಕೊಂಡ ವತ್ಸರಾಜನು ವಾಸವದತ್ತೆಯೊಡಗೂಡಿ ಮನೋರಥಗಳೆಲ್ಲ ಹಣ್ಣು ಬಿಟ್ಟವೆಂದು ಭಾವಿಸಿಕೊಂಡನು.

೬೨. ಒಲವಿನಿಂದ ಬಹುಕಾಲದವರೆಗೆ ಮುಚ್ಚಿಡಲ್ಪಟ್ಟಿದ್ದು ಈಗ ಸತತವಾಗಿ ಹರಿದ ಅವರ ಅನಿರ್ವಚನೀಯ ರಸಯಾತ್ರೆಯು ರಾತ್ರಿಯಲ್ಲಿ ವೇದನೆಯನ್ನನುಭವಿಸಿದ ಚಕ್ರವಾಕಪಕ್ಷಿಗಳ ರೀತಿಯಲ್ಲಿ ಮನೋಜ್ಞವಾಗಿತ್ತು.

೬೩. ದಂಪತಿಗಳ (ಪರಸ್ಪರ) ಪರಿಚಯವು ಎಷ್ಟೆಷ್ಟು ಹೆಚ್ಚಾಯಿತೋ ಅಷ್ಟಷ್ಟು ಅವರ ಪ್ರೇಮವು ಹೊಸತನವನ್ನು ಪಡೆದುಕೊಂಡಿತು.

೬೪. ಮದುವೆಗೆ (ಮೂಲ) ಕರ್ತೃವಾದ ತನ್ನ ತಂದೆಯ ಸಂದೇಶಕ್ಕೆ ಅನುಸಾರವಾಗಿ ಗೋಪಾಲಕನು (ಉಜ್ಜಯಿನಿಗೆ) ಹೊರಟನು. ಬೇಗನೆ ಮತ್ತೆ ಬರಬೇಕೆಂದು ವತ್ಸರಾಜನು ಅವನನ್ನು ಕೋರಿದನು.

---

ತಥಾ ಚ ರಾಜಲೋಕಂ ತೌ ರಂಜಯಾಮಾಸತುರ್ಯಥಾ ।
ಮದೇಕಪ್ರವಣಾವೇತಾವಿತಿ ಸರ್ವೋಽಪ್ಯಮನ್ಯತ ॥ ೫೯
ತೌ ಚಾಪ್ಯಪೂಜಯದ್ರಾಜಾ ಸಚಿವೌ ಸ್ವಕರಾರ್ಪಿತೈಃ ।
ವಸ್ತ್ರಾಂಗರಾಗಾಭರಣೈರ್ಗ್ರಾಮೈಶ್ಚ ಸವಸಂತಕೌ ॥ ೬೦
ಕೃತೋದ್ವಾಹೋತ್ಸವಃ ಸೋಽಥ ಯುಕ್ತೋ ವತ್ಸೇಶ್ವರಸ್ತಯಾ ।
ಮನೋರಥಫಲಾನ್ಯೇವ ಮೇನೇ ವಾಸವದತ್ತಯಾ ॥ ೬೧
ಚಿರಾದುನ್ಮುದ್ರಿತಃ ಸ್ನೇಹಾತ್ ಕೋಽಪ್ಯಭೂತ್ ಸತತಂ ತಯೋಃ ।
ನಿಶಾಂತಕ್ಲಿಷ್ಟಚಕ್ರಾಹ್ವರೀತಿಹೃದ್ಯೋ ರಸಕ್ರಮಃ ॥ ೬೨
ಯಥಾ ಯಥಾ ಚ ದಂಪತ್ಯೋಃ ಪ್ರೌಢಿಂ ಪರಿಚಯೋ ಯಯೌ ।
ತಯೋಸ್ತಥಾ ತಥಾ ಪ್ರೇಮ ನವೀಭಾವಮಿವಾಯಯೌ ॥ ೬೩
ಗೋಪಾಲಕೇನ ವೀವಾಹಕರ್ತುಃ ಸಂದೇಶತಃ ಪಿತುಃ ।
ಪ್ರಯಯೌ ಶೀಘ್ರಮಾವೃತ್ತಿಂ ವತ್ಸರಾಜೇನ ಯಾಚಿತಃ ॥ ೬೪

೬೫. ಅನಂತರ ಒಮ್ಮೆ ಚಂಚಲಚಿತ್ತನಾದ ವತ್ಸರಾಜನು ಹಿಂದೆ ತನ್ನೊಡನೆ ಸಂಗಮವನ್ನು ಹೊಂದಿದ್ದ 'ವಿರಚಿತಾ' ಎಂಬ ಅಂತಃಪುರದ ಪರಿಚಾರಿಕೆಯೊಡನೆ ರಹಸ್ಯವಾಗಿ ಕೂಡಿದನು.

೬೬. ನಾಲಿಗೆ ತಪ್ಪಿ ಅವಳ ಹೆಸರನ್ನು ಹೇಳಿದ ವತ್ಸರಾಜನು ದೇವಿ ವಾಸವದತ್ತೆಯ ಕಾಲಿಗೆ ಬಿದ್ದು ಅವಳನ್ನು ಪ್ರಸನ್ನಳನ್ನಾಗಿ ಮಾಡುವಾಗ ಅವಳ ಕಂಬನಿಗಳಿಂದ ಅಭಿಷಿಕ್ತನಾಗಿ ಆನಂದ ಸಾಮ್ರಾಜ್ಯವನ್ನು ಹೊಂದಿದನು.

೬೭–೬೯. ಗೋಪಾಲಕನು ತನ್ನ ಬಾಹುಬಲದಿಂದ ಗೆದ್ದುಕೊಂಡ ಬಂಧುಮತೀ ಎಂಬ ರಾಜಕುಮಾರಿಯನ್ನು ದೇವಿ ವಾಸವದತ್ತೆಗೆ ಕಾಣಿಕೆಯಾಗಿ ಕಳುಹಿಸಿದ್ದನು. ಅವಳನ್ನು 'ಮಂಜುಲಿಕಾ' ಎಂಬ ಬೇರೆ ಹೆಸರಿನಿಂದ ವಾಸವದತ್ತೆಯು ಗುಟ್ಟಾಗಿ ರಕ್ಷಿಸುತ್ತಿದ್ದಳು. ಆ ಹುಡುಗಿ ಲಾವಣ್ಯಸಮುದ್ರದಿಂದ ಎದ್ದು ಬಂದ ಇನ್ನೊಬ್ಬ ಲಕ್ಷ್ಮಿಯಂತಿದ್ದಳು. ಉದ್ಯಾನವನದ ಲತಾಗೃಹದಲ್ಲಿ ಅವಳನ್ನು ಗುಟ್ಟಾಗಿ ವಸಂತಕನ ಸಹಾಯದಿಂದ ರಾಜನು ಗಾಂಧರ್ವವಿಧಾನದಿಂದ ಮದುವೆಯಾದನು.

೭೦. ಅದನ್ನು ಯಾರಿಗೂ ಕಾಣದೆ ನಿಂತಿದ್ದ ವಾಸವದತ್ತೆ ನೋಡಿಬಿಟ್ಟಳು. ಅವಳು ಕೋಪಿಸಿಕೊಂಡು ವಸಂತಕನನ್ನು ಬಂಧಿಸಿ ಕರೆದೊಯ್ದಳು.

---

ಸೋಽಪಿ ವತ್ಸೇಶ್ವರೋ ಜಾತು ಚಪಲಃ ಪೂರ್ವಸಂಗತಾಮ್ ।
ಗುಪ್ತಂ ವಿರಚಿತಾಂ ನಾಮ ಭೇಜೇಽಂತಃಪುರಚಾರಿಕಾಮ್ ॥ ೬೫
ತದ್ಗೋತ್ರಸ್ಖಲಿತೋ ದೇವೀಂ ಪಾದಲಗ್ನಃ ಪ್ರಸಾದಯನ್ ।
ಲೇಭೇ ಸುಭಗಸಾಮ್ರಾಜ್ಯಮಭಿಷಿಕ್ತಸ್ತದಶ್ರುಭಿಃ ॥ ೬೬
ಕಿಂಚ ಬಂಧುಮತೀಂ ನಾಮ ರಾಜಪುತ್ರೀಂ ಭುಜಾರ್ಜಿತಾಮ್ ।
ಗೋಪಾಲಕೇನ ಪ್ರಹಿತಾಂ ಕನ್ಯಾಂ ದೇವ್ಯಾ ಉಪಾಯನಮ್ ॥ ೬೭
ತಯಾ ಮಂಜುಲಿಕೇತ್ಯೇವ ನಾಮ್ನಾನ್ಯೇನೈವ ಗೋಪಿತಾಮ್ ।
ಅಪರಾಮಿವ ಲಾವಣ್ಯಜಲಧೇರುದ್ಗತಾಂ ಶ್ರಿಯಮ್ ॥ ೬೮
ವಸಂತಕಸಹಾಯಃ ಸನ್ ದೃಷ್ಟ್ವೋದ್ಯಾನಲತಾಗೃಹೇ ।
ಗಾಂಧರ್ವವಿಧಿನಾ ಗುಪ್ತಮುಪಯೇಮೇ ಸ ಭೂಪತಿಃ ॥ ೬೯
ತಚ್ಚ ವಾಸವದತ್ತಾಸ್ಯ ದದರ್ಶ ನಿಭೃತಸ್ಥಿತಾ ।
ಪ್ರಚುಕೋಪ ಚ ಬದ್ಧ್ವಾ ಚ ಸಾ ನಿನಾಯ ವಸಂತಕಮ್ ॥ ೭೦

೭೧. ಆಮೇಲೆ ವಾಸವದತ್ತೆಯ ಸಖಿಯೂ, ಅವಳ ತಂದೆಯ ಮನೆಯಿಂದ ಬಂದಿದ್ದವಳೂ ಆಗಿದ್ದ ಸಾಂಕೃತ್ಯಾಯನೀ ಎಂಬ ಸಂನ್ಯಾಸಿನಿಯನ್ನು ವತ್ಸರಾಜನು ಮೊರೆಹೊಕ್ಕನು.

೭೨. ಅವಳು ಪಟ್ಟದ ರಾಣಿ (ವಾಸವದತ್ತೆ)ಯನ್ನು ಪ್ರಸನ್ನಳನ್ನಾಗಿ ಮಾಡಿ ಅವಳ ಅನುಮತಿಯಂತೆ ಬಂಧುಮತಿಯನ್ನು ರಾಜನಿಗೆ ಕೊಟ್ಟಳು. ಎಷ್ಟಾದರೂ ಪತಿವ್ರತೆಯರ ಮನಸ್ಸು ಮೃದುವಲ್ಲವೇ ?

೭೩. ಅನಂತರ ಆ ದೇವಿ (ವಾಸವದತ್ತೆ)ಯು ವಸಂತಕನನ್ನು ಬಂಧನದಿಂದ ಬಿಡಿಸಿದಳು. ಅವನು ಬಂದು ರಾಣಿಯ ಮುಂದೆ ನಿಂತು ನಗುತ್ತಾ ಅವಳಿಗೆಂತೆಂದನು.

೭೪. "'ಅಪರಾಧ ಮಾಡಿದ್ದು ಬಂಧುಮತೀ ದೇವಿ, ನಿಮಗೆ ನಾನೇನು ತಪ್ಪು ಮಾಡಿದೆನು? ವಿಷದ ಹಾವುಗಳ ಮೇಲಿನ ಕೋಪದಿಂದ ನೀವು ವಿಷವಿಲ್ಲದ ಡುಂಡುಭಗಳೆಂಬ ಹಾವುಗಳನ್ನು ಹೊಡೆಯುತ್ತೀರಿ."

೭೫. ಹೋಲಿಕೆಯನ್ನು ವಿವರಿಸು ಎಂದು ಕುತೂಹಲದಿಂದ ದೇವಿಯು ಕೇಳಿದಾಗ ವಸಂತಕನು ಮತ್ತೆ ಹೇಳಿದನು.

## ರುರು-ಪ್ರಮದ್ವರೆಯರ ಕಥೆ

೭೬. "ಹಿಂದೆ ರುರು ಎಂಬ ಹೆಸರಿನ ಯಾವನೋ ಒಬ್ಬ ಋಷಿಪುತ್ರನು ಸುಮ್ಮನೆ ಅಲೆದಾಡುತ್ತಿದ್ದಾಗ ಅದ್ಭುತ ಚೆಲುವಿನ ಒಬ್ಬ ಕನ್ಯೆಯನ್ನು ನೋಡಿದನು.

---

ತತಃ ಪ್ರವ್ರಾಜಿಕಾಂ ತಸ್ಯಾಃ ಸಖೀಂ ಪಿತೃಕುಲಾಗತಾಮ್ ।
ಸ ಸಾಂಕೃತ್ಯಾಯನೀಂ ನಾಮ ಶರಣಂ ಶಿಶ್ರಿಯೇ ನೃಪಃ ॥ ೭೧
ಸಾ ತಾಂ ಪ್ರಸಾದ್ಯ ಮಹಿಷೀಂ ತಯಾ ಸೈವ ಕೃತಾಜ್ಞಯಾ ।
ದದೌ ಬಂಧುಮತೀಂ ರಾಜ್ಞೇ ಪೇಶಲಂ ಹಿ ಸತೀಮನಃ ॥ ೭೨
ತತಸ್ತಂ ಬಂಧನಾದ್ದೇವೀ ಸಾ ಮುಮೋಚ ವಸಂತಕಮ್ ।
ಸ ಚಾಗತ್ಯಾಗ್ರತೋ ರಾಜ್ಞೀಂ ಹಸನ್ನಿತಿ ಜಗಾದ ತಾಮ್ ॥ ೭೩
ಬಂಧುಮತ್ಯಾಪರಾದ್ಧಂ ಚ ಕಿಂ ಮಯಾ ದೇವಿ ತೇ ಕೃತಮ್ ।
ಡುಂಡುಭೇಷು ಪ್ರಹರಥ ಕ್ರುದ್ಧಾ ಯೂಯಮಹೀನ್ ಪ್ರತಿ ॥ ೭೪
ಏತತ್ ತ್ವಮುಪಮಾನಂ ಮೇ ವ್ಯಾಚಕ್ಷ್ವೇತಿ ಕುತೂಹಲಾತ್ ।
ದೇವ್ಯಾ ಪೃಷ್ಟಸ್ತಯಾ ಸೋಽಥ ಪುನರಾಹ ವಸಂತಕಃ ॥ ೭೫
ಪುರಾ ಕೋಽಪಿ ರುರುರ್ನಾಮ ಮುನಿಪುತ್ರೋ ಯದೃಚ್ಛಯಾ ।
ಪರಿಭ್ರಮನ್ ದದರ್ಶೈಕಾಂ ಕನ್ಯಾಮದ್ಭುತದರ್ಶನಾಮ್ ॥ ೭೬

೭೭. ಸ್ವರ್ಗದ ನಾರಿಯಾದ ಮೇನಕೆಯಲ್ಲಿ ವಿದ್ಯಾಧರನಿಂದ ಆ ಕನ್ಯೆ ಹುಟ್ಟಿದ್ದಳು. ಸ್ಥೂಲಕೇಶನೆಂಬ ಋಷಿ ತನ್ನ ಆಶ್ರಮದಲ್ಲಿ ಅವಳನ್ನು ಬೆಳೆಸಿದ್ದನು.

೭೮. ಅವಳ ಹೆಸರು ಪ್ರಮದ್ವರಾ. ಒಮ್ಮೆ ನೋಡಿದಷ್ಟರಿಂದಲೇ ಅವಳು ರುರುವಿನ ಮನಸ್ಸನ್ನು ಸೆಳೆದುಕೊಂಡಳು. ಅನಂತರ ರುರು ಸ್ಥೂಲಕೇಶನ ಬಳಿಗೆ ಹೋಗಿ ಅವಳನ್ನು (ತನಗೆ ಕೊಡಬೇಕೆಂದು) ಬೇಡಿಕೊಂಡನು.

೭೯. ಸ್ಥೂಲಕೇಶನೂ ಅವನಿಗೆ ಅವಳನ್ನು (ಕೊಡುವುದಾಗಿ) ಮಾತು ಕೊಟ್ಟನು. ವಿವಾಹವು ಸಮೀಪಿಸುತ್ತಿದ್ದಾಗ ಒಂದು ಹಾವು ಪ್ರಮದ್ವರೆಯನ್ನು ಆಕಸ್ಮಾತ್ತಾಗಿ ಕಚ್ಚಿಬಿಟ್ಟಿತು.

೮೦. ವಿಷಣ್ಣಹೃದಯನಾದ ರುರುವಿಗೆ ಆಕಾಶದಿಂದ ""ಬ್ರಹ್ಮನ್, ಇವಳ ಆಯುಸ್ಸು ಕ್ಷೀಣಿಸಿತು. ನಿನ್ನ ಆಯುಸ್ಸಿನ ಅರ್ಧವನ್ನು ಕೊಟ್ಟು ಅವಳನ್ನು ಬದುಕಿಸಿಕೋ" ಎಂಬ ಮಾತು ಕೇಳಿಸಿತು.

೮೧. ಅದನ್ನು ಕೇಳಿಸಿಕೊಂಡ ಅವನು ಪ್ರಮದ್ವರೆಗೆ ತನ್ನ ಆಯುಸ್ಸಿನ ಅರ್ಧವನ್ನು ತತ್‌ಕ್ಷಣ ನೀಡಿದನು. ಅದರಿಂದ ಅವಳು ಮತ್ತೆ ಬದುಕಿದಳು. ಅವನು ಅವಳನ್ನು ಮದುವೆ ಮಾಡಿಕೊಂಡನು.

೮೨. ಆದರೆ ಕೋಪಗೊಂಡಿದ್ದ ರುರು ಯಾವ ಹಾವುಗಳನ್ನು ನೋಡಿದರೂ 'ಇವು ನನ್ನ ಹೆಂಡತಿಯನ್ನು ಕಚ್ಚಬಹುದು' ಎಂದು ಯೋಚಿಸಿ ಅವುಗಳನ್ನೆಲ್ಲ ಕೊಲ್ಲುತ್ತಿದ್ದನು.

---

ವಿದ್ಯಾಧರಾತ್ ಸಮುತ್ಪನ್ನಾಂ ಮೇನಕಾಯಾಂ ದ್ಯುಯೋಷಿತಿ ।
ಸ್ಥೂಲಕೇಶೇನ ಮುನಿನಾ ವರ್ಧಿತಾಮಾಶ್ರಮೇ ನಿಜೇ ॥ ೭೭
ಸಾ ಚ ಪ್ರಮದ್ವರಾ ನಾಮ ದೃಷ್ಟ್ವಾ ತಸ್ಯ ರುರೋರ್ಮನಃ ।
ಜಹಾರ ಸೋಽಥ ಗತ್ವಾ ತಾಂ ಸ್ಥೂಲಕೇಶಾದಯಾಚತ ॥ ೭೮
ಸ್ಥೂಲಕೇಶೋಽಪಿ ತಾಂ ತಸ್ಮೈ ಪ್ರತಿಶುಶ್ರಾವ ಕನ್ಯಕಾಮ್ ।
ಆಸನ್ನೇ ಚ ವಿವಾಹೇ ತಾಮಕಸ್ಮಾದ್ ದಷ್ಟವಾನಹಿಃ ॥ ೭೯
ತತೋ ವಿಷಣ್ಣಹೃದಯಃ ಶುಶ್ರಾವೇಮಾಂ ಗಿರಂ ದಿವಿ ।
ಏತಾಂ ಕ್ಷೀಣಾಯುಷಂ ಬ್ರಹ್ಮನ್ ಸ್ವಾಯುಷೋಽರ್ಧೇನ ಜೀವಯ ॥ ೮೦
ತಚ್ಛ್ರುತ್ವಾ ಸ ದದೌ ತಸ್ಯೈ ತದೈವಾರ್ಧಂ ನಿಜಾಯುಷಃ ।
ಪ್ರತ್ಯುಜ್ಜಿಜೀವ ಸಾ ತೇನ ಸೋಽಪಿ ತಾಂ ಪರಿಣೀತವಾನ್ ॥ ೮೧
ಅಥ ಕ್ರುದ್ಧೋ ರುರುರ್ನಿತ್ಯಂ ಯಂ ಯಂ ಸರ್ಪಂ ದದರ್ಶ ಸಃ ।
ತಂ ತಂ ಜಘಾನ ಭಾರ್ಯಾಂ ಮೇ ದಷ್ಟಾಮೀಭಿರ್ಭವೇದಿತಿ ॥ ೮೨

೮೩. ಅವನು (ವಿಷವಿಲ್ಲದ) ಡುಂಡುಭಜಾತಿಯ (ಎರಡು ತಲೆಯುಳ್ಳ) ಹಾವನ್ನು ಕೊಲ್ಲಲು ಹೋದಾಗ ಅದು ಮನುಷ್ಯರ ಮಾತಿನಿಂದ '"ಬ್ರಹ್ಮನ್, ವಿಷವುಳ್ಳ ಹಾವುಗಳ ಮೇಲೆ ಕೋಪಮಾಡಿಕೊಂಡು ನೀನು (ವಿಷವಿಲ್ಲದ) ಡುಂಡುಭಗಳನ್ನು ಕೊಲ್ಲುವುದೇಕೆ ?" ಎಂದು ಕೇಳಿತು.

೮೪. "' 'ಅಹಿ' ಜಾತಿಯ ಹಾವು ನಿನ್ನ ನಲ್ಲೆಯನ್ನು ಕಚ್ಚಿತು. ಅಹಿಗಳೂ ಡುಂಡುಭಗಳೂ ಬೇರೆಬೇರೆ. ಅಹಿಗಳಲ್ಲಿ ವಿಷವುಂಟು. ಡುಂಡುಭಗಳೆಲ್ಲ ವಿಷವಿಲ್ಲದ ಹಾವುಗಳು" ಎಂದು ಅದು ಹೇಳಿತು.

೮೫–೮೬. ಅದನ್ನು ಕೇಳಿ ರುರು ಮತ್ತೆ 'ಮಿತ್ರ, ನೀನು ಯಾರು' ಎಂದನು. ಆಗ ಆ ಎರಡು ತಲೆಯ ಡುಂಡುಭ ಹೇಳಿತು. '"ಬ್ರಹ್ಮನ್, ನಾನು ಶಾಪದಿಂದ ಜಾರಿದ ಋಷಿ. ನನ್ನ ಶಾಪವು ನಿನ್ನೊಡನೆ ಮಾತನಾಡುವವರೆಗೆ ಮಾತ್ರ ಇತ್ತು" ಇಷ್ಟು ಹೇಳಿ ಡುಂಡುಭ ಮಾಯವಾಯಿತು. ಆಮೇಲೆ ರುರು ಡುಂಡುಭಗಳನ್ನು ಕೊಲ್ಲಲಿಲ್ಲ.

೮೭. ದೇವಿ, ಇದನ್ನು ನಿಮಗೆ ಹೋಲಿಕೆಗಾಗಿ 'ವಿಷಸರ್ಪಗಳ ಮೇಲೆ ಕೋಪಿಸಿಕೊಂಡು ನೀವು ಡುಂಡುಭಗಳನ್ನು ಹೊಡೆಯುತ್ತೀರಿ' ಎಂದು ನಾನು ಹೇಳಿದೆನು.'

೮೮. ಹೀಗೆ ಹಾಸ್ಯ ಮತ್ತು ವಿನೋದಗಳಿಂದ ಕೂಡಿದ್ದ ಮಾತನ್ನು ಹೇಳಿ ವಸಂತಕನು ಸುಮ್ಮನಾಗಲು, ಗಂಡನ ಪಕ್ಕದಲ್ಲಿದ್ದ ವಾಸವದತ್ತೆಯು ಅವನ ಬಗ್ಗೆ ಸಂತೋಷಪಟ್ಟಳು.

---

ಅಥೈಕಸ್ತಂ ಜಿಘಾಂಸಂತಂ ಮರ್ತ್ಯವಾಚಾಹ ಡುಂಡುಭಃ ।
ಅಹಿಭ್ಯಃ ಕುಪಿತೋ ಬ್ರಹ್ಮನ್ ಹಂಸಿ ತ್ವಂ ಡುಂಡುಭಾನ್ ಕಥಮ್ ॥ ೮೩
ಅಹಿನಾ ತೇ ಪ್ರಿಯಾ ದಷ್ಟಾ ವಿಭಿನ್ನೌ ಚಾಹಿಡುಂಡುಭೌ ।
ಅಹಯಃ ಸವಿಷಾಃ ಸರ್ವೇ ನಿರ್ವಿಷಾ ಡುಂಡುಭಾ ಇತಿ ॥ ೮೪
ತಚ್ಛ್ರುತ್ವಾ ಪ್ರತ್ಯವಾದೀತ್ತಂ ಸಖೇ ಕೋ ನು ಭವಾನಿತಿ ।
ಡುಂಡುಭೋಽಪ್ಯವದದ್ ಬ್ರಹ್ಮನ್ನಹಂ ಶಾಪಚ್ಯುತೋ ಮುನಿಃ ॥ ೮೫
ಭವತ್ಸಂವಾದಪರ್ಯಂತಃ ಶಾಪೋಽಯಮಭವಚ್ಚ ಮೇ ।
ಇತ್ಯುಕ್ತ್ವಾಂತರ್ಹಿತೇ ತಸ್ಮಿನ್ ಭೂಯಸ್ತಾನ್ನಾವಧೀದ್ ರುರುಃ ॥ ೮೬
ತದೇತದುಪಮಾನಾಯ ತವ ದೇವಿ ಮಯೋದಿತಮ್ ।
ಡುಂಡುಭೇಷು ಪ್ರಹರಥ ಕ್ರುದ್ಧಾ ಯೂಯಮಹಿಷ್ವಿತಿ ॥ ೮೭
ಏವಮಭಿಧಾಯ ವಚನಂ ಸನರ್ಮಹಾಸಂ ವಸಂತಕೇ ವಿರತೇ ।
ವಾಸವದತ್ತಾ ತಂ ಪ್ರತಿ ತುತೋಷ ಪಾರ್ಶ್ವೇ ಸ್ಥಿತಾ ಪತ್ಯುಃ ॥ ೮೮

೮೯. ಹೀಗೆ ಪ್ರೇಮಿ ಉದಯನನು ದೇವಿ ವಾಸವದತ್ತೆಯು ಕೋಪಗೊಂಡಿದ್ದಾಗ ಅವಳ ಕಾಲಿಗೆ ಬಿದ್ದು ಪ್ರಾರ್ಥಿಸಿ ಅನುನಯವನ್ನು ಮಾಡುವುದಕ್ಕಾಗಿ ಅನೇಕ ವಿಧವಾದ ಜೇನಿನಂತೆ ಸಿಹಿಯಾದ ಕುಶಲತೆಯ ಕಾರ್ಯಗಳನ್ನು ವಸಂತಕನಿಂದ ಮಾಡಿಸುತ್ತಿದ್ದನು.

೯೦. ಸದಾ ಸುಖಿಯಾಗಿದ್ದ ಆ ರಾಜನ ನಾಲಿಗೆ ಸದಾ ಮದಿರೆಯ ರಸದಲ್ಲಿ ಆಸಕ್ತವಾಗಿತ್ತು ಅವನ ಕಿವಿ ಇಂಪಾದ ವೀಣೆಯ ದನಿಯನ್ನು ಕೇಳುವುದರಲ್ಲಿ ಲೀನವಾಗಿತ್ತು, ಕಣ್ಣು ನಲ್ಲೆಯ ಮುಖದಲ್ಲಿ ಸದಾ ನಿಶ್ಚಲವಾಗಿ ನಿಂತಿರುತ್ತಿತ್ತು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಕಥಾಮುಖಲಂಬಕದಲ್ಲಿ

ಆರನೆಯ ತರಂಗ ಮುಗಿಯಿತು.

ಎರಡನೆಯದಾದ ಕಥಾಮುಖಲಂಬಕವೂ ಮುಗಿಯಿತು.

---

ಇತಿ ಮಧುಮಧುರಾಣಿ ವತ್ಸರಾಜಶ್ಚರಣಗತಃ ಕುಪಿತಾನುನಾಥನಾನಿ ।
ಸತತಮುದಯನಶ್ಚಕಾರ ದೇವ್ಯಾ ವಿವಿಧವಸಂತಕಕೌಶಲಾನಿ ಕಾಮೀ ॥ ೮೯
ರಸನಾ ಮದಿರಾರಸೈಕಸಕ್ತಾ ಕಲವೀಣಾರವರಾಗಿಣೀ ಶ್ರುತಿಶ್ಚ ।
ದಯಿತಾಮುಖನಿಶ್ಚಲಾ ಚ ದೃಷ್ಟಿಃ ಸುಖಿನಸ್ತಸ್ಯ ಸದಾ ಬಭೂವ ರಾಜ್ಞಃ ॥ ೯೦

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ ಕಥಾಮುಖಲಂಬಕೇ ಷಷ್ಠಸ್ತರಂಗಃ ।

ಸಮಾಪ್ತಶ್ಚಾಯಂ ಕಥಾಮುಖಲಂಬಕೋ ದ್ವಿತೀಯಃ ।

❖❖❖

# ಮೂರನೆಯ ಲಾವಾಣಕಲಂಬಕ

## ಒಂದನೆಯ ತರಂಗ

೧ ವಿಶ್ವಸೃಷ್ಟಿಯನ್ನು ಯಾವ ಅಡಚಣೆಯೂ ಇಲ್ಲದೆ ಮಾಡುವುದಕ್ಕಾಗಿ ಬ್ರಹ್ಮನು ಕೂಡ ಯಾರ ಅನುಗ್ರಹವನ್ನು ಬೇಡಿದನೋ ಆ ವಿಘ್ನೇಶ್ವರನಿಗೆ ನಮಸ್ಕಾರ.

೨. ಪ್ರಿಯೆಯು ಆಲಂಗಿಸಿಕೊಂಡಾಗ ಶಂಕರನೂ ಯಾರ ಆದೇಶದಿಂದ ಕಂಪಿಸುವನೋ ಆ ಮನ್ಮಥನು ಜಗತ್ತನ್ನೆಲ್ಲ ಜಯಿಸುತ್ತಾನೆ.

೩. ಹೀಗೆ ವತ್ಸರಾಜ ಉದಯನನು ವಾಸವದತ್ತೆಯನ್ನು ಪಡೆದುಕೊಂಡು ಕ್ರಮೇಣ ಅವಳ ಸುಖದಲ್ಲೇ ಸಂಪೂರ್ಣವಾಗಿ ಮಗ್ನನಾದನು.

೪. ಮಹಾಮಂತ್ರಿ ಯೌಗಂಧರಾಯಣನೂ ಸೇನಾಪತಿ ರುಮಣ್ವಂತನೂ ಅವನ ರಾಜ್ಯದ ಹೊಣೆಯನ್ನು ರಾತ್ರಿಹಗಲೂ ಹೊತ್ತಿದ್ದರು.

೫. ಮಂತ್ರಿ ಯೌಗಂಧರಾಯಣನು ಒಮ್ಮೆ ಚಿಂತೆಯಿಂದ ರಾತ್ರಿಯ ವೇಳೆಯಲ್ಲಿ ರುಮಣ್ವಂತನನ್ನು ತನ್ನ ಮನೆಗೆ ಕರೆಸಿ ಅವನಿಗೆ ಹೀಗೆ ಹೇಳಿದನು.

---

## ಪ್ರಥಮಸ್ತರಂಗಃ ॥

ನಿರ್ವಿಘ್ನವಿಶ್ವನಿರ್ಮಾಣಸಿದ್ಧಯೇ ಯದನುಗ್ರಹಮ್ ।
ಮನ್ಯೇ ಸ ವವ್ರೇ ಧಾತಾಪಿ ತಸ್ಮೈ ವಿಘ್ನಜಿತೇ ನಮಃ ॥ ೧
ಆಶ್ಲಿಷ್ಯಮಾಣಃ ಪ್ರಿಯಯಾ ಶಂಕರೋಽಪಿ ಯದಾಜ್ಞಯಾ ।
ಉತ್ಕಂಪತೇ ಸ ಭುವನಂ ಜಯತ್ಯಸಮಸಾಯಕಃ ॥ ೨
ಏವಂ ಸ ರಾಜಾ ವತ್ಸೇಶಃ ಕ್ರಮೇಣ ಸುತರಾಮಭೂತ್ ।
ಪ್ರಾಪ್ತವಾಸವದತ್ತಸ್ತತ್ ಸುಖಾಸಕ್ತ್ಯೈಕಮಾನಸಃ ॥ ೩
ಯೌಗಂಧರಾಯಣಶ್ಚಾಸ್ಯ ಮಹಾಮಂತ್ರೀ ದಿವಾನಿಶಮ್ ।
ಸೇನಾಪತೀ ರುಮಣ್ವಾಂಶ್ಚ ರಾಜ್ಯಭಾರಮುದೂಹತುಃ ॥ ೪
ಸ ಕದಾಚಿಚ್ಚ ಚಿಂತಾವಾನ್ ಆನೀಯ ರಜನೌ ಗೃಹಮ್ ।
ನಿಜಗಾದ ರುಮಣ್ವಂತಂ ಮಂತ್ರೀ ಯೌಗಂಧರಾಯಣಃ ॥ ೫

೬ ಈ ವತ್ಸರಾಜನು ಪಾಂಡವರ ವಂಶದಲ್ಲಿ ಹುಟ್ಟಿದವನು. ಇವನಿಗೆ ಈ ಇಡೀ ಭೂಮಿಯೂ ಹಸ್ತಿನಾಪುರವೂ ವಂಶಪಾರಂಪರ್ಯದಿಂದ ಬಂದಿದೆ.

೭ ಜಯಿಸುವ ಇಚ್ಛೆಯಿಲ್ಲದ ಇವನು ಆ ಎಲ್ಲ ಭೂಮಿಯನ್ನೂ ಬಿಟ್ಟು ಕೊಟ್ಟನು. ಈಗ ಇವನ ರಾಜ್ಯ ಕೇವಲ ಈ ಒಂದು ಮಂಡಲದಲ್ಲಿದೆ.

೮ ಹೆಣ್ಣು, ಮದ್ಯ ಮತ್ತು ಬೇಟೆಗಳಲ್ಲಿ ಆಸಕ್ತನಾಗಿ ಇವನು ನಿಶ್ಚಿಂತನಾಗಿ ಇದ್ದುಬಿಟ್ಟಿದ್ದಾನೆ. ರಾಜ್ಯದ ಎಲ್ಲ ಚಿಂತೆಯನ್ನೂ ನಮಗೆ ಒಪ್ಪಿಸಿದ್ದಾನೆ.

೯. ವಂಶಪಾರಂಪರ್ಯವಾಗಿ ಬಂದ ಈ ಸಮಸ್ತ ಭೂಮಿಯನ್ನೊಳಗೊಂಡ ರಾಜ್ಯವನ್ನು ಇವನು ಮತ್ತೆ ಪಡೆದುಕೊಳ್ಳುವಂತೆ ಈಗ ನಾವೇ ಪ್ರಯತ್ನಿಸಬೇಕು.

೧೦. ಹೀಗೆ ಮಾಡಿದರೆ ಮಂತ್ರಿಯ ಕರ್ತವ್ಯವನ್ನೂ ರಾಜಭಕ್ತಿಯನ್ನೂ ನಾವು ನಡೆಸಿಕೊಟ್ಟಂತಾಗುವುದು. ಬುದ್ಧಿಯಿಂದ ಎಲ್ಲವನ್ನೂ ಸಾಧಿಸಲು ಸಾಧ್ಯ. ಅದರ ಬಗೆಗೆ ಈ ಒಂದು ಕಥೆಯನ್ನು ಕೇಳು.

## ಮಹಾಸೇನರಾಜನ ಕಥೆ

೧೧. ಹಿಂದೆ ಮಹಾಸೇನನೆಂಬ ರಾಜನಿದ್ದನು. ಬಲಿಷ್ಠನಾದ ಬೇರೊಬ್ಬ ರಾಜನು ಅವನ ಮೇಲೆ ದಾಳಿ ಮಾಡಿದನು.

---

ಪಾಂಡವಾನ್ವಯಜಾತೋಽಯಂ ವತ್ಸೇಶೋಽಸ್ಯ ಚ ಮೇದಿನೀ ।
ಕುಲಕ್ರಮಾಗತಾ ಕೃತ್ಸ್ನಾ ಪುರಂ ಚ ಗಜಸಾಹ್ವಯಮ್ ॥ ೬
ತತ್ಸರ್ವಮಜಿಗೀಷೇಣ ತ್ಯಕ್ತಮೇತೇನ ಭೂಭೃತಾ ।
ಇಹೈವ ಚಾತ್ರ ಸಂಜಾತಂ ರಾಜ್ಯಮೇಕತ್ರ ಮಂಡಲೇ ॥ ೭
ಸ್ತ್ರೀಮದ್ಯಮೃಗಯಾಸಕ್ತೋ ನಿಶ್ಚಿಂತೋ ಹ್ಯೇಷ ತಿಷ್ಠತಿ ।
ಅಸ್ಮಾಸು ರಾಜ್ಯಚಿಂತಾ ಚ ಸರ್ವಾನೇನ ಸಮರ್ಪಿತಾ ॥ ೮
ತದಸ್ಮಾಭಿಃ ಸ್ವಬುದ್ಧ್ಯೈವ ತಥಾ ಕಾರ್ಯಂ ಯಥೈವ ತತ್ ।
ಸಮಗ್ರಪೃಥಿವೀರಾಜ್ಯಂ ಪ್ರಾಪ್ನೋತ್ಯೇವ ಕ್ರಮಾಗತಮ್ ॥ ೯
ಏವಂ ಕೃತೇ ಹಿ ಭಕ್ತಿಶ್ಚ ಮಂತ್ರಿತಾ ಚ ಕೃತಾ ಭವೇತ್ ।
ಸರ್ವಂ ಚ ಸಾಧ್ಯತೇ ಬುದ್ಧ್ಯಾ ತಥಾ ಚೈತಾಂ ಕಥಾಂ ಶೃಣು ॥ ೧೦
ಆಸೀತ್ ಕಶ್ಚಿನ್ಮಹಾಸೇನ ಇತಿ ನಾಮ್ನಾ ಪುರಾ ನೃಪಃ ।
ಸ ಚಾನ್ಯೇನಾಭಿಯುಕ್ತೋಽಭೂನ್ನೃಪೇಣಾತಿಬಲೀಯಸಾ ॥ ೧೧

೧೨. ತಮ್ಮ ಕರ್ತವ್ಯದಲ್ಲಿ ಲೋಪವನ್ನೆಸಗಿದ್ದ ಅವನ ಮಂತ್ರಿಗಳೆಲ್ಲರೂ ತಮ್ಮ ತಪ್ಪನ್ನು ಮುಚ್ಚಿ ಹಾಕಲು ಒಟ್ಟಿಗೆ ಸೇರಿ ಆ ಮಹಾಸೇನನಿಂದ ಶತ್ರುವಿಗೆ ದಂಡವನ್ನು (ಕಾಣಿಕೆಯನ್ನು) ಕೊಡಿಸಿದರು.

೧೩. ಅಭಿಮಾನಿಯಾಗಿದ್ದ ಆ ರಾಜನು ಹೀಗೆ ದಂಡವನ್ನಿತ್ತ ಮೇಲೆ 'ನಾನೇಕೆ ಶತ್ರುವಿಗೆ ತಲೆ ಬಗ್ಗಿಸಿದೆ ' ಎಂದು ಚಿಂತಿಸುತ್ತಾ ತುಂಬ ಕೊರಗಿದನು.

೧೪. ಈ ರೀತಿಯ ಒಳಗಿನ ಕೊರಗಿನಿಂದ ಅವನಿಗೆ ಹುಣ್ಣೊಂದು ಹುಟ್ಟಿಕೊಂಡಿತು. ಹುಣ್ಣು (ಶರೀರವನ್ನು) ಆವರಿಸಿದಾಗ ನೋವಿನಿಂದ ಆ ರಾಜನು ಪ್ರಾಣವನ್ನೇ ಬಿಡಲು ಇಚ್ಛೈಸಿದನು.

೧೫ ಆಗ ಬುದ್ಧಿಮಂತನಾದ ವೈದ್ಯನೊಬ್ಬನು 'ಆ (ರೋಗವು) ಔಷಧಗಳಿಂದ (ಗುಣಪಡಿಸಲು) ಅಸಾಧ್ಯ' ಎಂದು ಅರಿತು ಆ ರಾಜನಿಗೆ 'ಪ್ರಭು, ತಮ್ಮ ಪತ್ನಿ ಸತ್ತುಹೋದಳು' ಎಂದು ಸುಳ್ಳು ಹೇಳಿದನು.

೧೬ ಅದನ್ನು ಕೇಳಿ ಹಠಾತ್ತನೆ ದುಃಖದಿಂದ ನೆಲದ ಮೇಲೆ ಕುಸಿದುಬಿದ್ದ ರಾಜನ ಹುಣ್ಣು ತಾನೇ ಒಡೆದುಹೋಯಿತು.

೧೭ ರೋಗದಿಂದ ಮುಕ್ತನಾದ ರಾಜ ಮಹಾಸೇನನು ಅದೇ ರಾಣಿಯ ಜೊತೆಯಲ್ಲಿ ದೀರ್ಘಕಾಲ ತನಗೆ ಇಷ್ಟವಾದ ಸುಖಗಳನ್ನು ಅನುಭವಿಸಿ ತನ್ನ ಶತ್ರುಗಳನ್ನು ಮತ್ತೆ ಗೆದ್ದನು.

---

ತತಃ ಸಮೇತ್ಯ ಸಚಿವೈಃ ಸ್ವಕಾರ್ಯಭ್ರಂಶರಕ್ಷಿಭಿಃ ।
ದಾಪಿತಃ ಸ ಮಹಾಸೇನೋ ದಂಡಂ ತಸ್ಮೈ ಕಿಲ ದ್ವಿಷೇ ॥ ೧೨
ದತ್ತದಂಡಶ್ಚ ರಾಜಾಸೌ ಮಾನೀ ಭೃಶಮತಪ್ಯತ ।
ಕಿಂ ಮಯಾ ವಿಹಿತಃ ಶತ್ರೋಃ ಪ್ರಣಾಮ ಇತಿ ಚಿಂತಯನ್ ॥ ೧೩
ತೇನೈವ ಚಾಸ್ಯ ಗುಲ್ಮೋಂತಃ ಶೋಕೇನ ಹ್ಯುದಪದ್ಯತ ।
ಗುಲ್ಮಾಕ್ರಾಂತಶ್ಚ ಶೋಕೇನ ಸ ಮುಮೂರ್ಷುರಭೂನ್ನೃಪಃ ॥ ೧೪
ತತಸ್ತದೌಷಧಾಸಾಧ್ಯಂ ಮತ್ವೈಕೋ ಮತಿಮಾನ್ ಭಿಷಕ್ ।
ಮೃತಾ ತೇ ದೇವ ದೇವೀತಿ ಮಿಥ್ಯಾ ವಕ್ತಿ ಸ್ಮ ತಂ ನೃಪಮ್ ॥ ೧೫
ತಚ್ಛ್ರುತ್ವಾ ಸಹಸಾ ಭೂಮೌ ಪತತಸ್ತಸ್ಯ ಭೂಪತೇಃ ।
ಶೋಕಾವೇಗೇನ ಬಲಿನಾ ಸ ಗುಲ್ಮಃ ಸ್ವಯಮಸ್ಫುಟತ್ ॥ ೧೬
ರೋಗೋತ್ತೀರ್ಣಶ್ಚಿರಂ ದೇವ್ಯಾ ತಯೈವ ಚ ಸಹೇಪ್ಸಿತಾನ್ ।
ಭೋಗಾನ್ ಸ ಬುಭುಜೇ ರಾಜಾ ಜಿಗಾಯ ಚ ರಿಪೂನ್ ಪುನಃ ॥ ೧೭

೧೮. ಹೀಗೆ ಆ ವೈದ್ಯನು ತನ್ನ ಬುದ್ಧಿಯಿಂದ ರಾಜನಿಗೆ ಹಿತವನ್ನುಂಟು ಮಾಡಿದಂತೆ ನಾವೂ ನಮ್ಮ ರಾಜನಿಗೆ ಹಿತವನ್ನು ಮಾಡಿ ಅವನ ಭೂಮಿಯನ್ನು ಗಳಿಸಿಕೊಡೋಣ.

೧೯. ಅದಕ್ಕೆ ಅಡ್ಡಿಯಾಗಿರುವವನೆಂದರೆ ಮಗಧರಾಜ ಪ್ರದ್ಯೋತ. ಯಾವಾಗಲೂ ನಮ್ಮ ಬೆನ್ನು ಹತ್ತಿ ಬರುವ ಅವನಿಗೆ ನಮ್ಮ ಮೇಲೆ ಕೋಪವಿದೆ.

೨೦. ಅವನಿಗೆ ಪದ್ಮಾವತಿ ಎಂಬ ರತ್ನದಂತಹ ಮಗಳಿರುವಳು. ವತ್ಸರಾಜನಿಗೆ ಅವಳನ್ನು ಕೊಡಬೇಕೆಂದು ನಾವು ಕೇಳೋಣ.

೨೧. ವಾಸವದತ್ತೆಯನ್ನು ಗುಟ್ಟಾಗಿ ಒಂದು ಕಡೆ ಇಟ್ಟು ನಮ್ಮ ಬುದ್ಧಿಯನ್ನು ಉಪಯೋಗಿಸಿ ಅವಳ ವಸತಿಗೆ ಬೆಂಕಿಯನ್ನಿಟ್ಟು 'ರಾಣಿ ಸುಟ್ಟು ಹೋದಳು' ಎಂದು ಎಲ್ಲಾ ಕಡೆ ಸುದ್ದಿಯನ್ನು ಹಬ್ಬಿಸೋಣ.

೨೨. ನಾವು ಹಾಗೆ ಮಾಡದಿದ್ದರೆ ಮಗಧರಾಜನು ತನ್ನ ಮಗಳನ್ನು ನಮ್ಮ ರಾಜನಿಗೆ ಕೊಡುವುದಿಲ್ಲ. ಈ ಪ್ರಯೋಜನಕ್ಕಾಗಿ ಅವನನ್ನು ಹಿಂದೆ ನಾನು ಬೇಡಿಕೊಂಡಾಗ ಅವನು ಹೀಗೆ ಹೇಳಿದ್ದನು.

೨೩. "ಅವನಿಗೆ ವಾಸವದತ್ತೆಯಲ್ಲೇ ಅಧಿಕ ಪ್ರೇಮವಿರುವುದರಿಂದ ನನ್ನ ಪ್ರಾಣಕ್ಕಿಂತಲೂ ಹೆಚ್ಚಾದ ಮಗಳನ್ನು ವತ್ಸೇಶ್ವರನಿಗೆ ನಾನು ಕೊಡುವುದಿಲ್ಲ.'

---

ತದ್ಯಥಾ ಸ ಭಿಷಗ್ ಬುದ್ಧ್ಯಾ ಚಕ್ರೇ ರಾಜಹಿತಂ ತಥಾ ।
ವಯಂ ರಾಜಹಿತಂ ಕುರ್ಮಃ ಸಾಧಯಾಮೋಽಸ್ಯ ಮೇದಿನೀಮ್ ॥ ೧೮
ಪರಿಪಂಥೀ ಚ ತತ್ರೈಕಃ ಪ್ರದ್ಯೋತೋ ಮಗಧೇಶ್ವರಃ ।
ಪಾರ್ಷ್ಣಿಗ್ರಾಹಃ ಸ ಹಿ ಸದಾ ಪಶ್ಚಾತ್ ಕೋಪಂ ಕರೋತಿ ನಃ ॥ ೧೯
ತತ್ತಸ್ಯ ಕನ್ಯಕಾರತ್ನಮಸ್ತಿ ಪದ್ಮಾವತೀತಿ ಯತ್ ।
ತದಸ್ಯ ವತ್ಸರಾಜಸ್ಯ ಕೃತೇ ಯಾಚಾಮಹೇ ವಯಮ್ ॥ ೨೦
ಛನ್ನಾಂ ವಾಸವದತ್ತಾಂ ಚ ಸ್ಥಾಪಯಿತ್ವಾ ಸ್ವಬುದ್ಧಿತಃ ।
ದತ್ತ್ವಾಗ್ನಿಂ ವಾಸಕೇ ಬ್ರೂಮೋ ದೇವೀ ದಗ್ಧೇತಿ ಸರ್ವತಃ ॥ ೨೧
ನಾನ್ಯಥಾ ತಾಂ ಸುತಾಂ ರಾಜ್ಞೇ ದದಾತಿ ಮಗಧಾಧಿಪಃ ।
ಏತದರ್ಥಂ ಸ ಹಿ ಮಯಾ ಪ್ರಾರ್ಥಿತಃ ಪೂರ್ವಮುಕ್ತವಾನ್ ॥ ೨೨
ನಾಹಂ ವತ್ಸೇಶ್ವರಾಯೈತಾಂ ದಾಸ್ಯಾಮ್ಯಾತ್ಮಾಧಿಕಾಂ ಸುತಾಮ್ ।
ತಸ್ಯ ವಾಸವದತ್ತಾಯಾಂ ಸ್ನೇಹೋ ಹಿ ಸುಮಹಾನಿತಿ ॥ ೨೩

೨೩. ರಾಣಿ ವಾಸವದತ್ತೆ ಇರುವಾಗ ವತ್ಸರಾಜನೂ ಬೇರೆಯವಳನ್ನು ಮದುವೆ ಮಾಡಿಕೊಳ್ಳುವುದಿಲ್ಲ. ರಾಣಿಯು ಸುಟ್ಟುಹೋದಳು ಎಂಬ ವಾರ್ತೆ ಹಬ್ಬಿದರೆ, ಎಲ್ಲ ಕಾರ್ಯವೂ ನೆರವೇರುತ್ತದೆ.

೨೪. ಪದ್ಮಾವತಿಯು (ವತ್ಸರಾಜನಿಗೆ) ಸಿಕ್ಕಿದರೆ, ಮಗಧರಾಜನು ಅವನ ಸಂಬಂಧಿಯಾಗಿ ಬಿಡುತ್ತಾನೆ. ಆಮೇಲೆ ಅವನು ಸಿಟ್ಟುಮಾಡಿಕೊಳ್ಳುವುದಿಲ್ಲ. ನಮಗೆ ಸಹಾಯಕನೇ ಆಗುತ್ತಾನೆ.

೨೫ ಆಮೇಲೆ ನಾವು ಮೂಡಣ ದಿಕ್ಕನ್ನು ಗೆಲ್ಲಲು ಹೋಗೋಣ. ಅದೇ ಕ್ರಮದಿಂದ ಬೇರೆ ದಿಕ್ಕುಗಳನ್ನೂ ಗೆಲ್ಲೋಣ. ಹೀಗೆ ಸಮಸ್ತ ಭೂಮಂಡಲವನ್ನೂ ವತ್ಸರಾಜನಿಗೆ ಸಾಧಿಸಿಕೊಡೋಣ.

೨೬ ನಾವು ಸರಿಯಾಗಿ ಪ್ರಯತ್ನಪಟ್ಟರೆ ನಮ್ಮ ರಾಜನು ಭೂಮಿಯನ್ನೆಲ್ಲ ಪಡೆದಾನು. ಹಿಂದೆ ದಿವ್ಯವಾಣಿಯು ಹೀಗೇ ನುಡಿದಿತ್ತಲ್ಲವೆ ?

೨೭. ಪ್ರಧಾನಮಂತ್ರಿ ಯೌಗಂಧರಾಯಣನ ಈ ಮಾತುಗಳನ್ನು ಕೇಳಿ ಇದು ಸಾಹಸದ ಕಾರ್ಯ ಎಂದು ಅನುಮಾನಿಸಿ ರುಮಣ್ವಂತನು ಅವನಿಗಿಂತೆಂದನು.

೨೮. ಪದ್ಮಾವತಿಯ ಕಾರಣದಿಂದ ನಾವು ಮಾಡುವ ಮೋಸವು ಒಮ್ಮೆ ನಮಗೇ ತೊಂದರೆಗೆ ಕಾರಣವಾದೀತು. ಈ ವಿಷಯದಲ್ಲಿ ಒಂದು ಕಥೆಯನ್ನು ಕೇಳು.

---

ಸತ್ಯಾಂ ದೇವ್ಯಾಂ ಚ ವತ್ಸೇಶೋ ನೈವಾನ್ಯಾಂ ಪರಿಣೇಷ್ಯತಿ ।
ದೇವೀ ದಗ್ಧೇತಿ ಜಾತಾಯಾಂ ಖ್ಯಾತೌ ಸರ್ವಂ ತು ಸೇತ್ಸ್ಯತಿ ॥ ೨೩
ಪದ್ಮಾವತ್ಯಾಂ ಚ ಲಬ್ಧಾಯಾಂ ಸಂಬಂಧೀ ಮಗಧಾಧಿಪಃ ।
ಪಶ್ಚಾತ್ ಕೋಪಂ ನ ಕುರುತೇ ಸಹಾಯತ್ವಂ ಚ ಗಚ್ಛತಿ ॥ ೨೪
ತತಃ ಪೂರ್ವಾಂ ದಿಶಂ ಜೇತುಂ ಗಚ್ಛಾಮೋಽನ್ಯಾಶ್ಚ ತತ್ಕ್ರಮಾತ್ ।
ಇತ್ಥಂ ವತ್ಸೇಶ್ವರಸ್ಯೈತಾಂ ಸಾಧಯಾಮೋಽಖಿಲಾಂ ಭುವಮ್ ॥ ೨೫
ಕೃತೋದ್ಯೋಗೇಷು ಚಾಸ್ಮಾಸು ಪೃಥಿವೀಮೇಷ ಭೂಪತಿಃ ।
ಪ್ರಾಪ್ನುಯಾದೇವ ಪೂರ್ವಂ ಹಿ ದಿವ್ಯಾ ವಾಗೇವಮಬ್ರವೀತ್ ॥ ೨೬
ಶ್ರುತ್ವೇತಿ ಮಂತ್ರಿವೃಷಭಾದ್ ವಚೋ ಯೌಗಂಧರಾಯಣಾತ್ ।
ಸಾಹಸಂ ಚೈತದಾಶಂಕ್ಯ ರುಮಣ್ವಾಂಸ್ತಮಭಾಷತ ॥ ೨೭
ವ್ಯಾಜಃ ಪದ್ಮಾವತೀಹೇತೋಃ ಕ್ರಿಯಮಾಣಃ ಕದಾಚನ ।
ದೋಷಾಯಾಸ್ಮಾಕಮೇವ ಸ್ಯಾತ್ ತಥಾ ಹ್ಯತ್ರ ಕಥಾಂ ಶೃಣು ॥ ೨೮

## ಕಪಟ ಸಂನ್ಯಾಸಿಯ ಕಥೆ

೩೦. ಗಂಗಾನದಿಯ ದಡದಲ್ಲಿ ಮಾಕಂದಿಕಾ ಎಂಬ ನಗರವಿದೆ. ಅಲ್ಲಿ ಹಿಂದೆ ಮೌನವ್ರತಿಯಾದ ಒಬ್ಬ ಸಂನ್ಯಾಸಿಯು ಇದ್ದನು.

೩೧. ಭಿಕ್ಷೆಯಿಂದ ಜೀವಿಸುತ್ತಿದ್ದ ಅವನು ಅನೇಕ ಸಂನ್ಯಾಸಿಗಳ ಪರಿವಾರದೊಡನೆ ದೇವಾಲಯದೊಳಗೆ ಇದ್ದ ಒಂದು ಚಿಕ್ಕ ಮಠದಲ್ಲಿ ನೆಲೆಸಿದ್ದನು.

೩೨. ಭಿಕ್ಷೆಗಾಗಿ ಒಬ್ಬ ವ್ಯಾಪಾರಿಯ ಮನೆಗೆ ಅವನು ಹೋಗಿದ್ದಾಗ ಶುಭಲಕ್ಷಣಗಳಿಂದ ಕೂಡಿದ ಕನ್ಯೆಯೊಬ್ಬಳು ಭಿಕ್ಷೆಯನ್ನು ತಂದುಕೊಟ್ಟು ಹಿಂದಿರುಗಿದಳು.

೩೩. ಅದ್ಭುತರೂಪದ ಅವಳನ್ನು ನೋಡಿ ಆ ವಂಚಕ ಸಂನ್ಯಾಸಿಯು ಕಾಮವಶನಾಗಿ 'ಅಯ್ಯೋ ಕಷ್ಟ, ಕಷ್ಟ' ಎಂದು ಆ ವ್ಯಾಪಾರಿಗೆ ಕೇಳಿಸುವಂತೆ ಕೂಗಿಕೊಂಡನು.

೩೪. ಅನಂತರ ಭಿಕ್ಷೆಯನ್ನು ಸ್ವೀಕರಿಸಿ ಅವನು ತನ್ನ ಮನೆಗೆ ಹೋದನು. ಇದರಿಂದ ವಿಸ್ಮಿತನಾದ ಆ ವ್ಯಾಪಾರಿಯು ಅಲ್ಲಿಗೆ ಹೋಗಿ ಏಕಾಂತದಲ್ಲಿ ಹೀಗೆ ಪ್ರಶ್ನಿಸಿದನು.

೩೫. "ಇಂದೇಕೆ ನೀನು ಅಕಸ್ಮಾತ್ತಾಗಿ ಮೌನವನ್ನು ಬಿಟ್ಟು ಮಾತನಾಡಿದೆ ?" ಅದನ್ನು ಕೇಳಿ ಸಂನ್ಯಾಸಿಯು ವ್ಯಾಪಾರಿಗೆ ಹೀಗೆ ಹೇಳಿದನು.

---

ಅಸ್ತಿ ಮಾಕಂದಿಕಾ ನಾಮ ನಗರೀ ಜಾಹ್ನವೀತಟೇ ।
ತಸ್ಯಾಂ ಮೌನವ್ರತಃ ಕಶ್ಚಿದಾಸೀತ್ ಪ್ರವ್ರಾಜಕಃ ಪುರಾ ॥ ೩೦
ಸ ಚ ಭಿಕ್ಷಾಶನೋಽನೇಕಪರಿವ್ರಾಟ್ಪರಿವಾರಿತಃ ।
ಆಸ್ತ ದೇವಕುಲಸ್ಯಾಂತರ್ಮಠಿಕಾಯಾಂ ಕೃತಸ್ಥಿತಿಃ ॥ ೩೧
ಪ್ರವಿಷ್ಟೋ ಜಾತು ಭಿಕ್ಷಾರ್ಥಮೇಕಸ್ಯ ವಣಿಜೋ ಗೃಹೇ ।
ಸ ದದರ್ಶ ಶುಭಾಂ ಕನ್ಯಾಂ ಭಿಕ್ಷಾಮಾದಾಯ ನಿರ್ಗತಾಮ್ ॥ ೩೨
ದೃಷ್ಟ್ವಾ ಚಾದ್ಭುತರೂಪಾಂ ತಾಂ ಸ ಕಾಮವಶಗಃ ಶಠಃ ।
ಹಾಹಾ ಕಷ್ಟಮಿತಿ ಸ್ಮಾಹ ವಣಿಜಸ್ತಸ್ಯ ಶೃಣ್ವತಃ ॥ ೩೩
ಗೃಹೀತಭಿಕ್ಷಶ್ಚ ತತೋ ಜಗಾಮ ನಿಲಯಂ ನಿಜಮ್ ।
ತತಸ್ತಂ ಸ ವಣಿಗ್ಗತ್ವಾ ರಹಃ ಪಪ್ರಚ್ಛ ವಿಸ್ಮಯಾತ್ ॥ ೩೪
ಕಿಮದ್ಯೈವಮಕಸ್ಮಾತ್ತ್ವಂ ಮೌನಂ ತ್ಯಕ್ತ್ವೋಕ್ತವಾನಿತಿ ।
ತಚ್ಛ್ರುತ್ವಾ ವಣಿಜಂ ತಂ ಚ ಪರಿವ್ರಾಡೇವಮಬ್ರವೀತ್ ॥ ೩೫

೩೬. ""ಕನ್ಯೆಯಾದ ನಿನ್ನ ಮಗಳಲ್ಲಿ ಕೆಟ್ಟ ಲಕ್ಷಣಗಳಿವೆ. ಅವಳ ಮದುವೆಯಾದರೆ ನೀನು ಹೆಂಡತಿಮಕ್ಕಳೊಡನೆ ನಾಶ ಹೊಂದುವುದು ನಿಶ್ಚಿತ.

೩೭. ಆದ್ದರಿಂದ ಅವಳನ್ನು ನೋಡಿ ನನಗೆ ದುಃಖವಾಯಿತು. ನೀನು ನನ್ನ ಭಕ್ತನಲ್ಲವೆ ? ಆದ್ದರಿಂದ ನಿನಗೋಸ್ಕರ ನಾನು ಮೌನವನ್ನು ಮುರಿದು ಮಾತನಾಡಿದೆ.

೩೮. ಈ ಹುಡುಗಿಯನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ರಾತ್ರಿಯ ವೇಳೆಯಲ್ಲಿ ಗಂಗೆಯಲ್ಲಿ ಬಿಟ್ಟುಬಿಡು. ಪೆಟ್ಟಿಗೆಯ ಮೇಲೆ ಒಂದು ದೀಪವಿರಲಿ."

೩೯. ಹಾಗೆಯೇ ಆಗಲಿ ಎಂದು ಒಪ್ಪಿಕೊಂಡು ವ್ಯಾಪಾರಿಯು ಭಯದಿಂದ ಅಂದೇ ರಾತ್ರಿ ಎಲ್ಲವನ್ನೂ (ಸಂನ್ಯಾಸಿಯು ಹೇಳಿದ್ದ) ಹಾಗೇ ಮಾಡಿದನು. ಪುಕ್ಕಲು ಜನರು ವಿಮರ್ಶೆ ಮಾಡಲಾರರಲ್ಲವೆ ?

೪೦–೪೧. ಸಂನ್ಯಾಸಿಯು ಆಗ ತನ್ನ ಅನುಚರರಿಗೆ "ಗಂಗೆಯ ಬಳಿಗೆ ಹೋಗಿರಿ. ಅಲ್ಲಿ ಮೇಲೆ ದೀಪವಿರುವ ಯಾವುದಾದರೂ ಪೆಟ್ಟಿಗೆಯು ತೇಲುತ್ತಾ ಬರುವುದನ್ನು ನೀವು ಕಂಡರೆ ಗುಟ್ಟಾಗಿ ಅದನ್ನು ಇಲ್ಲಿಗೆ ತಂದುಬಿಡಿ. ಒಳಗೆ ಯಾವುದೇ ಶಬ್ದವಾದರೂ ಪೆಟ್ಟಿಗೆಯನ್ನು ನೀವು ತೆರೆದು ನೋಡಬಾರದು" ಎಂದು ಹೇಳಿದನು.

೪೨. ಆಗಲಿ ಎಂದು ಹೇಳಿ ಅವರು ಗಂಗೆಯ ಬಳಿ ಹೋದರು. ಆದರೆ ಅವರಿಗಿಂತ ಮುಂಚೆ ರಾಜಕುಮಾರನೊಬ್ಬನು ಯಾವುದೋ ಕಾರಣದಿಂದ ಗಂಗೆಯ ಬಳಿ ಬಂದನು.

---

ದುರ್ಲಕ್ಷಣೇಯಂ ಕನ್ಯಾ ತೇ ವಿವಾಹೋಽಸ್ಯಾ ಯದಾ ಭವೇತ್ ।
ತದಾ ಸಸುತದಾರಸ್ಯ ಕ್ಷಯಃ ಸ್ಯಾತ್ತವ ನಿಶ್ಚಿತಮ್ ॥ ೩೬
ತದೇತಾಂ ವೀಕ್ಷ್ಯ ದುಃಖಂ ಮೇ ಜಾತಂ ಭಕ್ತೋ ಹಿ ಮೇ ಭವಾನ್ ।
ತೇನೈವಮುಕ್ತವಾನಸ್ಮಿ ತ್ಯಕ್ತ್ವಾ ಮೌನಂ ಭವತ್ಕೃತೇ ॥ ೩೭
ತದೇಷಾ ಕನ್ಯಕಾ ನಕ್ತಂ ಮಂಜೂಷಾಯಾಂ ನಿವೇಶಿತಾ ।
ಉಪರಿ ನ್ಯಸ್ತದೀಪಾಯಾಂ ಗಂಗಾಯಾಂ ಕ್ಷಿಪ್ಯತಾಂ ತ್ವಯಾ ॥ ೩೮
ತಥೇತಿ ಪ್ರತಿಪದ್ಯೈತದ್ ಗತ್ವಾ ಸೋಽಥ ವಣಿಗ್ ಭಯಾತ್ ।
ನಕ್ತಂ ಚಕ್ರೇ ತಥಾ ಸರ್ವಂ ನಿರ್ವಿಮರ್ಶಾ ಹಿ ಭೀರವಃ ॥ ೩೯
ಪ್ರವ್ರಾಜಕೋಽಪಿ ತತ್ಕಾಲಮುವಾಚಾನುಚರಾನ್ನಿಜಾನ್ ।
ಗಂಗಾಂ ಗಚ್ಛತ ತತ್ರಾಂತರ್ವಹಂತೀಂ ಯಾಂ ಚ ಪಶ್ಯಥ ॥ ೪೦
ಪೃಷ್ಠಸ್ಥದೀಪಾಂ ಮಂಜೂಷಾಂ ಗುಪ್ತಮಾನಯತೇಹ ತಾಮ್ ।
ಉದ್ಘಾಟನೀಯಾ ನ ಚ ಸಾ ಶ್ರುತೇಽಪ್ಯಂತರ್ಧ್ವನಾವಿತಿ ॥ ೪೧
ತಥೇತಿ ಚಾಗತಾ ಯಾವದ್ಗಂಗಾಂ ನ ಪ್ರಾಪ್ನುವಂತಿ ತೇ ।
ರಾಜಪುತ್ರಃ ಕಿಮಪ್ಯೇಕಸ್ತಾವತ್ತತ್ರಾವತರತ್ ॥ ೪೨

೪೩ ವ್ಯಾಪಾರಿಯು ಗಂಗೆಯಲ್ಲಿ ತಳ್ಳಿದ್ದ ಪೆಟ್ಟಿಗೆಯು ಅದರ ಮೇಲಿದ್ದ ದೀಪದ ಗುರುತಿನಿಂದ ರಾಜಕುಮಾರನಿಗೆ ಕಂಡಿತು. ಅವನು ತನ್ನ ಸೇವಕರನ್ನು ಕೂಡಲೇ ಕಳುಹಿಸಿ ಪೆಟ್ಟಿಗೆಯನ್ನು ತರಿಸಿ ಕುತೂಹಲದಿಂದ ತೆರೆದು ನೋಡಿದನು.

೪೪. ಅದರೊಳಗೆ ಅವನು ಮನಸ್ಸಿಗೆ ಹುಚ್ಚು ಹಿಡಿಸುವಂಥ ಅಪೂರ್ವವಾದ ಕನ್ಯೆಯನ್ನು ಕಂಡನು. ಆ ಕ್ಷಣದಲ್ಲೇ ಅವಳನ್ನು ಗಾಂಧರ್ವ ವಿಧಾನದಿಂದ ಮದುವೆ ಮಾಡಿಕೊಂಡನು.

೪೫ ಅನಂತರ ಆ ಪೆಟ್ಟಿಗೆಯೊಳಕ್ಕೆ ಭಯಂಕರವಾದ ಕೋತಿಯೊಂದನ್ನು ಹಾಕಿ ಅದರ ಮೇಲೆ ದೀಪವನ್ನಿಟ್ಟು ಗಂಗೆಯೊಳಗೆ ತೇಲಿಸಿ ಬಿಟ್ಟನು.

೪೬ ಹೀಗೆ ಕನ್ಯಾರತ್ನವನ್ನು ಪಡೆದ ರಾಜಕುಮಾರನು ಅಲ್ಲಿಂದ ತೆರಳಿದ ಮೇಲೆ ಸಂನ್ಯಾಸಿಯ ಶಿಷ್ಯರು ಆ ಪೆಟ್ಟಿಗೆಯನ್ನು ಹುಡುಕುತ್ತಾ ಅಲ್ಲಿಗೆ ಬಂದರು.

೪೭ ಅವರು ಆ ಪೆಟ್ಟಿಗೆಯನ್ನು ನೋಡಿದರು. ಅದನ್ನು ತೆಗೆದುಕೊಂಡು ಹೋಗಿ ಸಂನ್ಯಾಸಿಯ ಬಳಿಗೆ ಒಯ್ದರು. ಅವನು ಸಂತೋಷಪಟ್ಟು ಅವರಿಗಿಂತೆಂದನು.

೪೮. "ನಾನು ಈ ಪೆಟ್ಟಿಗೆಯನ್ನು ಮೇಲೆ ತೆಗೆದುಕೊಂಡು ಹೋಗಿ ಮಂತ್ರವನ್ನು ಸಾಧಿಸುತ್ತೇನೆ. ಈ ರಾತ್ರಿ ನೀವೆಲ್ಲ ಕೆಳಗೆ ಸದ್ದಿಲ್ಲದೆ ನಿದ್ದೆ ಮಾಡಿರಿ."

---

ಸೋಽತ್ರ ತಾಂ ವಣಿಜಾ ಕ್ಷಿಪ್ತಾಂ ಮಂಜೂಷಾಂ ವೀಕ್ಷ್ಯ ದೀಪತಃ ।
ಭೃತ್ಯೈರಾನಾಯ್ಯ ಸಹಸಾ ಕೌತುಕಾದುದಘಾಟಯತ್ ॥ ೪೩
ದದರ್ಶ ಚಾಂತಃ ಕನ್ಯಾಂ ತಾಂ ಹೃದಯೋನ್ಮಾದಕಾರಿಣೀಮ್ ।
ಉಪಯೇಮೇ ಚ ಗಾಂಧರ್ವವಿಧಿನಾ ತಾಂ ಚ ತತ್‌ಕ್ಷಣಾಮ್ ॥ ೪೪
ಮಂಜೂಷಾಂ ತಾಂ ಚ ಗಂಗಾಯಾಂ ತಥೈವೋರ್ಧ್ವಸ್ಥದೀಪಿಕಾಮ್ ।
ಕೃತ್ವಾ ತತ್ಯಾಜ ನಿಕ್ಷಿಪ್ಯ ಘೋರಂ ವಾನರಮಂತರೇ ॥ ೪೫
ಗತೇಽಥ ತಸ್ಮಿನ್ ಸಂಪ್ರಾಪ್ತಕನ್ಯಾರತ್ನೇ ನೃಪಾತ್ಮಜೇ ।
ಆಯಯುಸ್ತಸ್ಯ ಚಿನ್ವಂತಃ ಶಿಷ್ಯಾಃ ಪ್ರವ್ರಾಜಕಸ್ಯ ತೇ ॥ ೪೬
ದದೃಶುಸ್ತಾಂ ಚ ಮಂಜೂಷಾಂ ಗೃಹೀತ್ವಾ ತಸ್ಯ ಚಾಂತಿಕಮ್ ।
ನಿನ್ಯುಃ ಪ್ರವ್ರಾಜಕಸ್ಯೈನಾಂ ಸೋಽಥ ಹೃಷ್ಟೋ ಜಗಾದ ತಾನ್ ॥ ೪೭
ಏಕೋಽಹಂ ಸಾಧಯೇ ಮಂತ್ರಮಾದಾಯೈತಾಮಿಹೋಪರಿ ।
ಅಧಸ್ತೂಷ್ಣೀಂ ಚ ಯುಷ್ಮಾಭಿಃ ಶಯಿತವ್ಯಮಿಮಾಂ ನಿಶಾಮ್ ॥ ೪೮

೪೯. ಎಂದು ಹೇಳಿ ವ್ಯಾಪಾರಿಯ ಮಗಳ ಮೇಲೆ ಆಸೆಪಟ್ಟಿದ್ದ ಆ ಸಂನ್ಯಾಸಿಯು ಮಠದ ಮೇಲಕ್ಕೆ ಪೆಟ್ಟಿಗೆಯನ್ನು ಹೊತ್ತುಕೊಂಡುಹೋಗಿ (ಅದರ ಮುಚ್ಚಳವನ್ನು) ತೆರೆದನು.

೫೦. ಆ ಕೂಡಲೇ ಪೆಟ್ಟಿಗೆಯಿಂದ ಭಯಂಕರಾಕಾರದ, ಅವನೇ ಮಾಡಿದ್ದ ದುರ್ನೀತಿಯೇ ಮೂರ್ತಿವೆತ್ತು ಬಂದಂತಿದ್ದ ಕೋತಿಯು ಹೊರಗೆ ಬಂದು ಅವನನ್ನು ಅಟ್ಟಿಸಿಕೊಂಡು ಬಂದಿತು.

೫೧. ಹೊರಬಂದ ಆ ಕ್ಷಣದಲ್ಲೇ ಕೋಪದಿಂದ ಆ ಕೋತಿಯು ಶಿಕ್ಷೆ ಕೊಡುವುದು ಹೇಗೆಂಬುದನ್ನು ತಿಳಿದಿದ್ದಂತೆ ಆ ಪಾಪಿ ಸಂನ್ಯಾಸಿಯ ಮೂಗನ್ನು ಹಲ್ಲುಗಳಿಂದಲೂ, ಕಿವಿಗಳನ್ನು ಉಗುರುಗಳಿಂದಲೂ ಕಚ್ಚಿ ಕತ್ತರಿಸಿಹಾಕಿತು.

೫೨. ಆ ಸ್ಥಿತಿಯಲ್ಲಿ ಆ ಸಂನ್ಯಾಸಿ ಅಲ್ಲಿಂದ ಇಳಿದನು. ಅವನನ್ನು ನೋಡುತ್ತಿದ್ದ ಶಿಷ್ಯರು ಹೇಗೋ ಪ್ರಯತ್ನಪಟ್ಟು ನಗುವನ್ನು ತಡೆದುಕೊಂಡರು.

೫೩. ಬೆಳಗಾದ ಮೇಲೆ ವಿಷಯವನ್ನು ತಿಳಿದ ಎಲ್ಲ ಜನರೂ ನಕ್ಕರು. ಆ ವ್ಯಾಪಾರಿಯೂ, ಒಳ್ಳೆಯ ಗಂಡನನ್ನು ಪಡೆದ ಅವನ ಮಗಳೂ ಸಂತೋಷಪಟ್ಟರು.

೫೪. ಆ ಸಂನ್ಯಾಸಿಯು ಹಾಸ್ಯಕ್ಕೆ ಈಡಾದ ಹಾಗೆ ನಮ್ಮ ಕಪಟಪ್ರಯೋಗವು ಸಫಲವಾಗದಿದ್ದರೆ ನಾವೂ ಎಂದೋ ಒಂದು ದಿನ ಹಾಸ್ಯಾಸ್ಪದರಾಗುವೆವು.

---

ಇತ್ಯುಕ್ತ್ವಾ ತಾಂ ಸ ಮಂಜೂಷಾಮಾರೋಪ್ಯ ಮಠಿಕೋಪರಿ ।
ಸ ಪರಿವ್ರಾಡ್ ವಿವೃತವಾನ್ ವಣಿಕ್ಕನ್ಯಾಭಿಲಾಷುಕಃ ॥ ೪೯
ತತಶ್ಚ ತಸ್ಯಾ ನಿರ್ಗತ್ಯ ವಾನರೋ ಭೀಷಣಾಕೃತಿಃ ।
ತಮಭ್ಯಧಾವತ್ ಸ್ವಕೃತೋ ಮೂರ್ತಿಮಾನಿವ ದುರ್ನಯಃ ॥ ೫೦
ಸ ತಸ್ಯ ದಶನೈರ್ನಾಸಾಂ ನಖೈಃ ಕರ್ಣೌ ಚ ತತ್ಕ್ಷಣಮ್ ।
ಚಿಚ್ಛೇದ ಪಾಪಸ್ಯ ಕಪಿರ್ನಿಗ್ರಹಜ್ಞ ಇವ ಕ್ರುಧಾ ॥ ೫೧
ತಥಾಭೂತೋಽಥ ಸ ತತಃ ಪರಿವ್ರಾಡವತೀರ್ಣವಾನ್ ।
ಯತ್ನಸ್ತಂಭಿತಹಾಸಾಶ್ಚ ಶಿಷ್ಯಾಸ್ತಂ ದದೃಶುಸ್ತದಾ ॥ ೫೨
ಪ್ರಾತರ್ಬುದ್ಧ್ವಾ ಚ ತತ್ಸರ್ವಂ ಜಹಾಸ ಸಕಲೋ ಜನಃ ।
ನನಂದ ಸ ವಣಿಕ್ ಸಾ ಚ ತತ್ಸುತಾ ಪ್ರಾಪ್ತಸತ್ಪತಿಃ ॥ ೫೩
ಏವಂ ಯಥಾ ಸ ಹಾಸ್ಯತ್ವಂ ಗತಃ ಪ್ರವ್ರಾಜಕಸ್ತಥಾ ।
ವ್ಯಾಜಪ್ರಯೋಗಸ್ಯಾಸಿದ್ಧೌ ವಯಂ ಗಚ್ಛೇಮ ಜಾತುಚಿತ್ ॥ ೫೪

೫೫. ಏಕೆಂದರೆ ವಾಸವದತ್ತೆಯ ವಿರಹವು ರಾಜನಿಗೆ ಅನೇಕ ಅಪಾಯಗಳನ್ನು ತಂದೊಡ್ಡಬಹುದು." ಎಂದು ರುಮಣ್ವಂತನು ಹೇಳಿದಾಗ ಯೌಗಂಧರಾಯಣನು ಹೀಗೆ ನುಡಿದನು.

೫೬. "ಬೇರೆ ಯಾವ ರೀತಿಯಲ್ಲೂ ನಮ್ಮ ಉದ್ದೇಶವು ಸಿದ್ಧಿಸದು. ಪ್ರಯತ್ನವನ್ನೇ ಮಾಡದಿದ್ದರೆ ನಿಶ್ಚಿತವಾಗಿ ಅದು ಸಿದ್ಧಿಸುವುದಿಲ್ಲ. ರಾಜನು ಚಟಗಳನ್ನು ಬೆಳೆಸಿಕೊಂಡಿರುವುದರಿಂದ ಸುಮ್ಮನೆ ಇದ್ದರೆ ಈ ರಾಜ್ಯವೂ ಹೋಗಬಹುದು.

೫೭. ಇದುವರೆಗೆ ನಮಗೆ ದಕ್ಕಿರುವ ಮಂತ್ರಿತ್ವದ ಕೀರ್ತಿಯೂ ಮಸುಕಾಗಬಹುದು. ಪ್ರಭು ನಮಗೆ ಮಾಡಿದ ಸಂಮಾನಕ್ಕೆ ನಾವು ಅನರ್ಹರೂ ಆದೇವು.

೫೮. ತನ್ನ ಶಕ್ತಿಯಿಂದಲೇ ಸಿದ್ಧಿಯನ್ನು ಪಡೆಯುವ ರಾಜನಿಗೆ ಅವನ ಬುದ್ಧಿಯೇ ಉಪಕರಣವೆನ್ನುತ್ತಾರೆ. ಅಂಥ ರಾಜರಿಗೆ ಮಾಡಿದ ಅಥವಾ ಮಾಡದ ಯಾವುದೇ ಕೆಲಸದಲ್ಲಿ ಯಾವನು ತಾನೆ ಮಂತ್ರಿಯೆನಿಸಿಯಾನು ?

೫೯. ಆದರೆ ಸಚಿವರ ಶಕ್ತಿಯಿಂದ ಸಿದ್ಧಿಯನ್ನು ಪಡೆಯುವ ರಾಜನಿಗೆ ಸಚಿವರ ಪ್ರಜ್ಞೆಯೇ ಕಾರ್ಯಸಾಧನ. ಆ ಸಚಿವರು ಉತ್ಸಾಹಶೂನ್ಯರಾದರೆ (ರಾಜ್ಯದ) ಲಕ್ಷ್ಮಿಗೆ (ಎಳ್ಳು) ನೀರನ್ನು ಬಿಟ್ಟಂತೆಯೇ ಸರಿ.

೬೦. ಮತ್ತೆ ವಾಸವದತ್ತೆಯ ತಂದೆ ಚಂಡಮಹಾಸೇನನ ಬಗ್ಗೆ ನಿನಗೆ ಸಂದೇಹವಿರುವುದಾದರೆ ಕೇಳು. ಅವನೂ ಅವನ ಮಕ್ಕಳೂ ರಾಣಿಯೂ ನನ್ನ ಮಾತಿನಂತೆ ನಡೆದುಕೊಳ್ಳುವರು."

---

ಬಹುದೋಷೋ ಹಿ ವಿರಹೋ ರಾಜ್ಞೋ ವಾಸವದತ್ತಯಾ ।  
ಏವಂ ರುಮಣ್ವತೋಕ್ತೇ ಸನ್ನಾಹ ಯೌಗಂಧರಾಯಣಃ ॥ ೫೫  
ನಾನ್ಯಥೋದ್ಯೋಗಸಿದ್ಧಿಃ ಸ್ಯಾದನುದ್ಯೋಗೇ ಚ ನಿಶ್ಚಿತಮ್ ।  
ರಾಜನಿ ವ್ಯಸನಿನ್ಯೇತನ್ನಶ್ಯೇದಪಿ ಯಥಾಸ್ಥಿತಮ್ ॥ ೫೬  
ಲಬ್ಧಾಪಿ ಮಂತ್ರಿತಾಖ್ಯಾತಿರಸ್ಮಾಕಂ ಚಾನ್ಯಥಾ ಭವೇತ್ ।  
ಸ್ವಾಮಿಸಂಭಾವನಾಯಾಶ್ಚ ಭವೇಮ ವ್ಯಭಿಚಾರಿಣಃ ॥ ೫೭  
ಸ್ವಾಯತ್ತಸಿದ್ಧೇ ರಾಜ್ಞೋ ಹಿ ಪ್ರಜ್ಞೋಪಕರಣಂ ಮತಾ ।  
ಸಚಿವಃ ಕೋ ಭವೇತ್ತೇಷಾಂ ಕೃತೇ ವಾಪ್ಯಥವಾಕೃತೇ ॥ ೫೮  
ಸಚಿವಾಯತ್ತಸಿದ್ಧೇಸ್ತು ತತ್ಪ್ರಜ್ಞೈವಾರ್ಥಸಾಧನಮ್ ।  
ತ ಏವ ಚೇನ್ನಿರುತ್ಸಾಹಾಃ ಶ್ರಿಯೋ ದತ್ತೋ ಜಲಾಂಜಲಿಃ ॥ ೫೯  
ಅಥದೇವೀಪಿತುಶ್ಚಂಡಮಹಾಸೇನಾದ್ವಿಶಂಕಸೇ ।  
ಸ ಸಪುತ್ರಶ್ಚ ದೇವೀ ಚ ವಚಃ ಕುರುತ ಏವ ಮೇ ॥ ೬೦

೬೧. ಧೀರರ ಮುಂದಾಳು ಯೌಗಂಧರಾಯಣನು ಹೀಗೆ ಹೇಳಿದಾಗಲೂ ತಮ್ಮಿಂದ ತಪ್ಪಾಗಬಹುದೆಂದು ಶಂಕೆಯನ್ನು ಹೊಂದಿದ್ದ ರುಮಣ್ವಂತನು ಮತ್ತೆ ಹೀಗೆಂದನು.

೬೨. ""ಪ್ರೀತಿಸುವ ಹೆಣ್ಣಿನ ವಿರಹದ ನೋವಿನಿಂದ ವಿವೇಕಿಯಾದವನೂ ಕಂಗೆಡುತ್ತಾನೆ. ಇನ್ನು ವತ್ಸರಾಜನು ಏನಾದಾನು ? ಈ ವಿಷಯದಲ್ಲೊಂದು ಕಥೆಯನ್ನು ಕೇಳು.

## ದೇವಸೇನ ಮಹಾರಾಜನ ಕಥೆ

೬೩. ಹಿಂದೆ ಬುದ್ಧಿಮಂತರಲ್ಲಿ ಶ್ರೇಷ್ಠನಾಗಿದ್ದ ದೇವಸೇನನೆಂಬ ರಾಜನಿದ್ದನು. ಶ್ರಾವಸ್ತಿ ಎಂಬ ನಗರವು ಅವನ ರಾಜಧಾನಿಯಾಗಿತ್ತು.

೬೪. ಆ ನಗರದಲ್ಲಿ ಅಪಾರ ಹಣವುಳ್ಳ ಒಬ್ಬ ವ್ಯಾಪಾರಿ ಇದ್ದನು. ಅವನಿಗೆ ಅಪ್ರತಿಮ ಸುಂದರಿಯಾಗಿದ್ದ ಮಗಳೊಬ್ಬಳು ಹುಟ್ಟಿದಳು.

೬೫. ಉನ್ಮಾದಿನೀ ಎಂಬ ಹೆಸರಿನಿಂದ ಆ ಕನ್ಯೆ ಪ್ರಸಿದ್ಧಳಾದಳು. ಅವಳ ರೂಪವನ್ನು ನೋಡಿ ಎಲ್ಲ ಜನರೂ ಉನ್ಮತ್ತರಾಗುತ್ತಿದ್ದರು.

೬೬. ರಾಜನಿಗೆ ತಿಳಿಸದೆ ನನ್ನ ಮಗಳನ್ನು ಯಾರಿಗೂ (ಮದುವೆ ಮಾಡಿ) ಕೊಡಬಾರದು. (ಹಾಗೆ ಮಾಡಿದರೆ) ಅವನು ಸಿಟ್ಟು ಮಾಡಿಕೊಳ್ಳಬಹುದು ಎಂದು ಅವಳ ತಂದೆ ಚಿಂತಿಸುತ್ತಿದ್ದನು.

---

ಇತ್ಯುಕ್ತವಂತಂ ಧೀರಾಣಾಂ ಧುರ್ಯಂ ಯೌಗಂಧರಾಯಣಮ್ ।
ಪ್ರಮಾದಶಂಕಿಹೃದಯೋ ರುಮಣ್ವಾನ್ ಪುನರಬ್ರವೀತ್ ॥ ೬೧
ಅಭೀಷ್ಟಸ್ತ್ರೀವಿಯೋಗಾರ್ತ್ಯಾ ಸುವಿವೇಕೋಽಪಿ ಬಾಧ್ಯತೇ ।
ಕಿಂ ಪುನರ್ವತ್ಸರಾಜೋಽಯಮತ್ರ ಚೈತಾಂ ಕಥಾಂ ಶೃಣು ॥ ೬೨
ಪುರಾಭೂದ್ದೇವಸೇನಾಖ್ಯೋ ರಾಜಾ ಮತಿಮತಾಂ ವರಃ ।
ಶ್ರಾವಸ್ತೀತಿ ಪುರೀ ತಸ್ಯ ರಾಜಧಾನೀ ಬಭೂವ ಚ ॥ ೬೩
ತಸ್ಯಾಂ ಚ ಪುರ್ಯಾಮಭವದ್ ವಣಿಗೇಕೋ ಮಹಾಧನಃ ।
ತಸ್ಯೋದಪದ್ಯತಾನನ್ಯಸದೃಶೀ ದುಹಿತಾ ಕಿಲ ॥ ೬೪
ಉನ್ಮಾದಿನೀತಿ ನಾಮ್ನಾ ಚ ಕನ್ಯಕಾ ಸಾಪಿ ಪಪ್ರಥೇ ।
ಉನ್ಮಾದ್ಯತಿ ಗತಸ್ತಸ್ಯಾ ರೂಪಂ ದೃಷ್ಟ್ವಾಖಿಲೋ ಜನಃ ॥ ೬೫
ತನಯೇಯಮನಾವೇದ್ಯ ರಾಜ್ಞೇ ದೇಯಾ ಕ್ವಚಿನ್ನ ಮೇ ।
ಸ ಹಿ ಕುಪ್ಯೇದಿತಿ ಪಿತಾ ತಸ್ಯಾಃ ಸೋಽಚಿಂತಯದ್ ವಣಿಕ್ ॥ ೬೬

೬೭. ಆದ್ದರಿಂದ ಅವನು ದೇವಸೇನರಾಜನ ಬಳಿ ಹೋಗಿ "ದೇವ, ನನಗೆ ರತ್ನದಂತಹ ಒಬ್ಬ ಮಗಳಿದ್ದಾಳೆ. ತಮಗೆ ಉಪಯೋಗವಾಗುವುದಾದರೆ ಸ್ವೀಕರಿಸಿ" ಎಂದು ಬಿನ್ನವಿಸಿದನು.

೬೮. ಅದನ್ನು ಕೇಳಿ ಆ ರಾಜನು 'ಆ ಕನ್ಯೆ ಒಳ್ಳೆಯ ಲಕ್ಷಣಗಳನ್ನುಳ್ಳವಳೋ ಅಲ್ಲವೋ ನೋಡಿಕೊಂಡು ಬನ್ನಿ' ಎಂದು ಹೇಳಿ ನಂಬಿಕೆಗೆ ಅರ್ಹರಾದ ಕೆಲವರು ಬ್ರಾಹ್ಮಣರನ್ನು ಕಳುಹಿಸಿದನು.

೬೯. ಆಗಬಹುದು ಎಂದು ಹೇಳಿ ಆ ಬ್ರಾಹ್ಮಣರು ಅಲ್ಲಿಗೆ ಹೋಗಿ ಆ ಉನ್ಮಾದಿನಿಯನ್ನು ನೋಡಿದಷ್ಟರಿಂದಲೇ ತಾವೇ ಕಾಮವಿಕಾರಗಳಿಗೆ ಈಡಾಗಿ ತಳಮಳಗೊಂಡರು.

೭೦. ಇವಳನ್ನು ಮದುವೆ ಮಾಡಿಕೊಂಡರೆ ಇವಳಲ್ಲೇ ಮನಸ್ಸನ್ನಿಟ್ಟು ರಾಜನು ರಾಜಕಾರ್ಯಗಳನ್ನು ಬಿಟ್ಟುಬಿಡುತ್ತಾನೆ. ಎಲ್ಲವೂ ಆಗ ಹಾಳಾಗುತ್ತದೆ. ಆದ್ದರಿಂದ ಇವಳಿಂದ ಏನು ಪ್ರಯೋಜನ ?

೭೧. ಎಂದು ತಮ್ಮ ಸಾಮಾನ್ಯಸ್ಥಿತಿಗೆ ಮರಳಿದ ಆ ಬ್ರಾಹ್ಮಣರು ಮಂತ್ರಾಲೋಚನೆಯನ್ನು ಮಾಡಿ ಹಿಂದಿರುಗಿದರು. 'ಆ ಹುಡುಗಿಯಲ್ಲಿ ಕೆಟ್ಟ ಲಕ್ಷಣಗಳಿವೆ' ಎಂದು ರಾಜನಿಗೆ ಸುಳ್ಳು ಹೇಳಿದರು.

೭೨. ರಾಜನಿಂದ ಹೀಗೆ ಪರಿತ್ಯಕ್ತಳಾದ ಉನ್ಮಾದಿನಿಗೆ ಒಳಗೇ ಅವಮಾನ ಆದಂತಾಯಿತು. ವ್ಯಾಪಾರಿಯು ಅವಳನ್ನು ರಾಜನ ಸೇನಾಪತಿಗೆ ಕೊಟ್ಟನು.

---

ತತಶ್ಚ ಗತ್ವಾ ರಾಜಾನಂ ದೇವಸೇನಂ ವ್ಯಜಿಜ್ಞಪತ್ ।
ದೇವಾಸ್ತಿ ಕನ್ಯಾರತ್ನಂ ಮೇ ಗೃಹ್ಯತಾಮುಪಯೋಗಿ ಚೇತ್ ॥ ೬೭
ತಚ್ಛ್ರುತ್ವಾ ವ್ಯಸೃಜದ್ ರಾಜಾ ಸೋಽಥ ಪ್ರತ್ಯಯಿತಾನ್ ದ್ವಿಜಾನ್ ।
ಗತ್ವಾ ಸುಲಕ್ಷಣಾ ಸಾ ವಾ ನ ವೇತ್ಯಾಲೋಚ್ಯತಾಮಿತಿ ॥ ೬೮
ತಥೇತಿ ತೇ ದ್ವಿಜಾ ಗತ್ವಾ ತಾಂ ದೃಷ್ಟ್ವೈವ ವಣಿಕ್‌ಸುತಾಮ್ ।
ಉನ್ಮಾದಿನೀಂ ಯಯುಃ ಕ್ಷೋಭಂ ಸದ್ಯಃ ಸಂಜಾತಮನ್ಮಥಾಃ ॥ ೬೯
ರಾಜ್ಞಾ ಸ್ಯಾಂ ಪರಿಣೀತಾಯಾಮೇತದೇಕಮನಾಸ್ತ್ಯಜೇತ್ ।
ರಾಜಕಾರ್ಯಾಣಿ ನಶ್ಯೇಚ್ಚ ಸರ್ವಂ ತಸ್ಮಾತ್ ಕಿಮೇತಯಾ ॥ ೭೦
ಇತಿ ಚ ಪ್ರಕೃತಿಂ ಪ್ರಾಪ್ತಾ ದ್ವಿಜಾಃ ಸಂಮಂತ್ರ್ಯ ತೇ ಗತಾಃ ।
ಕುಲಕ್ಷಣಾ ಸಾ ಕನ್ಯೇತಿ ಮಿಥ್ಯಾ ರಾಜಾನಮಬ್ರುವನ್ ॥ ೭೧
ತತೋ ರಾಜ್ಞಾ ಪರಿತ್ಯಕ್ತಾಂ ಸ ತಾಮುನ್ಮಾದಿನೀಂ ವಣಿಕ್ ।
ತತ್ಸೇನಾಪತಯೇ ಪ್ರಾದಾದಂತರ್ಜಾತವಿಮಾನನಾಮ್ ॥ ೭೨

೭೩. ಗಂಡನ ಮನೆಯ ಉಪ್ಪರಿಗೆಯಲ್ಲಿ ನಿಂತಿದ್ದ ಉನ್ಮಾದಿನಿಯು ಆ ರಾಜನು ಒಮ್ಮೆ ಆ ದಾರಿಯಲ್ಲಿ ಬಂದಾಗ ಅದನ್ನು ತಿಳಿದು ತನ್ನನ್ನು ತೋರಿಸಿಕೊಂಡಳು.

೭೪. ಮನ್ಮಥನು ಪ್ರಯೋಗಿಸಿದ ವಿಶ್ವಸಂಮೋಹನೌಷಧಿಯೋ ಎಂಬಂತಿದ್ದ ಅವಳನ್ನು ನೋಡಿದ ಕೂಡಲೇ ರಾಜನು ಹುಚ್ಚು ಹಿಡಿದವನಂತಾದನು.

೭೫. ಮನೆಗೆ ಹೋದ ಮೇಲೆ ತಾನು ಹಿಂದೆ (ಬೇಡವೆಂದು) ತಿರಸ್ಕರಿಸಿದ ಕನ್ಯೆಯೇ ಅವಳು ಎಂಬುದನ್ನರಿತು ಮನಸ್ಸನ್ನು ಕೆಡಿಸಿಕೊಂಡು ರಾಜನು ತೀವ್ರವಾದ ಜ್ವರದ ಬೇಗೆಯ ನೋವಿನಿಂದ ನರಳಿದನು.

೭೬. "ಅವಳು ದಾಸಿ, ಪರಸ್ತ್ರೀ ಅಲ್ಲ ಎಂದು ಪ್ರಭುಗಳು ಅವಳನ್ನು ಸ್ವೀಕರಿಸಲಿ. ಅಥವಾ ಅವಳನ್ನು ನಾನೇ ಬಿಟ್ಟುಬಿಡುತ್ತೇನೆ. ಆಮೇಲೆ ಪ್ರಭುಗಳು ದೇವಸ್ಥಾನದಲ್ಲಿ ಅವಳನ್ನು ಸ್ವೀಕರಿಸಲಿ"

೭೭. ಎಂದು ಅವಳ ಗಂಡನಾಗಿದ್ದ ಸೇನಾಪತಿಯು ಪ್ರಾರ್ಥಿಸಿದನು. ಆಗ ಪ್ರಯತ್ನಪಟ್ಟು ರಾಜನು ಹೀಗೆಂದನು.

೭೮. "ನಾನು ಪರಸ್ತ್ರೀಯನ್ನು ಸ್ವೀಕರಿಸುವುದಿಲ್ಲ. ಅವಳನ್ನು ನೀನು ತ್ಯಜಿಸಿದರೆ ನಿನ್ನ ಧರ್ಮ ಹಾಳಾಗುತ್ತದೆ. ಅಲ್ಲದೆ ನಾನು ನಿನಗೆ ದಂಡವನ್ನು ವಿಧಿಸಬೇಕಾಗುತ್ತದೆ.

---

ಭರ್ತೃವೇಶ್ಮನಿ ಹರ್ಮ್ಯಸ್ಥಾ ಸಾಥ ಜಾತು ತಮಾಗತಮ್ ।
ರಾಜಾನಂ ತೇನ ಮಾರ್ಗೇಣ ಬುದ್ಧ್ವಾತ್ಮಾನಮದರ್ಶಯತ್ ॥ ೭೩
ದೃಷ್ಟ್ವೈವ ಚ ಸ ತಾಂ ರಾಜಾ ಜಗತ್ಸಂಮೋಹನೌಷಧಿಮ್ ।
ಪ್ರಯುಕ್ತಾಮಿವ ಕಾಮೇನ ಜಾತೋನ್ಮಾದ ಇವಾಭವತ್ ॥ ೭೪
ಗತ್ವಾ ಸ್ವಭವನಂ ಜ್ಞಾತ್ವಾ ತಾಂ ಚ ಪೂರ್ವಾವಧೀರಿತಾಮ್ ।
ಉನ್ಮನಾ ಜ್ವರಸಂತಾಪಪೀಡಾಂ ಗಾಢಮವಾಪ ಸಃ ॥ ೭೫
ಸಾ ದಾಸೀ ನ ಪರಸ್ತ್ರೀತಿ ಗೃಹ್ಯತಾಂ ಯದಿ ವಾಪ್ಯಹಮ್ ।
ತ್ಯಜಾಮಿ ತಾಂ ದೇವಕುಲೇ ಸ್ವೀಕರೋತು ತತಃ ಪ್ರಭುಃ ॥ ೭೬
ಇತಿ ತೇನ ಚ ತದ್ಭರ್ತ್ರಾ ಸ್ವಸೇನಾಪತಿನಾ ತತಃ ।
ಅಭ್ಯರ್ಥ್ಯಮಾನೋ ಯತ್ನೇನ ಜಗಾದೈವಂ ಸ ಭೂಪತಿಃ ॥ ೭೭
ನಾಹಂ ಪರಸ್ತ್ರೀಮಾದಾಸ್ಯೇ ತ್ವಂ ವಾ ತ್ಯಕ್ಷ್ಯಸಿ ತಾಂ ಯದಿ ।
ತತೋ ನಂಕ್ಷ್ಯತಿ ತೇ ಧರ್ಮೋ ದಂಡ್ಯೋ ಮೇ ಚ ಭವಿಷ್ಯಸಿ ॥ ೭೮

೭೯. ಅದನ್ನು ಕೇಳಿ ಮಂತ್ರಿಗಳೂ ಇತರರೂ ಸುಮ್ಮನೆ ನಿಂತರು. ಆ ರಾಜನು ಕಾಮಜ್ವರದಿಂದಲೇ ಮರಣ ಹೊಂದಿದನು.

೮೦. ಹೀಗೆ ಆ ರಾಜನು ಸ್ವಯಂ ಧೀರನಾಗಿದ್ದೂ ಉನ್ಮಾದಿನಿಯಿಲ್ಲದೆ ನಾಶಹೊಂದಿದನು. ವಾಸವದತ್ತೆ ಇಲ್ಲದಿದ್ದರೆ ವತ್ಸರಾಜನು ಹೇಗೆ ಆಗಬಹುದು ?"

೮೧. ರುಮಣ್ವಂತನು ಹೇಳಿದುದನ್ನು ಕೇಳಿ ಯೌಗಂಧರಾಯಣನು ಮತ್ತೆ ಇಂತೆಂದನು. "ಕಾರ್ಯದ ಕಡೆ ಗಮನವನ್ನು ಕೊಡುವ ರಾಜರು ತೊಂದರೆಯನ್ನು ಸಹಿಸಿಕೊಳ್ಳುತ್ತಾರೆ.

೮೨. ರಾವಣನ ವಿನಾಶಕ್ಕಾಗಿ ದೇವತೆಗಳು ಯುಕ್ತಿಯನ್ನು ಮಾಡಿ ರಾಮನನ್ನು ಕೆಲಸದಲ್ಲಿ ತೊಡಗಿಸಿದಾಗ ಅವನು ಸೀತಾದೇವಿಯ ವಿರಹದ ನೋವನ್ನು ಸಹಿಸಲಿಲ್ಲವೇನು ?'

೮೩. ಈ ಮಾತನ್ನು ಕೇಳಿದ ಮೇಲೂ ರುಮಣ್ವಂತನು ಮತ್ತೆ ಹೇಳಿದನು. "ಆ ರಾಮ ಮುಂತಾದವರು ದೇವತೆಗಳು. ಅವರ ಮನಸ್ಸು ಎಲ್ಲವನ್ನೂ ಸಹಿಸಬಲ್ಲುದು.

೮೪. ಆದರೆ ಮನುಷ್ಯರ ಮನಸ್ಸು ಸಹಿಸಲಾರದಂತಹುದು. ಅದರ ಬಗೆಗೆ ಒಂದು ಕಥೆಯನ್ನು ಕೇಳು.

## ಇಲ್ಲಕನೆಂಬ ವ್ಯಾಪಾರಿಯ ಕಥೆ

ಇಲ್ಲಿ ಅನೇಕ ರತ್ನಗಳಿಂದ ಶ್ರೀಮಂತವಾದ ಮಥುರಾ ಎಂಬ ದೊಡ್ಡ ನಗರವಿದೆ.

---

ತಚ್ಛ್ರುತ್ವಾ ಮಂತ್ರಿಣೋಽನ್ಯೇ ಚ ತೂಷ್ಣೀಮಾಸನ್ ಸ ಚ ಕ್ರಮಾತ್ ।
ಸ್ಮರಜ್ವರೇಣ ತೇನೈವ ನೃಪಃ ಪಂಚತ್ವಮಾಯಯೌ ॥ ೭೯
ಏವಂ ಸ ರಾಜಾ ನಷ್ಟೋಽಭೂದ್ಧೀರೋಽಪ್ಯುನ್ಮಾದಿನೀಂ ವಿನಾ ।
ವಿನಾ ವಾಸವದತ್ತಾಂ ತು ವತ್ಸರಾಜಃ ಕಥಂ ಭವೇತ್ ॥ ೮೦
ಏತದ್ ರುಮಣ್ವತಃ ಶ್ರುತ್ವಾ ಪುನರ್ಯೌಗಂಧರಾಯಣಃ ।
ಉವಾಚ ಸಹ್ಯತೇ ಕ್ಲೇಶೋ ರಾಜಭಿಃ ಕಾರ್ಯದರ್ಶಿಭಿಃ ॥ ೮೧
ರಾವಣೋಚ್ಛಿತ್ತಯೇ ದೇವೈಃ ಕೃತ್ವಾ ಯುಕ್ತಿಂ ನಿಯೋಜಿತಃ ।
ಸೀತಾದೇವ್ಯಾ ನ ಕಿಂ ರಾಮೋ ವಿಷೇಹೇ ವಿರಹವ್ಯಥಾಮ್ ॥ ೮೨
ಏತಚ್ಛ್ರುತ್ವಾ ತು ಭೂಯೋಽಪಿ ರುಮಣ್ವಾನಭ್ಯಭಾಷತ ।
ತೇ ಹಿ ರಾಮದಯೋ ದೇವಾಸ್ತೇಷಾಂ ಸರ್ವಸಹಂ ಮನಃ ॥ ೮೩
ಅಸಹಂ ತು ಮನುಷ್ಯಾಣಾಂ ತಥಾ ಚ ಶ್ರೂಯತಾಂ ಕಥಾ ।
ಅಸ್ತೀಹ ಬಹುರತ್ನಾಢ್ಯಾ ಮಥುರೇತಿ ಮಹಾಪುರೀ ॥ ೮೪

೮೫. ಅದರಲ್ಲಿ ಇಲ್ಲಕ ಎಂಬ ಹೆಸರಿನ ಒಬ್ಬ ವ್ಯಾಪಾರಿಪುತ್ರನು ಇದ್ದನು. ಅವನಿಗೆ ಅವನಲ್ಲೇ ಮನಸ್ಸನ್ನು ನೆಟ್ಟಿದ್ದ ಪ್ರಿಯಳಾದ ಭಾರ್ಯೆ ಇದ್ದಳು.

೮೬. ಆ ವಣಿಕ್‌ಪುತ್ರನು ಅವಳ ಜೊತೆಯಲ್ಲಿ ವಾಸಿಸುತ್ತಿದ್ದು ಯಾವಾಗಲೋ ಒಮ್ಮೆ ಕೆಲಸದ ಒತ್ತಡದಿಂದ ಬೇರೆ ದ್ವೀಪಕ್ಕೆ ಹೊರಡಲು ಸಿದ್ಧನಾದನು.

೮೭. ಅವನ ಹೆಂಡತಿಯೂ ಅವನೊಡನೆ ಹೋಗಬೇಕೆಂದು ಬಯಸಿದಳು. ಹೆಂಗಸರ ಮನಸ್ಸು ಪ್ರೇಮದಿಂದ ತುಂಬಿದ್ದಾಗ ವಿರಹವನ್ನು ಸಹಿಸಲಾರದಷ್ಟೆ

೮೮. ಆದರೆ ಆ ವಣಿಕ್‌ಪುತ್ರನು ಮಂಗಳವನ್ನಾಚರಿಸಿ ಹೊರಟುಬಿಟ್ಟನು. ಅಲಂಕಾರ ಮಾಡಿಕೊಂಡಿದ್ದ ಹೆಂಡತಿಯನ್ನು ತನ್ನ ಜೊತೆಗೆ ಅವನು ಕರೆದೊಯ್ಯಲಿಲ್ಲ.

೮೯. ಹೊರಟುನಿಂತಿದ್ದ ಅವನನ್ನೇ ನೋಡುತ್ತಾ, ಕಣ್ಣಲ್ಲಿ ನೀರು ತುಂಬಿಕೊಂಡು ಅಂಗಳದ ಬಾಗಿಲಿನ ತುದಿಯನ್ನು ಹಿಡಿದುಕೊಂಡು ಅವಳು ನಿಂತು ಕೊಂಡಿದ್ದಳು.

೯೦. ಅವನು ಕಣ್ಣಿಗೆ ಕಾಣದಷ್ಟು ದೂರಕ್ಕೆ ಹೊರಟುಹೋದಾಗ ವಿರಹವನ್ನು ಸಹಿಸಲಾರದೆ ಇದ್ದರೂ ಆ ಮುಗ್ಧೆ ಮನೆಯಿಂದ ಆಚೆಗೆ ಹೋಗಲಾಗದೆ ಪ್ರಾಣಗಳನ್ನು ಬಿಟ್ಟುಬಿಟ್ಟಳು.

---

ತಸ್ಯಾಮಭೂದ್ ವಣಿಕ್ಪುತ್ರಃ ಕೋಽಪಿ ನಾಮ್ನಾ ಯ ಇಲ್ಲಕಃ ।
ತಸ್ಯ ಚಾಭೂತ್ ಪ್ರಿಯಾ ಭಾರ್ಯಾ ತದೇಕಾಬದ್ಧಮಾನಸಾ ॥ ೮೫
ತಯಾ ಸಹ ವಸನ್ ಸೋಽಥ ಕದಾಚಿತ್ ಕಾರ್ಯಗೌರವಾತ್ ।
ದ್ವೀಪಾಂತರಂ ವಣಿಕ್ಪುತ್ರೋ ಗಂತುಂ ವ್ಯವಸಿತೋಽಭವತ್ ॥ ೮೬
ತದ್‌ಭಾರ್ಯಾಪಿ ಚ ತೇನೈವ ಸಹ ಗಂತುಮಿಯೇಷ ಸಾ ।
ಸ್ತ್ರೀಣಾಂ ಭಾವಾನುರಕ್ತಂ ಹಿ ವಿರಹಾಸಹನಂ ಮನಃ ॥ ೮೭
ತತಃ ಸ ಚ ವಣಿಕ್ಪುತ್ರಃ ಪ್ರತಸ್ಥೇ ಕೃತಮಂಗಲಃ ।
ನ ಚ ತಾಂ ಸಹ ಜಗ್ರಾಹ ಭಾರ್ಯಾಂ ಕ್ಲೃಪ್ತ ಪ್ರಸಾಧನಾಮ್ ॥ ೮೮
ಸಾ ಚ ತಂ ಪ್ರಸ್ಥಿತಂ ಪಶ್ಚಾತ್ ಪಶ್ಯಂತೀ ಸಾಶ್ರುಲೋಚನಾ ।
ಅತಿಷ್ಠತ್ ಪ್ರಾಂಗಣದ್ವಾರಕವಾಟಾಂತವಿಲಂಬಿನೀ ॥ ೮೯
ಗತೇ ದೃಷ್ಟಿಪಥಾತ್ ತಸ್ಮಿನ್ ಸಾ ವಿಯೋಗಾಸಹಾ ತತಃ ।
ನಿರ್ಯಾತುಂ ನಾಶಕನ್ಮುಗ್ಧಾ ಪ್ರಾಣಾಸ್ತಸ್ಯಾ ವಿನಿರ್ಯಯುಃ ॥ ೯೦

೯೧. ಆ ವಿಷಯವನ್ನು ತಿಳಿದು ವಣಿಕ್ಪುತ್ರನು ಆ ಕ್ಷಣದಲ್ಲೇ ಹಿಂದಿರುಗಿ ಬಂದು ದುಃಖದಿಂದ ಪ್ರಾಣಬಿಟ್ಟಿದ್ದ ಕಾಂತೆಯನ್ನು ಕಂಡನು.

೯೨. ಸುಂದರವಾದ ಬಿಳುಪಾದ ಕಾಂತಿಯಿಂದ, ಚಂಚಲವಾದ ಮುಂಗುರುಳುಗಳ ಶೋಭೆಯಿಂದ ಕೂಡಿ ಆಕಾಶದಿಂದ ಭೂಮಿಗೆ ಜಾರಿಬಿದ್ದ ಚಂದ್ರನ ಕಾಂತಿಯೋ ಎಂಬಂತೆ ಅವಳು ಕಾಣಿಸುತ್ತಿದ್ದಳು.

೯೩. ಅವಳನ್ನು ಮಡಿಲಲ್ಲಿರಿಸಿಕೊಂಡು ಅಳುತ್ತಿದ್ದ ಅವನ ಪ್ರಾಣಗಳೂ ಶೋಕದ ಬೆಂಕಿಯಿಂದ ಸುಡುತ್ತಿದ್ದ ಅವನ ಶರೀರಕ್ಕೆ ಹೆದರಿಯೋ ಎಂಬಂತೆ ಹಾರಿ ಹೋದುವು.

೯೪. ಹೀಗೆ ಪರಸ್ಪರ ವಿರಹದಿಂದ ಆ ದಂಪತಿಗಳು ನಾಶಹೊಂದಿದರು. ಆದ್ದರಿಂದ ಈ ನಮ್ಮ ರಾಜನಿಗೂ, ರಾಣಿಗೂ ವಿಯೋಗ ಉಂಟಾಗದಂತೆ ನೋಡಿಕೊಳ್ಳಬೇಕು."

೯೫. ಇಷ್ಟನ್ನು ಹೇಳಿ ಸಂಶಯಾನ್ವಿತನಾಗಿದ್ದ ರುಮಣ್ವಂತನು ಸುಮ್ಮನಾಗಲು ಧೈರ್ಯದ ಸಮುದ್ರದಂತಿದ್ದ, ಬುದ್ಧಿಶಾಲಿ ಯೌಗಂಧರಾಯಣನಿಂತೆಂದನು.

೯೬ ""ನಾನಿದೆಲ್ಲವನ್ನೂ ನಿಶ್ಚಯಿಸಿಬಿಟ್ಟಿದ್ದೇನೆ. ದೊರೆಗಳಿಗೆ ಸಂಬಂಧಿಸಿದ ಕಾರ್ಯಗಳು ಈ ಪ್ರಕಾರವಾಗಿಯೇ ಇರುತ್ತವೆ. ಈ ವಿಷಯದಲ್ಲಿ ಒಂದು ಕಥೆಯನ್ನು ಕೇಳು.

---

ತದ್ ಬುದ್ಧ್ವಾ ಚ ವಣಿಕ್ಪುತ್ರಃ ಪ್ರತ್ಯಾವೃತ್ಯ ಚ ತತ್ಕ್ಷಣಮ್ ।
ದದರ್ಶ ವಿಹ್ವಲಾಂ ಕಾಂತಾಮೇತಾಮುತ್ಕ್ರಾಂತಜೀವಿತಾಮ್ ॥ ೯೧
ಸುಂದರಾಪಾಂಡುರಚ್ಛಾಯಾಂ ವಿಲೋಲಾಲಕಲಾಂಛನಾಮ್ ।
ಭುವಿ ಚಾಂದ್ರಮಸೀಂ ಲಕ್ಷ್ಮೀಂ ದಿವಃ ಸುಪ್ರಚ್ಯುತಾಮಿವ ॥ ೯೨
ಅಂಕೇ ಕೃತ್ವಾ ಚ ತಾಂ ಸದ್ಯಃ ಕ್ರಂದತಸ್ತಸ್ಯ ನಿರ್ಯಯುಃ ।
ಶೋಕಾಗ್ನಿಜ್ವಲಿತಾದ್ದೇಹಾದ್ ದ್ರುತಂ ಭೀತಾ ಇವಾಸವಃ ॥ ೯೩
ಏವಮನ್ಯೋನ್ಯವಿರಹಾದ್ದಂಪತೀ ತೌ ವಿನೇಶತುಃ ।
ಅತೋಽಸ್ಯ ರಾಜ್ಞೋ ದೇವ್ಯಾಶ್ಚ ರಕ್ಷ್ಯಾನ್ಯೋನ್ಯವಿಯೋಗಿತಾ ॥ ೯೪
ಇತ್ಯುಕ್ತ್ವಾ ವಿರತೇ ತಸ್ಮಿನ್ ಬದ್ಧಾಶಂಕೇ ರುಮಣ್ವತಿ ।
ಜಗಾದ ಧೈರ್ಯಜಲಧಿರ್ಧೀಮಾನ್ ಯೌಗಂಧರಾಯಣಃ ॥ ೯೫
ಮಯ್ಯೈತನ್ನಿಶ್ಚಿತಂ ಸರ್ವಂ ಕಾರ್ಯಾಣಿ ಚ ಮಹೀಭೃತಾಮ್ ।
ಭವಂತ್ಯೇವಂವಿಧಾನ್ಯೇವ ತಥಾ ಚಾತ್ರ ಕಥಾಂ ಶೃಣು ॥ ೯೬

## ಪುಣ್ಯಸೇನರಾಜನ ಕಥೆ

೯೭ ಉಜ್ಜಯಿನಿಯಲ್ಲಿ ಹಿಂದೆ ಪುಣ್ಯಸೇನನೆಂಬ ರಾಜನಿದ್ದನು. ಅವನೊಮ್ಮೆ ತನಗಿಂತಲೂ ಶಕ್ತಿಶಾಲಿಯಾಗಿದ್ದ ಇನ್ನೊಬ್ಬ ರಾಜನ ದಾಳಿಯನ್ನು ಎದುರಿಸ ಬೇಕಾಯಿತು.

೯೮. ಅವನ ಮಂತ್ರಿಗಳು ಧೀರರು. ಆ ಶತ್ರುವನ್ನು ಗೆಲ್ಲುವುದು ಅಸಾಧ್ಯ ಎಂಬುದನ್ನರಿತು ಅವರು 'ನಮ್ಮ ರಾಜ ಸತ್ತು ಹೋದನು' ಎಂದು ಸುಳ್ಳು ಸುದ್ದಿಯನ್ನು ಎಲ್ಲ ಕಡೆಯೂ ಹಬ್ಬಿಸಿದರು.

೯೯. ಅವರು ರಾಜ ಪುಣ್ಯಸೇನನನ್ನು ಗುಟ್ಟಾಗಿ ಅವಿಸಿಟ್ಟರು. ಬೇರೆ ಯಾವುದೋ ಒಂದು ಹೆಣವನ್ನು ರಾಜಯೋಗ್ಯವಾದ ರೀತಿಯಿಂದ ಸುಟ್ಟರು.

೧೦೦. ರಾಜನಿಲ್ಲದ ನಮಗೆ ಈಗ ನೀನೇ ರಾಜನಾಗು ಎಂದು ದೂತರ ಮುಖಾಂತರ ಅವರು ಶತ್ರುವಿಗೆ ಹೇಳಿಕಳುಹಿಸಿದರು.

೧೦೧. ಹಾಗೇ ಆಗಲಿ ಎಂದು ಹೇಳಿ ಶತ್ರುವು ಸಂತೋಷದಿಂದಿದ್ದಾಗ ಅವನ ಸೈನ್ಯದ ನಿವೇಶವನ್ನು ಅವರೆಲ್ಲರೂ ಒಟ್ಟಾಗಿ ಸೈನ್ಯ ಸಮೇತವಾಗಿ ಹೋಗಿ ಕ್ರಮಶಃ ಧ್ವಂಸ ಮಾಡಿದರು.

೧೦೨. ಹಾಗೆ ಅವನ ಸೈನ್ಯ ಚದುರಿದಾಗ ಪುಣ್ಯಸೇನ ರಾಜನನ್ನು ಹೊರ ತಂದು ಪುನಃ ಬಲಾಢ್ಯರಾಗಿ ಮಂತ್ರಿಗಳು ಆ ಶತ್ರುವನ್ನು ಕೊಂದು ಹಾಕಿದರು.

---

ಉಜ್ಜಯಿನ್ಯಾಮಭೂತ್ ಪೂರ್ವಂ ಪುಣ್ಯಸೇನಾಭಿಧೋ ನೃಪಃ ।
ಸ ಜಾತು ಬಲಿನಾನ್ಯೇನ ರಾಜ್ಞಾ ಗತ್ವಾಭ್ಯಯುಜ್ಯತ ॥ ೯೭
ಅಥ ತನ್ಮಂತ್ರಿಣೋ ಧೀರಾಸ್ತಮರಿಂ ವೀಕ್ಷ್ಯ ದುರ್ಜಯಮ್ ।
ಮಿಥ್ಯಾ ರಾಜಾ ಮೃತ ಇತಿ ಪ್ರವಾದಂ ಸರ್ವತೋ ವ್ಯಧುಃ ॥ ೯೮
ಪ್ರಚ್ಛನ್ನಂ ಸ್ಥಾಪಯಾಮಾಸುಃ ಪುಣ್ಯಸೇನಂ ನೃಪಂ ಚ ತೇ ।
ಅನ್ಯಂ ಕಂಚಿದಧಾಕ್ಷುಶ್ಚ ರಾಜಾರ್ಹವಿಧಿನಾ ಶವಮ್ ॥ ೯೯
ಅರಾಜಕಾನಾಮಧುನಾ ಭವ ರಾಜಾ ತ್ವಮೇವ ನಃ ।
ಇತಿ ದೂತಮುಖೇನಾಥ ತಮರಿಂ ಜಗದುಶ್ಚ ತೇ ॥ ೧೦೦
ತಥೇತ್ಯುಕ್ತವತಸ್ತಸ್ಯ ರಿಪೋಸ್ತುಷ್ಟಸ್ಯ ತೇ ತತಃ ।
ಮಿಲಿತ್ವಾ ಸೈನ್ಯಸಹಿತಾಃ ಕಟಕಂ ಬಿಭಿದುಃ ಕ್ರಮಾತ್ ॥ ೧೦೧
ಭಿನ್ನೇ ಚ ಸೈನ್ಯೇ ರಾಜಾನಂ ಪುಣ್ಯಸೇನಂ ಪ್ರಕಾಶ್ಯ ತಮ್ ।
ತೇ ಸಂಪ್ರಾಪ್ತಬಲಾಃ ಶತ್ರುಂ ತಂ ನಿಜಘ್ನುಃ ಸ್ವಮಂತ್ರಿಣಃ ॥ ೧೦೨

೧೦೩. ರಾಜಕಾರ್ಯಗಳು ಈ ರೀತಿಯವಾಗಿರುತ್ತವೆ. ಆದ್ದರಿಂದ ನಾವು ರಾಣಿಯು ಸುಟ್ಟು ಹೋದ ಸುಳ್ಳು ಸುದ್ದಿಯನ್ನು ಹಬ್ಬಿಸಿ ಧೈರ್ಯದಿಂದ ನಮ್ಮ ಕಾರ್ಯವನ್ನು ಮಾಡೋಣ."

೧೦೪. ಹೀಗೆ ನಿಶ್ಚಿತಬುದ್ಧಿಯ ಯೌಗಂಧರಾಯಣನ (ಮಾತನ್ನು) ಕೇಳಿ ರುಮಣ್ವಂತನಿಂತೆಂದನು. "ಇದು ನಿಶ್ಚಯ ಎಂದಾದಲ್ಲಿ,

೧೦೫. ವಾಸವದತ್ತೆಯ ಅಣ್ಣ ಗೋಪಾಲಕನನ್ನು ಆದರದಿಂದ ಇಲ್ಲಿಗೆ ಕರೆದುತಂದು ಅವನ ಜೊತೆಗೆ ಚೆನ್ನಾಗಿ ಸಮಾಲೋಚನೆಯನ್ನು ಮಾಡಿ ಎಲ್ಲ ಕೆಲಸವನ್ನೂ ಮಾಡೋಣ."

೧೦೬. ಹಾಗೆಯೇ ಆಗಲಿ ಎಂದು ಯೌಗಂಧರಾಯಣನೂ ಹೇಳಿದನು. ಅವನಲ್ಲಿದ್ದ ವಿಶ್ವಾಸದಿಂದ ರುಮಣ್ವಂತನೂ ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಿಕೊಂಡನು.

೧೦೭. ಮಾರನೆಯ ದಿನ ಆ ಇಬ್ಬರು ಮಂತ್ರಿಶ್ರೇಷ್ಠರೂ (ಗೋಪಾಲಕನನ್ನು) ನೋಡುವ ತವಕದ ನೆವದಿಂದ ಅವನನ್ನು ಕರೆದುತರಲು ದೂತನನ್ನು ಕಳುಹಿಸಿದರು.

೧೦೮. ಹಿಂದೆ ಕೆಲಸವಿದ್ದ ಕಾರಣ (ಉಜ್ಜಯಿನಿಗೆ) ಹೋಗಿದ್ದ ಗೋಪಾಲಕನು ಮೂರ್ತಿವೆತ್ತ ಸಂಭ್ರಮದಂತೆ ದೂತನ ಮಾತಿನ ಪ್ರಕಾರ ಅಲ್ಲಿಗೆ ಬಂದನು.

---

ಈದೃಂಶಿ ರಾಜಕಾರ್ಯಾಣಿ ಭವಂತಿ ತದಿದಂ ವಯಮ್ ।
ದೇವೀದಾಹಪ್ರವಾದೇನ ಕಾರ್ಯಂ ಧೈರ್ಯೇಣ ಕುರ್ಮಹೇ ॥ ೧೦೩

ಇತ್ಯೇತನ್ನಿಶ್ಚಿತಮತೇಃ ಶ್ರುತ್ವಾ ಯೌಗಂಧರಾಯಣಾತ್ ।
ರುಮಣ್ವಾನಬ್ರವೀದೇವಂ ತರ್ಹಿ ಯದ್ಯೇಷ ನಿಶ್ಚಯಃ ॥ ೧೦೪

ತದ್ ಗೋಪಾಲಕಮಾನೀಯ ದೇವ್ಯಾ ಭ್ರಾತರಮಾದೃತಮ್ ।
ಸಂಮಂತ್ರ್ಯ ಚ ಸಮಂ ತೇನ ಸಮ್ಯಕ್ ಸರ್ವಂ ವಿಧೀಯತಾಮ್ ॥ ೧೦೫

ಏವಮಸ್ತ್ವಿತಿ ವಕ್ತಿ ಸ್ಮ ತತೋ ಯೌಗಂಧರಾಯಣಃ ।
ತತ್ಪ್ರತ್ಯಯಾದ್ ರುಮಣ್ವಾಂಶ್ಚ ಚಕ್ರೇ ಕರ್ತವ್ಯನಿಶ್ಚಯಮ್ ॥ ೧೦೬

ಅನ್ಯೇದ್ಯುರ್ಮಂತ್ರಿಮುಖ್ಯೌ ತೌ ದೂತಂ ವ್ಯಸೃಜತಾಂ ನಿಜಮ್ ।
ಗೋಪಾಲಕಂ ತಮಾನೇತುಮುತ್ಕಂಠಾವ್ಯಪದೇಶತಃ ॥ ೧೦೭

ಕಾರ್ಯಹೇತೋರ್ಗತಃ ಪೂರ್ವಂ ತದ್ದೂತವಚನಾಚ್ಚ ಸಃ ।
ಆಗಾದ್ ಗೋಪಾಲಕಸ್ತತ್ರ ಸ್ವಯಂ ಮೂರ್ತ ಇವೋತ್ಸವಃ ॥ ೧೦೮

೧೦೯. ಹಾಗೆ ಅವನು ಬಂದ ದಿನವೇ ಯೌಗಂಧರಾಯಣನು ತನ್ನ ಇಚ್ಛಾನುಸಾರವಾಗಿ ರಾತ್ರಿಯಲ್ಲಿ ಅವನನ್ನು ರುಮಣ್ವಂತನೊಡನೆ ತನ್ನ ಮನೆಗೆ ಕರೆದೊಯ್ದನು.

೧೧೦. ಹಿಂದೆ ರುಮಣ್ವಂತನೊಡನೆ ಚರ್ಚಿಸಿದ್ದ, ತಾನು ಮಾಡಲು ಇಷ್ಟಪಟ್ಟಿದ್ದ ಸಾಹಸೋದ್ಯಮವನ್ನೆಲ್ಲ ಗೋಪಾಲಕನಿಗೆ ಹೇಳಿದನು.

೧೧೧. ತನ್ನ ಸೋದರಿಗೆ ದುಃಖವನ್ನು ತರುವ ಕೆಲಸವಾಗಿದ್ದರೂ ಅದನ್ನು ಮಾಡಲು ಉದಯನನ ಹಿತೈಷಿಯಾಗಿ ಗೋಪಾಲಕನು ಸಮ್ಮತಿಸಿದನು. ಸಜ್ಜನರ ಮಾತನ್ನು (ಎಲ್ಲರೂ) ನಡೆಸಬೇಕಲ್ಲವೆ ?

೧೧೨. "ಇದೆಲ್ಲ ಸರಿಯಾಗಿದೆ. ಆದರೆ ರಾಣಿ ವಾಸವದತ್ತೆ ಸುಟ್ಟು ಹೋದಳು ಎಂಬುದನ್ನು ಅರಿತು ಪ್ರಾಣಗಳನ್ನು ಬಿಡಲು ಉದ್ಯುಕ್ತನಾಗುವ ವತ್ಸರಾಜನನ್ನು ಉಳಿಸಿಕೊಳ್ಳುವುದು ಹೇಗೆ ಎಂಬುದರ ಬಗ್ಗೆ ಮೊದಲು ಚಿಂತಿಸಿರಿ.

೧೧೩. ಒಳ್ಳೆಯ ಉಪಾಯ ಮುಂತಾದ ಸಾಮಗ್ರಿಯು ಸಿದ್ಧವಾಗಿದ್ದರೂ ಅಪಾಯಕ್ಕೆ ತಕ್ಕ ಪರಿಹಾರೋಪಾಯವೇ ಮಂತ್ರಾಲೋಚನೆಯ ಮುಖ್ಯವಾದ ಅಂಗವಲ್ಲವೇ ?"

೧೧೪. ಎಂದು ಮತ್ತೆ ಆ ಸಂದರ್ಭದಲ್ಲಿ ರುಮಣ್ವಂತನು ಹೇಳಿದಾಗ ಸಮಸ್ತ ಕಾರ್ಯವನ್ನೂ ಮೊದಲೇ ಆಲೋಚಿಸಿದ್ದ ಯೌಗಂಧರಾಯಣನು ಹೀಗೆ ಹೇಳಿದನು.

---

ಆಗತಂ ತದಹಶ್ಚೈನಂ ಸ್ವೈರಂ ಯೌಗಂಧರಾಯಣಃ ।
ನಿನಾಯ ಸರುಮಣ್ವತ್ಕಂ ಗೃಹಂ ಗೋಪಾಲಕಂ ನಿಶಿ ॥ ೧೦೯

ತತ್ರ ಚಾಸ್ಮೈ ತದುತ್ಸಾಹಂ ಶಶಂಸ ಸ್ವಚಿಕೀರ್ಷಿತಮ್ ।
ಯತ್ಪೂರ್ವಂ ಮಂತ್ರಿತಂ ತೇನ ಸರ್ವಂ ಸಹ ರುಮಣ್ವತಾ ॥ ೧೧೦

ಸ ಚ ರಾಜಹಿತೈಷೀ ಸನ್ ದುಃಖಾವಹಮಪಿ ಸ್ವಸುಃ ।
ಗೋಪಾಲಕೋಽನುಮೇನೇ ತತ್ ಕರ್ತವ್ಯಂ ಹಿ ಸತಾಂ ವಚಃ ॥ ೧೧೧

ಸರ್ವಮೇತತ್ ಸುವಿಹಿತಂ ದೇವೀಂ ದಗ್ಧಾಮವೇತ್ಯ ತು ।
ಪ್ರಾಣಾಂಸ್ತ್ಯಜನ್ ಕಥಂ ರಕ್ಷ್ಯೋ ವತ್ಸೇಶ ಇತಿ ಚಿಂತ್ಯತಾಮ್ ॥ ೧೧೨

ಸದುಪಾಯಾದಿಸಾಮಗ್ರೀಸಂಭವೇ ಕಿಲ ಸತ್ಯಪಿ ।
ಮುಖ್ಯಮಂಗಂ ಹಿ ಮಂತ್ರಸ್ಯ ವಿನಿಪಾತಪ್ರತಿಕ್ರಿಯಾ ॥ ೧೧೩

ಇತಿ ಭೂಯೋಽಪಿ ತತ್ಕಾಲಮುಕ್ತೇ ತತ್ರ ರುಮಣ್ವತಾ ।
ಉವಾಚಾಲೋಚಿತಾಶೇಷಕಾರ್ಯೋ ಯೌಗಂಧರಾಯಣಃ ॥ ೧೧೪

೧೧೫ “ಗೋಪಾಲಕನ ಕಿರಿಯ ಸಹೋದರಿ ರಾಜಪುತ್ರಿ ವಾಸವದತ್ತೆಯು ತನ್ನ ಅಣ್ಣನಿಗೆ ಪ್ರಾಣಗಳಿಗಿಂತಲೂ ಹೆಚ್ಚು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ

೧೧೬ ಅಂತಹ ಅವನ ಶೋಕವೇ ಹೆಚ್ಚಾಗಿಲ್ಲದಿರುವುದನ್ನು ಕಂಡು ವತ್ಸರಾಜನು ರಾಣಿ ವಾಸವದತ್ತೆಯು ಎಲ್ಲಾದರೂ ಜೀವಿಸಿರಬಹುದೇನೋ ಎಂದು ಯೋಚಿಸಿ ಆಗ ಧೈರ್ಯವನ್ನು ತಂದುಕೊಳ್ಳುವನು.

೧೧೭ ಅಲ್ಲದೆ ಉತ್ತಮವಾದ ಅಂತಃಸತ್ವವುಳ್ಳ ವತ್ಸರಾಜನು ಬೇಗನೆ ಮತ್ತೆ ಪದ್ಮಾವತಿಯನ್ನು ಮದುವೆಯಾಗುವನು. ಆಮೇಲೆ ಸ್ವಲ್ಪ ಕಾಲದಲ್ಲೇ ದೇವಿ ವಾಸವದತ್ತೆಯನ್ನು ಅವನಿಗೆ ತೋರಿಸುವೆವಲ್ಲ.”

೧೧೮. ಹೀಗೆ ಇದೆಲ್ಲವನ್ನೂ ನಿರ್ಣಯಿಸಿ ಯೌಗಂಧರಾಯಣನೂ ಗೋಪಾಲಕನೂ ರುಮಣ್ವಂತನೂ ಹೀಗೆ ಮಂತ್ರಾಲೋಚನೆ ಮಾಡಿದರು.

೧೧೯. ಹಾಗೂ ಜಾಣತನದಿಂದ ರಾಜರಾಣಿಯರೊಡನೆ ಲಾವಾಣಕ್ಕೆ ಹೋಗೋಣ. ಆ ಪ್ರದೇಶವು ಎಲ್ಲೆಯಲ್ಲಿದ್ದು ಮಗಧದೇಶಕ್ಕೆ ಸಮೀಪದಲ್ಲಿದೆ.

---

ನಾಸ್ತ್ಯತ್ರ ಚಿಂತಾ ಯದ್ರಾಜಪುತ್ರೀ ಗೋಪಾಲಕಸ್ಯ ಸಾ ।
ಕನೀಯಸೀ ಸ್ವಸಾ ದೇವೀ ಪ್ರಾಣೇಭ್ಯೋಽಪ್ಯಧಿಕ ಪ್ರಿಯಾ ॥ ೧೧೫
ಏತಸ್ಯ ಚಾಲ್ಪಮಾಲೋಕ್ಯ ಶೋಕಂ ವತ್ಸೇಶ್ವರಸ್ತದಾ ।
ಜೀವೇತ್ ಕದಾಚಿದ್ದೇವೀತಿ ಮತ್ವಾ ಧೈರ್ಯಮವಾಪ್ಸ್ಯತಿ ॥ ೧೧೬
ಅಪಿ ಚೋತ್ತಮಸತ್ತ್ವೋಽಯಂ ಶೀಘ್ರಂ ಚ ಪರಿಣೇಯತೇ ।
ಪದ್ಮಾವತೀಂ ತತೋ ದೇವೀ ದರ್ಶ್ಯತೇ ಚಾಚಿರಾದಿತಿ ॥ ೧೧೭
ಏವಮೇತದ್ ವಿನಿಶ್ಚಿತ್ಯ ತತೋ ಯೌಗಂಧರಾಯಣಃ ।
ಗೋಪಾಲಕೋ ರುಮಣ್ವಾಂಶ್ಚ ತತೋ ಮಂತ್ರಮಿತಿ ವ್ಯಧುಃ ॥ ೧೧೮
ಯುಕ್ತ್ಯಾ ಲಾವಾಣಕಂ ಯಾಮಃ ಸಹ ದೇವ್ಯಾ ನೃಪೇಣ ಚ ।
ಪರ್ಯಂತೋ ಮಗಧಾಸನ್ನವರ್ತೀ ಹಿ ವಿಷಯೋಽಸ್ತಿ ಸಃ ॥ ೧೧೯

೧೨೦–೧೨೧. ಅದು ಒಳ್ಳೆಯ ಬೇಟೆಗೆ (ಅನುಕೂಲವಾದ) ಭೂಮಿಯಾದುದರಿಂದ ರಾಜನು ಮನೆಯಿಂದ ದೂರವಾಗಿರುವಂತೆ ಮಾಡುತ್ತದೆ. ಅಲ್ಲಿ ಅಂತಃಪುರಕ್ಕೆ ಬೆಂಕಿಯನ್ನು ಹಚ್ಚಿ ನಾವು ಯೋಚಿಸಿದಂತೆ ಮಾಡಿದರೆ, ಹಾಗೂ ರಾಣಿಯನ್ನು ಕರೆದುಕೊಂಡು ಹೋಗಿ ಪದ್ಮಾವತಿಯ ಮನೆಯಲ್ಲಿ ಯುಕ್ತಿಯಿಂದ ನೆಲೆಗೊಳಿಸಿದರೆ, ಗುಪ್ತವಾಗಿ ಅಲ್ಲಿ ವಾಸಿಸುವ ವಾಸವದತ್ತೆಯ ಚಾರಿತ್ರ್ಯಕ್ಕೆ ಅವಳೇ ಸಾಕ್ಷಿಯಾಗುವಳು.'

೧೨೨. ಹೀಗೆ ರಾತ್ರಿಯಲ್ಲಿ ಪರಸ್ಪರ ಸಮಾಲೋಚನೆಯನ್ನು ಮಾಡಿ ಯೌಗಂಧರಾಯಣ ಮುಂತಾದವರೆಲ್ಲರೂ ಮಾರನೆಯ ದಿನ ರಾಜನ ಅರಮನೆಯೊಳಗೆ ಪ್ರವೇಶಿಸಿದರು.

೧೨೩. ಅಲ್ಲಿ ರುಮಣ್ವಂತನು ರಾಜನಿಗೆ ಹೀಗೆ ಬಿನ್ನವಿಸಿದನು "ದೇವ, ಲಾವಾಣಕವು ನಾವು ಹೋಗುವುದಕ್ಕೆ ಶುಭವಾದ ಸ್ಥಳವಾಗಿದೆ.

೧೨೪. ಅದು ಅತಿರಮಣೀಯವಾದ ಜಾಗ. ಅಲ್ಲಿ ಒಳ್ಳೆಯ ಬೇಟೆಯ ಭೂಮಿಗಳಿವೆ. ಮಹಾರಾಜ, ಅಲ್ಲಿ ನಡಘಾಸ (ಲಾಳದ ಗಿಡಗಳನ್ನು ತಿನ್ನುವ ಆನೆ)ಗಳನ್ನು ಸುಲಭವಾಗಿ ಹಿಡಿಯಬಹುದು.

೧೨೫. ಸಮೀಪದಲ್ಲಿರುವುದರಿಂದ ಮಗಧರಾಜನು ಆ ಪ್ರದೇಶದಲ್ಲೆಲ್ಲ ಹಾವಳಿ ಮಾಡುತ್ತಿರುತ್ತಾನೆ. ಆದ್ದರಿಂದ ವಿನೋದಕ್ಕಾಗಿ ಮಾತ್ರವಲ್ಲದೆ ರಕ್ಷಣೆಯ ಕಾರಣದಿಂದಲೂ ನೀನಲ್ಲಿಗೆ ಹೋಗಬೇಕು."

---

ಸುಭಗಾಖೇಟಭೂಮಿತ್ವಾದ್ ರಾಜ್ಞಶ್ಚಾಸಂನಿಧಾನಕೃತ್ ।
ತತ್ರಾಂತಃಪುರಮಾದೀಪ್ಯ ಕ್ರಿಯತೇ ಯದಿ ಚಿಂತಿತಮ್ ॥ ೧೨೦
ದೇವೀ ಚ ಸ್ಥಾಪ್ಯತೇ ನೀತ್ವಾ ಯುಕ್ತ್ಯಾ ಪದ್ಮಾವತೀಗೃಹೇ ।
ಛನ್ನಸ್ಥಿತಾಯಾ ಯೇನಾಸ್ಯಾಃ ಸೈವ ಸ್ಯಾಚ್ಛೀಲಸಾಕ್ಷಿಣೀ ॥ ೧೨೧
ಏವಂ ರಾತ್ರೌ ಮಿಥಃ ಕೃತ್ವಾ ಮಂತ್ರಂ ಸರ್ವೇಽಪರೇಽಹನಿ ।
ಯೌಗಂಧರಾಯಣಾದ್ಯಾಸ್ತೇ ಪ್ರಾವಿಶನ್ ರಾಜಮಂದಿರಮ್ ॥ ೧೨೨
ತತ್ರೈವಮಥ ವಿಜ್ಞಪ್ತೋ ವತ್ಸರಾಜೋ ರುಮಣ್ವತಾ ।
ದೇವ ಲಾವಾಣಕೇಽಸ್ಮಾಕಂ ಗತಾನಾಂ ವರ್ತತೇ ಶಿವಮ್ ॥ ೧೨೩
ಸ ಚಾತಿರಮ್ಯೋ ವಿಷಯಸ್ತತ್ರ ಚಾಖೇಟಭೂಮಯಃ ।
ಶೋಭನಾಃ ಸಂತಿ ತೇ ರಾಜನ್ ನಡಘಾಸಾಶ್ಚ ಸುಗ್ರಹಾಃ ॥ ೧೨೪
ಬಾಧತೇ ತಂ ಚ ನೈಕಟ್ಯಾತ್ ಸರ್ವಂ ಸ ಮಗಧೇಶ್ವರಃ ।
ತತ್ತತ್ರ ರಕ್ಷಾಹೇತೋಶ್ಚ ವಿನೋದಾಯ ಚ ಗಮ್ಯತಾಮ್ ॥ ೧೨೫

೧೨೬. ಈ ಮಾತನ್ನು ಕೇಳಿ ಆಟದಲ್ಲೇ ಸದಾ ಆಸಕ್ತಿಯನ್ನಿಟ್ಟುಕೊಂಡಿದ್ದ ವತ್ಸರಾಜನು ವಾಸವದತ್ತೆಯೊಡನೆ ಲಾವಾಣಕಕ್ಕೆ ಹೋಗಲು ಮನಸ್ಸು ಮಾಡಿದನು.

೧೨೭-೧೨೮. ಮಾರನೆಯ ದಿನ ಪ್ರಯಾಣ ನಿಶ್ಚಿತವಾಯಿತು. ಲಗ್ನವು ಖಚಿತಗೊಳಿಸಲ್ಪಟ್ಟಿತು. ಆಗ ಅಕಸ್ಮಾತ್ತಾಗಿ ತನ್ನ ಕಾಂತಿಯಿಂದ ದಿಕ್ಕುಗಳನ್ನೆಲ್ಲ ಬೆಳಗಿಸುತ್ತಾ ನಾರದಮುನಿಯು ಬಾನಿನ ಮಧ್ಯದಿಂದ ಇಳಿದು, ಕಣ್ಣಿಗೆ ತಂಪನ್ನು ನೀಡುವ ತನ್ನ ವಂಶದ ಮೇಲಣ ಪ್ರೀತಿಯಿಂದ ಚಂದ್ರನೇ (ಇಳಿದು) ಬಂದವನಂತೆ ವತ್ಸರಾಜನ ಬಳಿಗೆ ಬಂದನು.

೧೨೯. ಅತಿಥಿಸತ್ಕಾರವನ್ನು ಸ್ವೀಕರಿಸಿ ಆ ಋಷಿಯು ಪ್ರಸನ್ನನಾಗಿ ವಿನೀತನಾದ ವತ್ಸರಾಜನಿಗೆ ಪಾರಿಜಾತಪುಷ್ಪಗಳ ಹಾರವನ್ನು ಕೊಟ್ಟನು.

೧೩೦. ಆದರಿಸಲ್ಪಟ್ಟ ನಾರದನು ವಾಸವದತ್ತೆಗೆ "ವಿದ್ಯಾಧರರಿಗೆ ಒಡೆಯನಾಗುವ ಹಾಗೂ ಕಾಮದೇವನ ಅಂಶವಾದ ಮಗನನ್ನು ಪಡೆಯುವೆ" ಎಂದು ಹರಸಿದನು.

೧೩೧. ಯೌಗಂಧರಾಯಣನು ಅಲ್ಲೇ ಇದ್ದಾಗ ನಾರದನು ವತ್ಸರಾಜನಿಗೆ ಹೇಳಿದನು. "ರಾಜನ್, ವಾಸವದತ್ತೆಯನ್ನು ನೋಡಿ ನನಗಿದು ನೆನಪಾಗುತ್ತಿದೆ.

---

ಏತಚ್ಛ್ರುತ್ವಾ ಚ ವತ್ಸೇಶಃ ಸಮಂ ವಾಸವದತ್ತಯಾ ।
ಕ್ರೀಡೈಕಲಾಲಸಶ್ಚಕ್ರೇ ಗಂತುಂ ಲಾವಾಣಕೇ ಮತಿಮ್ ॥ ೧೨೬
ನಿಶ್ಚಿತೇ ಗಮನೇಽನ್ಯೇದ್ಯುರ್ಲಗ್ನೇ ಚ ಪರಿಕಲ್ಪಿತೇ ।
ಅಕಸ್ಮಾನ್ನಾರದಮುನಿಃ ಕಾಂತಿದ್ಯೋತಿತದಿಙ್ಮುಖಃ ॥ ೧೨೭
ಅವತೀರ್ಯ ನಭೋಮಧ್ಯಾತ್ ಪ್ರದತ್ತನಯನೋತ್ಸವಃ ।
ಶಶೀವ ಸ್ವಕುಲಪ್ರೀತ್ಯಾ ತಂ ವತ್ಸೇಶ್ವರಮಭ್ಯಗಾತ್ ॥ ೧೨೮
ಗೃಹೀತಾತಿಥ್ಯಸತ್ಕಾರಃ ಪಾರಿಜಾತಮಯೀಂ ಸ್ರಜಮ್ ।
ಪ್ರೀತಃ ಸ ಚ ಮುನಿಸ್ತಸ್ಮೈ ದದೌ ಪ್ರಹ್ವಾಯ ಭೂಭೃತೇ ॥ ೧೨೯
ವಿದ್ಯಾಧರಾಧಿಪಂ ಪುತ್ರಂ ಕಾಮದೇವಾಂಶಮಾಪ್ಸ್ಯಸಿ ।
ಇತಿ ವಾಸವದತ್ತಾಂ ಚ ಸೋಽಭ್ಯನಂದತ್ ಕೃತಾದರಃ ॥ ೧೩೦
ತತಶ್ಚೋವಾಚ ವತ್ಸೇಶಂ ಸ್ಥಿತೇ ಯೌಗಂಧರಾಯಣೇ ।
ರಾಜನ್ ವಾಸವದತ್ತಾಂ ತೇ ದೃಷ್ಟ್ವಾ ಹಂತ ಸ್ಮೃತಂ ಮಯಾ ॥ ೧೩೧

೧೩೧. ಹಿಂದೆ ನಿನ್ನ ಪ್ರಪಿತಾಮಹರಾದ ಯುಧಿಷ್ಠಿರಾದಿಗಳು ಇದ್ದರಷ್ಟೆ ಅವರೈವರಿಗೆ ದ್ರೌಪದಿ ಒಬ್ಬಳೇ ಪತ್ನಿಯಾಗಿದ್ದಳು.

೧೩೨. ಅವಳೂ ವಾಸವದತ್ತೆಯಂತೆ ರೂಪದಲ್ಲಿ ಅಸಮಾನಳಾಗಿದ್ದಳು. ಅದರಿಂದ ಅವರಲ್ಲಿ ಉಂಟಾಗಬಹುದಾದ (ಅಸೂಯೆಯೆಂಬ) ದೋಷವನ್ನು ಊಹಿಸಿ ನಾನು ಅವರಿಗೆ ಹೀಗೆ ಹೇಳಿದೆನು.

೧೩೩. ನೀವು ಹೆಂಗಸಿನ ಕಾರಣದಿಂದ ಉಂಟಾಗುವ ವೈರವನ್ನು ವರ್ಜಿಸಬೇಕು. ಏಕೆಂದರೆ ಅದು ಎಲ್ಲ ಆಪತ್ತುಗಳ ಮೂಲ ಕಾರಣ. ಅದರ ಬಗೆಗೆ ಒಂದು ಕಥೆಯನ್ನು ಹೇಳುವೆನು ಕೇಳಿರಿ.

## ಸುಂದೋಪಸುಂದರ ಕಥೆ

೧೩೪. ಸುಂದ, ಉಪಸುಂದ ಎಂಬ ಇಬ್ಬರು ಸೋದರರಿದ್ದರು. ಅಸುರರಾದ ಅವರು ತಮ್ಮ ಪರಾಕ್ರಮದಿಂದ ಮೂರು ಲೋಕಗಳನ್ನೂ ಗೆದ್ದು ಅಜೇಯರಾಗಿದ್ದರು.

೧೩೫. ಅವರನ್ನು ನಾಶ ಮಾಡಲು ಇಚ್ಛಿಸಿದ ಬ್ರಹ್ಮನು ವಿಶ್ವಕರ್ಮನಿಗೆ ಆಜ್ಞೆಯನ್ನಿತ್ತು ದಿವ್ಯಸುಂದರಿಯಾಗಿದ್ದ ತಿಲೋತ್ತಮೆಯೆಂಬವಳನ್ನು ನಿರ್ಮಿಸಿದನು.

೧೩೬ ಆ ತಿಲೋತ್ತಮೆಯು ಪ್ರದಕ್ಷಿಣೆ ಮಾಡುವಾಗ ಅವಳ ರೂಪವನ್ನು ನಾಲ್ಕು ದಿಕ್ಕಿನಲ್ಲೂ ನೋಡುವುದಕ್ಕಾಗಿ ಶಿವನೂ ನಾಲ್ಕು ಮುಖಗಳನ್ನು ಹೊಂದಿದನು.

---

ಯುಧಿಷ್ಠಿರಾದಯೋಽಭೂವನ್ ಪುರಾ ತೇ ಪ್ರಪಿತಾಮಹಾಃ ।
ಪಂಚಾನಾಂ ದ್ರೌಪದೀ ತೇಷಾಮೇಕಾ ಪತ್ನಿ ಬಭೂವ ಚ ॥ ೧೩೧
ಸಾ ಚ ವಾಸವದತ್ತೇವ ರೂಪೇಣಾಪ್ರತಿಮಾಭವತ್ ।
ತತಸ್ತದ್ದೋಷಮಾಶಂಕ್ಯ ತಾನೇವಮಹಮಭ್ಯಧಾಮ್ ॥ ೧೩೨
ಸ್ತ್ರೀವೈರಂ ರಕ್ಷಣೀಯಂ ವಸ್ತದ್ಧಿ ಬೀಜಮಿಹಾಪದಾಮ್ ।
ತಥಾ ಹಿ ಶೃಣುತೈತಾಂ ಚ ಕಥಾಂ ವಃ ಕಥಯಾಮ್ಯಹಮ್ ॥ ೧೩೩
ಸುಂದೋಪಸುಂದನಾಮಾನೌ ಭ್ರಾತರೌ ದ್ವೌ ಬಭೂವತುಃ ।
ಅಸುರೌ ವಿಕ್ರಮಾಕ್ರಾಂತಲೋಕತ್ರಿತಯದುರ್ಜಯೌ ॥ ೧೩೪
ತಯೋರ್ವಿನಾಶಕಾಮಶ್ಚ ದತ್ವಾಜ್ಞಾಂ ವಿಶ್ವಕರ್ಮಣಾ ।
ಬ್ರಹ್ಮಾ ನಿರ್ಮಾಪಯಾಮಾಸ ದಿವ್ಯನಾರೀಂ ತಿಲೋತ್ತಮಾಮ್ ॥ ೧೩೫
ರೂಪಮಾಲೋಕಿತುಂ ಯಸ್ಯಾಶ್ಚತುರ್ದಿಕ್ಕಂ ಚತುರ್ಮುಖಃ ।
ಬಭೂವ ಕಿಲ ಶರ್ವೋಽಪಿ ಕುರ್ವಾಣಾಯಾಃ ಪ್ರದಕ್ಷಿಣಾಮ್ ॥ ೧೩೬

೧೩೮. ಸುಂದೋಪಸುಂದರು ಕೈಲಾಸದ ಉದ್ಯಾನದಲ್ಲಿದ್ದಾಗ ಅವರನ್ನು ಪ್ರಲೋಭನೆಗೆ ಒಳಪಡಿಸುವುದಕ್ಕೋಸ್ಕರ ಬ್ರಹ್ಮನ ಆದೇಶಾನುಸಾರವಾಗಿ ತಿಲೋತ್ತಮೆ ಅವರ ಬಳಿಗೆ ಹೋದಳು.

೧೩೯. ಆ ಸುಂದರಿಯು ಬಳಿಗೆ ಬಂದುದನ್ನು ನೋಡಿದ ಮಾತ್ರದಿಂದಲೇ ಅವರಿಬ್ಬರೂ ಕಾಮಮೋಹಿತರಾಗಿ ಒಬ್ಬೊಬ್ಬರೂ ಅವಳ ಒಂದೊಂದು ತೋಳನ್ನು ಹಿಡಿದುಕೊಂಡರು.

೧೪೦. ತತ್ಕ್ಷಣವೇ ಅವಳನ್ನು ಹೊತ್ತೊಯ್ಯಲು ಅಪೇಕ್ಷಿಸಿದ ಅವರು ಪರಸ್ಪರ ವಿರೋಧದಿಂದ ಹೊಡೆದಾಟವನ್ನಾರಂಭಿಸಿ ಇಬ್ಬರೂ ನಾಶವನ್ನು ಹೊಂದಿದರು.

೧೪೧. ಹೀಗೆ ಸ್ತ್ರೀ ಎಂಬ ವಿಷಯವು ಯಾರಿಗೆ ತಾನೆ ಆಪತ್ತುಗಳಿಗೆ ಕಾರಣವಾಗುವುದಿಲ್ಲ ? ನಿಮ್ಮೈವರಿಗೂ ದ್ರೌಪದಿಯೊಬ್ಬಳೇ ಪ್ರಿಯೆಯಾಗಿದ್ದಾಳೆ.

೧೪೨. ಅವಳನ್ನು ನಿಮಿತ್ತ ಮಾಡಿಕೊಂಡು ನಿಮ್ಮಲ್ಲಿ ಉಂಟಾಗಬಹುದಾದ ಸಂಘರ್ಷವನ್ನು ತಪ್ಪಿಸಬೇಕು. ಇವಳ ಬಗೆಗೆ ನನ್ನ ಮಾತಿನಂತೆ ನೀವು ಒಂದು ಕರಾರು ಮಾಡಿಕೊಳ್ಳಿ.

---

ಸಾ ಪದ್ಮಯೋನೇರಾದೇಶಾತ್ ಪಾರ್ಶ್ವಂ ಸುಂದೋಪಸುಂದಯೋಃ ।
ಪ್ರಲೋಭನಾಯ ಪ್ರಯಯೌ ಕೈಲಾಸೋದ್ಯಾನವರ್ತಿನೋಃ ॥ ೧೩೮
ತೌ ಚಾಸುರೌ ಜಗೃಹತುಸ್ತಾಂ ದೃಷ್ಟ್ವೈವಾಂತಿಕಾಗತಾಮ್ ।
ಉಭಾವಪ್ಯುಭಯೋರ್ಬಾಹ್ವೋಃ ಸುಂದರೀಂ ಕಾಮಮೋಹಿತೌ ॥ ೧೩೯
ಪರಸ್ಪರವಿರೋಧೇನ ಹರಂತೌ ತಾಂ ಚ ತತ್ಕ್ಷಣಮ್ ।
ಪ್ರವೃತ್ತಸಂಪ್ರಹಾರತ್ವಾದ್ ದ್ವಾವಪಿ ಕ್ಷಯಮೀಯತುಃ ॥ ೧೪೦
ಏವಂ ಸ್ತ್ರೀನಾಮ ವಿಷಯೋ ನಿದಾನಂ ಕಸ್ಯ ನಾಪದಾಮ್ ।
ಯುಷ್ಮಾಕಂ ದ್ರೌಪದೀ ಚೈಕಾ ಬಹೂನಾಮಿಹ ವಲ್ಲಭಾ ॥ ೧೪೧
ತತ್ತನ್ನಿಮಿತ್ತಃ ಸಂಘರ್ಷಃ ಸಂರಕ್ಷ್ಯೋ ಭವತಾಂ ಕಿಲ ।
ಮದ್ವಾಕ್ಯಾದಯಮೇತಸ್ಯಾಃ ಸಮಯಶ್ಚಾಸ್ತು ವಃ ಸದಾ ॥ ೧೪೨

೧೪೩. ದ್ರೌಪದಿ ಹಿರಿಯನ ಬಳಿ ಇರುವಾಗ ಕಿರಿಯ ಸಹೋದರರೆಲ್ಲರೂ ಅವಳನ್ನು ತಾಯಿಯೆಂದು ತಿಳಿದುಕೊಳ್ಳಬೇಕು. ಅವಳು ಕಿರಿಯನ ಜೊತೆ ಇರುವಾಗ ಹಿರಿಯ ಸೋದರರು ಅವಳನ್ನು ಸೊಸೆ ಎಂದು ಭಾವಿಸಬೇಕು.

೧೪೪. ರಾಜನೆ, ನಿನ್ನ ಆ ಮುತ್ತಾತಂದಿರು ಒಳ್ಳೆಯದರಲ್ಲೇ ಮನಸಿಟ್ಟವರ್‍ದಾದರಿಂದ ನನ್ನ ಮಾತನ್ನು 'ಹಾಗೆಯೇ ಆಗಲಿ' ಎಂದು ಒಪ್ಪಿಕೊಂಡರು.

೧೪೫. ಅವರೆಲ್ಲ ನನ್ನ ಸ್ನೇಹಿತರಾಗಿದ್ದರು. ವತ್ಸರಾಜ, ಅವರ ಮೇಲಿನ ಪ್ರೀತಿಯಿಂದ ನಾನು ನಿನ್ನನ್ನು ನೋಡಲು ಬಂದೆನು. ನಾನು ಹೇಳುವ ಈ ಮಾತನ್ನು ಕೇಳು.

೧೪೬. ನನ್ನ ಮಾತನ್ನು ಕೇಳುವಂತೆ ನೀನು ಮಂತ್ರಿಗಳ ಮಾತನ್ನೂ ಕೇಳಿ ನಡೆಸಬೇಕು. ಸ್ವಲ್ಪ ಕಾಲದಲ್ಲೇ ನೀನು ಹೆಚ್ಚು ಶ್ರೇಯಸ್ಸನ್ನು ಪಡೆಯುವೆ.

೧೪೭. ಒಂದಷ್ಟು ಕಾಲ ನಿನಗೆ ದುಃಖ ಉಂಟಾಗುವುದು. ಅದರ ಬಗೆಗೆ ನೀನು ಅತಿಯಾಗಿ ಮೋಹಪಡಬಾರದು. ಏಕೆಂದರೆ ಕೊನೆಯಲ್ಲಿ ಅದು ನಿನಗೆ ಸುಖವನ್ನೇ ತರುವುದು."

೧೪೮. ವತ್ಸರಾಜನಿಗೆ ಮುಂದೆ ಉಂಟಾಗಲಿದ್ದ ಏಳ್ಗೆಯನ್ನು ಮಾತಿನ ಧಾಟಿಯಿಂದಲೇ ಸೂಚಿಸುವುದರಲ್ಲಿ ನಿಪುಣನಾಗಿದ್ದ ನಾರದ ಮುನಿಯು ಹೀಗೆ (ಎಲ್ಲವನ್ನೂ) ಚೆನ್ನಾಗಿ ತಿಳಿಸಿಕೊಟ್ಟು ತತ್ಕ್ಷಣವೇ ಅದೃಶ್ಯನಾದನು.

---

ಜ್ಯೇಷ್ಠಾಂತಿಕಗತಾ ಮಾತಾ ಮಂತವ್ಯೇಯಂ ಕನೀಯಸಾ ।
ಜ್ಯೇಷ್ಠೇನ ಚ ಸ್ನುಷಾ ಜ್ಞೇಯಾ ಕನಿಷ್ಠಾಂತಿಕವರ್ತಿನೀ ॥ ೧೪೩

ಇತ್ಯೇತನ್ಮದ್ವಚೋ ರಾಜಂಸ್ತವ ತೇ ಪ್ರಪಿತಾಮಹಾಃ ।
ತಥೇತಿ ಪ್ರತ್ಯಪದ್ಯಂತ ಕಲ್ಯಾಣಕೃತಬುದ್ಧಯಃ ॥ ೧೪೪

ತೇ ಚ ಮೇ ಸುಹೃದೋಽಭೂವಂಸ್ತತ್ಪ್ರೀತ್ಯಾ ಚಾಹಮಾಗತಃ ।
ತ್ವಾಂ ದ್ರಷ್ಟುಮಿಹ ವತ್ಸೇಶ ತದಿದಂ ಶೃಣು ವಚ್ಮಿ ತೇ ॥ ೧೪೫

ಯಥೈತನ್ಮೇ ಕೃತಂ ವಾಕ್ಯಂ ಕುರ್ಯಾಸ್ತ್ವಂ ಮಂತ್ರಿಣಾಂ ತಥಾ ।
ಅಚಿರೇಣ ಚ ಕಾಲೇನ ಮಹತೀಮೃದ್ಧಿಮಾಪ್ಸ್ಯಸಿ ॥ ೧೪೬

ಕಂಚಿತ್ಕಾಲಂ ಚ ದುಃಖಂ ತೇ ಭವಿಷ್ಯತಿ ನ ಚ ತ್ವಯಾ ।
ತತ್ರಾತಿಮೋಹಃ ಕರ್ತವ್ಯಃ ಸುಖಾಂತಂ ಭವಿತಾ ಹಿ ತತ್ ॥ ೧೪೭

ಸಮ್ಯಗೇವಮಭಿಧಾಯ ತತ್ಕ್ಷಣಂ
ವತ್ಸರಾಜಮುದಯಸ್ಯ ಭಾವಿನಃ ।
ಭಂಗಿಸೂಚನವಿಧೌ ವಿಶಾರದೋ
ನಾರದೋ ಮುನಿರದರ್ಶನಂ ಯಯೌ ॥ ೧೪೮

೧೪೫. ಯೌಗಂಧರಾಯಣನೇ ಮೊದಲಾದ ಸಚಿವರೆಲ್ಲರೂ ಮುನಿಶ್ರೇಷ್ಠನಾದ ನಾರದನ ಮಾತಿನಿಂದ ಕಾರ್ಯಸಿದ್ಧಿಯಾಗುವುದೆಂದು ಊಹಿಸಿ ತಾವು ಮಾಡಬೇಕೆಂದಿದ್ದ ಕಾರ್ಯವನ್ನು ನಡೆಸಲು ದೃಢವಾದ ಪ್ರಯತ್ನಗಳನ್ನು ಆರಂಭಿಸಿದರು.

**ಮಹಾಕವಿ ಸೋಮದೇವಭಟ್ಟನು ರಚಿಸಿದ**

**ಕಥಾಸರಿತ್ಸಾಗರದ ಲಾವಾಣಕಲಂಬಕದಲ್ಲಿ**

**ಮೂರನೆಯ ತರಂಗವು ಮುಗಿಯಿತು.**

---

ಸರ್ವೇ ಚ ತಸ್ಯ ವಚಸಾ ಮುನಿಪುಂಗವಸ್ಯ
ಯೌಗಂಧರಾಯಣಮುಖಾಃ ಸಚಿವಾಸ್ತತಸ್ತೇ ।
ಸಂಭಾವ್ಯ ಸಿದ್ಧ್ಯುದಯಮಾತ್ಮಚಿಕೀರ್ಷಿತಸ್ಯ
ಸಂಪಾದನಾಯ ಸುತರಾಂ ಜಗೃಹುಃ ಪ್ರಯತ್ನಮ್ ॥ ೧೪೫

**ಇತಿ ಮಹಾಕವಿ ಶ್ರೀಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ ಲಾವಾಣಕಲಂಬಕೇ**

**ಪ್ರಥಮಸ್ತರಂಗಃ ।**

## ಎರಡನೆಯ ತರಂಗ

೧ ಅನಂತರ ಹಿಂದೆ ನಿರೂಪಿಸಿದ ಯುಕ್ತಿಯಿಂದ ಯೌಗಂಧರಾಯಣಾದಿಗಳು ವತ್ಸರಾಜನನ್ನು ಅವನ ಪ್ರಿಯೆಯೊಡನೆ ಲಾವಾಣಕದ ಕಡೆಗೆ ಕರೆದೊಯ್ದರು.

೨ ಎಲ್ಲಕಡೆ ಹಬ್ಬುತ್ತಿದ್ದ ಸೈನ್ಯದ ಶಬ್ದದಿಂದ ಮಂತ್ರಿಗಳ ಇಷ್ಟಾರ್ಥದ ಸಾಫಲ್ಯವನ್ನು ಹೇಳುತ್ತಿರುವನೋ ಎಂಬಂತಿರಲು ರಾಜನು ಆ ದೇಶಕ್ಕೆ ತಲುಪಿದನು.

೩ ಸೈನ್ಯಸಮೇತನಾಗಿ ವತ್ಸರಾಜನು ಅಲ್ಲಿಗೆ ಬಂದಿರುವುದನ್ನು ತಿಳಿದುಕೊಂಡ ಮಗಧೇಶ್ವರನು ಮುತ್ತಿಗೆ ಹಾಕುವನೇನೋ ಎಂಬ ಭಯದಿಂದ ನಡುಗಿದನು.

೪ ಮಗಧೇಶ್ವರನು ಒಳ್ಳೆಯ ಬುದ್ಧಿಯಿಂದ ಯೌಗಂಧರಾಯಣನ ಬಳಿಗೆ ದೂತನನ್ನು ಕಳುಹಿಸಿದನು. ಕಾರ್ಯದಲ್ಲಿ ಪರಿಣತನಾದ ಹಾಗೂ ಕುಶಲನಾದ ಮಂತ್ರಿ ಯೌಗಂಧರಾಯಣನೂ ಅವನನ್ನು ಅಭಿನಂದಿಸಿದನು.

೫ ಆ ದೇಶದಲ್ಲಿ ವಾಸಿಸಲಾರಂಭಿಸಿದ ವತ್ಸರಾಜನು ಬೇಟೆಗಾಗಿ ಪ್ರತಿದಿನವೂ ದೂರದ ಅಡವಿಯಲ್ಲಿ ಅಲೆಯುತ್ತಿದ್ದನು.

---

## ದ್ವಿತೀಯಸ್ತರಂಗಃ

ತತಃ ಪೂರ್ವೋಕ್ತಯಾ ಯುಕ್ತ್ಯಾ ವತ್ಸರಾಜಂ ಸವಲ್ಲಭಮ್ ।
ಯೌಗಂಧರಾಯಣಾದ್ಯಾಸ್ತೇ ನಿನ್ಯುರ್ಲಾವಾಣಕಂ ಪ್ರತಿ ॥ ೧
ಸ ರಾಜಾ ಪ್ರಾಪ ತಂ ದೇಶಂ ಸೈನ್ಯಘೋಷೇಣ ಮೂರ್ಛತಾ ।
ಅಭಿವಾಂಛಿತಸಂಸಿದ್ಧಿಂ ವದಂತಮಿವ ಮಂತ್ರಿಣಾಮ್ ॥ ೨
ತತ್ರ ಪ್ರಾಪ್ತಂ ವಿದಿತ್ವಾ ಚ ವತ್ಸೇಶಂ ಸಪರಿಚ್ಛದಮ್ ।
ಅವಸ್ಕಂದಭಯಾಶಂಕೀ ಚಕಂಪೇ ಮಗಧೇಶ್ವರಃ ॥ ೩
ಯೌಗಂಧರಾಯಣೋಪಾಂತಂ ಸದ್ಬುದ್ಧಿರ್ವಿಸಸರ್ಜ ಚ ।
ಸ ದೂತಂ ಸೋಽಪಿ ಸನ್ಮಂತ್ರೀ ಕಾರ್ಯಜ್ಞೋಽಭಿನನಂದ ತಮ್ ॥ ೪
ವತ್ಸೇಶ್ವರೋಽಪಿ ನಿವಸಂಸ್ತಸ್ಮಿನ್ ದೇಶೇ ದವೀಯಸೀಮ್ ।
ಅಖೇಟಕಾರ್ಥಮಟವೀಮಟತಿ ಸ್ಮ ದಿನೇದಿನೇ ॥ ೫

೬ – ೭. ಒಂದು ದಿನ ಅವನು ಬೇಟೆಗೆ ಹೋಗಿದ್ದಾಗ ಗೋಪಾಲಕ, ರುಮಣ್ವಂತ, ವಸಂತಕರೊಡನೆ ಕೂಡಿದ ಧೀಮಂತ ಯೌಗಂಧರಾಯಣನು (ಯಾರು ಯಾರು) ಏನು ಕೆಲಸಮಾಡಬೇಕೆಂಬುದರ ಬಗೆಗೆ ಒಪ್ಪಂದವನ್ನು ಮಾಡಿಕೊಂಡು ಯಾರೂ ಇಲ್ಲದಿದ್ದಾಗ ವಾಸವದತ್ತೆಯ ಬಳಿಗೆ ಹೋದನು.

೮. ತನ್ನ ಸೋದರನಿಂದ ಮೊದಲೇ ವಿಷಯವನ್ನು ತಿಳಿದುಕೊಂಡಿದ್ದ ಅನುಕೂಲಳಾಗಿದ್ದ ವಾಸವದತ್ತೆಯನ್ನು ಈ ರಾಜಕಾರ್ಯದಲ್ಲಿ ನೆರವನ್ನು ನೀಡಬೇಕೆಂದು ಯೌಗಂಧರಾಯಣನು ಉಚಿತವಾದ ಮಾತುಗಳಿಂದ ಪ್ರಾರ್ಥಿಸಿದನು.

೯. ತನಗೆ ವಿರಹದ ಕ್ಲೇಶವನ್ನು ತರುವ ಆ ಸಲಹೆಯನ್ನೂ ಅವಳು ಅನುಮತಿಸಿದಳು. ಪತಿಯಲ್ಲಿ ಭಕ್ತಿಯುಳ್ಳ ಕುಲಸ್ತ್ರೀಯರು ಏನನ್ನು ತಾನೆ ಸಹಿಸುವುದಿಲ್ಲ ?

೧೦. ಆಮೇಲೆ ಚತುರ ಯೌಗಂಧರಾಯಣನು ರೂಪಪರಿವರ್ತನವೆಂಬ ಯೋಗವನ್ನು ಬಳಸಿ ರಾಣಿಯನ್ನು ಬ್ರಾಹ್ಮಣಹೆಂಗಸಿನಂತೆ ಮಾಡಿದನು.

೧೧. ವಸಂತಕನನ್ನೂ ಅವನು ಒಕ್ಕಣ್ಣಿನ ವಟುವನ್ನಾಗಿ ಮಾಡಿದನು. ತಾನೂ ಮುದಿಬ್ರಾಹ್ಮಣನ ಆಕಾರವನ್ನು ಧರಿಸಿದನು.

---

ಏಕಸ್ಮಿನ್ ದಿವಸೇ ತಸ್ಮಿನ್ ರಾಜನ್ಯಾಖೇಟಕಂ ಗತೇ ।
ಕರ್ತವ್ಯಸಂವಿದಂ ಕೃತ್ವಾ ಗೋಪಾಲಕಸಮನ್ವಿತಃ ॥ ೬
ಯೌಗಂಧರಾಯಣೋ ಧೀಮಾನ್ ಸರುಮಣ್ವದ್ವಸಂತಕಃ ।
ದೇವ್ಯಾ ವಾಸವದತ್ತಾಯಾ ವಿಜನೇ ನಿಕಟಂ ಯಯೌ ॥ ೭
ತತ್ರ ತಂ ರಾಜಕಾರ್ಯೇಽತ್ರ ಸಾಹಾಯ್ಯೇ ತತ್ತದುಕ್ತಿಭಿಃ ।
ಪ್ರಹ್ವಾಮಭ್ಯರ್ಥಯಾಮಾಸ ಭ್ರಾತ್ರಾ ಪೂರ್ವಂ ಪ್ರಬೋಧಿತಾಮ್ ॥ ೮
ಸಾನುಮೇನೇ ಚ ವಿರಹಕ್ಲೇಶದಾಯಿ ತದಾತ್ಮನಃ ।
ಕಿಂ ನಾಮ ನ ಸಹಂತೇ ಹಿ ಭರ್ತೃಭಕ್ತಾಃ ಕುಲಾಂಗನಾಃ ॥ ೯
ತತಸ್ತಾಂ ಬ್ರಾಹ್ಮಣೀರೂಪಾಂ ದೇವೀಂ ಯೌಗಂಧರಾಯಣಃ ।
ಸ ಚಕಾರ ಕೃತೀ ದತ್ತ್ವಾ ಯೋಗಂ ರೂಪವಿವರ್ತನಮ್ ॥ ೧೦
ವಸಂತಕಂ ಚ ಕೃತವಾನ್ ಕಾಣಂ ವಟುಕರೂಪಿಣಮ್ ।
ಆತ್ಮನಾ ಚ ತಥೈವಾಭೂತ್ ಸ್ಥವಿರಬ್ರಾಹ್ಮಣಾಕೃತಿಃ ॥ ೧೧

೧೨. ಆ ರೂಪದಲ್ಲಿದ್ದ ರಾಣಿಯನ್ನು ಕರೆದುಕೊಂಡು ವಸಂತಕನ ಜೊತೆಯಲ್ಲಿ ಮಹಾಬುದ್ಧಿಶಾಲಿಯಾದ ಯೌಗಂಧರಾಯಣನು ತನ್ನ ಪಾಡಿಗೆ ಮಗಧದೇಶದ ಕಡೆಗೆ ಹೊರಟನು.

೧೩. ತನ್ನ ಮನೆಯಿಂದ ಹೊರಟ ಪತಿವ್ರತೆ ವಾಸವದತ್ತೆಯು ಮನಸ್ಸಿನಿಂದ ಪತಿಯನ್ನೂ ಶರೀರದಿಂದ ಮಾರ್ಗವನ್ನೂ ಸೇರಿದಳು.

೧೪. ಅನಂತರ ರುಮಣ್ವಂತನು ಅವಳ ಅರಮನೆಗೆ ಬೆಂಕಿಯನ್ನಿಟ್ಟು ಉರಿಸಿ “ಹಾ ಹಾ ವಸಂತಕನೂ ರಾಣಿಯೂ ಸುಟ್ಟು ಹೋದರು” ಎಂದು ಕೂಗಿಕೊಂಡನು.

೧೫ ಹಾಗೆ ಅಲ್ಲಿ ಬೆಂಕಿಯೂ ಕೂಗಿಕೊಳ್ಳುವ ಶಬ್ದವೂ ಒಟ್ಟಿಗೆ ಮೇಲೆದ್ದುವು. ಮೆಲ್ಲನೆ ಬೆಂಕಿ ಆರಿತು, ಆದರೆ ಆಕ್ರಂದನದ ಧ್ವನಿ ಕಡಿಮೆಯಾಗಲಿಲ್ಲ.

೧೬ ಯೌಗಂಧರಾಯಣನಾದರೋ ವಾಸವದತ್ತೆ ಮತ್ತು ವಸಂತಕರೊಡನೆ ಮಗಧದೇಶದ ದೊರೆಯ ಪಟ್ಟಣವನ್ನು ತಲುಪಿದನು.

೧೭ ಅಲ್ಲಿ ಉದ್ಯಾನವನದಲ್ಲಿದ್ದ ರಾಜಕುಮಾರಿ ಪದ್ಮಾವತಿಯನ್ನು ನೋಡಿ ರಕ್ಷಕಭಟರು ತಡೆಯುತ್ತಿದ್ದರೂ ಲೆಕ್ಕಿಸದೆ ಅವರಿಬ್ಬರ ಜೊತೆಯಲ್ಲಿ ಯೌಗಂಧರಾಯಣನು ಅವಳ ಸಮೀಪಕ್ಕೆ ಹೋದನು.

೧೮. ಬ್ರಾಹ್ಮಣಿಯ ರೂಪವನ್ನು ಧರಿಸಿದ್ದ ರಾಣಿ ವಾಸವದತ್ತೆಯನ್ನು ನೋಡಿದ ಮಾತ್ರದಿಂದಲೇ ಪದ್ಮಾವತಿಯ ಕಣ್ಣುಗಳಲ್ಲಿ ಪ್ರೀತಿ ಹುಟ್ಟಿತು.

---

ತಥಾರೂಪಾಂ ಗೃಹೀತ್ವಾಥ ತಾಂ ದೇವೀಂ ಸ ಮಹಾಮತಿಃ ।
ವಸಂತಕಸಖಃ ಸ್ವೈರಂ ಪ್ರತಸ್ಥೇ ಮಗಧಾನ್ ಪ್ರತಿ ॥ ೧೨
ತಥಾ ವಾಸವದತ್ತಾ ಸಾ ಸ್ವಗೃಹಾನ್ನಿರ್ಗತಾ ಸತೀ ।
ಅಗಾಚ್ಚಿತ್ತೇನ ಭರ್ತಾರಂ ಪಂಥಾನಂ ವಪುಷಾ ಪುನಃ ॥ ೧೩
ತನ್ಮಂದಿರಮಥಾದೀಪ್ಯ ದಹನೇನ ರುಮಣ್ವತಾ ।
ಹಾ ಹಾ ವಸಂತಕಯುತಾ ದೇವೀ ದಗ್ಧೇತ್ಯಘೋಷ್ಯತ ॥ ೧೪
ತಥಾ ಚ ದಹನಾಕ್ರಂದೌ ಸಮಂ ತತ್ರೋದತಿಷ್ಠತಾಮ್ ।
ಶನೈಃ ಶಶಾಮ ದಹನೋ ನ ಪುನಃ ಕ್ರಂದಿತಧ್ವನಿಃ ॥ ೧೫
ಯೌಗಂಧರಾಯಣಃ ಸೋಽಥ ಸಹ ವಾಸವದತ್ತಯಾ ।
ವಸಂತಕೇನ ಚ ಪ್ರಾಪ ಮಗಧಾಧಿಪತೇಃ ಪುರಮ್ ॥ ೧೬
ತತ್ರೋದ್ಯಾನಗತಾಂ ದೃಷ್ಟ್ವಾ ಸಮಂ ತಾಭ್ಯಾಮುಪಾಯಯೌ ।
ಪದ್ಮಾವತೀಂ ರಾಜಸುತಾಂ ವಾರ್ಯಮಾಣೋಽಪಿ ರಕ್ಷಿಭಿಃ ॥ ೧೭
ಪದ್ಮಾವತ್ಯಾಶ್ಚ ದೃಷ್ಟೈವ ಬ್ರಾಹ್ಮಣೀರೂಪಧಾರಿಣೀಮ್ ।
ದೇವೀಂ ವಾಸವದತ್ತಾಂ ತಾಂ ದೃಶೋಃ ಪ್ರೀತಿರಜಾಯತ ॥ ೧೮

೧೯. ಆ ರಾಜಕುಮಾರಿಯು ರಕ್ಷಕಭಟರನ್ನು ತಡೆದು ಬ್ರಾಹ್ಮಣಾಕಾರದಲ್ಲಿದ್ದ ಯೌಗಂಧರಾಯಣನನ್ನು ತನ್ನ ಬಳಿಗೆ ಕರೆತರಿಸಿದಳು.

೨೦. 'ಮಹಾಬ್ರಾಹ್ಮಣನೆ, ಈ ಹುಡುಗಿ ನಿನಗೆ ಏನಾಗಬೇಕು ? ಯಾವ ಕಾರಣದಿಂದ ಇಲ್ಲಿಗೆ ಬಂದಿರುವೆ ?' ಎಂದು ಅವನನ್ನು ಕೇಳಿದಳು. ಅವನು ಹೀಗೆ ಉತ್ತರಿಸಿದನು.

೨೧. "ರಾಜಪುತ್ರಿ, ಇವಳು ಆವಂತಿಕಾ ಎಂಬ ಹೆಸರಿನ ನನ್ನ ಮಗಳು. ದುಶ್ಚಟವುಳ್ಳ ಇವಳ ಗಂಡನು ಇವಳನ್ನು ಬಿಟ್ಟು ಎಲ್ಲಿಗೋ ಹೋಗಿದ್ದಾನೆ.

೨೨. ಯಶಸ್ವಿನಿ, ಆ ಕಾರಣದಿಂದ ಇವಳನ್ನು ಇಂದು ನಿನ್ನ ಕೈಯಲ್ಲಿ ಇಡುತ್ತಿದ್ದೇನೆ. ನಾನು ಹೋಗಿ ಇವಳ ಗಂಡನನ್ನು ಬೇಗನೆ ಹುಡುಕಿ ತರುವೆನು.

೨೩. ಇವಳ ತಮ್ಮ ಈ ಒಕ್ಕಣ್ಣಿನ ವಟು ಕೂಡ ಇವಳ ಹತ್ತಿರದಲ್ಲೇ ಇರಲಿ. ಅದರಿಂದ ಇವಳಿಗೆ ಒಂಟಿತನದ ದುಃಖವು ಕಾಡುವುದಿಲ್ಲ."

೨೪. ಇಷ್ಟನ್ನು ರಾಜಕುಮಾರಿಗೆ ಹೇಳಿ, ಅವರನ್ನು ಒಪ್ಪಿಸಿ, ವಾಸವದತ್ತೆಯನ್ನು ಬೀಳ್ಕೊಟ್ಟು ಆ ಚತುರ ಮಂತ್ರಿಯು ತತ್‌ಕ್ಷಣವೇ ಲಾವಾಣಕಕ್ಕೆ ಹೋದನು.

---

ಸಾ ರಕ್ಷಿಣೋ ನಿಷಿಧ್ಯೈವ ತತೋ ಯೌಗಂಧರಾಯಣಮ್ ।
ಆನಾಯಯದ್ ರಾಜಕನ್ಯಾ ಬ್ರಾಹ್ಮಣಾಕೃತಿಮಂತಿಕಮ್ ॥ ೧೯
ಪಪ್ರಚ್ಛ ಚ ಮಹಾಬ್ರಹ್ಮನ್ ಕಾ ತೇ ಬಾಲಾ ಭವತ್ಯಸೌ ।
ಕಿಮರ್ಥಮಾಗತೋಽಸೀತಿ ಸೋಽಪಿ ತಾಂ ಪ್ರತ್ಯಭಾಷತ ॥ ೨೦
ಇಯಮಾವಂತಿಕಾ ನಾಮ ರಾಜಪುತ್ರಿ ಸುತಾ ಮಮ ।
ಅಸ್ಯಾಶ್ಚ ಭರ್ತಾ ವ್ಯಸನೀ ತ್ಯಕ್ತ್ವೇಮಾಂ ಕುತ್ರಚಿದ್ಗತಃ ॥ ೨೧
ತದೇತಾಂ ಸ್ಥಾಪಯಾಮ್ಯದ್ಯ ತವ ಹಸ್ತೇ ಯಶಸ್ವಿನಿ ।
ಯಾವತ್ತಮಾನಯಾಮ್ಯಸ್ಯಾ ಗತ್ವಾನ್ವಿಷ್ಯಾಚಿರಾತ್ ಪತಿಮ್ ॥ ೨೨
ಭ್ರಾತಾ ಕಾಣವಟುಶ್ಚಾಯಮಿಹೈವಾಸ್ಯಾಃ ಸಮೀಪಗಃ ।
ತಿಷ್ಠತ್ವೇಕಾಕಿನೀಭಾವದುಃಖಂ ಯೇನ ನ ಯಾತ್ಯಸೌ ॥ ೨೩
ಇತ್ಯುಕ್ತ್ವಾ ರಾಜತನಯಾಮಂಗೀಕೃತವಚಾಸ್ತಯಾ ।
ತಾಮಾಮಂತ್ರ್ಯ ಸ ಸನ್ಮಂತ್ರೀ ದ್ರುತಂ ಲಾವಾಣಕಂ ಯಯೌ ॥ ೨೪

೨೫–೨೬. ಅನಂತರ ಆವಂತಿಕಾ ಎಂಬ ಹೆಸರಿನಿಂದ ಅಲ್ಲಿದ್ದ ವಾಸವದತ್ತೆಯನ್ನೂ ಅವಳ ಹಿಂಬಾಲಕನಾಗಿದ್ದ ಒಕ್ಕಣ್ಣಿನ ವಟುವಿನ ವೇಷವನ್ನು ಧರಿಸಿದ್ದ ವಸಂತಕನನ್ನೂ ಉದಾರವಾಗಿ ಸತ್ಕರಿಸಿದ ಸ್ನೇಹಮಯಿ ಪದ್ಮಾವತಿಯು ಅವರನ್ನು ಜೊತೆಯಲ್ಲಿ ಕರೆದುಕೊಂಡು ಅನೇಕ ಕೌತುಕಗಳಿಂದ ತುಂಬಿದ್ದ ತನ್ನ ಅರಮನೆಯನ್ನು ಪ್ರವೇಶಿಸಿದಳು.

೨೭. ಅರಮನೆಯೊಳಕ್ಕೆ ಹೋದ ವಾಸವದತ್ತೆಯೂ ರಾಮಚರಿತ್ರದ ಚಿತ್ರಗಳಿಂದ ತುಂಬಿದ್ದ ಗೋಡೆಗಳಲ್ಲಿ ಸೀತೆಯನ್ನು ನೋಡುತ್ತಾ ತನ್ನ ವ್ಯಥೆಯನ್ನು ಸಹಿಸಿಕೊಂಡಳು.

೨೮–೨೯. ವಾಸವದತ್ತೆಯ ಆಕಾರದಿಂದ, ಸುಕುಮಾರತೆಯಿಂದ, ಮಲಗುವುದರಲ್ಲೂ ಕುಳಿತುಕೊಳ್ಳುವುದರಲ್ಲೂ ಇದ್ದ ಸೌಷ್ಠವದಿಂದಲೂ ಹಾಗೂ ಕನ್ನೈದಿಲೆಯ ಸುಗಂಧವನ್ನು ಹೊಂದಿದ್ದ ಅವಳ ದೇಹಪರಿಮಳದಿಂದಲೂ ಅವಳು ಉತ್ತಮವಂಶದವಳೆಂದು ನಿಶ್ಚಯಿಸಿ ಅವಳನ್ನು ಅಮೂಲ್ಯವಾದ ಉಪಚಾರಗಳಿಂದ ಪದ್ಮಾವತಿ ನೋಡಿಕೊಂಡಳು.

೩೦. ಇವಳಾವಳೋ ಗುಪ್ತವಾಗಿ ಇಲ್ಲಿದ್ದಾಳೆ. ದ್ರೌಪದಿಯೂ ಗೂಢವಾಗಿ ವಿರಾಟನ ಮನೆಯಲ್ಲಿ ಇರಲಿಲ್ಲವೇ, ಎಂದು ಅವಳು ಯೋಚಿಸಿದಳು.

---

ತತೋ ವಾಸವದತ್ತಾಂ ತಾಂ ಸ್ಥಿತಾಮಾವಂತಿಕಾಖ್ಯಯಾ ।
ವಸಂತಕಂ ಚಾನುಗತಂ ತಂ ಕಾಣವಟುರೂಪಿಣಮ್ ॥ ೨೫

ಸಹಾದಾಯ ಕೃತೋದಾರಸತ್ಕಾರಾ ಸ್ನೇಹಶಾಲಿನೀ ।
ಪದ್ಮಾವತೀ ಸ್ವಭವನಂ ವಿವೇಶ ಬಹುಕೌತುಕಮ್ ॥ ೨೬

ತತ್ರ ವಾಸವದತ್ತಾ ಚ ಪ್ರವಿಷ್ಟಾ ಚಿತ್ರಭಿತ್ತಿಷು ।
ಪಶ್ಯಂತೀ ರಾಮಚರಿತೇ ಸೀತಾಂ ಸೇಹೇ ನಿಜವ್ಯಥಾಮ್ ॥ ೨೭

ಆಕೃತ್ಯಾ ಸೌಕುಮಾರ್ಯೇಣ ಶಯನಾಸನಸೌಷ್ಠವೈಃ ।
ಶರೀರಸೌರಭೇಣಾಪಿ ನೀಲೋತ್ಪಲಸುಗಂಧಿನಾ ॥ ೨೮

ತಾಮುತ್ತಮಾಂ ವಿನಿಶ್ಚಿತ್ಯ ಮಹಾರ್ಹೈರಾತ್ಮನಃ ಸಮೈಃ ।
ಪದ್ಮಾವತೀ ಯಥಾಕಾಮಮುಪಚಾರೈರುಪಾಚರತ್ ॥ ೨೯

ಅಚಿಂತಯಚ್ಚ ಕಾಪ್ಯೇಷಾ ಛನ್ನಾ ನೂನಮಿಹ ಸ್ಥಿತಾ ।
ಗೂಢಾ ಕಿಂ ದ್ರೌಪದೀ ನಾಸೀದ್ ವಿರಾಟವಸತಾವಿತಿ ॥ ೩೦

೩೧. ವಾಸವದತ್ತೆಯು ಪ್ರಸಂಗ ಬಂದಾಗ ವತ್ಸರಾಜನಿಂದ ತಾನು ಹಿಂದೆ ಕಲಿತುಕೊಂಡಿದ್ದ, ಎಂದೂ ಬಾಡದ ಮಾಲೆ ಮತ್ತು ತಿಲಕಗಳನ್ನು ದೇವಿ ಪದ್ಮಾವತಿಗೂ ಮಾಡಿ ಅಲಂಕರಿಸಿದಳು.

೩೨. ಆ ರೀತಿ ಅಲಂಕೃತಳಾದ ಪದ್ಮಾವತಿಯನ್ನು ನೋಡಿ ಅವಳ ತಾಯಿ "ಈ ಮಾಲೆ ಮತ್ತು ತಿಲಕಗಳನ್ನು ಯಾರು ಮಾಡಿದರು ?" ಎಂದು ಬೇರೆ ಯಾರೂ ಇಲ್ಲದಿದ್ದಾಗ ಕೇಳಿದಳು.

೩೩. ಪದ್ಮಾವತಿಯು "ಇಲ್ಲಿ ನನ್ನ ಅರಮನೆಯಲ್ಲಿ ಆವಂತಿಕಾ ಎಂಬ ಒಬ್ಬ ಹೆಂಗಸಿದ್ದಾಳೆ. ಅವಳು ಇದನ್ನೆಲ್ಲ ನನಗಾಗಿ ಮಾಡಿದಳು" ಎಂದು ಹೇಳಿದಳು.

೩೪. ಅದನ್ನು ಕೇಳಿ ಅವಳ ತಾಯಿ ಹೀಗೆಂದಳು. "ಮಗಳೆ, ಹಾಗಿದ್ದರೆ ಅವಳು ಮನುಷ್ಯಳಲ್ಲ. ಇಂಥ ಕೌಶಲವಿರುವವಳು ಯಾವಳೋ ದೇವತೆಯೇ.

೩೫. ದೇವತೆಗಳೂ ಮುನಿಗಳೂ ಒಳ್ಳೆಯ ಜನರ ಮನೆಯಲ್ಲಿ ಮೋಸ ಮಾಡುವುದಕ್ಕಾಗಿ ವಾಸಿಸುತ್ತಾರೆ. ಮಗಳೆ, ಅದರ ಬಗೆಗೆ ಈ ಒಂದು ಕಥೆಯನ್ನು ಕೇಳು.

## ದುರ್ವಾಸ ಋಷಿ - ಕುಂತಿಯರ ಕಥೆ

೩೬. ಕುಂತಿಭೋಜನೆಂಬ ರಾಜನಿದ್ದನು. ವಂಚನೆಯಲ್ಲೇ ಆಸಕ್ತಿ ಹೊಂದಿದ್ದ ದುರ್ವಾಸನೆಂಬ ಋಷಿಯು ಬಂದು ಅವನ ಮನೆಯಲ್ಲಿ ತಂಗಿದನು.

---

ಅಥ ವಾಸವದತ್ತಾಸ್ಯಾಶ್ಚಕ್ರೇ ದೇವ್ಯಾಃ ಪ್ರಸಂಗತಃ ।
ಅಮ್ಲಾನಮಾಲಾತಿಲಕೌ ವತ್ಸೇಶಾತ್ಪೂರ್ವಶಿಕ್ಷಿತೌ ॥ ೩೧
ತದ್ಭೂಷಿತಾಂ ಚ ದೃಷ್ಟ್ವಾ ತಾಂ ಮಾತಾ ಪದ್ಮಾವತೀಂ ರಹಃ ।
ಪಪ್ರಚ್ಛ ಮಾಲಾತಿಲಕೌ ಕೇನೇಮೌ ನಿರ್ಮಿತಾವಿತಿ ॥ ೩೨
ಊಚೇ ಪದ್ಮಾವತೀ ಚೈನಾಮತ್ರ ಮನ್ಮಂದಿರೇ ಸ್ಥಿತಾ ।
ಕಾಚಿದಾವಂತಿಕಾ ನಾಮ ತಯಾ ಕೃತಮಿದಂ ಮಮ ॥ ೩೩
ತಚ್ಛ್ರುತ್ವಾ ಸಾ ಬಭಾಷೇ ತಾಂ ಮಾತಾ ಪುತ್ರಿ ನ ತರ್ಹಿ ಸಾ ।
ಮಾನುಷೀ ಕಾಪಿ ದೇವೀ ಸಾ ಯಸ್ಯಾ ವಿಜ್ಞಾನಮೀದೃಶಮ್ ॥ ೩೪
ದೇವತಾ ಮುನಯಶ್ಚಾಪಿ ವಂಚನಾರ್ಥಂ ಸತಾಂ ಗೃಹೇ ।
ತಿಷ್ಠಂತ್ಯೇವ ತಥಾ ಚೈತಾಮತ್ರ ಪುತ್ರಿ ಕಥಾಂ ಶೃಣು ॥ ೩೫
ಬಭೂವ ಕುಂತಿಭೋಜಾಖ್ಯೋ ರಾಜಾ ತಸ್ಯಾಪಿ ವೇಶ್ಮನಿ ।
ಆಗತ್ಯ ತಸ್ಥೌ ದುರ್ವಾಸಾ ವಂಚನೈಕರಸೋ ಮುನಿಃ ॥ ೩೬

೩೭ ಆ ಮುನಿಯ ಸೇವೆಯನ್ನು ಮಾಡಲು ರಾಜನು ತನ್ನ ಮಗಳಾದ ಕುಂತಿಗೆ ಅಪ್ಪಣೆ ಮಾಡಿದನು. ಅವಳೂ ಪ್ರಯತ್ನಪಟ್ಟು ಅವನನ್ನು ಉಪಚರಿಸಿದಳು.

೩೮. ಒಮ್ಮೆ ಮುನಿಯು ಕುಂತಿಯನ್ನು ಪರೀಕ್ಷಿಸುವ ಇಚ್ಛೆಯಿಂದ "ನಾನು ಸ್ನಾನವನ್ನು ಮಾಡಿ ಬರುವುದರೊಳಗೆ ಬೇಗನೆ ಪಾಯಸವನ್ನು ಮಾಡು." ಎಂದು ಹೇಳಿದನು.

೩೯. ಹೀಗೆ ಹೇಳಿ ಬೇಗಬೇಗ ಸ್ನಾನವನ್ನು ಮಾಡಿ ಆ ಮುನಿಯು ಊಟಮಾಡಲು ಬಂದು ಬಿಟ್ಟನು. ಕುಂತಿಯು ಪಾಯಸ ತುಂಬಿದ ಪಾತ್ರೆಯನ್ನು ಅವನ ಮುಂದೆ ಇಟ್ಟಳು.

೪೦. ಬಹಳ ಬಿಸಿಯಾಗಿದ್ದ ಪರಮಾನ್ನದಿಂದ ಆ ಪಾತ್ರೆ ಉರಿಯುತ್ತಿರುವಂತಿತ್ತು. ಕೈಯಲ್ಲಿ ಅದನ್ನು ಮುಟ್ಟಲು ಸಾಧ್ಯವಿಲ್ಲವೆಂದು ಅರಿತು ಮುನಿಯು ಕುಂತಿಯ ಬೆನ್ನ ಮೇಲೆ ತನ್ನ ನೋಟವನ್ನು ಹರಿಸಿದನು.

೪೧. ಮುನಿಯ ಅಭಿಪ್ರಾಯವೇನೆಂದು ಅರಿತುಕೊಂಡ ಕುಂತಿಯು ಆ ಪಾತ್ರೆಯನ್ನು ತನ್ನ ಬೆನ್ನಮೇಲೆ ಇಟ್ಟುಕೊಂಡಳು. ಅನಂತರ ಅವನು ತನ್ನ ಇಷ್ಟ ಬಂದಂತೆ ಊಟ ಮಾಡಿದನು. ಕುಂತಿಯ ಬೆನ್ನು ಸುಟ್ಟಿತು.

೪೨. ತೀವ್ರವಾಗಿ ಸುಟ್ಟಿದ್ದರೂ ಕುಂತಿಯು ಯಾವ ವಿಕಾರವನ್ನೂ ತೋರಿಸದೆ ನಿಂತಾಗ ಅದರಿಂದ ಸಂತುಷ್ಟನಾದ ಋಷಿಯು ಊಟವಾದ ಅನಂತರ ಅವಳಿಗೆ ವರವನ್ನಿತ್ತನು.

---

ಸ ತಸ್ಯ ಪರಿಚರ್ಯಾರ್ಥಂ ರಾಜಾ ಕುಂತೀಂ ನಿಜಾಂ ಸುತಾಮ್ ।
ಆದಿದೇಶ ಮುನಿಂ ಸಾಪಿ ಯತ್ನೇನೋಪಚಚಾರ ತಮ್ ॥ ೩೭

ಏಕದಾ ಸ ಮುನಿಃ ಕುಂತೀಂ ಜಿಜ್ಞಾಸುಃ ಸನ್ನಭಾಷತ ।
ಪರಮಾನ್ನಂ ಪಚೇಃ ಶೀಘ್ರಂ ಸ್ನಾತ್ವಾ ಯಾವದುಪೈಮ್ಯಹಮ್ ॥ ೩೮

ಇತ್ಯುಕ್ತ್ವಾ ತ್ವರಿತಂ ಸ್ನಾತ್ವಾ ಸ ಚರ್ಷಿರ್ಭೋಕ್ತುಮಾಯಯೌ ।
ಕುಂತೀ ತದನ್ನಪೂರ್ಣಾಂ ಚ ತಸ್ಮೈ ಪಾತ್ರೀಮಢೌಕಯತ್ ॥ ೩೯

ಅತಿತಪ್ತೇನ ಚಾನ್ನೇನ ಜ್ವಲಂತೀಮಿವ ತಾಂ ಮುನಿಃ ।
ಮತ್ವಾ ಹಸ್ತಗ್ರಹಾಯೋಗ್ಯಾಂ ಕುಂತ್ಯಾಃ ಪೃಷ್ಠೇ ದೃಶಂ ದಧೌ ॥ ೪೦

ಸಾಪಿ ಪೃಷ್ಠೇನ ತಾಂ ಪಾತ್ರೀಂ ದಧೌ ಲಬ್ಧಾಶಯಾ ಮುನೇಃ ।
ತತಃ ಸ ಬುಭುಜೇ ಸ್ವೇಚ್ಛಂ ಕುಂತೀಪೃಷ್ಠಂ ತ್ವದಹ್ಯತ ॥ ೪೧

ದಹ್ಯಮಾನಾಪಿ ಗಾಢಂ ಸಾ ಯತ್ತಸ್ಥಾವವಿಕಾರಿಣೀ ।
ತೇನ ತುಷ್ಟೋ ಮುನಿರ್ಭುಕ್ತ್ವಾ ದದೌ ತಸ್ಯಾಸ್ತತೋ ವರಮ್ ॥ ೪೨

೪೩ ಹೀಗೆ ಆ ಮುನಿಯು ಅಲ್ಲಿ ಇದ್ದಂತೆ ಈ ಆವಂತಿಕೆಯೂ ಹಾಗೆಯೇ ಇರುವ ಯಾವಳೋ (ದೇವತೆ). ನೀನು ಅವಳನ್ನು ಆರಾಧಿಸಬೇಕು."

೪೪. ಹೀಗೆ ತಾಯಿಯ ಬಾಯಿಂದಲೇ ಕೇಳಿದ ಪದ್ಮಾವತಿಯು ಅಲ್ಲಿ ರೂಪಾಂತರದಿಂದಿದ್ದ ವಾಸವದತ್ತೆಯನ್ನು ತುಂಬ ಗೌರವದಿಂದ ನೋಡತೊಡಗಿದಳು.

೪೫ ವಾಸವದತ್ತೆಯೂ ತನ್ನ ಗಂಡನಿಂದ ದೂರವಾಗಿ ಮಧ್ಯರಾತ್ರಿಯ ತಾವರೆಯ ಸರೋವರದಂತೆ ಕಾಂತಿಹೀನಳಾಗಿ ಅಲ್ಲಿದ್ದಳು.

೪೬ ವಸಂತಕನು ಹುಡುಗತನಕ್ಕೆ ಅನುಗುಣವಾಗಿ ಮಾಡುತ್ತಿದ್ದ ವಿಕಾರಗಳು ಆಗಾಗ ಆ ವಿಯೋಗಿನಿಯ ಮುಖದಲ್ಲಿ ಮುಗುಳುನಗೆಗೆ ಅವಕಾಶವನ್ನು ಕೊಡುತ್ತಿದ್ದುವು.

೪೭ ಈ ಮಧ್ಯದಲ್ಲಿ ತುಂಬ ದೂರದ ಬೇಟೆಯ ಭೂಮಿಗಳಲ್ಲಿ ಅಲೆದು ದೀರ್ಘಕಾಲದ ಅನಂತರ ವತ್ಸರಾಜನು ಒಂದು ಸಂಜೆ ಲಾವಾಣಕ್ಕೆ ಹಿಂದಿರುಗಿ ಬಂದನು.

೪೮. ಅಲ್ಲಿ ಬೆಂಕಿಯಿಂದ ಬೂದಿಯಾಗಿದ್ದ ಅಂತಃಪುರವನ್ನು ನೋಡಿದನು. ವಸಂತಕನೂ ವಾಸವದತ್ತೆಯೂ ಸುಟ್ಟುಹೋದರೆಂಬುದನ್ನು ಮಂತ್ರಿಗಳಿಂದ ಕೇಳಿದನು.

---

ಇತ್ಯಾಸೀತ್ ಸ ಮುನಿಸ್ತತ್ರ ತದೇಷಾವಂತಿಕಾಪಿ ತೇ ।
ತದ್ವದೇವ ಸ್ಥಿತಾ ಕಾಪಿ ತತ್ತ್ವಮಾರಾಧಯೇರಿಮಾಮ್ ॥ ೪೩
ಇತಿ ಮಾತುರ್ಮುಖಾಚ್ಛ್ರುತ್ವಾ ಪದ್ಮಾವತ್ಯನ್ಯರೂಪಿಣೀಮ್ ।
ತತ್ರ ವಾಸವದತ್ತಾಂ ತಾಂ ಸುತರಾಂ ಬಹ್ವಮನ್ಯತ ॥ ೪೪
ಸಾಪಿ ವಾಸವದತ್ತಾತ್ರ ನಿಜನಾಥವಿನಾಕೃತಾ ।
ತಸ್ಥೌ ವಿಧುರವಿಚ್ಛಾಯಾ ನಿಶೀಥಸ್ಥೇವ ಪದ್ಮಿನೀ ॥ ೪೫
ವಸಂತಕವಿಕಾರಾಶ್ಚ ತೇತೇ ಬಾಲೋಚಿತಾ ಮುಹುಃ ।
ಮುಖೇ ತಸ್ಯಾ ವಿಯೋಗಿನ್ಯಾಃ ಸ್ಮಿತಸ್ಯಾವಸರಂ ದದುಃ ॥ ೪೬
ಅತ್ರಾಂತರೇಽತಿದೂರಾಸು ಭ್ರಾಂತ್ವಾಖೇಟಕಭೂಮಿಷು ।
ವತ್ಸರಾಜಶ್ಚಿರಾದಾಗಾತ್ ಸಾಯಂ ಲಾವಾಣಕಂ ಪುನಃ ॥ ೪೭
ಭಸ್ಮೀಕೃತಮಪಶ್ಯಚ್ಚ ತತ್ರಾಂತಃಪುರಮಗ್ನಿನಾ ।
ದೇವೀಂ ದಗ್ಧಾಂ ಚ ಶುಶ್ರಾವ ಮಂತ್ರಿಭ್ಯಃ ಸವಸಂತಕಾಮ್ ॥ ೪೮

೪೯. ಕೇಳುತ್ತಿದ್ದಂತೆಯೇ ಅವನ ದುಃಖದ ನೋವನ್ನು ದೂರ ಮಾಡಲು ಅಪೇಕ್ಷಿಸಿ ಬಂದಿತೋ ಎಂಬಂತಿದ್ದ ಮೂರ್ಛೆಯಿಂದ ಜ್ಞಾನವನ್ನು ಕಳೆದುಕೊಂಡು ನೆಲದ ಮೇಲೆ ಬಿದ್ದನು.

೫೦. ಒಂದು ಕ್ಷಣದಲ್ಲೇ ಮತ್ತೆ ಸಂಜ್ಞೆ ಬಂದಾಗ ಅಲ್ಲಿದ್ದ ರಾಣಿಯ ದಹನದ ನೋಟದ ಬೆಂಕಿಯು ಅವನನ್ನು ಆವರಿಸಿಕೊಂಡಂತೆ ಅವನ ಹೃದಯವು ಶೋಕದಿಂದ ಉರಿಯತೊಡಗಿತು.

೫೧. ದುಃಖದಿಂದ ಕಂಗೆಟ್ಟು ಅಳುತ್ತಾ ವತ್ಸರಾಜನು ತನ್ನ ಶರೀರವನ್ನು ತ್ಯಜಿಸಲು ಉದ್ಯುಕ್ತನಾದನು. ಆದರೆ ಮರು ಕ್ಷಣದಲ್ಲೇ ಒಂದು ವಿಷಯ ನೆನಪಿಗೆ ಬಂದು ಹೀಗೆ ಚಿಂತಿಸಿದನು.

೫೨. "ನನ್ನ ರಾಣಿಗೆ ವಿದ್ಯಾಧರರಿಗೆಲ್ಲ ಒಡೆಯನಾಗುವ ಮಗನು ಹುಟ್ಟುವನೆಂದು ನಾರದಮುನಿಯು ನನಗೆ ಹೇಳಿದ್ದನು. ಅದು ಸುಳ್ಳಾಗಲಾರದು.

೫೩. ಸ್ವಲ್ಪ ಕಾಲದವರೆಗೆ ನನಗೆ ದುಃಖವಿರುವುದೆಂದೂ ಅದೇ ಮುನಿ ಹೇಳಿದ್ದನು. ಅಲ್ಲದೆ ಗೋಪಾಲಕನಿಗೆ ಹೆಚ್ಚು ದುಃಖವಾದಂತೆ ಕಾಣಿಸುವುದಿಲ್ಲ .

೫೪. ಈ ಯೌಗಂಧರಾಯಣಾದಿಗಳೂ ಅತಿಯಾಗಿ ದುಃಖಪಡುತ್ತಿರುವುದು ಕಾಣಿಸುತ್ತಿಲ್ಲ. ಆದ್ದರಿಂದ ನನ್ನ ರಾಣಿ ಹೇಗಾದರೂ ಬದುಕಿಬರುವಳೆಂದು ತೋರುತ್ತದೆ.

---

ಶ್ರುತ್ವೈವ ಚಾಪತದ್ ಭೂಮೌ ಮೋಹೇನ ಹೃತಚೇತನಃ ।
ತದ್ದುಃಖಾನುಭವಕ್ಲೇಶಮಪಾಕರ್ತುಮಿವೇಚ್ಛತಾ ॥ ೪೯

ಕ್ಷಣಾಚ್ಚ ಲಬ್ಧಸಂಜ್ಞಃ ಸನ್ ಜಜ್ವಾಲ ಹೃದಯೇ ಶುಚಾ ।
ಆವಿಷ್ಟ ಇವ ತತ್ರಸ್ಥದೇವೀದಾಹೇಕ್ಷಣಾಗ್ನಿನಾ ॥ ೫೦

ವಿಲಪನ್ನಥ ದುಃಖಾರ್ತೋ ದೇಹತ್ಯಾಗೈಕಸಂಮುಖಃ ।
ಕ್ಷಣಾಂತರೇ ಸ ನೃಪತಿಃ  ಸಂಸ್ಮೃತ್ಯೈತದಚಿಂತಯತ್ ॥ ೫೧

ವಿದ್ಯಾಧರಾಧಿಪಃ ಪುತ್ರೋ ದೇವ್ಯಾಸ್ತಸ್ಯಾ ಭವಿಷ್ಯತಿ ।
ಏತನ್ಮೇ ನಾರದಮುನಿರ್ವಕ್ತಿ ಸ್ಮ ನ ಚ ತನ್ಮೃಷಾ ॥ ೫೨

ಕಂಚಿತ್ಕಾಲಂ ಚ ದುಃಖಂ ಮೇ ತೇನೈವ ಮುನಿನೋದಿತಮ್ ।
ಗೋಪಾಲಕಸ್ಯ ಚೈತಸ್ಯ ಶೋಕಃ ಸ್ವಲ್ಪ ಇವೇಕ್ಷ್ಯತೇ ॥ ೫೩

ಯೌಗಂಧರಾಯಣಾದೀನಾಂ ನ ಚೈಷಾಮತಿದುಃಖಿತಾ ।
ದೃಶ್ಯತೇ ತೇನ ಜಾನೇ ಸಾ ದೇವೀ ಜೀವೇತ್ ಕಥಂಚನ ॥ ೫೪

೫೫. ಇದು ಮಂತ್ರಿಗಳೇ ಮಾಡಿರುವ ನೀತಿ (ತಂತ್ರ) ಇರಬಹುದು. ಆದ್ದರಿಂದ ಮುಂದೆಂದೋ ನನಗೆ (ನನ್ನ) ರಾಣಿಯೊಡನೆ ಮತ್ತೆ ಸಮಾಗಮ ಆಗಬಹುದು.

೫೬. ಆದ್ದರಿಂದ ಇದರ ಕೊನೆಯವರೆಗೂ ನೋಡುತ್ತೇನೆ" ಎಂದು ಆಲೋಚಿಸಿದ ರಾಜನು ಮಂತ್ರಿಗಳಿಂದ ಬೋಧನೆಯನ್ನೂ ಪಡೆದು ಎದೆಯಲ್ಲಿ ಧೈರ್ಯವನ್ನು ತಂದುಕೊಂಡನು.

೫೭. ಗೋಪಾಲಕನು ಆ ಕ್ಷಣದಲ್ಲೇ ನಡೆದುದೆಲ್ಲವನ್ನು ಯಥಾವತ್ತಾಗಿ ತಿಳಿಸುವ ಸಂದೇಶದೊಡನೆ (ತನ್ನ ತಂದೆತಾಯಿಗಳ) ಧೈರ್ಯಕ್ಕೋಸ್ಕರ ಗುಪ್ತವಾಗಿ ಗೂಢಚಾರನನ್ನು (ಉಜ್ಜಯಿನಿಗೆ) ಕಳುಹಿಸಿಕೊಟ್ಟನು.

೫೮. ಹೀಗೆ ಇವರ ವೃತ್ತಾಂತ ನಡೆದಾಗ ಲಾವಾಣಕದಲ್ಲಿದ್ದ ಗೂಢಚಾರರು ಹೋಗಿ ಮಗಧರಾಜನಿಗೆ ಎಲ್ಲ ವಿಷಯವನ್ನೂ ನಿವೇದಿಸಿದರು.

೫೯. ಸಮಯಪ್ರಜ್ಞೆಯನ್ನು ಹೊಂದಿದ್ದ ಮಗಧರಾಜನು ಅದೆಲ್ಲವನ್ನೂ ಅರಿತುಕೊಂಡು ತನ್ನ ಮಗಳು ಪದ್ಮಾವತಿಯನ್ನು ವತ್ಸರಾಜನಿಗೆ, ಹಿಂದೆ ಅವನ ಮಂತ್ರಿಗಳು ಪ್ರಾರ್ಥಿಸಿದ್ದಂತೆ, ಕೊಡಲು ಬಯಸಿದನು.

೬೦. ಅನಂತರ ದೂತರ ಮೂಲಕ ಅದನ್ನು ವತ್ಸರಾಜನಿಗೂ ಯೌಗಂಧರಾಯಣನಿಗೂ ತನ್ನ ಅಪೇಕ್ಷೆಯೆಂಬಂತೆ ಸಂದೇಶವನ್ನು ತಿಳಿಸಿದನು.

---

ಇಯಂ ಕಿಮಪಿ ನೀತಿಸ್ತು ಪ್ರಯುಕ್ತಾ ಮಂತ್ರಿಭಿರ್ಭವೇತ್ ।
ಅತೋ ಮಮ ಭವೇಜ್ಜಾತು ತಯಾ ದೇವ್ಯಾ ಸಮಾಗಮಃ ॥ ೫೫
ತತ್ ಪಶ್ಯಾಮ್ಯತ್ರ ಪರ್ಯಂತಮಿತ್ಯಾಲೋಚ್ಯ ಸ ಭೂಪತಿಃ ।
ನಿದಧೇ ಹೃದಯೇ ಧೈರ್ಯಂ ಬೋಧ್ಯಮಾನಶ್ಚ ಮಂತ್ರಿಭಿಃ ॥ ೫೬
ಗೋಪಾಲಕಶ್ಚ ಸಂದಿಶ್ಯ ತದ್ಯಥಾವಸ್ತು ತತ್‍ಕ್ಷಣಮ್ ।
ಪ್ರಜಿಘಾಯ ತತಶ್ಚಾರಂ ಧೃತಿಹೇತೋರಲಕ್ಷಿತಮ್ ॥ ೫೭
ಏವಂ ಗತೇ ಸ್ವವೃತ್ತಾಂತೇ ಲಾವಾಣಕಗತೈಸ್ತದಾ ।
ಗತ್ವಾ ಮಗಧರಾಜಾಯ ಚಾರೈಃ ಸರ್ವಂ ನಿವೇದಿತಮ್ ॥ ೫೮
ಸ ತದ್ ಬುದ್ಧ್ವೈವ ಕಾಲಜ್ಞೋ ವತ್ಸರಾಜಾಯ ತಾಂ ಸುತಾಮ್ ।
ದಾತುಂ ಪದ್ಮಾವತೀಮೈಚ್ಛತ್ ಪೂರ್ವಂ ತನ್ಮಂತ್ರಿಮಾರ್ಗಿತಾಮ್ ॥ ೫೯
ತತೋ ದೂತಮುಖೇನೈನಮರ್ಥಂ ವತ್ಸೇಶ್ವರಾಯ ಸಃ ।
ಯೌಗಂಧರಾಯಣಾಯಾಪಿ ಸಂದಿದೇಶ ಯಥೇಪ್ಸಿತಮ್ ॥ ೬೦

೬೧. ಯೌಗಂಧರಾಯಣನ ಮಾತಿನಂತೆ ವತ್ಸರಾಜನು ಇದಕ್ಕಾಗಿಯೇ ವಾಸವದತ್ತೆಯನ್ನು ಬಚ್ಚಿಟ್ಟಿರಬಹುದೆಂದು ಚಿಂತಿಸಿ ಅದಕ್ಕೆ ಒಪ್ಪಿಗೆ ನೀಡಿದನು.

೬೨. ಅನಂತರ ಬೇಗನೆ ಲಗ್ನವನ್ನು ನಿಶ್ಚಯಿಸಿ ಯೌಗಂಧರಾಯಣನು ಮಗಧರಾಜನಿಗೆ ಪ್ರತಿದೂತನನ್ನು ಕಳುಹಿಸಿದನು.

೬೩–೬೪. "ನಿಮ್ಮ ಇಚ್ಛೆಯನ್ನು ನಾವು ಅಂಗೀಕರಿಸಿದ್ದೇವೆ. ಇಂದಿಗೆ ಏಳನೆಯ ದಿವಸ ಪದ್ಮಾವತಿಯನ್ನು ಮದುವೆಯಾಗಲು ವತ್ಸೇಶ್ವರನು ನಿಮ್ಮಲ್ಲಿಗೆ ಬರುವನು. ಅದರಿಂದ ಅವನು ಬೇಗನೆ ವಾಸವದತ್ತೆಯನ್ನು ಮರೆಯಲು ಸಾಧ್ಯವಾಗುತ್ತದೆ" ಎಂದು ಮಹಾಮಂತ್ರಿ ಯೌಗಂಧರಾಯಣನು ಮಗಧರಾಜನಿಗೆ ಸಂದೇಶವನ್ನು ಕೊಟ್ಟನು.

೬೫. ಪ್ರತಿದೂತನು ಅಲ್ಲಿಗೆ ಹೋಗಿ ಮಗಧರಾಜನಿಗೆ ಆ ಸಂದೇಶವನ್ನು ಯಥಾವತ್ತಾಗಿ ಹೇಳಿದನು. ಅವನೂ ಪ್ರತಿದೂತನನ್ನು ಅಭಿನಂದಿಸಿದನು.

೬೬. ಅನಂತರ ಮಗಧರಾಜನು ಮಗಳಲ್ಲಿ ತನಗಿದ್ದ ಪ್ರೀತಿ, ತನ್ನ ಇಚ್ಛೆ ಮತ್ತು ಐಶ್ವರ್ಯಗಳಿಗೆ ಉಚಿತವಾಗಿ ವಿವಾಹೋತ್ಸವಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿದನು.

೬೭. ಪದ್ಮಾವತಿಯು ತನಗೆ ಇಷ್ಟವಾದ ವರನು ಸಿಕ್ಕಿದನೆಂಬುದನ್ನು ಕೇಳಿ ಆನಂದಪಟ್ಟಳು. ವಾಸವದತ್ತೆಯಾದರೋ ಈ ವಾರ್ತೆಯನ್ನು ಕೇಳಿ ದುಃಖಕ್ಕೆ ಈಡಾದಳು.

---

ಯೌಗಂಧರಾಯಣೋಕ್ತ್ಯಾ ಚ ವತ್ಸೇಶೋಽಂಗೀಚಕಾರ ತತ್ ।
ಪ್ರಚ್ಛಾದಿತೈತದರ್ಥಂ ಸ್ಯಾದ್ದೇವೀ ಜಾತ್ವಿತಿ ಚಿಂತಯನ್ ॥ ೬೧
ತತೋ ಲಗ್ನಂ ವಿನಿಶ್ಚಿತ್ಯ ತೂರ್ಣಂ ಯೌಗಂಧರಾಯಣಃ ।
ತಸ್ಮೈ ಮಗಧರಾಜಾಯ ಪ್ರತಿದೂತಂ ವ್ಯಸರ್ಜಯತ್ ॥ ೬೨
ತ್ವದಿಚ್ಛಾಂಗೀಕೃತಾಸ್ಮಾಭಿಸ್ತದಿತಃ ಸಪ್ತಮೇ ದಿನೇ ।
ಪದ್ಮಾವತೀವಿವಾಹಾಯ ವತ್ಸೇಶೋಽತ್ರಾಗಮಿಷ್ಯತಿ ॥ ೬೩
ಶೀಘ್ರಂ ವಾಸವದತ್ತಾಂ ಚ ಯೇನಾಸೌ ವಿಸ್ಮರಿಷ್ಯತಿ ।
ಇತಿ ಚಾಸ್ಮೈ ಮಹಾಮಂತ್ರೀ ಸಂದಿದೇಶ ಸ ಭೂಭೃತೇ ॥ ೬೪
ಪ್ರತಿದೂತಃ ಸ ಗತ್ವಾ ಚ ಯಥಾಸಂದಿಷ್ಟಮಭ್ಯಧಾತ್ ।
ತತೋ ಮಗಧರಾಜಾಯ ಸ ಚಾಪ್ಯಭಿನನಂದ ತಮ್ ॥ ೬೫
ತತಃ ಸ ದುಹಿತೃಸ್ನೇಹನಿಜೇಚ್ಛಾವಿಭವೋಚಿತಮ್ ।
ವಿವಾಹೋತ್ಸವಸಂಭಾರಂ ಚಕಾರ ಮಗಧೇಶ್ವರಃ ॥ ೬೬
ಸಾ ಚಾಭೀಷ್ಟವರಶ್ರುತ್ಯಾ ಮುದಂ ಪದ್ಮಾವತೀ ಯಯೌ ।
ಪ್ರಾಪ ವಾಸವದತ್ತಾ ಚ ತದ್ವಾರ್ತಾಕರ್ಣನಾಚ್ಛುಚಮ್ ॥ ೬೭

೬೮. ಅವಳ ಕಿವಿಗೆ ಬಿದ್ದ ಆ ವಾರ್ತೆಯು ಅವಳ ಮುಖದ ಕಾಂತಿಯನ್ನು ಕುಂದಿಸಿ, ಗುಪ್ತವಾಗಿ ವಾಸಮಾಡಿದುದರಿಂದ ಉಂಟಾದ ವಿರೂಪತೆಗೆ ನೆರವನ್ನು ನೀಡಿದಂತಿತ್ತು.

೬೯. ಈ ರೀತಿಯಾಗಿ ಶತ್ರು ಮಿತ್ರನಾಗಿ ಬಿಡುತ್ತಾನೆ. ನಿನ್ನ ಗಂಡನೂ ನಿನ್ನಲ್ಲಿ ಬೇರೆ ವಿಧವಾಗಿ ವರ್ತಿಸುವುದಿಲ್ಲ, ಎಂದು ವಸಂತಕನು ಹೇಳಿದ ಮಾತು ಸಖಿಯಂತೆ ಅವಳಲ್ಲಿ ಧೈರ್ಯವನ್ನು ತುಂಬಿತು.

೭೦. ಒಳ್ಳೆಯ ಮನಸ್ಸಿನ ವಾಸವದತ್ತೆಯು ಪದ್ಮಾವತಿಯ ಮದುವೆ ಹತ್ತಿರ ಬಂದಾಗ ಮತ್ತೆ ಬಾಡದಿರುವ ಮಾಲೆಯನ್ನು ಮಾಡಿಕೊಟ್ಟು ದಿವ್ಯವಾದ ತಿಲಕವನ್ನಿಟ್ಟಳು.

೭೧. ಅನಂತರ ಏಳನೆಯ ದಿನದಂದು ವತ್ಸರಾಜನು ಮಂತ್ರಿಗಳೊಡನೆ ಸೈನ್ಯಸಮೇತನಾಗಿ ಮದುವೆಗಾಗಿ ಬಂದನು.

೭೨. ಹೀಗೆ ಮಾಡಿದರೆ ವಾಸವದತ್ತೆ ನನಗೆ ಮತ್ತೆ ಸಿಕ್ಕುವಳು ಎಂಬ ಆಶೆ ಇಲ್ಲದೆ ಹೋಗಿದ್ದರೆ, ವಿರಹಿ ವತ್ಸರಾಜನು ಈ ಕಾರ್ಯವನ್ನು ಮನಸ್ಸಿನಿಂದಾದರೂ ಹೇಗೆ ಮುಟ್ಟುತ್ತಿದ್ದನು ?

೭೩. ಜನರ ಕಣ್ಣುಗಳಿಗೆ ಹಬ್ಬವನ್ನುಂಟುಮಾಡುವ ಉದಯಪರ್ವತದ ಮೇಲಿರುವ ಚಂದ್ರನನ್ನು ಸಮುದ್ರವು ಎದುರುಗೊಳ್ಳುವಂತೆ ಮಗಧರಾಜನು ಆನಂದದಿಂದ ವತ್ಸರಾಜನನ್ನು ಕೂಡಲೇ ಬಂದು ಎದುರುಗೊಂಡನು.

---

ಸಾ ವಾರ್ತಾ ಕರ್ಣಮಾಗತ್ಯ ತಸ್ಯಾ ವೈವರ್ಣ್ಯದಾಯಿನೀ ।
ಪ್ರಚ್ಛನ್ನವಾಸವೈರೂಪ್ಯಸಾಹಾಯಕಮಿವಾಕರೋತ್ ॥ ೬೮

ಇತ್ಥಂ ಮಿತ್ರೀಕೃತಃ ಶತ್ರುರ್ನ ಚ ಭರ್ತಾನ್ಯಥಾ ತ್ವಯಿ ।
ವಸಂತಕೋಕ್ತಿರಿತ್ಯಸ್ಯಾಃ ಸಖೀವ ವಿದಧೇ ಧೃತಿಮ್ ॥ ೬೯

ಅಥಾಸನ್ನವಿವಾಹಾಯಾಃ ಪದ್ಮಾವತ್ಯಾ ಮನಸ್ವಿನೀ ।
ಅಮ್ಲಾನಮಾಲಾತಿಲಕೌ ದಿವ್ಯೌ ಭೂಯಶ್ಚಕಾರ ಸಾ ॥ ೭೦

ತತೋ ವತ್ಸೇಶ್ವರಸ್ತತ್ರ ಸಂಪ್ರಾಪ್ತೇ ಸಪ್ತಮೇಽಹನಿ ।
ಸಸೈನ್ಯೋ ಮಂತ್ರಿಭಿಃ ಸಾಕಂ ಪರಿಣೇತುಂ ಕಿಲಾಯಯೌ ॥ ೭೧

ಮನಸಾಪಿ ತದುದ್ಯೋಗಂ ವಿರಹೀ ಸ ಕಥಂ ಸ್ಪೃಶೇತ್ ।
ದೇವೀಂ ಲಭೇಯ ತಾಮೇವಮಿತ್ಯಾಶಾ ನ ಭವೇದ್ಯದಿ ॥ ೭೨

ಪ್ರತ್ಯುದ್ಯಯೌ ಚ ತಂ ಸದ್ಯಃ ಸಾನಂದೋ ಮಗಧೇಶ್ವರಃ ।
ಪ್ರಜಾನೇತ್ರೋತ್ಸವಂ ಚಂದ್ರಮುದಯಸ್ಥಮಿವಾಂಬುಧಿಃ ॥ ೭೩

೭೪. ವತ್ಸರಾಜನು ಮಗಧೇಶ್ವರನ ನಗರವನ್ನು ಪ್ರವೇಶಿಸಿದನು. (ಮದುವೆಯ) ಮಹೋತ್ಸವವು ಸುತ್ತಲೂ (ಸೇರಿದ್ದ) ಜನರ ಮನಸ್ಸನ್ನು ಹೊಕ್ಕಿತು.

೭೫. ವಿಯೋಗದಿಂದ ದೇಹವು ತೆಳ್ಳಗಾಗಿದ್ದರೂ ಎಲ್ಲರ ಮನಸ್ಸಿಗೆ ಮೋಹವನ್ನು ಉಂಟುಮಾಡುತ್ತಿದ್ದ ವತ್ಸರಾಜನನ್ನು ಹೆಂಗಸರು ರತಿಯೊಂದಿಗಿಲ್ಲದ ಮನ್ಮಥನನ್ನು ಕಂಡಂತೆ ನೋಡುತ್ತಿದ್ದರು.

೭೬. ಆಮೇಲೆ ವತ್ಸರಾಜನು ಮಗಧರಾಜನ ಅರಮನೆಯನ್ನು ಪ್ರವೇಶಿಸಿ ಮುತ್ತೈದೆಯರಿಂದ ತುಂಬಿದ್ದ ಮಂಗಳಗೃಹಕ್ಕೆ ಬಂದನು.

೭೭. ಅಲ್ಲಿ ತನ್ನ ಪೂರ್ಣಮುಖಚಂದ್ರನಿಂದ ಪೂರ್ಣಚಂದ್ರಮಂಡಲವನ್ನು ಜಯಿಸಿದ್ದ, ಕಂಕಣವನ್ನು ಧರಿಸಿದ್ದ ಪದ್ಮಾವತಿಯನ್ನು ಅವನು ನೋಡಿದನು.

೭೮. ಅವಳ ದಿವ್ಯವಾದ ಮಾಲೆಯನ್ನೂ ತಿಲಕವನ್ನೂ ನೋಡಿ 'ಇವು ನನ್ನವು, ಇವಳಿಗೆಲ್ಲಿಂದ ಬಂದುವು' ಎಂದು ವತ್ಸರಾಜನು ಆಲೋಚಿಸಿದನು.

೭೯. ಅನಂತರ ಅವನು ವೇದಿಕೆಯನ್ನೇರಿ ಪದ್ಮಾವತಿಯ ಕೈಯನ್ನು ಹಿಡಿದದ್ದು (ಸಮಸ್ತ) ಭೂಮಿಯ ಕೈಯನ್ನು ಹಿಡಿಯುವುದಕ್ಕೆ ನಾಂದಿಯಾಯಿತು.

೮೦. ವಾಸವದತ್ತೆಯನ್ನೇ ಇಷ್ಟಪಡುವ ಇವನ ಕಣ್ಣು ಇದನ್ನು ನೋಡಲಾಗದು ಎಂದೋ ಎಂಬಂತೆ ಹೋಮವೇದಿಕೆಯ ಹೊಗೆಯು ವತ್ಸರಾಜನ ಕಣ್ಣುಗಳನ್ನು ಕಂಬನಿಯಿಂದ ಮುಚ್ಚಿಬಿಟ್ಟಿತು.

---

ವಿವೇಶಾಥ ಸ ವತ್ಸೇಶೋ ಮಗಧಾಧಿಪತೇಃ ಪುರಮ್ ।
ಸಮಂತಾತ್ ಪೌರಲೋಕಸ್ಯ ಮಾನಸಂ ಚ ಮಹೋತ್ಸವಃ ॥ ೭೪
ವಿರಹಕ್ಷಾಮವಪುಷಂ ಮನಃಸಂಮೋಹದಾಯಿನಮ್ ।
ದದೃಶುಸ್ತತ್ರ ನಾರ್ಯಸ್ತಂ ರತಿಹೀನಮಿವ ಸ್ಮರಮ್ ॥ ೭೫
ಪ್ರವಿಶ್ಯ ಮಗಧೇಶಸ್ಯ ವತ್ಸೇಶೋಽಪ್ಯಥ ಮಂದಿರಮ್ ।
ಸನಾಥಂ ಪತಿವತ್ನೀಭಿಃ ಕೌತುಕಾಗಾರಮಾಯಯೌ ॥ ೭೬
ತತ್ರ ಪದ್ಮಾವತೀಮಂತರ್ದದರ್ಶ ಕೃತಕೌತುಕಾಮ್ ।
ಸ ರಾಜಾಪೂರ್ಣವಕ್ತ್ರೇಂದುಜಿತಪೂರ್ಣೇಂದುಮಂಡಲಾಮ್ ॥ ೭೭
ತಸ್ಯಾಶ್ಚ ಮಾಲಾತಿಲಕೌ ದಿವ್ಯಾವಾಲೋಕ್ಯ ತೌ ನಿಜೌ ।
ಏತೌ ಕುತೋಽಸ್ಯಾ ಇತ್ಯೇವಂ ವಿಮಮರ್ಶ ಸ ಭೂಪತಿಃ ॥ ೭೮
ತತಃ ಸ ವೇದೀಮಾರುಹ್ಯ ತಸ್ಯಾ ಜಗ್ರಾಹ ಯತ್ಕರಮ್ ।
ತದೇವಾರಂಭತಾಂ ಪ್ರಾಪ ತಸ್ಯ ಪೃಥ್ವ್ಯಾಃ ಕರಗ್ರಹೇ ॥ ೭೯
ಪ್ರಿಯವಾಸವದತ್ತೋಽಯಮಿದಂ ಶಕ್ನೋತಿ ನೇಕ್ಷಿತುಮ್ ।
ಇತೀವ ವೇದಿಧೂಮೋಽಸ್ಯ ಬಾಷ್ಪೇಣ ಪಿದಧೇ ದೃಶೌ ॥ ೮೦

೮೧. ಅಗ್ನಿಪ್ರದಕ್ಷಿಣೆಯ ಸಮಯದಲ್ಲಿ ಪದ್ಮಾವತಿಯ ಮುಖವು ಕೆಂಪಾಗಿ, ಗಂಡನ ಅಭಿಪ್ರಾಯವನ್ನು ತಿಳಿದುಕೊಂಡು ಕೋಪದಿಂದ ವ್ಯಾಕುಲವಾಯಿತೋ ಎಂಬಂತೆ ಹೊಳೆಯುತ್ತಿತ್ತು.

೮೨. ಮದುವೆಯನ್ನು ಮಾಡಿಕೊಂಡ ಮೇಲೆ ವತ್ಸರಾಜನು ಕೈಯಿಂದ ವಧುವನ್ನೇನೋ ಬಿಟ್ಟನು. ಆದರೆ ವಾಸವದತ್ತೆಯನ್ನು ತನ್ನ ಹೃದಯದಿಂದ ಒಂದು ಕ್ಷಣ ಕೂಡ ಬಿಟ್ಟಿರಲಿಲ್ಲ.

೮೩. ರತ್ನಗಳನ್ನೆಲ್ಲ ತೆಗೆದುಬಿಟ್ಟುದರಿಂದ ಭೂಮಿಯು ಬರಿದಾಯಿತೇನೋ ಎಂದು ಅನ್ನಿಸುವಷ್ಟು ರತ್ನಗಳನ್ನು ಮಗಧರಾಜನು ವತ್ಸರಾಜನಿಗೆ ಕೊಟ್ಟನು.

೮೪. ಆಗಲೇ 'ವತ್ಸರಾಜನಿಗೆ ಎಂದೂ ದ್ರೋಹ ಮಾಡುವುದಿಲ್ಲ' ಎಂಬ ಪ್ರತಿಜ್ಞೆಯನ್ನು ಅಗ್ನಿಸಾಕ್ಷಿಕವಾಗಿ ಮಗಧರಾಜನಿಂದ ಯೌಗಂಧರಾಯಣನು ಮಾಡಿಸಿದನು.

೮೫. ಬಟ್ಟೆಗಳ ಮತ್ತು ಒಡವೆಗಳ ದಾನ, ಶ್ರೇಷ್ಠ ಗಾಯಕರ ಗಾನ, ಉತ್ತಮ ನಾರಿಯರ ನರ್ತನ, ಇವುಗಳಿಂದ ತುಂಬಿ ಮದುವೆಯ ಮಹೋತ್ಸವ ಮುಂದುವರಿಯಿತು.

೮೬. ಗಂಡನ ಅಭ್ಯುದಯವನ್ನಪೇಕ್ಷಿಸಿದವಳಾಗಿ, ಮಲಗಿದ್ದವಳಂತೆ ಯಾರಿಗೂ ಕಾಣಿಸದೆ ಇದ್ದ ವಾಸವದತ್ತೆ ಆಗ ಹಗಲಿನ ಚಂದ್ರನ ಕಾಂತಿಯಂತೆ ಆಗಿದ್ದಳು.

---

ಅಗ್ನಿಪ್ರದಕ್ಷಿಣೇ ತಾಮ್ರಂ ತದಾ ಪದ್ಮಾವತೀಮುಖಮ್ ।
ವಿಜ್ಞಾತಭರ್ತ್ರಭಿಪ್ರಾಯಂ ಕೋಪಾಕುಲಮಿವಾಬಭೌ ॥ ೮೧
ಮುಮೋಚ ಸ ಕೃತೋದ್ವಾಹಃ ಕರಾದ್ ವತ್ಸೇಶ್ವರೋ ವಧೂಮ್ ।
ನ ತು ವಾಸವದತ್ತಾಂ ತಾಂ ತತ್ಯಾಜ ಹೃದಯಾತ್ ಕ್ಷಣಮ್ ॥ ೮೨
ತತಸ್ತಥಾ ದದೌ ತಸ್ಮೈ ರತ್ನಾನಿ ಮಗಧಾಧಿಪಃ ।
ನಿರ್ದುಗ್ಧರತ್ನರಿಕ್ತೇವ ಪೃಥಿವೀ ಬುಬುಧೇ ಯಥಾ ॥ ೮೩
ಸಾಕ್ಷೀಕೃತ್ಯ ಚ ತತ್ಕಾಲಮಗ್ನಿಂ ಯೌಗಂಧರಾಯಣಃ ।
ಅದ್ರೋಹಪ್ರತ್ಯಯಂ ರಾಜ್ಞೋ ಮಗಧೇಶಮಕಾರಯತ್ ॥ ೮೪
ಪ್ರದತ್ತವಸ್ತ್ರಾಭರಣಃ ಪ್ರಗೀತವರಚಾರಣಃ ।
ಪ್ರನೃತ್ತವರನಾರೀಕಃ ಪ್ರಸಸಾರ ಮಹೋತ್ಸವಃ ॥ ೮೫
ಉದಯಾಪೇಕ್ಷಿಣೀ ಪತ್ಯುಃ ಸುಪ್ತೇವಾಲಕ್ಷಿತಸ್ಥಿತಾ ।
ತದಾ ವಾಸವದತ್ತಾಭೂದ್ದಿವಾ ಕಾಂತಿರಿವೈಂದವೀ ॥ ೮೬

೮೭–೮೮. ಅನಂತರ ರಾಜ ವತ್ಸೇಶ್ವರನು ಅಂತಃಪುರಕ್ಕೆ ಬರಲು, ದೇವಿಯ ದರ್ಶನವನ್ನು ಅಪೇಕ್ಷಿಸಿದ ಧೀಮಂತನಾದ ಯೌಗಂಧರಾಯಣನು ತನ್ನ ಮಂತ್ರಾಲೋಚನೆಯ ಗುಟ್ಟು ಎಲ್ಲಿ ಹೊರಗೆ ಬರುವುದೋ ಎಂಬ ಭಯದಿಂದ ಮಗಧೇಶ್ವರನಿಗೆ "ಮಹಾರಾಜ, ಇಂದೇ ವತ್ಸರಾಜನು ನಿನ್ನ ಮನೆಯಿಂದ ಹೊರಡುವನು" ಎಂದು ಹೇಳಿದನು.

೮೯. ಹಾಗೆಯೇ ಆಗಲಿ ಎಂದು ಅವನು ಒಪ್ಪಿಕೊಂಡನು. ಅದೇ ವಿಷಯವನ್ನು ಯೌಗಂಧರಾಯಣನು ವತ್ಸರಾಜನಿಗೂ ಬಿನ್ನವಿಸಿದನು. ಅವನೂ ಅದನ್ನು ಹಾಗೆಯೇ ನಂಬಿದನು.

೯೦. ಪರಿವಾರದ ಜನರೆಲ್ಲ ಪಾನಭೋಜನಗಳನ್ನು ಮುಗಿಸಿದ ಮೇಲೆ ವತ್ಸರಾಜನು ವಧು ಪದ್ಮಾವತಿಯನ್ನು ಕರೆದುಕೊಂಡು ಮಂತ್ರಿಗಳೊಡನೆ ಹೊರಟನು.

೯೧ – ೯೨. ಪದ್ಮಾವತಿಯು ಬಿಟ್ಟುಕೊಟ್ಟಿದ್ದ ಸುಖಕರವಾದ ವಾಹನವನ್ನೇರಿ, ಅವಳಿಂದ ಆಜ್ಞೆ ಪಡೆದ ಆಳುಗಳೊಡನೆ ವಾಸವದತ್ತೆಯೂ ಗುಪ್ತವಾಗಿ ಸೈನ್ಯದ ಹಿಂದೆ, ರೂಪಪರಿವರ್ತನೆ ಮಾಡಿಕೊಂಡಿದ್ದ ವಸಂತಕನನ್ನು ಮುಂದಿಟ್ಟುಕೊಂಡು ಬಂದಳು.

೯೩. ಕ್ರಮಶಃ ವಧುವಿನೊಡನೆ ವತ್ಸರಾಜನು ಲಾವಾಣಕಕ್ಕೆ ಬಂದು ತನ್ನ ವಸತಿಯೊಳಗೆ ಪ್ರವೇಶಿಸಿದನು. ಅವನ ಮನಸ್ಸು ಮಾತ್ರ ವಾಸವದತ್ತೆಯಲ್ಲೇ ಇತ್ತು.

---

ಅಂತಃಪುರಮುಪಾಯಾತೇ ರಾಜ್ಞಿ ವತ್ಸೇಶ್ವರೇ ತತಃ ।
ದೇವೀಸಂದರ್ಶನಾಕಾಂಕ್ಷೀ ಕೃತೀ ಯೌಗಂಧರಾಯಣಃ ॥ ೮೭
ಮಂತ್ರಭೇದಭಯಾದೇವಂ ಮಗಧೇಶ್ವರಮಭ್ಯಧಾತ್ ।
ಅದ್ಯೈವ ನಾಥ ವತ್ಸೇಶಃ ಪ್ರಯಾತಿ ತ್ವದ್ಗೃಹಾದಿತಿ ॥ ೮೮
ತಥೇತ್ಯಂಗೀಕೃತಂ ತೇನ ತಮೇವಾರ್ಥಂ ತದೈವ ಸಃ ।
ವ್ಯಜಿಜ್ಞಪದ್ ವತ್ಸರಾಜಂ ಸೋಽಪಿ ತಚ್ಛ್ರದ್ದಧೇ ತಥಾ ॥ ೮೯
ಅಥೋಚ್ಚಚಾಲ ವತ್ಸೇಶೋ ಭುಕ್ತಪೀತಪರಿಚ್ಛದಃ ।
ಮಂತ್ರಿಭಿಃ ಸಮಮಾದಾಯ ವಧೂಂ ಪದ್ಮಾವತೀಂ ತತಃ ॥ ೯೦
ಪದ್ಮಾವತ್ಯಾ ವಿಸೃಷ್ಟಂ ಚ ಸುಖಮಾರುಹ್ಯ ವಾಹನಮ್ ।
ತಯೈವ ಚ ಸಮಾದಿಷ್ಟೈಸ್ತನ್ಮಹತ್ತರಕೈಃ ಸಹ ॥ ೯೧
ಆಗಾದ್ ವಾಸವದತ್ತಾಪಿ ಗುಪ್ತಂ ಸೈನ್ಯಸ್ಯ ಪೃಷ್ಠತಃ ।
ಕೃತರೂಪವಿವರ್ತಂ ತಂ ಪುರಸ್ಕೃತ್ಯ ವಸಂತಕಮ್ ॥ ೯೨
ಕ್ರಮಾಲ್ಲಾವಾಣಕಂ ಪ್ರಾಪ್ಯ ವತ್ಸೇಶೋ ವಸತಿಂ ನಿಜಾಮ್ ।
ಪ್ರವಿವೇಶ ಸಮಂ ವಧ್ವಾ ದೇವೀಚಿತ್ತಸ್ತು ಕೇವಲಃ ॥ ೯೩

೯೪. ಮಧ್ಯರಾತ್ರಿಯಲ್ಲಿ ಆಳುಗಳನ್ನೆಲ್ಲ ಒಂದು ಸ್ಥಳದಲ್ಲಿ ತಂಗುವಂತೆ ಮಾಡಿ ವಾಸವದತ್ತೆಯು ಗೋಪಾಲಕನ ಅರಮನೆಯನ್ನು ಪ್ರವೇಶಿಸಿದಳು.

೯೫. ಅಲ್ಲಿ ಆದರದಿಂದ ಬರಮಾಡಿಕೊಂಡ ಅಣ್ಣ ಗೋಪಾಲಕನನ್ನು ನೋಡಿ ಅಳುತ್ತಾ ಕಣ್ಣುಗಳಲ್ಲಿ ಕಂಬನಿಯನ್ನು ತುಂಬಿಕೊಂಡು ಅವನ ಕುತ್ತಿಗೆಯನ್ನು ತಬ್ಬಿಕೊಂಡಳು.

೯೬. ಆ ಕ್ಷಣದಲ್ಲೇ ಸ್ಥಿತಪ್ರಜ್ಞ ಯೌಗಂಧರಾಯಣನು ರುಮಣ್ವಂತನ ಜೊತೆಯಲ್ಲಿ ಅಲ್ಲಿಗೆ ಬಂದನು. ವಾಸವದತ್ತೆಯು ಅವನಿಗೆ ಸತ್ಕಾರ ಮಾಡಿದಳು.

೯೭. ಅವಳಲ್ಲಿ ಉಕ್ಕಿಹರಿಯುತ್ತಿದ್ದ ವಿಯೋಗದುಃಖವನ್ನು ಅವನು ಶಮನ ಮಾಡುವಷ್ಟರಲ್ಲಿ ಆ ಆಳುಗಳು ಪದ್ಮಾವತಿಯ ಬಳಿಗೆ ತೆರಳಿದರು.

೯೮. "ಮಹಾರಾಣಿ, ಆವಂತಿಕೆ ನಮ್ಮ ಜೊತೆಯಲ್ಲಿ ಬಂದವಳು ಏಕೋ ನಮ್ಮನ್ನು ಬಿಟ್ಟು ರಾಜಪುತ್ರ ಗೋಪಾಲಕನ ಮನೆಯನ್ನು ಹೊಕ್ಕಳು."

೯೯. ಹೀಗೆ ತನ್ನ ನಂಬಿಕೆಯ ಆಳುಗಳು ವತ್ಸೇಶ್ವರನ ಎದುರಿನಲ್ಲಿ ವಿಜ್ಞಾಪಿಸಿದಾಗ ಸಂದೇಹಪಟ್ಟ ಪದ್ಮಾವತಿಯು ಅವರನ್ನು ಉದ್ದೇಶಿಸಿ ಹೀಗೆಂದಳು.

೧೦೦. "ಹೋಗಿ ಆವಂತಿಕೆಗೆ ಹೇಳಿರಿ. 'ನೀನು ನನ್ನಲ್ಲಿ ನ್ಯಾಸವಾಗಿರುವೆ. ಅಲ್ಲಿ ನಿನಗೇನು ಕೆಲಸ ? ನಾನೆಲ್ಲಿರುವೆನೋ ಅಲ್ಲಿಗೆ ಬಾ' ಎಂದು ತಿಳಿಸಿರಿ."

---

ಏತ್ಯ ವಾಸವದತ್ತಾಪಿ ಸಾ ಗೋಪಾಲಕಮಂದಿರಮ್ ।
ವಿವೇಶಾಥ ನಿಶೀಥೇ ಚ ಪರಿಸ್ಥಾಪ್ಯ ಮಹತ್ತರಾನ್ ॥ ೯೪
ತತ್ರ ಗೋಪಾಲಕಂ ದೃಷ್ಟ್ವಾ ಭ್ರಾತರಂ ದರ್ಶಿತಾದರಮ್ ।
ಕಂಠೇ ಜಗ್ರಾಹ ರುದತೀ ಬಾಷ್ಪವ್ಯಾಕುಲಲೋಚನಮ್ ॥ ೯೫
ತತ್ಕ್ಷಣೇ ಸ್ಥಿತಸಂವಿಚ್ಚ ತತ್ರ ಯೌಗಂಧರಾಯಣಃ ।
ಆಯಯೌ ಸರುಮಣ್ವತ್ಕಸ್ತಯಾ ದೇವ್ಯಾ ಕೃತಾದರಃ ॥ ೯೬
ಸೋಽಸ್ಯಾಃ ಪ್ರೋತ್ಸಾಹವಿಶ್ಲೇಷದುಃಖಂ ಯಾವದ್ ವ್ಯಪೋಹತಿ ।
ತಾವತ್ ಪದ್ಮಾವತೀಪಾರ್ಶ್ವಂ ಪ್ರಯಯುಸ್ತೇ ಮಹತ್ತರಾಃ ॥ ೯೭
ಆಗತಾವಂತಿಕಾ ದೇವಿ ಕಿಮಪ್ಯಸ್ಮಾನ್ ವಿಹಾಯ ತು ।
ಪ್ರವಿಷ್ಟಾ ರಾಜಪುತ್ರಸ್ಯ ಗೃಹಂ ಗೋಪಾಲಕಸ್ಯ ಸಾ ॥ ೯೮
ಇತಿ ಪದ್ಮಾವತೀ ಸಾ ತೈರ್ವಿಜ್ಞಪ್ತಾ ಸ್ವಮಹತ್ತರೈಃ ।
ವತ್ಸೇಶ್ವರಾಗ್ರೇ ಸಾಶಂಕಾ ತಾನೇವಂ ಪ್ರತ್ಯಭಾಷತ ॥ ೯೯
ಗಚ್ಛತಾವಂತಿಕಾಂ ಬ್ರೂತ ನಿಕ್ಷೇಪಸ್ತ್ವಂ ಹಿ ಮೇ ಸ್ಥಿತಾ ।
ತದತ್ರ ಕಿಂ ತೇ ಯತ್ರಾಹಂ ತತ್ರೈವಾಗಮ್ಯತಾಮಿತಿ ॥ ೧೦೦

೧೧೧. ಆ ಮಾತನ್ನು ಕೇಳಿದ ರಾಜನು ಆ ಆಳುಗಳೆಲ್ಲ ಹೋದ ಮೇಲೆ ಏಕಾಂತದಲ್ಲಿ ಪದ್ಮಾವತಿಯನ್ನು "ನಿನಗೆ ಈ ಮಾಲೆ ಮತ್ತು ತಿಲಕಗಳನ್ನು ಯಾರು ಮಾಡಿಕೊಟ್ಟರು" ಎಂದು ಪ್ರಶ್ನಿಸಿದನು.

೧೧೨. "ನನ್ನ ಮನೆಯಲ್ಲಿ ಯಾವನೋ ಒಬ್ಬ ವಿಪ್ರನು ಆವಂತಿಕಾ ಎಂಬ ಹೆಸರಿನ ಹೆಂಗಸನ್ನು ನ್ಯಾಸವಾಗಿಟ್ಟಿದ್ದಾನೆ. ಇದು ಅವಳ ಮಹತ್ತಾದ ಕಲಾಕೌಶಲ" ಎಂದು ಪದ್ಮಾವತಿ ಹೇಳಿದಳು.

೧೧೩. ಆ ಮಾತನ್ನು ಕೇಳಿದ ಕೂಡಲೇ "ಹಾಗಿದ್ದರೆ ವಾಸವದತ್ತೆ ಇಲ್ಲೇ ಇರಬೇಕು" ಎಂದು ಆಲೋಚಿಸುತ್ತಾ ವತ್ಸರಾಜನು ಗೋಪಾಲಕನ ಮನೆಗೆ ಹೋದನು.

೧೧೪. ಅಲ್ಲಿಗೆ ಹೋಗಿ ನೋಡಿದಾಗ ಮನೆಯ ಬಾಗಿಲಿನಲ್ಲಿ ಆಳುಗಳು ನಿಂತಿದ್ದರು. ಒಳಗೆ ದೇವಿ ವಾಸವದತ್ತೆ, ಗೋಪಾಲಕ, ಇಬ್ಬರು ಮಂತ್ರಿಗಳು (ಯೌಗಂಧರಾಯಣ, ರುಮಣ್ವಂತ) ಮತ್ತು ವಸಂತಕ ಇವರು ಇದ್ದರು.

೧೧೫. ಪ್ರವಾಸದಲ್ಲಿದ್ದು ಹಿಂದಿರುಗಿದ್ದ ವಾಸವದತ್ತೆಯು ಗ್ರಹಣದಿಂದ ಮುಕ್ತವಾದ ಚಂದ್ರನ ಮೂರ್ತಿಯಂತೆ ವತ್ಸರಾಜನಿಗೆ ಕಂಡಳು.

೧೧೬. ಆಗ ಅವನು ದುಃಖವೆಂಬ ವಿಷದಿಂದ ಕಂಗೆಟ್ಟು ನೆಲದ ಮೇಲೆ ಉರುಳಿದನು. ವಾಸವದತ್ತೆಯ ಹೃದಯದಲ್ಲಿ ನಡುಕವು ಹುಟ್ಟಿತು.

---

ತಚ್ಛ್ರುತ್ವಾ ತೇಷು ಯಾತೇಷು ರಾಜಾ ಪದ್ಮಾವತೀಂ ರಹಃ ।
ಪಪ್ರಚ್ಛ ಮಾಲಾತಿಲಕೌ ಕೇನೇಮೌ ತು ಕೃತಾವಿತಿ ॥ ೧೧೧
ಸಾಪ್ಯೋಚದಥ ಮದ್ಗೇಹೇ ನ್ಯಸ್ತಾ ವಿಪ್ರೇಣ ಕೇನಚಿತ್ ।
ಆವಂತಿಕಾಭಿಧಾ ಯೈಷಾ ತಸ್ಯಾಃ ಶಿಲ್ಪಮಿದಂ ಮಹತ್ ॥ ೧೧೨
ತಚ್ಛ್ರುತ್ವೈವ ಚ ವತ್ಸೇಶೋ ಗೋಪಾಲಗೃಹಮಾಯಯೌ ।
ನೂನಂ ವಾಸವದತ್ತಾ ಸಾ ಭವೇದತ್ರೇತಿ ಚಿಂತಯನ್ ॥ ೧೧೩
ಪ್ರವಿವೇಶ ಚ ಗತ್ವಾ ತದ್ ದ್ವಾರಸ್ಥಿತ ಮಹತ್ತರಮ್ ।
ಅಂತಃಸ್ಥದೇವೀಗೋಪಾಲಮಂತ್ರಿದ್ವಯವಸಂತಕಮ್ ॥ ೧೧೪
ತತ್ರ ವಾಸವದತ್ತಾಂ ತಾಂ ದದರ್ಶ ಪ್ರೋಷಿತಾಗತಾಮ್ ।
ಉಪಪ್ಲವವಿನಿರ್ಮುಕ್ತಾಂ ಮೂರ್ತಿಂ ಚಾಂದ್ರಮಸೀಮಿವ ॥ ೧೧೫
ಪಪಾತಾಥ ಮಹೀಪೃಷ್ಠೇ ಸ ಶೋಕವಿಷವಿಹ್ವಲಃ ।
ಕಂಪೋ ವಾಸವದತ್ತಾಯಾ ಹೃದಯೇ ತೂದಪದ್ಯತ ॥ ೧೧೬

೧೦೭. ಅವಳೂ ನೆಲಕ್ಕೆ ಕುಸಿದಳು. ವಿಯೋಗದಿಂದ ಅವಳ ಅಂಗಗಳು ಬಿಳಿಚಿಕೊಂಡಿದ್ದುವು. ತಾನು ಮಾಡಿದುದನ್ನು ಹಳಿಯುತ್ತಾ ಅವಳು ಅಳತೊಡಗಿದಳು.

೧೦೮. ಶೋಕದಿಂದ ದೀನರಾದ ಆ ದಂಪತಿಗಳ ವಿಲಾಪದಿಂದ ಯೌಗಂಧರಾಯಣನ ಮುಖವೂ ಕಂಬನಿಗಳಿಂದ ತೊಳೆದುಹೋಯಿತು.

೧೦೯. ಆಗ ಆ ಕೋಲಾಹಲವನ್ನು ಕೇಳಿ ಪದ್ಮಾವತಿಯೂ ವ್ಯಾಕುಲಳಾಗಿ ಅಲ್ಲಿಗೆ ಬಂದು ವತ್ಸರಾಜನನ್ನು ಸಮೀಪಿಸಿದಳು.

೧೧೦. ಕ್ರಮಶಃ ವಿಷಯವೆಲ್ಲವನ್ನೂ ಅರಿತು ಅವಳೂ ವತ್ಸರಾಜ ಹಾಗೂ ವಾಸವದತ್ತೆಯರಿಗೆ ಸಮಾನವಾದ ಅವಸ್ಥೆಯನ್ನೇ ತಲುಪಿದಳು. ಒಳ್ಳೆಯ ಹೆಂಗಸರು ಸ್ನೇಹಪೂರ್ಣರೂ ಮುಗ್ಧರೂ ಆಗಿರುವರಷ್ಟೆ

೧೧೧. ವಾಸವದತ್ತೆಯು ಅಳುತ್ತಾ ಗಂಡನಿಗೆ ದುಃಖವನ್ನು ತಂದ ನನ್ನ ಜೀವನದಿಂದೇನು ಎಂದು ಮತ್ತೆ ಮತ್ತೆ ವಿಲಪಿಸತೊಡಗಿದಳು.

---

ತತಃ ಸಾಪ್ಯಪತದ್ ಭೂಮೌ ಗಾತ್ರೈರ್ವಿರಹಪಾಂಡುರೈಃ ।
ವಿಲಲಾಪ ಚ ನಿಂದಂತೀ ತದಾಚರಿತಮಾತ್ಮನಃ ॥ ೧೦೭
ಅಥ ತೌ ದಂಪತೀ ಶೋಕದೀನೌ ರುರುದತುಸ್ತಥಾ ।
ಯೌಗಂಧರಾಯಣೋಽಪ್ಯಾಸೀದ್ ಬಾಷ್ಪಧೌತಮುಖೋ ಯಥಾ ॥
೧೦೮
ತಥಾವಿಧೇ ಚ ತಚ್ಛ್ರುತ್ವಾ ಕಾಲೇ ಕೋಲಾಹಲಂ ತದಾ ।
ಪದ್ಮಾವತ್ಯಪಿ ತತ್ರೈವ ಸಾಕುಲಾ ತಮುಪಾಯಯೌ ॥ ೧೦೯
ಕ್ರಮಾದವಗತಾರ್ಥಾ ಚ ರಾಜವಾಸವದತ್ತಯೋಃ ।
ತುಲ್ಯಾವಸ್ಥೈವ ಸಾಪ್ಯಾಸೀತ್ ಸ್ನಿಗ್ಧಮುಗ್ಧಾ ಹಿ ಸತ್‌ಸ್ತ್ರಿಯಃ ॥ ೧೧೦
ಕಿಂ ಜೀವಿತೇನ ಮೇ ಕಾರ್ಯಂ ಭರ್ತೃದುಃಖಪ್ರದಾಯಿನಾ ।
ಇತಿ ವಾಸವದತ್ತಾ ಚ ಜಗಾದ ರುದತೀ ಮುಹುಃ ॥ ೧೧೧

೧೧೨–೧೧೩. "ದೇವ, ಮಗಧರಾಜನ ಮಗಳನ್ನು ಪಡೆಯುವುದರಿಂದ ನಿನಗೆ ಸಾಮ್ರಾಜ್ಯ ಸಿಗಬೇಕು ಎಂದು ಆಸೆಪಟ್ಟು ನಾನು ಇದೆಲ್ಲವನ್ನೂ ಮಾಡಿದೆನು. ಇದರಲ್ಲಿ ರಾಣಿಯ ದೋಷವೇನೂ ಇಲ್ಲ. ಇವಳ ಸವತಿ (ಪದ್ಮಾವತಿ)ಯೇ ಇವಳ ಪ್ರವಾಸ ಕಾಲದ ಶೀಲಕ್ಕೆ ಸಾಕ್ಷಿಯಾಗಿದ್ದಾಳೆ" ಎಂದು ಧೀರ ಯೌಗಂಧರಾಯಣನು ವತ್ಸರಾಜನಿಗೆ ಹೇಳಿದನು.

೧೧೪. "ಇವಳ ಶುದ್ಧಚಾರಿತ್ರ್ಯವನ್ನು ಎತ್ತಿ ತೋರಿಸಲು ನಾನು ಬೆಂಕಿಯಲ್ಲಿ ಧುಮುಕುತ್ತೇನೆ" ಎಂದು ಮತ್ಸರವಿಲ್ಲದ ಹೃದಯದ ಪದ್ಮಾವತಿಯು ಅಲ್ಲಿ ಹೇಳಿದಳು.

೧೧೫ "ನಾನೇ ಅಪರಾಧಿ, ನನಗಾಗಿ ದೇವಿಯೂ ಇಷ್ಟು ದೊಡ್ಡಕ್ಲೇಶವನ್ನು ಅನುಭವಿಸಬೇಕಾಯಿತು' ಎಂದು ವತ್ಸರಾಜನೂ ಹೇಳಿದನು.

೧೧೬ ಆದರೆ ದೃಢನಿಶ್ಚಯ ಮಾಡಿದ್ದ ವಾಸವದತ್ತೆಯು "ರಾಜನ ಮನಸ್ಸು ಶುದ್ಧವಾಗುವುದಕ್ಕಾಗಿ ನಾನು ಅಗ್ನಿಪ್ರವೇಶ ಮಾಡಬೇಕು" ಎಂದು ಹೇಳಿದಳು.

೧೧೭ ಅನಂತರ ಕುಶಲರಲ್ಲಿ ಅಗ್ರಗಣ್ಯನೆನಿಸಿದ ಧೀಮಂತ ಯೌಗಂಧರಾಯಣನು ಆಚಮನ ಮಾಡಿ ಪೂರ್ವಾಭಿಮುಖನಾಗಿ ಶುಚಿಯಾಗಿ ಕುಳಿತು ಈ ಮಾತನ್ನಾಡಿದನು.

---

ಮಗಧೇಶಸುತಾಲಾಭಾತ್ ತವ ಸಾಮ್ರಾಜ್ಯಕಾಂಕ್ಷಿಣಾ ।
ಕೃತಮೇತನ್ಮಯಾ ದೇವ ದೇವ್ಯಾ ದೋಷೋ ನ ಕಶ್ಚನ ॥ ೧೧೨
ಇಯಂ ತ್ವಸ್ಯಾಃ ಸಪತ್ನ್ಯೇವ ಪ್ರವಾಸೇ ಶೀಲಸಾಕ್ಷಿಣೀ ।
ಇತ್ಯುವಾಚಾಥ ವತ್ಸೇಶಂ ಧೀರೋ ಯೌಗಂಧರಾಯಣಃ ॥ ೧೧೩
ಅಹಮತ್ರ ವಿಶಾಮ್ಯಗ್ನಾವಸ್ಯಾಃ ಶುದ್ಧಿಪ್ರಕಾಶನೇ ।
ಇತಿ ಪದ್ಮಾವತೀ ತತ್ರ ಜಗಾದಾಮತ್ಸರಾಶಯಾ ॥ ೧೧೪
ಅಹಮೇವಾಪರಾಧ್ಯಾಮಿ ಯತ್ಕೃತೇ ಸುಮಹಾನಯಮ್ ।
ಸೋಢೋ ದೇವ್ಯಾಪಿ ಹಿ ಕ್ಲೇಶ ಇತಿ ರಾಜಾಪ್ಯಭಾಷ್ಯತ ॥ ೧೧೫
ಅಗ್ನಿಪ್ರವೇಶಃ ಕಾರ್ಯೋ ಮೇ ರಾಜ್ಞೋ ಹೃದಯಶುದ್ಧಯೇ ।
ಇತಿ ವಾಸವದತ್ತಾ ಚ ಬಭಾಷೇ ಬದ್ಧನಿಶ್ಚಯಾ । ೧೧೬
ತತಃ ಸ ಕೃತಿನಾಂ ಧುರ್ಯೋ ಧೀಮಾನ್ ಯೌಗಂಧರಾಯಣಃ ।
ಆಚಮ್ಯ ಪ್ರಾಙ್ಮುಖಃ ಶುದ್ಧ ಇತಿ ವಾಚಮುದೈರಯತ್ ॥ ೧೧೭

೧೧೮. "ನಾನು ರಾಜನಿಗೆ ಹಿತವನ್ನೇ ಮಾಡಿದವನಾಗಿದ್ದರೆ ಮತ್ತು ಈ ರಾಣಿಯು ಶುದ್ಧಿಯುಳ್ಳವಳಾಗಿದ್ದರೆ, ಲೋಕಪಾಲಕರೇ ಇದನ್ನು ನೀವೇ ಹೇಳಿರಿ, ಇಲ್ಲದಿದ್ದರೆ ನಾನು ದೇಹತ್ಯಾಗ ಮಾಡುತ್ತೇನೆ."

೧೧೯-೧೨೦. ಇಷ್ಟನ್ನು ಹೇಳಿ ಅವನು ಸುಮ್ಮನಾಗಲು ದಿವ್ಯವಾಣಿಯೊಂದು ಮೊಳಗಿತು "ದೊರೆಯೇ, ಯೌಗಂಧರಾಯಣನನ್ನು ಮಿತ್ರನಾಗಿ ಹೊಂದಿರುವ ಹಾಗೂ ಹಿಂದಿನ ಜನ್ಮದಲ್ಲಿ ದೇವತೆಯಾಗಿದ್ದ ವಾಸವದತ್ತೆಯನ್ನು ಪತ್ನಿಯಾಗಿ ಹೊಂದಿರುವ ನೀನು ಧನ್ಯ. ಇವಳಲ್ಲಿ ಯಾವ ದೋಷವೂ ಇಲ್ಲ". ಇಷ್ಟನ್ನು ಹೇಳಿ ಆ ದಿವ್ಯವಾಣಿ ಸುಮ್ಮನಾಯಿತು.

೧೨೧. ಎಲ್ಲ ದಿಕ್ಕುಗಳಲ್ಲೂ ಮಾರ್ದನಿಸಿದ, ಸ್ವಲ್ಪ ಮಂದ್ರವಾಗಿ ಗುಡುಗುವ ಹೊಸ ಮೋಡದ ಬೆಡಗನ್ನು ಹೊಂದಿದ್ದ ಆ ದನಿಯನ್ನು ಕೇಳಿ ಅವರೆಲ್ಲರೂ ಬಹುದೀರ್ಘಕಾಲ ಕತ್ತನ್ನೆತ್ತಿ ಕೇಳಿ ಸ್ಪಷ್ಟವಾಗಿ ಹೊಸ ಮೋಡಗಳ ಗರ್ಜನೆಯನ್ನು ಕತ್ತೆತ್ತಿ ಕೇಳಿದ ನವಿಲುಗಳಂತೆ ತಮ್ಮ (ಮನಸ್ಸಿನ) ತಾಪವನ್ನು ಕಳೆದುಕೊಂಡರು.

೧೨೨. ಗೋಪಾಲಕನೊಡನೆ ವತ್ಸರಾಜನೂ ಯೌಗಂಧರಾಯಣನು ಮಾಡಿದ ಕಾರ್ಯವನ್ನು ಸ್ತುತಿಸಿದನು ಮತ್ತು ಸಮಸ್ತಭೂಮಿಯೂ ತನ್ನ ಕರಗತವಾಗುವುದೆಂದು ತಿಳಿದುಕೊಂಡನು.

---

ಯದ್ಯಹಂ ಹಿತಕೃದ್ರಾಜ್ಞೋ ದೇವೀ ಶುದ್ಧಿಮತೀ ಯದಿ ।
ಬ್ರೂತ ಭೋ ಲೋಕಪಾಲಾಸ್ತನ್ನ ಚೇದ್ದೇಹಂ ತ್ಯಜಾಮ್ಯಹಮ್ ॥ ೧೧೮
ಇತ್ಯುಕ್ತ್ವಾ ವಿರತೇ ತಸ್ಮಿನ್ ದಿವ್ಯಾ ವಾಗುದಭೂದಿಯಮ್ ।
ಧನ್ಯಸ್ತ್ವಂ ನೃಪತೇ ಯಸ್ಯ ಮಂತ್ರೀ ಯೌಗಂಧರಾಯಣಃ ॥ ೧೧೯
ಯಸ್ಯ ವಾಸವದತ್ತಾ ಚ ಭಾರ್ಯಾ ಪ್ರಾಗ್ಜನ್ಮದೇವತಾ ।
ನ ದೋಷಃ ಕಶ್ಚಿದೇತಸ್ಯಾ ಇತ್ಯುಕ್ತ್ವಾ ವಾಗುಪಾರಮತ್ ॥ ೧೨೦
ಆಕರ್ಣ್ಯ ತಮ್ಮುಖರಿತಾಖಿಲದಿಗ್ವಿಭಾಗ-
ಮಾಮಂದ್ರನೂತನಘನಾಘನಗರ್ಜಿತಶ್ರೀ ।
ಉತ್ಕಂಧರಾಶ್ಚ ಸುಚಿರಂ ವಿಹತಾಭಿತಾಪಾಃ
ಸರ್ವೇಽಪಿ ತೇ ಸ್ಫುಟವಿಡಂಬಿತನೀಲಕಂಠಾಃ ॥ ೧೨೧
ಗೋಪಾಲಕಸಹಿತೋಽಪಿ ಚ ರಾಜಾ ಯೌಗಂಧರಾಯಣಾಚರಿತಮ್ ।
ಸ್ತೌತಿ ಸ್ಮ ವತ್ಸರಾಜೋ ಮೇನೇ ಪೃಥ್ವೀಂ ಚ ಹಸ್ತಗತಾಮ್ ॥ ೧೨೨

೧೩. ಪ್ರತಿದಿನವೂ ಒಟ್ಟಿಗೆ ವಾಸಮಾಡಿದುದರಿಂದ ಪ್ರೀತಿಯನ್ನು ಬೆಳೆಸಿಕೊಂಡ ರತಿ–ನಿರ್ವೃತಿಗಳು ಶರೀರವನ್ನು ಧರಿಸಿ ಬಂದಂತೆ ಸಮೀಪ ಬಂದು ನಿಂತ ಪ್ರಿಯೆಯರಿಂದ ವತ್ಸರಾಜನು ಅಪಾರವಾದ ಆನಂದವನ್ನು ಅನುಭವಿಸಿದನು.

**ಮಹಾಕವಿ ಸೋಮದೇವಭಟ್ಟನು ರಚಿಸಿದ**

**ಕಥಾಸರಿತ್ಸಾಗರದ ಲಾವಣಕಲಂಬಕದಲ್ಲಿ**

**ಎರಡನೆಯ ತರಂಗವು ಮುಗಿಯಿತು.**

---

ದಧದಥ ನೃಪತಿಃ ಸ ಮೂರ್ತಿಮತ್ಯೌ
ನಿಕಟಗತೇ ರತಿನಿರ್ವೃತೀ ಇವೋಭೇ ।
ಅನುದಿನಸಹವಾಸಸಾನುರಾಗೇ
ನಿಜದಯಿತೇ ಪರಮುತ್ಸವಂ ಬಭಾರ ॥ ೧೩

**ಇತಿ ಮಹಾಕವಿ ಶ್ರೀಸೋಮದೇವಭಟ್ಟವಿರಚಿತೇ**

**ಕಥಾಸರಿತ್ಸಾಗರೇ ಲಾವಾಣಕಲಂಬಕೇ**

**ದ್ವಿತೀಯಸ್ತರಂಗಃ**

# ಮೂರನೆಯ ತರಂಗ

೧-೨. ಅನಂತರ ಮತ್ತೊಂದು ದಿನ ವತ್ಸರಾಜನು ವಾಸವದತ್ತೆ ಮತ್ತು ಪದ್ಮಾವತಿಯರೊಡನೆ ಪಾನಲೀಲೆಯಲ್ಲಿ ತೊಡಗಿ ಹೆಚ್ಚು ಜನರು ಇಲ್ಲದ ಪ್ರದೇಶಕ್ಕೆ ಹೋಗಿ ಗೋಪಾಲಕ, ರುಮಣ್ವಂತ, ವಸಂತಕ ಮತ್ತು ಯೌಗಂಧರಾಯಣರನ್ನು ಕರೆಸಿ ಇಷ್ಟ ಬಂದ ಸಲುಗೆಯ ಮಾತುಗಳಿಂದ (ಹೇಳಿ ಕೇಳಿ) ಕಾಲಕ್ಷೇಪವನ್ನು ಮಾಡಿದನು.

೩ ಆಗ ಆ ರಾಜನು ಅವರೆಲ್ಲರಿಗೂ ತನ್ನ ವಿರಹಕ್ಕೆ ಸಂಬಂಧಪಟ್ಟ ವಿಚಾರದಲ್ಲಿ ಈ ಒಂದು ಕಥೆಯನ್ನು ಬಣ್ಣಿಸಿದನು.

### ಉರ್ವಶಿ-ಪುರೂರವರ ಕಥೆ

೪. ಪರಮ ವೈಷ್ಣವನಾಗಿದ್ದ ಪುರೂರವನೆಂಬ ಒಬ್ಬ ರಾಜನಿದ್ದನು. ಅವನಿಗೆ ಭೂಲೋಕದಲ್ಲಿರುವಂತೆಯೇ ದೇವಲೋಕದಲ್ಲೂ ಅಡೆತಡೆಯಿಲ್ಲದ ಓಡಾಟವಿತ್ತು

---

# ತೃತೀಯಸ್ತರಂಗಃ

ತತೋ ವತ್ಸೇಶ್ವರೋಽನ್ಯೇದ್ಯುಃ ಸಹ ವಾಸವದತ್ತಯಾ ।
ಪದ್ಮಾವತ್ಯಾ ಚ ಸಂಸಕ್ತಪಾನಲೀಲೋ ವಿವಿಕ್ತಗಃ ॥ ೧
ಸಗೋಪಾಲಕಮಾನೀಯ ಸರುಮಣ್ವದ್ವಸಂತಕಮ್ ।
ಯೌಗಂಧರಾಯಣಂ ತಾಶ್ಚ ಚಕ್ರೇ ವಿಸ್ರಂಭಿಣೀಃ ಕಥಾಃ ॥ ೨
ತತ್ರ ಸ್ವವಿರಹೋದ್ಘಾತಪ್ರಸಂಗೇ ಚ ಮಹೀಪತಿಃ ।
ಸರ್ವೇಷು ತೇಷು ಶೃಣ್ವತ್ಸು ಕಥಾಮೇತಾಮವರ್ಣಯತ್ ॥ ೩
ಆಸೀತ್ ಪುರೂರವಾ ನಾಮ ರಾಜಾ ಪರಮವೈಷ್ಣವಃ ।
ಅಭೂದ್ ಭುವೀವ ನಾಕೇಽಪಿ ಯಸ್ಯಾಪ್ರತಿಹತಾ ಗತಿಃ ॥ ೪

೫ ಯಾವಾಗಲೋ ಒಮ್ಮೆ ಅವನು ನಂದನ (ಎಂಬ ಉದ್ಯಾನ)ದಲ್ಲಿ ತಿರುಗಾಡುತ್ತಿದ್ದಾಗ, ಮನ್ಮಥನ ಇನ್ನೊಂದು ಮೋಹನಾಸ್ತ್ರವೋ ಎಂಬಂತಿದ್ದ ಉರ್ವಶಿ ಎಂಬ ಅಪ್ಸರೆಯು ಅವನನ್ನು ಕಂಡಳು.

೬ ನೋಡಿದಷ್ಟರಿಂದಲೇ ಅವಳು ಅವನಿಗೆ ಎಷ್ಟು ಮನ ಸೋತಳೆಂದರೆ ಅವಳ ಸಖಿಯರಾದ ರಂಭೆ ಮುಂತಾದವರ ಹೃದಯಗಳು ಭಯದಿಂದ ಕಂಪಿಸಿದುವು.

೭ ಲಾವಣ್ಯರಸದ ಚಿಲುಮೆಯಂತಿದ್ದ ಅವಳನ್ನು ನೋಡಿ ಆ ರಾಜನೂ ಅವಳ ಆಲಿಂಗನ ಲಭಿಸದೆ ಅದಕ್ಕಾಗಿ ಹಂಬಲಿಸಿ ಮೂರ್ಛೆ ಹೋದನು.

೮ ಆಗ ಪಾಲ್ಗಡಲಲ್ಲಿ ಪವಡಿಸಿದ ಸರ್ವಜ್ಞನಾದ ಹರಿಯು ದರ್ಶನಕ್ಕಾಗಿ ಬಂದ ನಾರದ ಮಹರ್ಷಿಗೆ ಈ ರೀತಿ ಆಜ್ಞೆಯನ್ನು ಮಾಡಿದನು.

೯. "ದೇವರ್ಷಿ, ನಂದನವೆಂಬ ಉದ್ಯಾನದಲ್ಲಿರುವ ರಾಜ ಪುರೂರವಸ್ ಉರ್ವಶಿಗೆ ಮನಸೋತು ವಿರಹವನ್ನು ತಡೆಯಲಾರದೆ ದುರ್ಬಲನಾಗಿ ನಿಂತಿದ್ದಾನೆ.

೧೦. ಮುನಿಯೆ, ನೀನು ಹೋಗಿ ನಾನು ಹೇಳಿದನೆಂದು ಹೇಳಿ ಇಂದ್ರನಿಗೆ ವಿಷಯವನ್ನು ತಿಳಿಸಿ ಬೇಗನೆ ಆ ರಾಜನಿಗೆ ಉರ್ವಶಿಯನ್ನು ಕೊಡಿಸು."

೧೧. ಹೀಗೆ ಹರಿಯಿಂದ ಆದಿಷ್ಟನಾದ ನಾರದನು 'ಹಾಗೆಯೇ ಆಗಲಿ' ಹೇಳಿ (ನಂದನೋದ್ಯಾನಕ್ಕೆ) ಬಂದು ಆ ಅವಸ್ಥೆಯಲ್ಲಿದ್ದ ಪುರೂರವನನ್ನು ನೋಡಿ ಹೀಗೆ ಹೇಳಿದನು.

---

ಭ್ರಮಂತಂ ನಂದನೇ ಜಾತು ತಂ ದದರ್ಶ ಕಿಲಾಪ್ಸರಾಃ ।
ಉರ್ವಶೀ ನಾಮ ಕಾಮಸ್ಯ ಮೋಹನಾಸ್ತ್ರಮಿವಾಪರಮ್ ॥ ೫
ದೃಷ್ಟಮಾತ್ರೇಣ ತೇನಾಭೂತ್ ಸಾ ತಥಾ ಹೃತಚೇತನಾ ।
ಯಥಾ ಸಭಯರಂಭಾದಿಸಖೀಚೇತಾಂಸ್ಯಕಂಪಯತ್ ॥ ೬
ಸೋಽಪಿ ತಾಂ ವೀಕ್ಷ್ಯ ಲಾವಣ್ಯರಸನಿರ್ಝರಿಣೀಂ ನೃಪಃ ।
ಯನ್ನ ಪ್ರಾಪ ಪರಿಷ್ವಂಗಂ ತೃಷಾಕ್ರಾಂತೋ ಮುಮೂರ್ಛ ತತ್ ॥ ೭
ಅಥಾದಿದೇಶ ಸರ್ವಜ್ಞೋ ಹರಿಃ ಕ್ಷೀರಾಂಬುಧಿಸ್ಥಿತಃ ।
ನಾರದಾಖ್ಯಂ ಮುನಿವರಂ ದರ್ಶನಾರ್ಥಮುಪಾಗತಮ್ ॥ ೮
ದೇವರ್ಷೇ ನಂದನೋದ್ಯಾನವರ್ತೀ ರಾಜಾ ಪುರೂರವಾಃ ।
ಉರ್ವಶೀಹೃತಚಿತ್ತಃ ಸನ್ ಸ್ಥಿತೋ ವಿರಹನಿಸ್ಸಹಃ ॥ ೯
ತದ್ಗತ್ವಾ ಮಮ ವಾಕ್ಯೇನ ಬೋಧಯಿತ್ವಾ ಶತಕ್ರತುಮ್ ।
ದಾಪಯ ತ್ವರಿತಂ ತಸ್ಮೈ ರಾಜ್ಞೇ ತಾಮುರ್ವಶೀಂ ಮುನೇ ॥ ೧೦
ಇತ್ಯಾದಿಷ್ಟಃ ಸ ಹರಿಣಾ ತಥೇತ್ಯಾಗತ್ಯ ನಾರದಃ ।
ಪ್ರಬೋಧ್ಯ ತಂ ತಥಾಭೂತಂ ಪುರೂರವಸಮಬ್ರವೀತ್ ॥ ೧೧

೧೨. 'ದೊರೆಯೇ, ಎದ್ದೇಳು. ನಿನಗಾಗಿ ವಿಷ್ಣು ನನ್ನನ್ನು ಇಲ್ಲಿಗೆ ಕಳುಹಿಸಿದ್ದಾನೆ. ಆ ಭಗವಂತನು ಕಪಟವಿಲ್ಲದ ಭಕ್ತರ ತೊಂದರೆಯನ್ನು ಎಂದೂ ಉಪೇಕ್ಷಿಸುವುದಿಲ್ಲ.'

೧೩. ಹೀಗೆ ಹೇಳಿ ಆಶ್ವಾಸನೆಯನ್ನು ಕೊಟ್ಟು, ಸಮಾಧಾನವನ್ನು ಹೊಂದಿದ ಪುರೂರವನೊಡನೆ ನಾರದಮಹರ್ಷಿಯು ದೇವರಾಜ ಇಂದ್ರನ ಬಳಿಗೆ ಹೋದನು.

೧೪. ನಮಸ್ಕಾರ ಮಾಡಿದ ಇಂದ್ರನಿಗೆ ಹರಿಯ ಆದೇಶವನ್ನು ತಿಳಿಸಿ ಅವನು ಪುರೂರವನಿಗೆ ಉರ್ವಶಿಯನ್ನು ಕೊಡಿಸಿದನು.

೧೫. ಹಾಗೆ ಉರ್ವಶಿಯನ್ನು ಕೊಟ್ಟಿದ್ದು ಸ್ವರ್ಗದ ಜೀವವನ್ನೇ ಕಳೆದಂತೆ ಆಯಿತು. ಆದರೆ ಉರ್ವಶಿಗಾದರೋ ಅದೇ ಮೃತಸಂಜೀವಿನಿ ಔಷಧವಾಗಿತ್ತು.

೧೬. ಅನಂತರ ಉರ್ವಶಿಯನ್ನು ಕರೆದುಕೊಂಡು ಪುರೂರವಸ್ ಭೂಲೋಕಕ್ಕೆ ಬಂದನು. ಸ್ವರ್ಗದ ಅಪ್ಸರೆಯ ದರ್ಶನದಿಂದ ಉಂಟಾಗುವ ಅಚ್ಚರಿಯನ್ನು ಅವನು ಮಾನವರ ಕಣ್ಣುಗಳಿಗೆ ಒದಗಿಸಿದನು.

೧೭. ಉರ್ವಶೀ ಮತ್ತು ಆ ರಾಜ, ಇಬ್ಬರೂ ಒಬ್ಬರನ್ನೊಬ್ಬರು ಅಗಲದೆ ಪರಸ್ಪರ ದೃಷ್ಟಿಪಾಶದಿಂದ ಕಟ್ಟಲ್ಪಟ್ಟವರಂತೆ ಒಟ್ಟಿಗೆ ಇದ್ದರು.

---

ಉತ್ತಿಷ್ಠ ತ್ವತ್ಕೃತೇ ರಾಜನ್ ಪ್ರೇಷಿತೋಽಸ್ಮೀಹ ವಿಷ್ಣುನಾ ।
ಸ ಹಿ ನಿರ್ವ್ಯಾಜಭಕ್ತಾನಾಂ ನೈವಾಪದಮುಪೇಕ್ಷತೇ ॥ ೧೨
ಇತ್ಯುಕ್ತ್ವಾಶ್ವಾಸಿತೇನಾಥ ಸ ಪುರೂರವಸಾ ಸಹ ।
ಜಗಾಮ ದೇವರಾಜಸ್ಯ ನಿಕಟಂ ನಾರದೋ ಮುನಿಃ ॥ ೧೩
ಹರೇರ್ನಿದೇಶಮಿಂದ್ರಾಯ ನಿವೇದ್ಯ ಪ್ರಣತಾತ್ಮನೇ ।
ಉರ್ವಶೀಂ ದಾಪಯಾಮಾಸ ಸ ಪುರೂರವಸೇ ತತಃ ॥ ೧೪
ತದಭೂದುರ್ವಶೀದಾನಂ ನಿರ್ಜೀವಕರಣಂ ದಿವಃ ।
ಉರ್ವಶ್ಯಾಸ್ತು ತದೇವಾಸೀನ್ಮೃತಸಂಜೀವನೌಷಧಮ್ ॥ ೧೫
ಅಥಾಜಗಾಮ ಭೂಲೋಕಂ ತಾಮಾದಾಯ ಪುರೂರವಾಃ ।
ಸ್ವರ್ವಧೂದರ್ಶನಾಶ್ಚರ್ಯಮರ್ಪಯನ್ ಮರ್ತ್ಯಚಕ್ಷುಷಾಮ್ ॥ ೧೬
ತತೋಽನಪಾಯಿನೌ ತೌ ದ್ವಾವುರ್ವಶೀ ಚ ನೃಪಶ್ಚ ಸಃ ।
ಅನ್ಯೋನ್ಯದೃಷ್ಟಿಪಾಶೇನ ನಿಬದ್ಧಾವಿವ ತಸ್ಥತುಃ ॥ ೧೭

೧೮. ಒಮ್ಮೆ ಇಂದ್ರನಿಗೆ ದಾನವರೊಡನೆ ಯುದ್ಧವಾಯಿತು. ನೆರವಿಗಾಗಿ ಅವನು ಕರೆದಾಗ ಪುರೂರವಸ್ ಸ್ವರ್ಗಕ್ಕೆ ಹೋದನು.

೧೯. (ಆ ಯುದ್ಧದಲ್ಲಿ) ಮಾಯಾಧರ ಎಂಬ ಹೆಸರಿನ ದಾನವರಾಜನು ಸತ್ತನು. ಆಗ ಅಪ್ಸರೆಯರ ನೃತ್ಯೋತ್ಸವವನ್ನು ಇಂದ್ರನು ಏರ್ಪಡಿಸಿದನು.

೨೦. ನೃತ್ಯದ ಗುರು ತುಂಬುರು ಅಲ್ಲಿದ್ದನು. ರಂಭೆಯು ಕುಣಿಯುತ್ತಿದ್ದಾಗ ಅವಳ ಅಭಿನಯದಲ್ಲಿ ತಪ್ಪು ಉಂಟಾದುದನ್ನು ನೋಡಿ ಪುರೂರವಸ್ ನಕ್ಕುಬಿಟ್ಟನು.

೨೧. 'ದೇವಲೋಕದ ನಾಟ್ಯ ಹೇಗಿರಬೇಕೆಂದು ನನಗೆ ಗೊತ್ತು. ಮಾನವನೇ ! ಅದನ್ನು ನೀನು ಹೇಗೆ ತಿಳಿದಿರಲು ಸಾಧ್ಯ ?' ಎಂದು ಆ ಕ್ಷಣದಲ್ಲಿ ಅಸೂಯೆಯಿಂದ ರಂಭೆಯು ಅವನನ್ನು ಕೇಳಿದಳು.

೨೨. ಆಗ ಪುರೂರವಸ್ "ನಿಮ್ಮ ಗುರು ತುಂಬುರುವಿಗೆ ಕೂಡ ತಿಳಿಯದಷ್ಟು ನನಗೆ ಊರ್ವಶಿಯ ಸಹವಾಸದಿಂದ ತಿಳಿದಿದೆ" ಎಂದು ಅವಳಿಗೆ ಹೇಳಿದನು.

೨೩. ಅದನ್ನು ಕೇಳಿ ತುಂಬುರು ಕೋಪದಿಂದ "ಕೃಷ್ಣನನ್ನು ಆರಾಧಿಸುವವರೆಗೂ ನಿನಗೆ ಊರ್ವಶಿಯ ವಿಯೋಗ ಉಂಟಾಗಲಿ" ಎಂದು ಅವನಿಗೆ ಶಾಪವನ್ನಿತ್ತನು.

೨೪. ಶಾಪವನ್ನು ಕೇಳಿದ ಕೂಡಲೆ ಪುರೂರವಸ್ (ಭೂಲೋಕಕ್ಕೆ ) ಹೋಗಿ ಊರ್ವಶಿಗೆ ಅಕಾಲದಲ್ಲಿ ಬಿದ್ದ ಸಿಡಿಲಿನಂತೆ ಉಗ್ರವಾಗಿದ್ದ ತನ್ನ ವೃತ್ತಾಂತವನ್ನು ತಿಳಿಸಿದನು.

---

ಏಕದಾ ದಾನವೈಃ ಸಾಕಂ ಪ್ರಾಪ್ತಯುದ್ಧೇನ ವಜ್ರಿಣಾ ।
ಸಾಹಾಯಕಾರ್ಥಮಾಹೂತೋ ಯಯೌ ನಾಕಂ ಪುರೂರವಾಃ ॥ ೧೮
ತತ್ರ ತಸ್ಮಿನ್ ಹತೇ ಮಾಯಾಧರನಾಮ್ನ್ಯಸುರಾಧಿಪೇ ।
ಪ್ರನೃತ್ತಸ್ವರ್ವಧೂಸಾರ್ಥಃ ಶಕ್ರಸ್ಯಾಭವದುತ್ಸವಃ ॥ ೧೯
ತತಶ್ಚ ರಂಭಾಂ ನೃತ್ಯಂತೀಮಾಚಾರ್ಯೇ ತುಂಬುರೌ ಸ್ಥಿತೇ ।
ಚಲಿತಾಭಿನಯಾಂ ದೃಷ್ಟ್ವಾ ಜಹಾಸ ಸ ಪುರೂರವಾಃ ॥ ೨೦
ಜಾನೇ ದಿವ್ಯಮಿದಂ ನೃತ್ತಂ ಕಿಂ ತ್ವಂ ಜಾನಾಸಿ ಮಾನವ ।
ಇತಿ ರಂಭಾಪಿ ತತ್ಕಾಲಂ ಸಾಸೂಯಂ ತಮಭಾಷತ ॥ ೨೧
ಜಾನೇಽಹಮುರ್ವಶೀಸಂಗಾತ್ ತದ್ಯದ್ವೇತ್ತಿ ನ ತುಂಬುರುಃ ।
ಯುಷ್ಮದ್ಗುರುರಪೀತ್ಯೇನಾಮುವಾಚಾಥ ಪುರೂರವಾಃ ॥ ೨೨
ತಚ್ಛ್ರುತ್ವಾ ತುಂಬುರುಃ ಕೋಪಾತ್ ತಸ್ಮೈ ಶಾಪಮಥಾದಿಶತ್ ।
ಉರ್ವಶ್ಯಾ ತೇ ವಿಯೋಗಃ ಸ್ಯಾದಾ ಕೃಷ್ಣಾರಾಧನಾದಿತಿ ॥ ೨೩
ಶ್ರುತಶಾಪಶ್ಚ ಗತ್ವೈವ ತಮುರ್ವಶ್ಯೈ ಪುರೂರವಾಃ ।
ಅಕಾಲಾಶನಿಪಾತೋಗ್ರಂ ಸ್ವವೃತ್ತಾಂತಂ ನ್ಯವೇದಯತ್ ॥ ೨೪

೨೫. ಅನಂತರ ಪುರೂರವಸ್ಸಿಗೆ ಕಾಣಿಸಿಕೊಳ್ಳದೆ ಗಂಧರ್ವರು ಇದ್ದಕ್ಕಿದ್ದಂತೆ ಬಂದು ಎರಗಿ ಉರ್ವಶಿಯನ್ನು ಅಪಹರಿಸಿಕೊಂಡು ಎಲ್ಲಿಗೋ ಒಯ್ದರು.

೨೬. ಅದು ಶಾಪದಿಂದ ಉಂಟಾದ ತೊಂದರೆ ಎಂಬುದನ್ನರಿತು ಪುರೂರವಸ್ ಬದರಿಕಾಶ್ರಮಕ್ಕೆ ಹೋಗಿ ಹರಿಯ ಆರಾಧನೆಯನ್ನು ಮಾಡಿದನು.

೨೭. ಗಂಧರ್ವರ ದೇಶದಲ್ಲಿದ್ದ ಉರ್ವಶಿಯು ವಿರಹದಿಂದ ನೊಂದು ಚೈತನ್ಯವೇ ಇಲ್ಲದೆ, ಸತ್ತವಳಂತೆ, (ಚಿತ್ರದಲ್ಲಿ) ಬರೆಯಲ್ಪಟ್ಟವಳಂತೆ, ನಿದ್ರಿಸುತ್ತಿರುವವಳಂತೆ ಇದ್ದಳು.

೨೮. ವಿರಹದಿಂದ ದೀರ್ಘವಾಗಿದ್ದ ರಾತ್ರಿಗಳಲ್ಲಿ ಹೆಣ್ಣು ಚಕ್ರವಾಕ ಪಕ್ಷಿಯಂತೆ ರೋದಿಸುತ್ತಿದ್ದ ಉರ್ವಶಿಯು ಶಾಪಕ್ಕೆ ಕೊನೆ ಉಂಟಾಗುವುದೆಂಬ ಆಶೆಯನ್ನು ಅವಲಂಬಿಸಿಕೊಂಡಿದ್ದರೂ ಪ್ರಾಣಗಳು ಅವಳನ್ನು ಬಿಟ್ಟು ಹೋಗಲಿಲ್ಲವೆನ್ನುವುದೇ ಆಶ್ಚರ್ಯದ ವಿಷಯ.

೨೯. ಪುರೂರವಸ್ ತಪಸ್ಸಿನಿಂದ ಹರಿಯನ್ನು ಪ್ರಸನ್ನಗೊಳಿಸಿದನು. ಹರಿಯ ಅನುಗ್ರಹದಿಂದ ಗಂಧರ್ವರು ಉರ್ವಶಿಯನ್ನು ಬಿಡುಗಡೆ ಮಾಡಿದರು.

೩೦. ಶಾಪವು ಕೊನೆಗೊಂಡು ಮತ್ತೆ ದೊರಕಿದ ಅಪ್ಸರೆ ಉರ್ವಶಿಯೊಡನೆ ಪುರೂರವಸ್ ಭೂಲೋಕದಲ್ಲಿದ್ದರೂ ದೇವಲೋಕದ ಸೌಖ್ಯಗಳನ್ನು ಅನುಭವಿಸಿದನು.

---

ತತೋಽಕಸ್ಮಾನ್ನಿಪತ್ಯೈವ ನಿನ್ಯೇ ಕ್ವಾಪ್ಯಪಹೃತ್ಯ ಸಾ ।
ಅದೃಷ್ಟೈಸ್ತೇನ ಭೂಪೇನ ಗಂಧರ್ವೈರುರ್ವಶೀ ಕಿಲ ॥ ೨೫
ಅವೇತ್ಯ ಶಾಪದೋಷಂ ತಂ ಸೋಽಥ ಗತ್ವಾ ಪುರೂರವಾಃ ।
ಹರೇರಾರಾಧನಂ ಚಕ್ರೇ ತತೋ ಬದರಿಕಾಶ್ರಮೇ ॥ ೨೬
ಉರ್ವಶೀ ತು ವಿಯೋಗಾರ್ತಾ ಗಂಧರ್ವವಿಷಯಸ್ಥಿತಾ ।
ಆಸೀನ್ಮೃತೇವ ಸುಪ್ತೇವ ಲಿಖಿತೇವ ವಿಚೇತನಾ ॥ ೨೭
ಆಶ್ಚರ್ಯಂ ಯನ್ನ ಸಾ ಪ್ರಾಣೈಃ ಶಾಪಾಂತಾಶಾವಲಂಬಿನೀ ।
ಮುಕ್ತಾ ವಿರಹದೀರ್ಘಾಸು ಚಕ್ರವಾಕೀವ ರಾತ್ರಿಷು ॥ ೨೮
ಪುರೂರವಾಶ್ಚ ತಪಸಾ ತೇನಾಚ್ಯುತಮತೋಷಯತ್ ।
ತತ್ಪ್ರಸಾದೇನ ಗಂಧರ್ವಾ ಮುಮುಚುಸ್ತಸ್ಯ ಚೋರ್ವಶೀಮ್ ॥ ೨೯
ಶಾಪಾಂತಲಬ್ಧಯಾ ಯುಕ್ತಃ ಪುನರಪ್ಸರಸಾ ತಯಾ ।
ದಿವ್ಯಾನ್ ಸ ರಾಜಾ ಬುಭುಜೇ ಭೋಗಾನ್ ಭೂತಲವರ್ತ್ಯಪಿ ॥ ೩೦

೩೧. ಇಷ್ಟು ಹೇಳಿ ವತ್ಸರಾಜನು ಸುಮ್ಮನಾಗಲು ಉರ್ವಶಿಯ ಪ್ರೇಮದ ಬಗೆಗೆ ಕೇಳಿದ ವಾಸವದತ್ತೆ ತಾನು ವಿಯೋಗವನ್ನು ಸಹಿಸಿದೆನಲ್ಲ ಎಂದು ನಾಚಿಕೆ ಪಟ್ಟು ಕೊಂಡಳು.

೩೨. ಜಾಣತನದಿಂದ ಹೀಗೆ ರಾಜನಿಂದ ನಿಂದೆಗೆ ಈಡು ಮಾಡಲ್ಪಟ್ಟ ರಾಣಿ ನಾಚಿಕೊಂಡದ್ದನ್ನು ನೋಡಿ ಅವಳನ್ನು ಸಂತೈಸಲು ಯೌಗಂಧರಾಯಣನು ರಾಜನಿಗೆ ಹೀಗೆ ಹೇಳಿದನು.

## ರಾಣಿ ತೇಜೋವತಿಯ ಕಥೆ

೩೩. "'ದೊರೆಯೇ, ನೀನು ಹಿಂದೆ ಈ ಕಥೆಯನ್ನು ಕೇಳಿಲ್ಲದಿದ್ದರೆ ಈಗ ಕೇಳು. ಲಕ್ಷ್ಮಿಯ ಮನೆಯೇ ಆದ ತಿಮಿರಾ ಎಂಬ ನಗರವಿದೆ.

೩೪. ಅದರಲ್ಲಿ ಕೀರ್ತಿಶಾಲಿಯಾಗಿದ್ದ ವಿಹಿತಸೇನನೆಂಬ ರಾಜನಿದ್ದನು. ಭೂಲೋಕದ ಅಪ್ಸರೆ ಎನಿಸಿಕೊಂಡಿದ್ದ ತೇಜೋವತಿ ಅವನ ಹೆಂಡತಿಯಾಗಿದ್ದಳು.

೩೫ ಆ ರಾಜನು ಯಾವಾಗಲೂ ಅವಳ ಸ್ಪರ್ಶವನ್ನು ಅಪೇಕ್ಷಿಸುವವನಾಗಿ ಸದಾ ಅವಳ ಕಂಠವನ್ನು ತಬ್ಬಿಕೊಂಡಿದ್ದು ಅವಳ ಶರೀರವು ಕಂಚುಕದಿಂದ ಮುಚ್ಚಿರುವುದನ್ನೂ ಸಹಿಸುತ್ತಿರಲಿಲ್ಲ.

೩೬ ಒಮ್ಮೆ ಆ ರಾಜನಿಗೆ ಅಜೀರ್ಣಜ್ವರ ಎಂಬ ರೋಗ ಉಂಟಾಯಿತು. ಆಗ ವೈದ್ಯರು ರಾಣಿಯೊಡನೆ ರಾಜನ ಸಂಗಮವನ್ನು ನಿಷೇಧಿಸಿದರು.

---

ಇತ್ಯುಕ್ತ್ವಾ ವಿರತೇ ರಾಜ್ಞಿ ಶ್ರುತ್ತೋರ್ವಶ್ಯನುರಾಗಯಾ ।
ಪ್ರಾಪಿ ಸೋಢವಿಯೋಗತ್ವಾದ್ ವ್ರೀಡಾ ವಾಸವದತ್ತಯಾ ॥ ೩೧
ತಾಂ ದೃಷ್ಟ್ವಾ ಯುಕ್ತ್ಯುಪಾಲಬ್ಧಾಂ ರಾಜ್ಞಾ ದೇವೀಂ ವಿಲಕ್ಷಿತಾಮ್ ।
ಅಥಾಪ್ಯಾಯಯಿತುಂ ಭೂಪಮಾಹ ಯೌಗಂಧರಾಯಣಃ ॥ ೩೨
ನ ಶ್ರುತಾ ಯದಿ ತದ್ರಾಜನ್ ಕಥೇಯಂ ಶ್ರೂಯತಾಂ ತ್ವಯಾ ।
ಅಸ್ತೀಹ ತಿಮಿರಾ ನಾಮ ನಗರೀ ಮಂದಿರಂ ಶ್ರಿಯಃ ॥ ೩೩
ತಸ್ಯಾಂ ವಿಹಿತಸೇನಾಖ್ಯಃ ಖ್ಯಾತಿಮಾನಭವನ್ನೃಪಃ ।
ತಸ್ಯ ತೇಜೋವತೀತ್ಯಾಸೀದ್ ಭಾರ್ಯಾ ಕ್ಷಿತಿತಲಾಪ್ಸರಾಃ ॥ ೩೪
ತಸ್ಯಾಃ ಕಂಠಗ್ರಹೈಕಾಗ್ರಃ ಸ ರಾಜಾ ಸ್ಪರ್ಶಲೋಲುಭಃ ।
ನ ಸೇಹೇ ಕಂಚುಕೇನಾಪಿ ಕ್ಷಿಪ್ತಮಾಚ್ಛುರಿತಂ ವಪುಃ ॥ ೩೫
ಕದಾಚಿತ್ತಸ್ಯ ರಾಜ್ಞಶ್ಚ ಜಜ್ಞೇಽಜೀರ್ಣಜ್ವರಾಮಯಃ ।
ವೈದ್ಯಾ ನಿವಾರಯಾಮಾಸುಸ್ತಯಾ ದೇವ್ಯಾಸ್ಯ ಸಂಗಮಮ್ ॥ ೩೬

೩೭. ರಾಣಿಯ ಸಂಪರ್ಕವಿಲ್ಲದೆ ರಾಜನ ಹೃದಯದಲ್ಲಿ ಯಾವ ಔಷಧಗಳಿಗೂ ಉಪಚಾರಗಳಿಗೂ ಗುಣಪಡಿಸಲು ಅಸಾಧ್ಯವಾದ ವ್ಯಾಧಿಯು ಹುಟ್ಟಿಕೊಂಡಿತು.

೩೮. ಭಯದಿಂದಲೋ ಶೋಕದ ಹೊಡೆತದಿಂದಲೋ ರಾಜನಿಗೆ ಈ ಹೃದಯವ್ಯಾಧಿಯು ಯಾವಾಗಲಾದರೂ ಸರಿಯಾಗಬಹುದು ಎಂದು ರಹಸ್ಯವಾಗಿ ವೈದ್ಯರು ಮಂತ್ರಿಗೆ ಹೇಳಿದರು.

೩೯–೪೦. ಬೆನ್ನ ಹಿಂದೆ ಹೆಬ್ಬಾವು ಅಟ್ಟಿಸಿಕೊಂಡು ಬಂದರೂ ಬೆದರದ, ಅಂತಃಪುರದೊಳಕ್ಕೆ ಶತ್ರುಗಳ ಸೈನ್ಯ ನುಗ್ಗಿದಾಗಲೂ ಹೆದರದ, ಸತ್ತ್ವಶಾಲಿಯಾದ ಈ ರಾಜನಿಗೆ ಭಯ ಹೇಗೆ ಉಂಟಾದೀತು ? ಈ ವಿಷಯದಲ್ಲಿ ಉಪಾಯವನ್ನು ಹುಡುಕಲು ನಮಗೆ ಬುದ್ಧಿ ಸಾಲದು. ಈ ಬಗೆಗೆ ಮಂತ್ರಿಗಳಾದ ನಾವು ಏನು ಮಾಡುವುದು ?

೪೧. ಎಂದು ಯೋಚಿಸಿದ ಮಂತ್ರಿಗಳು ರಾಣಿಯೊಡನೆ ಮಂತ್ರಾಲೋಚನೆಯನ್ನು ಮಾಡಿ ಅವಳನ್ನು ಬಚ್ಚಿಟ್ಟು 'ರಾಣಿ ಸತ್ತು ಹೋದಳು' ಎಂದು ರಾಜನಿಗೆ ಹೇಳಿಬಿಟ್ಟರು.

೪೨. ಅತಿತೀವ್ರವಾದ ಆ ಶೋಕವು ರಾಜನನ್ನು ಹಿಂಸಿಸಿದಾಗ ವಿಹ್ವಲನಾದ ಅವನ ಹೃದಯವ್ಯಾಧಿ ಒಡೆದು ಹೋಯಿತು.

೪೩. ರೋಗದ ವಿಪತ್ತನ್ನು ದಾಟಿದ ರಾಜನಿಗೆ ಇನ್ನೊಂದು ಸುಖಸಂಪತ್ತನ್ನೋ ಎಂಬಂತೆ ಆ ಮಹಾರಾಣಿಯನ್ನು ಮಂತ್ರಿಗಳು ಅರ್ಪಿಸಿದರು.

---

ದೇವೀಸಂಪರ್ಕಹೀನಸ್ಯ ಹೃದಯೇ ತಸ್ಯ ಭೂಭೃತಃ ।
ಔಷಧೋಪಕ್ರಮಾಸಾಧ್ಯೋ ವ್ಯಾಧಿಃ ಸಮುದಪದ್ಯತ ॥ ೩೭
ಭಯಾಚ್ಛೋಕಾಭಿಘಾತಾದ್ವಾ ರಾಜ್ಞೋ ರೋಗಃ ಕದಾಚನ ।
ಸ್ಫುಟೇದಯಮಿತಿ ಸ್ಮಾಹುರ್ಭಿಷಜೋ ಮಂತ್ರಿಣಂ ರಹಃ ॥ ೩೮
ಯಃ ಪುರಾ ಪೃಷ್ಠಪತಿತೇ ನ ತತ್ರಾಸ ಮಹೋರಗೇ ।
ನಾಂತಃ ಪುರಪ್ರವಿಷ್ಟೇಽಪಿ ಪರಾನೀಕೇ ಚ ಚುಕ್ಷುಭೇ ॥ ೩೯
ತಸ್ಯಾಸ್ಯ ರಾಜ್ಞೋ ಜಾಯೇತ ಭಯಂ ಸತ್ತ್ವವತಃಕಥಮ್ ।
ನಾಸ್ತ್ಯತ್ರೋಪಾಯಬುದ್ಧಿರ್ನಃ ಕಿಂ ಕುರ್ಮಸ್ತೇನ ಮಂತ್ರಿಣಃ ॥ ೪೦
ಇತಿ ಸಂಚಿಂತ್ಯ ಸಂಮಂತ್ರ್ಯ ತೇ ದೇವ್ಯಾ ಸಹ ಮಂತ್ರಿಣಃ ।
ತಾಂ ಪ್ರಚ್ಛಾದ್ಯ ತಮೂಚುಶ್ಚ ಮೃತಾ ದೇವೀತಿ ಭೂಪತಿಮ್ ॥ ೪೧
ತೇನ ಶೋಕಾತಿಭಾರೇಣ ಮಥ್ಯಮಾನಸ್ಯ ತಸ್ಯ ಸಃ ।
ಪುಸ್ಫೋಟ ಹೃದಯವ್ಯಾಧಿರ್ವಿಹ್ವಲಸ್ಯ ಮಹೀಭೃತಃ ॥ ೪೨
ಉತ್ತೀರ್ಣರೋಗವಿಪದೇ ತಸ್ಮೈ ರಾಜ್ಞೇಽಥ ಮಂತ್ರಿಭಿಃ ।
ಅರ್ಪಿತಾ ಸಾ ಮಹಾದೇವೀ ಸುಖಸಂಪದಿವಾಪರಾ ॥ ೪೩

೪೪. ಹೀಗೆ ತನಗೆ ಪ್ರಾಣವನ್ನು ಕೊಟ್ಟ ಅವಳನ್ನು ರಾಜನು ಆದರಿಸಿದನು. ಅವನು ಬುದ್ಧಿಶಾಲಿಯಾಗಿದ್ದುದರಿಂದ ತನ್ನನ್ನು ಮುಚ್ಚಿಟ್ಟುಕೊಂಡ ಅವಳ ಮೇಲೆ ಕೋಪಿಸಿಕೊಳ್ಳಲಿಲ್ಲ.

೪೫. ರಾಣಿ ಎನಿಸಿಕೊಳ್ಳಬೇಕಾದರೆ ಗಂಡನಿಗೆ ಹಿತೈಷಿಯಾಗಿರಬೇಕು. ಪ್ರಿಯವಾದುದನ್ನು ಮಾಡುವಷ್ಟರಿಂದ ‘ರಾಣಿ’ ಎಂಬ ಹೆಸರು ಸಿಗುವುದಿಲ್ಲ.

೪೬. ರಾಜ್ಯದ ಕಾರ್ಯಗಳ ಬಗೆಗೆ ಸದಾ ಚಿಂತಿಸುವುದೇ ಮಂತ್ರಿತ್ವ. ರಾಜನ ಮನಸ್ಸನ್ನು ಅನುಸರಿಸಿ ನಡೆಯುವುದು ಕೇವಲ ಪರಾವಲಂಬಿಯ ಲಕ್ಷಣ.

೪೭. ನಮಗೆ ಶತ್ರುವಾಗಿದ್ದ ಮಗಧರಾಜನೊಡನೆ ಸಂಧಿಯನ್ನು ಮಾಡಿಕೊಂಡು ನಿನಗೆ ಇಡೀ ಭೂಮಿಯ ಮೇಲೆ ವಿಜಯ ದೊರಕಬೇಕೆಂಬ ಕಾರಣದಿಂದ ನಾವು ಈ ಪ್ರಯತ್ನವನ್ನು ಮಾಡಿದೆವು.

೪೮. ಆದ್ದರಿಂದ ದೊರೆಯೇ, ನಿನ್ನಲ್ಲಿ ಅವಳಿಗಿರುವ ಭಕ್ತಿಯಿಂದ, ಸಹಿಸಲು ಅಸಾಧ್ಯವಾದ ವಿರಹವನ್ನೂ ಸಹಿಸಿದ ವಾಸವದತ್ತೆ ಯಾವ ಅಪರಾಧವನ್ನೂ ಮಾಡಿಲ್ಲ. ಬದಲಾಗಿ ನಿನಗೆ ದೊಡ್ಡ ಉಪಕಾರವನ್ನೇ ಮಾಡಿದ್ದಾಳೆ.”

೪೯. ಮುಖ್ಯಮಂತ್ರಿ ಯೌಗಂಧರಾಯಣನ ಯಥಾರ್ಥವಾದ ಈ ಮಾತನ್ನು ಕೇಳಿ ವತ್ಸರಾಜನು ತಾನೇ ಅಪರಾಧಿ ಎಂದು ಅಂದುಕೊಂಡನಾದರೂ ಅವನಿಗೆ ಸಂತೋಷವೂ ಆಯಿತು.

---

ಬಹುಮೇನೇ ಚ ಸೋಽಪ್ಯೇನಾಂ ರಾಜಾ ಪ್ರಾಣಪ್ರದಾಯಿನೀಮ್ ।
ನ ಪುನರ್ಮತಿಮಾನಸ್ಯೈ ಚುಕ್ರೋಧಾಚ್ಛಾದಿತಾತ್ಮನೇ ॥ ೪೪
ಹಿತೈಷಿತಾ ಹಿ ಯಾ ಪತ್ಯುಃ ಸಾ ದೇವೀತ್ವಸ್ಯ ಕಾರಣಮ್ ।
ಪ್ರಿಯಕಾರಿತ್ವಮಾತ್ರೇಣ ದೇವೀಶಬ್ದೋ ನ ಲಭ್ಯತೇ ॥ ೪೫
ಸಾ ಮಂತ್ರಿತಾ ಚ ಯದ್ರಾಜ್ಯಕಾರ್ಯಭಾರೈಕಚಿಂತನಮ್ ।
ಚಿತ್ತಾನುವರ್ತನಂ ಯತ್ತದುಪಜೀವಕಲಕ್ಷಣಮ್ ॥ ೪೬
ಅತೋ ಮಗಧರಾಜೇನ ಸಂಧಾತುಂ ಪರಿಪಂಥಿನಾ ।
ಪೃಥ್ವೀವಿಜಯಹೇತೋಸ್ತೇ ಯತ್ನೋಽಸ್ಮಾಭಿರಯಂ ಕೃತಃ ॥ ೪೭
ತೇನ ದೇವ ಭವದ್ಭಕ್ತಿಸೋಢಾಸಹ್ಯವಿಯೋಗಯಾ ।
ದೇವ್ಯಾ ನೈವಾಪರಾದ್ಧಂ ತೇ ಪೂರ್ಣಾ ತೂಪಕೃತಿಃ ಕೃತಾ ॥ ೪೮
ಏತಚ್ಛ್ರುತ್ವಾ ವಚಸ್ತಸ್ಯ ಯಥಾರ್ಥಂ ಮುಖ್ಯಮಂತ್ರಿಣಃ ।
ಮೇನೇಽಪರಾದ್ಧಮಾತ್ಮಾನಂ ವತ್ಸರಾಜಸ್ತುತೋಷ ಚ ॥ ೪೯

೫೦. "ಇದು ನನಗೆ ಗೊತ್ತಾಯಿತು. ನೀವು ಹೇಳಿದಂತೆ ನಡೆದ ರಾಣಿ, ಸಾಕಾರವಾದ ನೀತಿಯಂತೆ, ನನಗೆ ಇಡೀ ಭೂಮಂಡಲವನ್ನೇ ಕೊಟ್ಟಂತಾಯಿತು.

೫೧. ಆದರೆ ಅತಿಪ್ರೇಮದಿಂದ ನಾನೇನನ್ನೋ ಅಸಮಂಜಸವಾದುದನ್ನು ನುಡಿದೆನು. ಒಲವಿನಿಂದ ಕುರುಡಾದ ಮನಸ್ಸಿನವರಿಗೆ ವಿಚಾರಶಕ್ತಿ ಎಲ್ಲಿಂದ ಬಂದೀತು ?"

೫೨. ಇವೇ ಮೊದಲಾದ ಮಾತುಗಳಿಂದ ವತ್ಸರಾಜನು ಆ ದಿನವನ್ನೂ ದೇವಿ ವಾಸವದತ್ತೆಯ ನಾಚಿಕೆಯ ಅರಿವೆಯನ್ನೂ ಒಟ್ಟಿಗೆ ಕಳೆದನು.

೫೩. ಮುಂದೆ ಒಂದು ದಿನ ಮಗಧರಾಜ ಜ್ಞಾನವಸ್ತುವು ಕಳುಹಿಸಿದ ದೂತನು ವತ್ಸರಾಜನ ಬಳಿಗೆ ಬಂದು ಅವನ ಮಾತಿನಂತೆ ಇಂತು ಬಿನ್ನವಿಸಿದನು.

೫೪. "ನಿನ್ನ ಮಂತ್ರಿಗಳು ನನಗೆ ಮೋಸಮಾಡಿಬಿಟ್ಟರು. ಆದರೂ ಈಗ ನಮಗೆ ಈ ಜೀವಲೋಕ ದುಃಖಪೂರ್ಣವಾಗಿ ಆಗದಂತೆ ನೀನು ನಡೆದುಕೊಳ್ಳಬೇಕು."

೫೫. ಇದನ್ನು ಕೇಳಿ ವತ್ಸರಾಜನು ಆ ದೂತನನ್ನು ಸತ್ಕರಿಸಿ ಪ್ರತಿಸಂದೇಶವನ್ನು ಪಡೆದುಕೊಳ್ಳುವುದಕ್ಕಾಗಿ ಪದ್ಮಾವತಿಯ ಬಳಿಗೆ ಕಳುಹಿಸಿದನು.

೫೬. ಅವಳು ವಾಸವದತ್ತೆಯ ಸನ್ನಿಧಿಯಲ್ಲೇ ಅವಳಿಗೆ ನಮ್ರಳಾಗಿ ನಿಂತು ಆ ದೂತನಿಗೆ ದರ್ಶನವನ್ನಿತ್ತಳು. ಸತಿಯರಿಗೆ ವಿನಯವೇ ವ್ರತವಲ್ಲವೆ ?

---

ಉವಾಚ ಚೈತಜ್ಜಾನೇಽಹಂ ದೇವ್ಯಾ ಯುಷ್ಮತ್ಪ್ರಯುಕ್ತಯಾ ।
ಆಕಾರವತ್ಯಾ ನೀತ್ಯೇವ ಮಮ ದತ್ತೈವ ಮೇದಿನೀ ॥ ೫೦
ಕಿಂ ತ್ವತಿಪ್ರಣಯಾದೇತನ್ಮಯೋಕ್ತಮಸಮಂಜಸಮ್ ।
ಅನುರಾಗಾಂಧಮನಸಾಂ ವಿಚಾರಸಹತಾ ಕುತಃ ॥ ೫೧
ಇತ್ಯಾದಿಭಿಃ ಸಮಾಲಾಪೈರ್ವತ್ಸರಾಜಃ ಸ ತದ್ದಿನಮ್ ।
ಲಜ್ಜೋಪರಾಗಂ ದೇವ್ಯಾಶ್ಚ ಸಮಮೇವಾಪನೀತವಾನ್ ॥ ೫೨
ಅನ್ಯೇದ್ಯುರ್ಮಗಧೇಶೇನ ಪ್ರೇಷಿತೋ ಜ್ಞಾನವಸ್ತುನಾ ।
ದೂತೋ ವತ್ಸೇಶಮಭ್ಯೇತ್ಯ ತದ್ವಾಕ್ಯೇನ ವ್ಯಜಿಜ್ಞಪತ್ ॥ ೫೩
ಮಂತ್ರಿಭಿಸ್ತೇ ವಯಂ ತಾವದ್ ವಂಚಿತಾಸ್ತತ್ತಥಾಧುನಾ ।
ಕುರ್ಯಾಃ ಶೋಕಮಯೋ ಯೇನ ಜೀವಲೋಕೋ ಭವೇನ್ನ ನಃ ॥ ೫೪
ಏತಚ್ಛ್ರುತ್ವಾಥ ಸಂಮಾನ್ಯ ವತ್ಸೇಶಃ ಪ್ರಜಿಘಾಯ ತಮ್ ।
ದೂತಂ ಪದ್ಮಾವತೀಪಾರ್ಶ್ವಂ ಪ್ರತಿಸಂದೇಶಲಬ್ಧಯೇ ॥ ೫೫
ಸಾಪಿ ವಾಸವದತ್ತೈಕನಮ್ರಾ ತತ್ಸನಿಧೌ ದದೌ ।
ದೂತಸ್ಯ ದರ್ಶನಂ ತಸ್ಯ ವಿನಯೋ ಹಿ ಸತೀವ್ರತಮ್ ॥ ೫೬

೫೭. "ಮಗಳೇ, ಮೋಸದಿಂದ ಅವರು ನಿನ್ನನ್ನು ಒಯ್ದರು. ನಿನ್ನ ಗಂಡನು ಬೇರೊಬ್ಬಳಲ್ಲಿ ಪ್ರೀತಿಯನ್ನಿಟ್ಟಿದ್ದಾನೆ. ಈ ರೀತಿ ಬಂದ ದುಃಖದಿಂದ ಹೆಣ್ಣು ಮಗಳ ತಂದೆಯಾದ ಫಲ ನನಗೆ ಸಿಕ್ಕಿದಂತಾಯಿತು."

೫೮. ಈ ಪ್ರಕಾರದ ತಂದೆಯ ಸಂದೇಶವನ್ನು ದೂತನು ಹೇಳಿದಾಗ ಪದ್ಮಾವತಿಯು "ಪುಣ್ಯಾತ್ಮನೆ, ನನ್ನ ಮಾತಿನಿಂದ ತಂದೆತಾಯಿಯರಿಗೆ ಹೀಗೆ ವಿಜ್ಞಾಪಿಸು.

೫೯–೬೦. 'ನೀವು ಶೋಕ ಪಡುವುದೇಕೆ ? ಆರ್ಯಪುತ್ರನು ನನ್ನಲ್ಲಿ ಅಧಿಕವಾಗಿ ದಯೆಯನ್ನಿಟ್ಟಿದ್ದಾನೆ. ರಾಣಿ ವಾಸವದತ್ತೆಯೂ ಸೋದರಿಯಂತೆ ನನ್ನಲ್ಲಿ ಪ್ರೀತಿಯನ್ನು ಹೊಂದಿದ್ದಾಳೆ. ಆದ್ದರಿಂದ ನನ್ನ ಸತ್ಯದಂತೆ ನಾನು ಜೀವವನ್ನು ಕಳೆದುಕೊಳ್ಳಬಾರದು ಎಂದಾದರೆ ತಂದೆ ನನ್ನ ಪತಿಯ ಮೇಲೆ ಕೋಪಿಸಿಕೊಳ್ಳಬಾರದು."

೬೧. ಹೀಗೆ ಯಥೋಚಿತವಾದ ಪ್ರತಿಸಂದೇಶವನ್ನು ಪದ್ಮಾವತಿಯು ದೂತನಿಗೆ ಹೇಳಿದ ಮೇಲೆ ವಾಸವದತ್ತೆಯು ಅವನನ್ನು ಸತ್ಕರಿಸಿ ಕಳುಹಿಸಿದಳು.

೬೨. ಆ ದೂತನು ಹೊರಟು ಹೋದ ಮೇಲೆ ತಂದೆಯ ಮನೆಯನ್ನು ನೆನಪಿಸಿಕೊಂಡು ಪದ್ಮಾವತಿಯು ಉತ್ಕಂಠೆಯಿಂದ ಸ್ವಲ್ಪ ಚಿಂತಾಕ್ರಾಂತಳಾಗಿದ್ದಂತೆ ಇದ್ದಳು.

೬೩. ಅವಳನ್ನು ವಿನೋದ ಪಡಿಸಲು ವಾಸವದತ್ತೆಯು ವಸಂತಕನಿಗೆ ಹೇಳಿದಾಗ ಅವನು ಅವಳ ಬಳಿಗೆ ಬಂದು ಒಂದು ಕಥೆಯನ್ನು ಹೀಗೆ ಬಣ್ಣಿಸಿದನು.

---

ವ್ಯಾಜೇನ ಪುತ್ರಿ ನೀತಾ ತ್ವಮನ್ಯಾಸಕ್ತಶ್ಚ ತೇ ಪತಿಃ ।
ಇತಿ ಶೋಕಾನ್ಮಯಾ ಲಬ್ಧಂ ಕನ್ಯಾಜನಕತಾಫಲಮ್ ॥ ೫೭
ಇತ್ಯುಕ್ತಪಿತೃಸಂದೇಶಂ ದೂತಂ ಪದ್ಮಾವತೀ ತದಾ ।
ಜಗಾದ ಭದ್ರ ವಿಜ್ಞಾಪ್ಯಸ್ತಾತೋಽಂಬಾ ಚ ಗಿರಾ ಮಮ ॥ ೫೮
ಕಿಂ ಶೋಕೇನಾರ್ಯಪುತ್ರೋ ಹಿ ಪರಮಂ ಸದಯೋ ಮಯಿ ।
ದೇವೀ ವಾಸವದತ್ತಾ ಚ ಸಸ್ನೇಹಾ ಭಗಿನೀವ ಮೇ ॥ ೫೯
ತತ್ತಾತೇನಾರ್ಯಪುತ್ರಸ್ಯ ಭಾವ್ಯಂ ನೈವ ವಿಕಾರಿಣಾ ।
ನಿಜಸತ್ಯಮಿವಾತ್ಯಾಜ್ಯಂ ಮದೀಯಂ ಜೀವಿತಂ ಯದಿ ॥ ೬೦
ಇತ್ಯುಕ್ತೇ ಪ್ರತಿಸಂದೇಶೇ ಪದ್ಮಾವತ್ಯಾ ಯಥೋಚಿತೇ ।
ದೂತಂ ವಾಸವದತ್ತಾ ತಂ ಸತ್ಕೃತ್ಯ ಪ್ರಾಹಿಣೋತ್ತತಃ ॥ ೬೧
ದೂತೇ ಪ್ರತಿಗತೇ ತಸ್ಮಿನ್ ಸ್ಮರಂತೀ ಪಿತೃವೇಶ್ಮನಃ ।
ಕಿಂಚಿತ್ ಪದ್ಮಾವತೀ ತಸ್ಥಾವುತ್ಕಂಠಾವಿಮನಾ ಇವ ॥ ೬೨
ತತಸ್ತಸ್ಯಾ ವಿನೋದಾರ್ಥಮುಕ್ತೋ ವಾಸವದತ್ತಯಾ ।
ವಸಂತಕೋಽಂತಿಕಪ್ರಾಪ್ತಃ ಕಥಾಮಿತ್ಥಮವರ್ಣಯತ್ ॥ ೬೩

## ಸೋಮಪ್ರಭೆಯ ಕಥೆ

೬೪. ಈ ಭೂಮಿಗೇ ಭೂಷಣವಾಗಿರುವ ಪಾಟಲಿಪುತ್ರವೆಂಬ ನಗರವಿದೆ. ಅದರಲ್ಲಿ ಧರ್ಮಗುಪ್ತನೆಂಬ ದೊಡ್ಡ ವ್ಯಾಪಾರಿಯು ಇದ್ದನು.

೬೫. ಅವನಿಗೆ ಚಂದ್ರಪ್ರಭಾ ಎಂಬ ಹೆಂಡತಿಯಿದ್ದಳು. ಅವಳೊಮ್ಮೆ ಗರ್ಭಿಣಿಯಾಗಿ ಸರ್ವಾಂಗಸುಂದರಿಯಾದ ಹೆಣ್ಣು ಮಗುವನ್ನು ಹೆತ್ತಳು.

೬೬. ಆ ಹೆಣ್ಣು ಮಗು ಹುಟ್ಟಿದಾಗಲೇ ತನ್ನ ಕಾಂತಿಯಿಂದ ಮನೆಯನ್ನೆಲ್ಲ ಬೆಳಗಿತು. ಆಗಲೇ ಸ್ಪಷ್ಟವಾಗಿ ಮಾತನಾಡಿತು ಮತ್ತು ಎದ್ದು ಕುಳಿತುಕೊಂಡಿತು.

೬೭. ಹೆರಿಗೆಯ ಮನೆಯಲ್ಲಿದ್ದ ಹೆಂಗಸರೆಲ್ಲರಿಗೂ ವಿಸ್ಮಯವಾಯಿತು, ಭಯವೂ ಆಯಿತು. ಅವರನ್ನು ನೋಡಿ ತಾನೂ ಭಯಪಟ್ಟ ಧರ್ಮಗುಪ್ತನು ತಾನೇ ಅಲ್ಲಿಗೆ ಬಂದನು.

೬೮. ಆ ಹೆಣ್ಣು ಮಗುವಿಗೆ ನಮಸ್ಕರಿಸಿ "ಭಗವತಿ, ಇಲ್ಲಿ ನನ್ನ ಮನೆಯಲ್ಲಿ ಅವತಾರ ಮಾಡಿರುವ ನೀನು ಯಾರು ?" ಎಂದು ಏಕಾಂತದಲ್ಲಿ ಅವಳನ್ನು ಕೇಳಿದನು.

೬೯. "ನನ್ನನ್ನು ನೀನು ಎಂದೂ ಯಾರಿಗೂ ಕೊಡಬಾರದು. ನಿನ್ನ ಮನೆಯಲ್ಲಿದ್ದರೆ ನಾನು ಶುಭವನ್ನುಂಟುಮಾಡುತ್ತೇನೆ. ತಂದೆಯೇ, ಬೇರೆ ಪ್ರಶ್ನೆಗಳಿಂದ ಪ್ರಯೋಜನವೇನು ?" ಎಂದು ಅವಳು ಹೇಳಿದಳು.

---

ಅಸ್ತಿ ಪಾಟಲಿಪುತ್ರಾಖ್ಯಂ ಪುರಂ ಪೃಥ್ವೀವಿಭೂಷಣಮ್ ।
ತಸ್ಮಿಂಶ್ಚ ಧರ್ಮಗುಪ್ತಾಖ್ಯೋ ಬಭೂವೈಕೋ ಮಹಾವಣಿಕ್ ॥ ೬೪
ತಸ್ಯ ಚಂದ್ರಪ್ರಭೇತ್ಯಾಸೀದ್ ಭಾರ್ಯಾ ಸಾ ಚ ಕದಾಚನ ।
ಸಗರ್ಭಾಭೂತ್ ಪ್ರಸೂತಾಥ ಕನ್ಯಾಂ ಸರ್ವಾಂಗಸುಂದರೀಮ್ ॥ ೬೫
ಸಾ ಕನ್ಯಾ ಜಾತಮಾತ್ರೈವ ಕಾಂತಿದ್ಯೋತಿತವಾಸಕಾ ।
ಚಕ್ರೇ ಸುವ್ಯಕ್ತಮಾಲಾಪಮುತ್ಥಾಯೋಪವಿವೇಶ ಚ ॥ ೬೬
ತತೋ ವಿಸ್ಮಿತವಿತ್ರಸ್ತಂ ಸ್ತ್ರೀಜನಂ ಜಾತವೇಶ್ಮನಿ ।
ದೃಷ್ಟ್ವಾ ಸ ಧರ್ಮಗುಪ್ತೋಽತ್ರ ಸಭಯಃ ಸ್ವಯಮಾಯಯೌ ॥ ೬೭
ಪಪ್ರಚ್ಛ ಕನ್ಯಕಾಂ ತಾಂ ಚ ಪ್ರಣತಸ್ತತ್ಕ್ಷಣಂ ರಹಃ ।
ಭಗವತ್ಯವತೀರ್ಣಾಸಿ ಕಾ ತ್ವಂ ಮಮ ಗೃಹೇಷ್ವಿತಿ ॥ ೬೮
ಸಾಪ್ಯವಾದೀತ್ ತ್ವಯಾ ನೈವ ದೇಯಾ ಕಸ್ಮೈಚಿದಪ್ಯಹಮ್ ।
ಗೃಹಸ್ಥಿತಾ ಶುಭಾಹಂ ತೇ ಪೃಷ್ಟೇನಾನ್ಯೇನ ತಾತ ಕಿಮ್ ॥ ೬೯

೨೦. ಹೀಗೆ ಅವಳು ಹೇಳಿದಾಗ ಹೆದರಿದ್ದ ಧರ್ಮಗುಪ್ತನು ಅವಳನ್ನು ಮನೆಯಲ್ಲಿ ಗುಟ್ಟಾಗಿ ಇಟ್ಟು ಹೊರಗೆ ‘ಮಗು ಸತ್ತು ಹೋಯಿತು’ ಎಂದು ಪ್ರಚಾರ ಮಾಡಿದನು.

೨೧. ಆ ಹೆಣ್ಣು ಮಗಳು ಸೋಮಪ್ರಭಾ ಎಂಬ ಹೆಸರಿನಿಂದ ಮನುಷ್ಯಶರೀರದಿಂದ, ದಿವ್ಯಕಾಂತಿಯಿಂದ ಬೆಳೆದಳು.

೨೨. ಒಮ್ಮೆ ಅವಳು ಉಲ್ಲಾಸದಿಂದ ಉಪ್ಪರಿಗೆಯಲ್ಲಿ ಕುಳಿತು ವಸಂತೋತ್ಸವವನ್ನು ನೋಡುತ್ತಿದ್ದಾಗ ಗುಹಚಂದ್ರನೆಂಬ ವಣಿಕ್ಪುತ್ರ (ವ್ಯಾಪಾರಿಯ ಮಗ)ನು ಅವಳನ್ನು ಕಂಡನು.

೨೩. ಮನ್ಮಥನ ಈಟಿಯಂತಿದ್ದ ಅವಳು ಅವನ ಹೃದಯಕ್ಕೆ ತಾಗಿದಾಗ ಅವನಿಗೆ ಮೂರ್ಛೆ ಬಂದಂತಾಯಿತು.  ಹೇಗೋ ಕಷ್ಟಪಟ್ಟು ಅವನು ತನ್ನ ಮನೆಗೆ ಬಂದನು.

೨೪. ಮನ್ಮಥಬಾಧೆಯಿಂದ ಖಿನ್ನನಾದ ಅವನನ್ನು ತಾಯಿತಂದೆಯರು ಆ ಖಿನ್ನತೆಯ ಕಾರಣವೇನೆಂದು ಒತ್ತಾಯಪೂರ್ವಕವಾಗಿ ಕೇಳಿದಾಗ ಅವನು ತನ್ನ ಮಿತ್ರರು ಮೂಲಕ ಕಾರಣವನ್ನು ತಿಳಿಸಿದನು.

೨೫. ಗುಹಸೇನನೆಂಬ ಅವನ ತಂದೆಯು ಸ್ನೇಹದಿಂದ ಆ ಕನ್ಯೆಯನ್ನು ಬೇಡುವುದಕ್ಕಾಗಿ ವ್ಯಾಪಾರಿ ಧರ್ಮಗುಪ್ತನ ಮನೆಗೆ ಹೋದನು.

೨೬. ಸೊಸೆ ಬೇಕೆಂದು ಯಾಚನೆಯನ್ನು ಮಾಡಿದ ಗುಹಸೇನನಿಗೆ ಧರ್ಮಗುಪ್ತನು “ಮೂಢ, ನನಗೆ ಮಗಳೆಲ್ಲಿದ್ದಾಳೆ”ಎಂದು ಹೇಳಿ ನಿರಾಕರಿಸಿದನು.

---

ಇತ್ಯುಕ್ತಃ ಸ ತಯಾ ಭೀತೋ ಧರ್ಮಗುಪ್ತಃ ಸ್ವಮಂದಿರೇ ।
ಗುಪ್ತಂ ತಾಂ ಸ್ಥಾಪಯಾಮಾಸ ಮೃತೇತಿ ಖ್ಯಾಪಿತಾಂ ಬಹಿಃ ॥ ೨೦
ತತಃ ಸೋಮಪ್ರಭಾ ನಾಮ್ನಾ ಸಾ ಕನ್ಯಾ ವವೃಧೇ ಕ್ರಮಾತ್ ।
ಮಾನುಷೇಣ ಶರೀರೇಣ ರೂಪಕಾಂತ್ಯಾ ತು ದಿವ್ಯಯಾ ॥ ೨೧
ಏಕದಾ ತು ಪ್ರಮೋದೇನ ಮಧೂತ್ಸವವಿಲೋಕಿನೀಮ್ ।
ಹರ್ಮ್ಯಸ್ಥಾಂ ಗುಹಚಂದ್ರಾಖ್ಯೋ ವಣಿಕ್ಪುತ್ರೋ ದದರ್ಶ ತಾಮ್ ॥ ೨೨
ಸ ಮನೋಭವಭಲ್ಲ್ಯೇವ ಸದ್ಯೋ ಹೃದಯಲಗ್ನಯಾ ।
ತಯಾ ಮುಮೂರ್ಛೇವ ತದಾ ಕೃಚ್ಛ್ರಾಚ್ಚ ಗೃಹಮಾಯಯೌ ॥ ೨೩
ಸ್ಮರಾರ್ತಿವಿಧುರಸ್ತತ್ರ ಪಿತ್ರೋರಸ್ವಾಸ್ಥ್ಯಕಾರಣಮ್ ।
ನಿರ್ಬಂಧಪೃಷ್ಟೋ ವಕ್ತಿ ಸ್ಮ ಸ್ವವಯಸ್ಯಮುಖೇನ ಸಃ ॥ ೨೪
ತತೋಽಸ್ಯ ಗುಹಸೇನಾಖ್ಯಃ ಪಿತಾ ಸ್ನೇಹೇನ ಯಾಚಿತುಮ್ ।
ತಾಂ ಕನ್ಯಾಂ ಧರ್ಮಗುಪ್ತಸ್ಯ ವಣಿಜೋ ಭವನಂ ಯಯೌ ॥ ೨೫
ತತ್ರ ತಂ ಕೃತಯಾಚ್ಞಂ ಸ ಗುಹಸೇನಂ ಸ್ನುಷಾರ್ಥಿನಮ್ ।
ಕನ್ಯಾ ಕುತೋ ಮೇ ಮೂಢೇತಿ ಧರ್ಮಗುಪ್ತೋ ನಿರಾಕರೋತ್ ॥ ೨೬

೭೭. ಅವನು ಮಗಳನ್ನು ಮುಚ್ಚಿಟ್ಟಿದ್ದಾನೆ ಎಂದುಕೊಂಡು ಮನೆಗೆ ಹೋಗಿ ಒಲವಿನ ಜ್ವರದಿಂದ ಬೇಯುತ್ತಿದ್ದ ಮಗನನ್ನು ನೋಡಿ ಗುಹಸೇನನು ಇಂತು ಚಿಂತಿಸಿದನು.

೭೮. "ನಾನು ಹಿಂದೆ ರಾಜನಿಗೆ ಸೇವೆ ಮಾಡಿದ್ದೆನು. ಅವನನ್ನು ಪ್ರಚೋದಿಸುತ್ತೇನೆ. ಸಾಯುತ್ತಿರುವ ನನ್ನ ಮಗನಿಗೆ ರಾಜನು ಅವಳನ್ನು ಕೊಡಿಸಲೂಬಹುದು."

೭೯. ಹೀಗೆ ನಿಶ್ಚಯಿಸಿ (ರಾಜನ ಬಳಿಗೆ) ಹೋಗಿ ಅವನಿಗೆ ಉತ್ತಮವಾದ ರತ್ನವನ್ನು (ಕಾಣಿಕೆಯಾಗಿ) ಕೊಟ್ಟು ಆ ವ್ಯಾಪಾರಿಯು ರಾಜನಿಂದ ಆಗಬೇಕಾಗಿದ್ದ ಕಾರ್ಯವನ್ನು ವಿಜ್ಞಾಪಿಸಿದನು.

೮೦. ಅವನಲ್ಲಿ ಪ್ರೀತಿಯನ್ನಿಟ್ಟಿದ್ದ ರಾಜನು ಆ ವ್ಯಾಪಾರಿಯ ನೆರವಿಗೆ ನಗರಾಧಿಪನನ್ನು ಕೊಟ್ಟನು. ಅವನೊಡನೆ ವ್ಯಾಪಾರಿಯು ಧರ್ಮಗುಪ್ತನ ಮನೆಗೆ ಹೋದನು.

೮೧. ನಗರಾಧಿಪನ ಸೈನಿಕರ ಸಹಾಯದಿಂದ ಧರ್ಮಗುಪ್ತನ ಮನೆಯನ್ನು ಅವನು ಸುತ್ತುವರಿದನು. ಸರ್ವನಾಶವಾಯಿತು ಎಂದು ಹೆದರಿದ ಧರ್ಮಗುಪ್ತನು ಕುತ್ತಿಗೆಯನ್ನು ಪ್ರಾಣ ಹೋಗುವಂತೆ ಹಿಸುಕಿದನು.

೮೨. ಆಗ ಸೋಮಪ್ರಭೆ ಧರ್ಮಗುಪ್ತನಿಗೆ "ತಂದೆ, ನನ್ನನ್ನು ಕೊಟ್ಟುಬಿಡು. ನನ್ನ ಕಾರಣದಿಂದ ನಿನಗೆ ತೊಂದರೆಯಾಗುವುದು ಬೇಡ.

---

ನಿಹ್ನುತಾಂ ತೇನ ಕನ್ಯಾಂ ತಾಂ ಮತ್ವಾ ಗತ್ವಾ ಗೃಹೇ ಸುತಮ್ ।
ದೃಷ್ಟ್ವಾ ಸ್ಮರಜ್ವರಾಕ್ರಾಂತಂ ಗುಹಸೇನೋ ವ್ಯಚಿಂತಯತ್ ॥ ೭೭
ರಾಜಾನಂ ಪ್ರೇರಯಾಮ್ಯತ್ರ ಸ ಹಿ ಮೇ ಪೂರ್ವಸೇವಿತಃ ।
ದಾಪಯತ್ಯಪಿ ಪುತ್ರಾಯ ಸ ಕನ್ಯಾಂ ತಾಂ ಮುಮೂರ್ಷವೇ ॥ ೭೮
ಇತಿ ನಿಶ್ಚಿತ್ಯ ಗತ್ವಾ ಚ ದತ್ತ್ವಾಸ್ಮೈ ರತ್ನಮುತ್ತಮಮ್ ।
ನೃಪಂ ವಿಜ್ಞಾಪಯಾಮಾಸ ಸ ವಣಿಕ್ ಸ್ವಾಭಿಕಾಂಕ್ಷಿತಮ್ ॥ ೭೯
ನೃಪೋಽಪಿ ಪ್ರೀತಿಮಾನಸ್ಯ ಸಾಹಾಯ್ಯೇ ನಗರಾಧಿಪಮ್ ।
ದದೌ ತೇನ ಸಮಂ ಚಾಸೌ ಧರ್ಮಗುಪ್ತಗೃಹಂ ಯಯೌ ॥ ೮೦
ರುರೋಧ ಚ ಗೃಹಂ ತಸ್ಯ ಧರ್ಮಗುಪ್ತಸ್ಯ ತದ್ಬಲೈಃ ।
ಅಸುಭಿಃ ಕಂಠದೇಶಂ ಚ ಸರ್ವನಾಶವಿಶಂಕಿನಃ ॥ ೮೧
ತತಃ ಸೋಮಪ್ರಭಾ ಸಾ ತಂ ಧರ್ಮಗುಪ್ತಮಭಾಷತ ।
ದೇಹಿ ಮಾಂ ತಾತ ಮಾ ಭೂತ್ತೇ ಮನ್ನಿಮಿತ್ತಮುಪದ್ರವಃ ॥ ೮೨

೮೩. "ನನ್ನನ್ನು ನನ್ನ ಗಂಡನು ಎಂದೂ ತನ್ನ ಶಯನಕ್ಕೆ ಕರೆಯಬಾರದು ಎಂಬ ಮಾತಿನ ಕಟ್ಟಳೆಯನ್ನು ನೀನು ಬೀಗರಿಂದ ಮಾಡಿಸಬೇಕು" ಎಂದು ಹೇಳಿದಳು.

೮೪. ಹೀಗೆ ಅವಳು ಹೇಳಿದ ಮೇಲೆ ಧರ್ಮಗುಪ್ತನು ಶಯನಕ್ಕೆ ಕರೆಯುವುದನ್ನು ವರ್ಜಿಸಬೇಕಾದ ವಿಷಯವನ್ನು ಮಾತನಾಡಿ ಅವಳನ್ನು ಕೊಡಲು ಒಪ್ಪಿಕೊಂಡನು.

೮೫. ಗುಹಸೇನನು ಒಳಗೊಳಗೇ ನಗುತ್ತಾ 'ಮೊದಲು ನನ್ನ ಮಗನ ಮದುವೆ ಆಗಲಿ' ಎಂದು ಆಲೋಚಿಸುತ್ತಾ ಹಾಗೆಯೇ ಆಗಲೆಂದು ಅದಕ್ಕೆ ಒಪ್ಪಿಕೊಂಡನು.

೮೬. ಮದುವೆಯಾದ ಮೇಲೆ ವಧು ಸೋಮಪ್ರಭೆಯನ್ನು ಕರೆದುಕೊಂಡು ಗುಹಸೇನನ ಮಗ ಗುಹಚಂದ್ರನು ತನ್ನ ಮನೆಗೆ ಹೋದನು.

೮೭. ಸಾಯಂಕಾಲದಲ್ಲಿ ತಂದೆಯು ಮಗನಿಗೆ "ಮಗನೆ, ನಿನ್ನ ಹೆಂಡತಿಯನ್ನು ಹಾಸಿಗೆಯ ಮೇಲೆ ಮಲಗಿಸಿಕೋ. ಯಾವನಿಗೆ ತಾನೆ ಹೆಂಡತಿ ಹಾಸಿಗೆಗೆ ಯೋಗ್ಯಳಲ್ಲ ?" ಎಂದು ಹೇಳಿದನು.

೮೮. ಅದನ್ನು ಕೇಳಿ ಕೋಪದಿಂದ ಸೋಮಪ್ರಭೆಯು ಮಾವನನ್ನು ನೋಡುತ್ತಾ ಯಮನ ಆಜ್ಞೆಯೋ ಎಂಬಂತಿದ್ದ ಅವಳ ತೋರುಬೆರಳನ್ನು ಆಡಿಸಿದಳು.

---

ಆರೋಪಣೀಯಾ ಶಯ್ಯಾಯಾಂ ನಾಹಂ ಭರ್ತ್ರಾ ಕದಾಚನ ।
ಈದೃಕ್ತು ವಾಚಾ ನಿಯಮೋ ಗ್ರಾಹ್ಯಃ ಸಂಬಂಧಿನಾಂ ತ್ವಯಾ ॥ ೮೩
ಇತ್ಯುಕ್ತಃ ಸ ತಯಾ ಪುತ್ರ್ಯಾ ದಾತುಂ ತಾಂ ಪ್ರತ್ಯಪದ್ಯತ ।
ಧರ್ಮಗುಪ್ತಸ್ತದಾಭಾಷ್ಯ ಶಯ್ಯಾರೋಪಣವರ್ಜನಮ್ ॥ ೮೪
ಗುಹಸೇನೋಽನುಮೇನೇ ಚ ಸಾಂತರ್ಹಾಸಸ್ತಥೈವ ತತ್ ।
ವಿವಾಹೋ ಮಮ ಪುತ್ರಸ್ಯ ತಾವದಸ್ತ್ವಿತಿ ಚಿಂತಯನ್ ॥ ೮೫
ಅಥಾದಾಯ ಕೃತೋದ್ವಾಹಾಂ ತಾಂ ಸ ಸೋಮಪ್ರಭಾಂ ವಧೂಮ್ ।
ಗುಹಸೇನಸುತಃ ಪ್ರಾಯಾದ್ ಗುಹಚಂದ್ರೋ ನಿಜಂ ಗೃಹಮ್ ॥ ೮೬
ಸಾಯಂ ಚೈನಂ ಪಿತಾವಾದೀತ್ ಪುತ್ರ ಶಯ್ಯಾಮಿಮಾಂ ವಧೂಮ್ ।
ಆರೋಪಯ ಸ್ವಭಾರ್ಯಾ ಹಿ ಕಸ್ಯಾಶಯ್ಯಾ ಭವಿಷ್ಯತಿ ॥ ೮೭
ತಚ್ಛ್ರುತ್ವಾ ಶ್ವಶುರಂ ತಂ ಸಾ ವಧೂಃ ಸೋಮಪ್ರಭಾ ಕ್ರುಧಾ ।
ವಿಲೋಕ್ಯ ಭ್ರಾಮಯಾಮಾಸ ಯಮಾಜ್ಞಾಮಿವ ತರ್ಜನೀಮ್ ॥ ೮೮

೮೯. ಸೊಸೆಯ ಆ ಬೆರಳನ್ನು ನೋಡಿದ ಕ್ಷಣದಲ್ಲೇ ಆ ವ್ಯಾಪಾರಿಯ ಪ್ರಾಣಗಳು ಹಾರಿಹೋದುವು. ಬೇರೆಯವರಿಗೂ ಭೀತಿ ಹುಟ್ಟಿತು.

೯೦. ತಂದೆ ಸತ್ತು ಹೋಗಲು ಗುಹಚಂದ್ರನು 'ಮಾರಿ ನನ್ನ ಹೆಂಡತಿಯಾಗಿ ಮನೆಯೊಳಕ್ಕೆ ಹೊಕ್ಕಿದ್ದಾಳೆ' ಎಂದು ಚಿಂತಿಸಿದನು.

೯೧. ಆಮೇಲೆ ಮನೆಯಲ್ಲಿ ಹೆಂಡತಿ ಇದ್ದರೂ ಅವಳನ್ನು ಭೋಗಿಸದೆ ಇದ್ದು ಗುಹಚಂದ್ರನು ಅಸಿಧಾರಾವ್ರತ (ಕತ್ತಿಯ ಮೊನೆಯ ಮೇಲೆ ನಡೆಯುವ ನಿಯಮ)ವನ್ನು ಹಿಡಿಯಬೇಕಾಯಿತು.

೯೨. ಆ ದುಃಖದಿಂದ ಬೇಯುತ್ತಾ ಮನಸ್ಸಿನೊಳಗೆ ಭೋಗಗಳಲ್ಲಿ ವಿರಕ್ತಿಯನ್ನು ತಂದುಕೊಂಡು ಪ್ರತಿದಿನವೂ ವ್ರತವನ್ನಾಚರಿಸಿ ಅವನು ಬ್ರಾಹ್ಮಣರಿಗೆ ಭೋಜನವನ್ನು ಏರ್ಪಡಿಸಿದನು.

೯೩. ದಿವ್ಯವಾದ ರೂಪವನ್ನು ಧರಿಸಿ ಅವನ ಭಾರ್ಯೆಯೂ ಊಟ ಮಾಡಿದ ಬ್ರಾಹ್ಮಣರಿಗೆ ಮೌನದಿಂದಲೇ ಪ್ರತಿದಿನವೂ ದಕ್ಷಿಣೆಯನ್ನು ಕೊಡುತ್ತಿದ್ದಳು.

೯೪. ತನ್ನ ಚೆಲುವಿನ ಸಂಪತ್ತಿನಿಂದ ಪ್ರಪಂಚಕ್ಕೇ ಅಚ್ಚರಿಯನ್ನುಂಟುಮಾಡುತ್ತಿದ್ದ ಅವಳನ್ನೊಮ್ಮೆ ಊಟಕ್ಕಾಗಿ ಬಂದಿದ್ದ ವೃದ್ಧಬ್ರಾಹ್ಮಣನೊಬ್ಬನು ನೋಡಿದನು.

೯೫. ಕುತೂಹಲದಿಂದ ಆ ಬ್ರಾಹ್ಮಣನು ಗುಹಚಂದ್ರನನ್ನು "ಈ ಹುಡುಗಿ ನಿನಗೆ ಏನಾಗಬೇಕು ? ನನಗೆ ಹೇಳು" ಎಂದು ಕೇಳಿದನು.

---

ತಾಂ ದೃಷ್ಟ್ವೈವಾಂಗುಲಿಂ ತಸ್ಯಾಃಸ್ನುಷಾಯಾಸ್ತಸ್ಯ ತತ್‌ಕ್ಷಣಮ್ ।
ವಣಿಜಃ ಪ್ರಯಯುಃ ಪ್ರಾಣಾ ಅನ್ಯೇಷಾಮಾಯಯೌ ಭಯಮ್ ॥ ೮೯
ಗುಹಚಂದ್ರೋಽಪಿ ಸಂಪ್ರಾಪ್ತೇ ತಸ್ಮಿನ್ ಪಿತರಿ ಪಂಚತಾಮ್ ।
ಮಾರೀ ಮಮ ಗೃಹೇ ಭಾರ್ಯಾ ಪ್ರವಿಷ್ಟೇತಿ ವ್ಯಚಿಂತಯತ್ ॥ ೯೦
ತತಶ್ಚಾನುಪಭುಂಜಾನೋ ಭಾರ್ಯಾಂ ತಾಂ ಗೃಹವರ್ತಿನೀಮ್ ।
ಸಿಷೇವೇ ಗುಹಚಂದ್ರೋಽಸಾವಾಸಿಧಾರಮಿವ ವ್ರತಮ್ ॥ ೯೧
ತದ್ದುಃಖದಹ್ಯಮಾನೋಂತರ್ವಿರಕ್ತೋ ಭೋಗಸಂಪದಿ ।
ಬ್ರಾಹ್ಮಣಾನ್ ಭೋಜಯಾಮಾಸ ಪ್ರತ್ಯಹಂ ಸ ಕೃತವ್ರತಃ ॥ ೯೨
ತದ್‌ಭಾರ್ಯಾಪಿ ಚ ಸಾ ತೇಭ್ಯೋ ದ್ವಿಜೇಭ್ಯೋ ಮೌನಧಾರಿಣೀ ।
ಭುಕ್ತವದ್ಭ್ಯೋ ದದೌ ನಿತ್ಯಂ ದಕ್ಷಿಣಾಂ ದಿವ್ಯರೂಪಧೃತ್ ॥ ೯೩
ಏಕದಾ ಬ್ರಾಹ್ಮಣೋ ವೃದ್ಧಸ್ತಾಮೇಕೋ ಭೋಜನಾಗತಃ ।
ದದರ್ಶ ಜಗದಾಶ್ಚರ್ಯಜನನೀಂ ರೂಪಸಂಪದಾ ॥ ೯೪
ಸಕೌತುಕೋ ದ್ವಿಜೋಽಪ್ರಾಕ್ಷೀದ್ ಗುಹಚಂದ್ರಂ ರಹಸ್ತದಾ ।
ಕಾ ತೇ ಭವತಿ ಬಾಲೇಯಂ ತ್ವಯಾ ಮೇ ಕಥ್ಯತಾಮಿತಿ ॥ ೯೫

೯೬. ಒತ್ತಾಯ ಮಾಡಿ ಕೇಳಿದ ಮೇಲೆ ಖಿನ್ನಮನಸ್ಸಿನ ಗುಹಚಂದ್ರನು ಆ ಬ್ರಾಹ್ಮಣನಿಗೆ ಅವಳ ಎಲ್ಲ ವೃತ್ತಾಂತವನ್ನೂ ಹೇಳಿದನು.

೯೭. ಅದನ್ನು ಅರಿತುಕೊಂಡು ಅನುಕಂಪ ತೋರಿಸಿದ ಆ ಬ್ರಾಹ್ಮಣಶ್ರೇಷ್ಠನು ಗುಹಚಂದ್ರನ ಅಭೀಷ್ಟಸಿದ್ಧಿಗಾಗಿ ಅಗ್ನಿಯನ್ನು ಆರಾಧಿಸುವ ಮಂತ್ರವನ್ನು ಉಪದೇಶಿಸಿದನು.

೯೮. ರಹಸ್ಯವಾಗಿ ಆ ಮಂತ್ರದ ಜಪವನ್ನು ಗುಹಚಂದ್ರನು ಮಾಡುತ್ತಿದ್ದಾಗ ಅಗ್ನಿಯ ಮಧ್ಯದಿಂದ ಒಬ್ಬ ಪುರುಷನು ಎದ್ದು ಬಂದನು.

೯೯–೧೦೦. ಬ್ರಾಹ್ಮಣರೂಪಿಯಾದ ಅಗ್ನಿಯ ಕಾಲಿಗೆ ಗುಹಚಂದ್ರನು ಬಿದ್ದನು. ಆಗ ಅವನು "ಇಂದು ನಾನು ನಿನ್ನ ಮನೆಯಲ್ಲಿ ಊಟ ಮಾಡುವೆನು. ಇಲ್ಲೇ ರಾತ್ರಿ ಉಳಿದುಕೊಳ್ಳುವೆನು. ನಿಜ ಸ್ವರೂಪವನ್ನು ತೋರಿಸಿ ನಿನ್ನ ಇಷ್ಟಾರ್ಥವನ್ನು ಸಾಧಿಸುವೆನು" ಎಂದು ಹೇಳಿ ಗುಹಚಂದ್ರನ ಮನೆಗೆ ಬಂದನು.

೧೦೧. ಬೇರೆಯ ಬ್ರಾಹ್ಮಣರಂತೆ ಅವನೂ ಅಲ್ಲಿ ಊಟಮಾಡಿ, ರಾತ್ರಿಯಲ್ಲಿ ಗುಹಚಂದ್ರನ ಸಮೀಪದಲ್ಲೇ ಹಾಸಿಗೆಯಲ್ಲಿ ಮಲಗಿಕೊಂಡು ಎಚ್ಚರವಾಗಿಯೇ ಇದ್ದನು.

---

ನಿರ್ಬಂಧಪೃಷ್ಟಃ ಸೋಽಪ್ಯಸ್ಮೈ ಗುಹಚಂದ್ರೋ ದ್ವಿಜನ್ಮನೇ ।
ಶಶಂಸ ತದ್ಗತಂ ಸರ್ವಂ ವೃತ್ತಾಂತಂ ಖಿನ್ನಮಾನಸಃ ॥ ೯೬
ತದ್ಬುದ್ಧ್ವಾ ಸ ತತಸ್ತಸ್ಮೈ ಸಾನುಕಂಪೋ ದ್ವಿಜೋತ್ತಮಃ ।
ಅಗ್ನೇರಾರಾಧನಂ ಮಂತ್ರಂ ದದಾವೀಪ್ಸಿತಸಿದ್ಧಯೇ ॥ ೯೭
ತೇನ ಮಂತ್ರೇಣ ತಸ್ಯಾಥ ಜಪಂ ರಹಸಿ ಕುರ್ವತಃ ।
ಉದಭೂದ್ ಗುಹಚಂದ್ರಸ್ಯ ಪುರುಷೋ ವಹ್ನಿಮಧ್ಯತಃ ॥ ೯೮
ಸ ಚಾಗ್ನಿರ್ದ್ವಿಜರೂಪೀ ತಂ ಜಗಾದ ಚರಣಾನತಮ್ ।
ಅದ್ಯಾಹಂ ತ್ವದ್ಗೃಹೇ ಭೋಕ್ಷ್ಯೇ ರಾತ್ರೌ ಸ್ಥಾಸ್ಯಾಮಿ ತತ್ರ ಚ ॥ ೯೯
ದರ್ಶಯಿತ್ವಾ ಚ ತತ್ತ್ವಂ ತೇ ಸಾಧಯಿಷ್ಯಾಮಿ ವಾಂಛಿತಮ್ ।
ಇತ್ಯುಕ್ತ್ವಾ ಗುಹಚಂದ್ರಂ ಸ ಬ್ರಾಹ್ಮಣಸ್ತದ್ಗೃಹಂ ಯಯೌ ॥ ೧೦೦
ತತ್ರಾನ್ಯವಿಪ್ರವದ್ ಭುಕ್ತ್ವಾ ಗುಹಚಂದ್ರಾಂತಿಕೇ ಚ ಸಃ ।
ಸಿಷೇವೇ ಶಯನಂ ರಾತ್ರೌ ಯಾಮಮಾತ್ರಮತಂದ್ರಿತಃ ॥ ೧೦೧

೧೦೨. ಜನರೆಲ್ಲರೂ ಚೆನ್ನಾಗಿ ನಿದ್ರಿಸಿದ ಮೇಲೆ ಗುಹಚಂದ್ರನ ಮನೆಯಿಂದ ಅವನ ಹೆಂಡತಿ ಸೋಮಪ್ರಭೆ ರಾತ್ರಿಯಲ್ಲೇ ಎಲ್ಲಿಗೋ ಹೊರಟಳು.

೧೦೩. ಆಗ ಆ ಬ್ರಾಹ್ಮಣನು ಗುಹಚಂದ್ರನನ್ನು ಎಬ್ಬಿಸಿ "ಬಾ, ನಿನ್ನ ಹೆಂಡತಿಯ ವೃತ್ತಾಂತವನ್ನು ನೋಡು" ಎಂದು ಅವನಿಗೆ ಹೇಳಿದನು.

೧೦೪. ಯೋಗಶಕ್ತಿಯಿಂದ ತನ್ನನ್ನೂ ಗುಹಚಂದ್ರನನ್ನೂ ದುಂಬಿಗಳನ್ನಾಗಿ ಪರಿವರ್ತಿಸಿಕೊಂಡು ಹೊರಗೆ ಬಂದು ಮನೆಯಿಂದ ನಿರ್ಗಮಿಸುತ್ತಿದ್ದ ಗುಹಚಂದ್ರನ ಹೆಂಡತಿಯನ್ನು ತೋರಿಸಿದನು.

೧೦೫. ಆ ಸುಂದರಿಯು ನಗರದಿಂದ ಆಚೆ ಬಲುದೂರ ಹೋದಳು. ಗುಹಚಂದ್ರನ ಜೊತೆಯಲ್ಲಿ ಆ ಬ್ರಾಹ್ಮಣನೂ ಅವಳನ್ನು ಹಿಂಬಾಲಿಸಿದನು.

೧೦೬. ಅನಂತರ ಗುಹಚಂದ್ರನು ದೊಡ್ಡ ಆಕಾರದ, ನೆರಳು ನೀಡುವ ಸುಂದರ ಕಾಂಡವುಳ್ಳ ಒಂದು ಆಲದ ಮರವನ್ನು ಕಂಡನು.

೧೦೭. ಅದರ ಕೆಳಗಡೆ ವೀಣೆ ಮತ್ತು ಕೊಳಲುಗಳ ನಾದದಿಂದ ಕೂಡಿ, ಹೊಮ್ಮುತ್ತಿದ್ದ ಹಾಡಿನಿಂದ ಇಂಪಾಗಿದ್ದ ಸಂಗೀತದ ಧ್ವನಿ ಅವನಿಗೆ ಕೇಳಿಸಿತು.

೧೦೮. ಆ ಮರದ ಕವಲಿನ ಮೇಲೆ ಅವನ ಹೆಂಡತಿಯಂತೆಯೇ ಕಾಣಿಸುತ್ತಿದ್ದ ಒಬ್ಬ ದೇವಕನ್ಯೆ ದೊಡ್ಡ ಆಸನದಲ್ಲಿ ಕುಳಿತಿದ್ದುದನ್ನು ನೋಡಿದನು.

---

ತಾವಚ್ಚ ಸಂಸುಪ್ತಜನಾತ್ ಸಾ ತಸ್ಮಾತ್ ತಸ್ಯ ಮಂದಿರಾತ್ ।
ನಿರ್ಯಯೌ ಗುಹಚಂದ್ರಸ್ಯ ಭಾರ್ಯಾ ಸೋಮಪ್ರಭಾ ನಿಶಿ ॥ ೧೦೨
ತತ್ಕಾಲಂ ಬ್ರಾಹ್ಮಣಃ ಸೋಽತ್ರ ಗುಹಚಂದ್ರಮಬೋಧಯತ್ ।
ಏಹಿ ಸ್ವಭಾರ್ಯಾವೃತ್ತಾಂತಂ ಪಶ್ಯೇತ್ಯೇನಮುವಾಚ ಚ ॥ ೧೦೩
ಯೋಗೇನ ಭೃಂಗರೂಪಂ ಚ ಕೃತ್ವಾ ತಸ್ಯಾತ್ಮನಸ್ತಥಾ ।
ನಿರ್ಗತ್ಯಾದರ್ಶಯತ್ತಸ್ಯ ಭಾರ್ಯಾಂ ತಾಂ ಗೃಹನಿರ್ಗತಾಮ್ ॥ ೧೦೪
ಸಾ ಜಗಾಮ ಸುದೂರಂ ಚ ಸುಂದರೀ ನಗರಾದ್ ಬಹಿಃ ।
ಗುಹಚಂದ್ರೇಣ ಸಾಕಂ ಚ ದ್ವಿಜೋಽಪ್ಯನುಜಗಾಮ ತಾಮ್ ॥ ೧೦೫
ತತಸ್ತತ್ರ ಮಹಾಭೋಗಂ ಸಚ್ಛಾಯಸ್ಕಂಧಸುಂದರಮ್ ।
ಗುಹಚಂದ್ರೋ ದದರ್ಶಾಸಾವೇಕಂ ನ್ಯಗ್ರೋಧಪಾದಪಮ್ ॥ ೧೦೬
ತಸ್ಯಾಧಸ್ತಾಚ್ಚ ಶುಶ್ರಾವ ವೀಣಾವೇಣುರವಾನ್ವಿತಮ್ ।
ಉಲ್ಲಸದ್‌ಗೀತಮಧುರಂ ದಿವ್ಯಂ ಸಂಗೀತಕಧ್ವನಿಮ್ ॥ ೧೦೭
ಸ್ಕಂಧದೇಶೇ ಚ ತಸ್ಯೈಕಾಂ ಸ್ವಭಾರ್ಯಾಸದೃಶಾಕೃತಿಮ್ ।
ಅಪಶ್ಯತ್ ಕನ್ಯಕಾಂ ದಿವ್ಯಾಮುಪವಿಷ್ಟಾಂ ಮಹಾಸನೇ ॥ ೧೦೮

೧೯. ಅವಳ ಮೈಕಾಂತಿ ಬೆಳದಿಂಗಳನ್ನು ಸೋಲಿಸುತ್ತಿತ್ತು. ಅವಳಿಗೆ ಬಿಳಿಯ ಚಾಮರಗಳಿಂದ ಬೀಸುತ್ತಿದ್ದರು. ಚಂದ್ರನ ಲಾವಣ್ಯಸರ್ವಸ್ವದ ಕೋಶಕ್ಕೆ ಅವಳು ಅಧಿದೇವತೆಯಂತಿದ್ದಳು.

೧೧೦. ಆಮೇಲೆ ಅದೇ ಮರವನ್ನು ಹತ್ತಿ ಆ ದಿವ್ಯಕನ್ಯೆಯ ಆಸನದ ಅರ್ಧ ಭಾಗದಲ್ಲಿ ಭಾರ್ಯೆ ಕುಳಿತಿದ್ದುದನ್ನು ಗುಹಚಂದ್ರನು ಕಂಡನು.

೧೧೧. ಆ ಸಮಯದಲ್ಲಿ ಸಮಾನವಾದ ಕಾಂತಿಯುಳ್ಳ ಆ ಇಬ್ಬರು ಕನ್ಯೆಯರನ್ನು ನೋಡುತ್ತಿದ್ದ ಗುಹಚಂದ್ರನಿಗೆ ರಾತ್ರಿಯು ಮೂರುಚಂದ್ರರನ್ನು ಹೊಂದಿದೆ ಎಂದು ಅನ್ನಿಸುತ್ತಿತ್ತು.

೧೧೨. ಆಶ್ಚರ್ಯದಿಂದ ತುಂಬಿದ ಅವನು ಒಂದು ಕ್ಷಣ "ಇದೇನು ಕನಸೋ ಅಥವಾ ಭ್ರಾಂತಿಯೋ ಅಥವಾ ಅವೆರಡೂ (ಒಟ್ಟಿಗೆ ಸೇರಿವೆಯೋ)" ಎಂದು ಚಿಂತಿಸತೊಡಗಿದನು.

೧೧೩–೧೧೪. ಸನ್ಮಾರ್ಗ ಎಂಬ ಮರಕ್ಕೆ ವಿದ್ವಾಂಸರ ಸಹವಾಸವೆಂಬ ಗೊಂಚಲಿನಲ್ಲಿರುವ ಹೂವುಗಳ ಅರಳುವಿಕೆಯೇ ಈ ಘಟನೆ, ಅದು ಬೇಗನೆ ಉಚಿತವಾದ ಹಣ್ಣನ್ನೂ ನನಗೆ ನೀಡಲಿದೆ ಎಂದು ಗುಹಚಂದ್ರನು ಚಿಂತಿಸುತ್ತಿದ್ದಾಗ ಆ ಇಬ್ಬರು ದಿವ್ಯಕನ್ಯೆಯರು ತಮಗೆ ಉಚಿತವಾದ ಆಹಾರವನ್ನು ತಿಂದು ದೇವಲೋಕದ ಮದ್ಯವನ್ನು ಕುಡಿದರು.

---

ನಿಜಕಾಂತಿಜಿತಜ್ಯೋತ್ಸ್ನಾಂ ಶುಕ್ಲಚಾಮರವೀಜಿತಾಮ್ ।
ಇಂದೋರ್ಲಾವಣ್ಯಸರ್ವಸ್ವಕೋಷಸ್ಯೇವಾಧಿದೇವತಾಮ್ ॥ ೧೯

ಅತ್ರೈವಾರುಹ್ಯ ವೃಕ್ಷೇ ಚ ತಸ್ಯಾ ಅರ್ಧಾಸನೇ ತದಾ ।
ಉಪವಿಷ್ಟಾಂ ಸ್ವಭಾರ್ಯಾಂ ತಾಂ ಗುಹಚಂದ್ರೋ ದದರ್ಶ ಸಃ ॥ ೧೧೦

ತತ್ಕಾಲಂ ತುಲ್ಯಕಾಂತೀ ತೇ ಸಂಗತೇ ದಿವ್ಯಕನ್ಯಕೇ ।
ಪಶ್ಯತಸ್ತಸ್ಯ ಭಾತಿ ಸ್ಮ ಸಾ ತ್ರಿಚಂದ್ರೇವ ಯಾಮಿನೀ ॥ ೧೧೧

ತತಃ ಸ ಕೌತುಕಾವಿಷ್ಟ ಕ್ಷಣಮೇವಮಚಿಂತಯತ್ ।
ಕಿಂ ಸ್ವಪ್ನೋऽಯಮುತ ಭ್ರಾಂತಿರ್ಧಿಗೇತದಥವಾ ದ್ವಯಮ್ ॥ ೧೧೨

ಯಾ ಸನ್ಮಾರ್ಗತರೋರೇಷಾ ವಿದ್ವತ್ಸಂಗತಿಮಂಜರೀ ।
ಅಸೌ ಪುಷ್ಪೋದ್ಗತಿಸ್ತಸ್ಯಾ ಮಮೋಚಿತಫಲೋನ್ಮುಖೀ ॥ ೧೧೩

ಇತಿ ಚಿಂತಯತಿ ಸ್ವೈರಂ ತಸ್ಮಿಂಸ್ತೇ ದಿವ್ಯಕನ್ಯಕೇ ।
ಭುಕ್ತ್ವಾ ನಿಜೋಚಿತಂ ಭೋಜ್ಯಂ ದಿವ್ಯಂ ಪಪತುರಾಸವಮ್ ॥ ೧೧೪

೧೧೫–೧೧೬ "ಸೋದರಿ, ಇವತ್ತು ನಮ್ಮ ಮನೆಗೆ ದಿವ್ಯತೇಜಸ್ಸಿನ ಯಾವನೋ ಬ್ರಾಹ್ಮಣನು ಬಂದಿದ್ದನು. ಅದರಿಂದ ನನ್ನ ಮನಸ್ಸು ಸಂಶಯಕ್ಕೆ ಒಳಗಾಗಿದೆ, ನಾನು ಹೋಗುತ್ತೇನೆ' ಎಂದು ಹೇಳಿ ಆ ಎರಡನೆಯ ದಿವ್ಯಕನ್ಯೆಯಿಂದ ಬೀಳ್ಕೊಂಡು ಗುಹಚಂದ್ರನ ಹೆಂಡತಿ ಮರದಿಂದ ಇಳಿದಳು.

೧೧೭ ಅದನ್ನು ನೋಡಿ ಭೃಂಗರೂಪದಲ್ಲಿದ್ದ ಗುಹಚಂದ್ರನೂ ಆ ಬ್ರಾಹ್ಮಣನೂ ಮೊದಲೇ ಹಿಂದಿರುಗಿ ಬಂದು ರಾತ್ರಿಯಲ್ಲಿ ಮನೆಯಲ್ಲಿ ಮೊದಲಿನಂತೆಯೇ ಮಲಗಿಕೊಂಡರು.

೧೧೮. ಆಮೇಲೆ ಗುಹಚಂದ್ರನ ಮಡದಿ ದಿವ್ಯಕನ್ಯೆಯೂ ಬಂದು ಯಾರಿಗೂ ಕಾಣಿಸದಂತೆ ಮನೆಯನ್ನು ಪ್ರವೇಶಿಸಿದಳು.

೧೧೯. ಅನಂತರ ಆ ಬ್ರಾಹ್ಮಣನು ಧೈರ್ಯದಿಂದ ಗುಹಚಂದ್ರನಿಗಿಂತೆಂದನು. "ನಿನ್ನ ಹೆಂಡತಿ ದೇವಲೋಕದವಳು, ಮಾನವಿ ಅಲ್ಲ ಎಂಬುದನ್ನು ನೀನೇ ನೋಡಿದೆಯಷ್ಟೆ

೧೨೦. ಆ ಎರಡನೆಯವಳು ಇವಳ ಸೋದರಿ. ಅವಳನ್ನೂ ನೀನು ನೋಡಿದೆ. ದೇವಲೋಕದ ಹೆಂಗಸು ಮನುಷ್ಯನೊಡನೆ ಸಂಗಮವನ್ನು ಹೇಗೆ ಇಷ್ಟಪಡುತ್ತಾಳೆ ?

---

ಅದ್ಯಾಗತೋ ಮಹಾತೇಜಾ ದ್ವಿಜಃ ಕೋऽಪಿ ಗೃಹೇಷು ನಃ ।
ತಸ್ಮಾದ್ ಭಗಿನಿ ಚೇತೋ ಮೇ ಶಂಕಿತಂ ತದ್ ವ್ರಜಾಮ್ಯಹಮ್ ॥ ೧೧೫
ಇತ್ಯುಕ್ತ್ವಾ ತಾಮಥಾಮಂತ್ರ್ಯ ದ್ವಿತೀಯಾಂ ದಿವ್ಯಕನ್ಯಕಾಮ್ ।
ಗುಹಚಂದ್ರಸ್ಯ ಗೃಹಿಣೀ ತರೋರವರುರೋಹ ಸಾ ॥ ೧೧೬
ತದ್ ದೃಷ್ಟ್ವಾ ಭೃಂಗರೂಪೌ ತೌ ಗುಹಚಂದ್ರೋ ದ್ವಿಜಶ್ಚ ಸಃ ।
ಪ್ರತ್ಯಾಗತ್ಯಾಗ್ರತೋ ಗೇಹೇ ಪೂರ್ವವತ್ ತಸ್ಥತುರ್ನಿಶಿ ॥ ೧೧೭
ತತಃ ಸಾ ದಿವ್ಯಕನ್ಯಾಪಿ ಗುಹಚಂದ್ರಸ್ಯ ಗೇಹಿನೀ ।
ಆಗತ್ಯಾಲಕ್ಷಿತಾತ್ಮೈವ ಪ್ರವಿವೇಶ ಸ್ವಮಂದಿರಮ್ ॥ ೧೧೮
ತತಃ ಸ ಬ್ರಾಹ್ಮಣಃ ಸ್ವೈರಂ ಗುಹಚಂದ್ರಮಭಾಷತ ।
ದೃಷ್ಟಂ ತ್ವಯಾ ಯದೇಷಾ ತೇ ಭಾರ್ಯಾ ದಿವ್ಯಾ ನ ಮಾನುಷೀ ॥ ೧೧೯
ದ್ವಿತೀಯಾ ಸಾಪಿ ಚೈತಸ್ಯಾ ದೃಷ್ಟಾದ್ಯ ಭಗಿನೀ ತ್ವಯಾ ।
ದಿವ್ಯಾ ಸ್ತ್ರೀ ತು ಮನುಷ್ಯೇಣ ಕಥಮಿಚ್ಛತಿ ಸಂಗಮಮ್ ॥ ೧೨೦

೧೨೧. ಇದು ಸಿದ್ಧಿಸುವುದಕ್ಕಾಗಿ ನಾನು ನಿನಗೆ ದ್ವಾರೋಲ್ಲೇಖ್ಯ ಮಂತ್ರವನ್ನು ಕೊಡುತ್ತೇನೆ. ಅದಕ್ಕೆ ಸಮರ್ಥಕವಾಗಿ ಹೊರಗಿನ ಯುಕ್ತಿಯನ್ನು ಹೇಳಿಕೊಡುತ್ತೇನೆ.

೧೨೨. ಬೆಂಕಿಯು ತಾನೊಂದೇ ಇದ್ದರೂ ಉರಿಯುತ್ತದೆ. ಬೀಸುವ ಗಾಳಿ ಜೊತೆಗೆ ಸೇರಿದರೆ ಹೇಳುವುದೇನಿದೆ ? ಹೀಗೆ ಮಂತ್ರವೊಂದೇ ಸಿದ್ಧಿಯನ್ನು ಕೊಡುತ್ತದೆ. ಅದು ಯುಕ್ತಿಯ ಜೊತೆಗೆ ಇದ್ದಾಗ ಮತ್ತೆ ಏನು ?'

೧೨೩. ಇಷ್ಟನ್ನು ಹೇಳಿ ಮಂತ್ರವನ್ನು ಕೊಟ್ಟು ಆ ಯುಕ್ತಿಯನ್ನೂ ಹೇಳಿಕೊಟ್ಟು ಆ ಬ್ರಾಹ್ಮಣನು ಬೆಳಗಾಗುತ್ತಲೇ ಅದೃಶ್ಯನಾದನು.

೧೨೪. ಗುಹಚಂದ್ರನು ಆ ಮಂತ್ರವನ್ನು ಹೆಂಡತಿಯ ಮನೆಯ ಬಾಗಿಲಲ್ಲಿ ಬರೆದು ಮತ್ತೆ ಸಾಯಂಕಾಲದಲ್ಲಿ ಅವಳನ್ನು ಆಕರ್ಷಿಸುವ ಈ ಯುಕ್ತಿಯನ್ನು ಹೂಡಿದನು.

೧೨೫. ಚೆನ್ನಾಗಿ ಅಲಂಕರಿಸಿಕೊಂಡು ಗುಹಚಂದ್ರನು ಹೆಂಡತಿಯು ನೋಡುತ್ತಿರುವಾಗಲೇ ಯಾವಳೋ ಒಬ್ಬಳು ವೇಶ್ಯೆಯೊಡನೆ ಸಂಭಾಷಣೆ ಮಾಡತೊಡಗಿದನು.

೧೨೬. ಅದನ್ನು ನೋಡಿ ಈರ್ಷ್ಯೆಯಿಂದ ಆ ದೇವಕನ್ಯೆಯು ಅವನನ್ನು ಬಳಿಗೆ ಕರೆದು 'ಇವಳು ಯಾವಳು ?' ಎಂದು ಮಂತ್ರದಿಂದ ನಿಯಂತ್ರಿತವಾದ ಮಾತಿನಿಂದ ಕೇಳಿದಳು.

---

ತದೇತತ್ಸಿದ್ಧಯೇ ಮಂತ್ರಂ ದ್ವಾರೋಲ್ಲೇಖ್ಯಂ ದದಾಮಿ ತೇ ।
ತಸ್ಯೋಪಬೃಂಹಣೀಂ ಬಾಹ್ಯಾಂ ಯುಕ್ತಿಂ ಚೋಪದಿಶಾಮ್ಯಹಮ್ ॥ ೧೨೧

ವಿಶುದ್ಧೋಽಪಿ ಜ್ವಲತ್ಯಗ್ನಿರ್ವಾತ್ಯಾಯೋಗೇ ತು ಕಾ ಕಥಾ ? ।
ಏವಂ ಮಂತ್ರೋಽರ್ಥದೋಽಪ್ಯೇಕಃ ಕಿಂ ಪುನರ್ಯುಕ್ತಿಸಂಯುತಃ ॥ ೧೨೨

ಇತ್ಯುಕ್ತ್ವಾ ಗುಹಚಂದ್ರಾಯ ದತ್ತ್ವಾ ಮಂತ್ರಂ ದ್ವಿಜೋತ್ತಮಃ ।
ಉಪದಿಶ್ಯ ಚ ತಾಂ ಯುಕ್ತಿಂ ಪ್ರಭಾತೇ ಸ ತಿರೋದಧೇ ॥ ೧೨೩
ಗುಹಚಂದ್ರೋಽಪಿ ಭಾರ್ಯಾಯಾ ಗೃಹದ್ವಾರೇಽಭಿಲಿಖ್ಯ ತಮ್ ।
ಮಂತ್ರಂ ಪುನಶ್ಚಕಾರೈವಂ ಸಾಯಂ ಯುಕ್ತಿಂ ಪ್ರರೋಚನೀಮ್ ॥ ೧೨೪
ಗತ್ವಾ ಚ ತಸ್ಯಾಃ ಪಶ್ಯಂತ್ಯಾಃ ಕಯಾಪಿ ವರಯೋಷಿತಾ ।
ಸಹ ಚಕ್ರೇ ಸಮಾಲಾಪಂ ರಚಿತೋದಾರಮಂಡನಃ ॥ ೧೨೫
ತದ್ ದೃಷ್ಟ್ವೈವ ತಮಾಹೂಯ ಮಂತ್ರೋನ್ಮುದ್ರಿತಯಾ ಗಿರಾ ।
ಏಷಾ ಕಾಸ್ತೀತಿ ಪಪ್ರಚ್ಛ ಸಾ ಸೇರ್ಷ್ಯಾ ದಿವ್ಯಕನ್ಯಕಾ ॥ ೧೨೬

೧೨೭ "ಇವಳೊಬ್ಬಳು ವಾರಾಂಗನೆ. ನನ್ನಲ್ಲಿ ಇವಳು ಒಲವನ್ನಿಟ್ಟಿದ್ದಾಳೆ. ಇವತ್ತು ಇವಳ ಮನೆಗೆ ಹೋಗುತ್ತೇನೆ' ಎಂದು ಅವನು ಅವಳಿಗೆ ಸುಳ್ಳು ಉತ್ತರವನ್ನು ಕೊಟ್ಟನು.

೧೨೮. ಆಗ ಅವಳು ಕೊಂಕುದೃಷ್ಟಿಯಿಂದ, ಹುಬ್ಬುಗಳನ್ನು ಬಾಗಿಸಿ ಅವನನ್ನು ನೋಡಿ ಎಡದ ಕೈಯಿಂದ ಅವನನ್ನು ತಡೆದು ಹೀಗೆಂದಳು.

೧೨೯. "ಹುಂ, ಗೊತ್ತಾಯಿತು. ಇವಳಿಗಾಗಿ ಈ ವೇಷ. ಅಲ್ಲಿ ನೀನು ಹೋಗಬೇಡ. ಅವಳಿಂದ ನಿನಗೇನಾಗಬೇಕು ? ನನ್ನ ಹತ್ತಿರ ಬಾ. ನಾನು ನಿನ್ನ ಹೆಂಡತಿ ತಾನೆ ?"

೧೩೦–೧೩೧. ಹೀಗೆ ರೋಮಾಂಚ, ನಡುಕ, ಕಳವಳಗಳಿಂದ ತುಂಬಿ ಅವಳು ಮಂತ್ರವೆಂಬ ದೂತನಿಗೂ ಹಿಡಿಯಲಸಾಧ್ಯವಾಗುವಂತೆ (ಯಾವುದೋ ಭೂತ) ಮೆಟ್ಟಿದವಳಂತೆ ಹೇಳಲು ಅವನು ಅವಳೊಡನೆ ವಾಸಗೃಹದೊಳಗೆ ಹೋಗಿ ಮನುಷ್ಯನಾಗಿದ್ದರೂ ಮನೋರಥಗಳಿಗೂ ನಿಲುಕದ ದಿವ್ಯಸಂಭೋಗವನ್ನು ಅನುಭವಿಸಿದನು.

೧೩೨. ಹೀಗೆ ಮಂತ್ರಸಿದ್ಧಿಯಿಂದ ವಶಪಟ್ಟು ಪ್ರೇಮಪೂರ್ಣಳಾದ ಹಾಗೂ ತನ್ನ ದೇವಲೋಕದ ಸಂಬಂಧವನ್ನು ಕಳೆದುಕೊಂಡ ಅವಳನ್ನು ಪಡೆದು ಗುಹಚಂದ್ರನು ಸುಖವಾಗಿ ಇದ್ದುಬಿಟ್ಟನು.

---

ಅಸೌ ವಾರಾಂಗನಾ ಬದ್ಧಭಾವಾ ಮಯ್ಯಹಮದ್ಯ ಚ ।
ಏತದ್ಗೃಹಂ ವ್ರಜಾಮೀತಿ ಪ್ರತ್ಯವೋಚತ್ ಸ ತಾಂ ಮೃಷಾ ॥ ೧೨೭
ತತಃ ಸಾಚೀಕೃತದೃಶಾ ಮುಖೇನ ವಲಿತಭ್ರುಣಾ ।
ದೃಷ್ಟ್ವಾ ನಿವಾರ್ಯ ವಾಮೇನ ಕರೇಣ ತಮುವಾಚ ಸಾ ॥ ೧೨೮
ಹುಂ ಜ್ಞಾತಮೇತದರ್ಥೋಽಯಂ ವೇಷಸ್ತತ್ರ ಚ ಮಾ ಸ್ಮ ಗಾಃ ।
ಕಿಂ ತಯಾ ಮಾಮುಪೇಹಿ ತ್ವಮಹಂ ಹಿ ತವ ಗೇಹಿನೀ ॥ ೧೨೯
ಇತ್ಯುಕ್ತೇ ಪುಲಕೋತ್ಕಂಪಸಂಕ್ಷೋಭಾಕುಲಯಾ ತಯಾ ।
ಆವಿಷ್ಟಯೇವ ತನ್ಮಂತ್ರದೂತದುರ್ಗ್ರಹಯಾಪಿ ಸಃ ॥ ೧೩೦
ಪ್ರವಿಶ್ಯ ವಾಸಕೇ ಸದ್ಯಸ್ತಯೈವ ಸಮಮನ್ವಭೂತ್ ।
ಮರ್ತ್ಯೋಽಪಿ ದಿವ್ಯಸಂಭೋಗಮಸಂಪ್ರೃಷ್ಟಂ ಮನೋರಥೈಃ ॥ ೧೩೧
ಇತ್ಥಂ ತಾಂ ಪ್ರಾಪ್ಯ ಸಪ್ರೇಮಾಂ ಮಂತ್ರಸಿದ್ಧಿಪ್ರಸಾಧಿತಾಮ್ ।
ತ್ಯಕ್ತದಿವ್ಯಸ್ಥಿತಿಂ ತಸ್ಥೌ ಗುಹಚಂದ್ರೋ ಯಥಾಸುಖಮ್ ॥ ೧೩೨

೧೩೩ ಹೀಗೆ ಯಾಗ, ದಾನ ಮುಂತಾದ ಪುಣ್ಯಗಳಿಂದ ಒಳ್ಳೆಯ ಕೆಲಸವನ್ನು ಮಾಡಿದ ಜನರಿಗೆ ಶಾಪದಿಂದ (ಭೂಮಿಗೆ) ಜಾರಿದ ದೇವಲೋಕದ ನಾರಿಯರು ಗೃಹಿಣಿಯರಾಗಿ ಬರುತ್ತಾರೆ.

೧೩೪. ದೇವತೆಗಳ ಮತ್ತು ದ್ವಿಜರ ಪೂಜೆಯು ಒಳ್ಳೆಯ ಜನರಿಗೆ ಕಾಮಧೇನುವಾಗುತ್ತದೆ ಎನ್ನುತ್ತಾರೆ. ಅದರಿಂದ ಏನು ತಾನೆ ಸಿಗುವುದಿಲ್ಲ ? ಸಾಮವೇದಾದಿಗಳಲ್ಲಿ ಇರುವ ವರ್ಣನೆಗಳು ಅದರ ಶೇಷ ಮಾತ್ರ

೧೩೫ ಅತ್ಯಂತ ಉನ್ನತವಾದ ಸ್ಥಾನದಲ್ಲಿ ಜನ್ಮವನ್ನು ಪಡೆದ ದಿವ್ಯಜೀವಿಗಳಿಗೂ ಕೆಟ್ಟಕೆಲಸವು ಹೂವುಗಳನ್ನು ಬಿರುಗಾಳಿಯು ಕೆಳಗೆ ಉದುರಿಸುವಂತೆ ಅಧಃಪತನ ಉಂಟುಮಾಡುತ್ತದೆ.

೧೩೬ ಹೀಗೆ ರಾಜಪುತ್ರಿ ಪದ್ಮಾವತಿಗೆ ಹೇಳಿ ಮತ್ತೆ ವಸಂತಕನು ಹೀಗೆ ಹೇಳಿದನು. "ಅಲ್ಲದೆ ಈ ವಿಷಯದಲ್ಲಿ ಅಹಲ್ಯೆಯ ವೃತ್ತಾಂತವೂ ಇದೆ. ಅದನ್ನು ಕೇಳು.

## ಅಹಲ್ಯೆಯ ಕಥೆ

೧೩೭ ಹಿಂದೆ ತ್ರಿಕಾಲಜ್ಞನಾಗಿದ್ದ ಗೌತಮನೆಂಬ ಮಹರ್ಷಿ ಇದ್ದನು. ರೂಪದಲ್ಲಿ ಅಪ್ಸರೆಯರನ್ನೂ ಮೀರಿಸಿದ ಅಹಲ್ಯೆ ಎಂಬುವಳು ಅವನ ಭಾರ್ಯೆಯಾಗಿದ್ದಳು.

---

ಏವಂ ಯಾಗಪ್ರದಾನಾದಿಸುಕೃತೈಃ ಶುಭಕರ್ಮಣಾಮ್ ।
ದಿವ್ಯಾಃ ಶಾಪಚ್ಯುತಾ ನಾರ್ಯಸ್ತಿಷ್ಠಂತಿ ಗೃಹಿಣೀಪದೇ ॥ ೧೩೩
ದೇವದ್ವಿಜಸಪರ್ಯಾ ಹಿ ಕಾಮಧೇನುರ್ಮತಾ ಸತಾಮ್ ।
ಕಿಂ ಹಿ ನ ಪ್ರಾಪ್ಯತೇ ತಸ್ಯಾಃ ಶೇಷಾಃ ಸಾಮಾದಿವರ್ಣನಾಃ ॥ ೧೩೪
ದುಷ್ಕೃತಂ ತ್ವಯಿ ದಿವ್ಯಾನಾಮುತ್ಯುಚ್ಚಪದಜನ್ಮನಾಮ್ ।
ಪ್ರವಾತಮಿವ ಪುಷ್ಪಾಣಾಮಧಃಪಾತೈಕಕಾರಣಮ್ ॥ ೧೩೫
ಇತ್ಯುಕ್ತ್ವಾ ರಾಜಪುತ್ರ್ಯಾಃ ಸ ಪುನರಾಹ ವಸಂತಕಃ ।
ಕಿಂ ಚಾತ್ರ ಯದಹಲ್ಯಾಯಾ ವೃತ್ತಂ ತಚ್ಛ್ರೂಯತಾಮಿದಮ್ ॥ ೧೩೬
ಪುರಾಭೂದ್ ಗೌತಮೋ ನಾಮ ತ್ರಿಕಾಲಜ್ಞೋ ಮಹಾಮುನಿಃ ।
ಅಹಲ್ಯೇತಿ ಚ ತಸ್ಯಾಸೀದ್ ಭಾರ್ಯಾ ರೂಪಜಿತಾಪ್ಸರಾಃ ॥ ೧೩೭

೧೩೮. ಅವಳ ರೂಪಕ್ಕೆ ಆಸೆಪಟ್ಟ ಇಂದ್ರನು ಒಮ್ಮೆ ಏಕಾಂತದಲ್ಲಿ ಅವಳನ್ನು (ಸಂಗಕ್ಕಾಗಿ) ಬೇಡಿದನು. ಐಶ್ವರ್ಯದಿಂದ ಕುರುಡಾದ ಪ್ರಭುಗಳ ಬುದ್ಧಿಯು ತಪ್ಪು ದಾರಿಯಲ್ಲಿ ಓಡುತ್ತದೆಯಷ್ಟೆ

೧೩೯. ಇಂದ್ರನನ್ನು ಕಾಮಿಸಿದ ಆ ಮೂಢ ಹೆಂಗಸೂ ಒಪ್ಪಿಕೊಂಡಳು. ತನ್ನ ಪ್ರಭಾವದಿಂದ ಅದನ್ನು ತಿಳಿದುಕೊಂಡ ಗೌತಮಮುನಿಯು ಅಲ್ಲಿಗೆ ಬಂದುಬಿಟ್ಟನು.

೧೪೦. ಆ ಕ್ಷಣದಲ್ಲಿ ಹೆದರಿ ಇಂದ್ರನು ಮಾರ್ಜಾರದ (ಬೆಕ್ಕಿನ) ರೂಪವನ್ನು ತಾಳಿದನು. ಗೌತಮನು ಅಹಲ್ಯೆಯನ್ನು ಉದ್ದೇಶಿಸಿ 'ಇಲ್ಲಿ ಇದ್ದವನು ಯಾರು ?' ಎಂದು ಪ್ರಶ್ನಿಸಿದನು.

೧೪೧. ಸತ್ಯವನ್ನು ಬಿಡದೆ, ಅಪಭ್ರಂಶದಿಂದ ವಕ್ರವಾದ ಮಾತಿನಿಂದ 'ಇಲ್ಲಿದ್ದುದು ಮಜ್ಜಾರ' ಎಂದು ಅವಳು ಗಂಡನಿಗೆ ಉತ್ತರ ಕೊಟ್ಟಳು.

೧೪೨. "ಅದು ಸತ್ಯವೇ. ನಿನ್ನ ಜಾರ (ಮಿಂಡ)ನೇ ಇಲ್ಲಿದ್ದುದು" ಎಂದು ಹೇಳಿ ಮುನಿಯು ನಕ್ಕು ಸತ್ಯವನ್ನು ಹೇಳಿದುದರಿಂದ ವಿಮೋಚನೆಯುಳ್ಳ ಈ ಶಾಪವನ್ನು ಅವಳಿಗೆ ಕೊಟ್ಟನು.

೧೪೩. "ಪಾಪಶೀಲೆ! ದೀರ್ಘಕಾಲದವರೆಗೆ, ಎಂದರೆ ರಾಮನು ಕಾಡಿನೊಳಗೆ ಸಂಚರಿಸುತ್ತಾ ಬಂದು ದರ್ಶನ ಕೊಡುವವರೆಗೆ, ನೀನು ಕಲ್ಲಾಗಿರು"

---

ಏಕದಾ ರೂಪಲುಬ್ಧಸ್ತಾಮಿಂದ್ರಃ ಪ್ರಾರ್ಥಿತವಾನ್ ರಹಃ ।
ಪ್ರಭೂಣಾಂ ಹಿ ವಿಭೂತ್ಯಂಧಾ ಧಾವತ್ಯವಿಷಯೇ ಮತಿಃ ॥ ೧೩೮
ಸಾನುಮೇನೇ ಚ ತಂ ಮೂಢಾ ವೃಷಸ್ಯಂತೀ ಶಚೀಪತಿಮ್ ।
ತಚ್ಚ ಪ್ರಭಾವತೋ ಬುದ್ಧ್ವಾ ತತ್ರಾಗಾದ್ ಗೌತಮೋ ಮುನಿಃ ॥ ೧೩೯
ಮಾರ್ಜಾರರೂಪಂ ಚಕ್ರೇ ಚ ಭಯಾದಿಂದ್ರೋಽಪಿ ತತ್‌ಕ್ಷಣಮ್ ।
ಕಃ ಸ್ಥಿತೋಽತ್ರೇತಿ ಸೋಽಪೃಚ್ಛದಹಲ್ಯಾಮಥ ಗೌತಮಃ ॥ ೧೪೦
ಏಸೋ ಠಿಓ ಖು ಮಜ್ಜಾರೋ ಇತ್ಯಪಭ್ರಷ್ಟವಕ್ರಯಾ ।
ಗಿರಾ ಸತ್ಯಾನುರೋಧಿನ್ಯಾ ಸಾ ತಂ ಪ್ರತ್ಯಬ್ರವೀತ್ ಪತಿಮ್ ॥ ೧೪೧
ಸತ್ಯಂ ತ್ವಜ್ಜಾರ ಇತ್ಯುಕ್ತ್ವಾ ವಿಹಸನ್ ಸ ತತೋ ಮುನಿಃ ।
ಸತ್ಯಾನುರೋಧಕ್ಲೃಪ್ತಾಂತಂ ಶಾಪಂ ತಸ್ಯಾಮಪಾತಯತ್ ॥ ೧೪೨
ಪಾಪಶೀಲೇ ಶಿಲಾಭಾವಂ ಭೂರಿಕಾಲಮವಾಪ್ನುಹಿ ।
ಆ ವನಾಂತರಸಂಚಾರಿರಾಘವಾಲೋಕನಾದಿತಿ ॥ ೧೪೩

೧೪೪–೧೪೫. "ಸ್ತ್ರೀಯೋನಿಗಾಗಿ ಅತ್ಯಾಸೆಪಟ್ಟ ನಿನಗೆ ಶರೀರದಲ್ಲಿ ಸಾವಿರ ಯೋನಿಗಳಾಗುತ್ತವೆ. ವಿಶ್ವಕರ್ಮನು ಮುಂದೆ ತಿಲೋತ್ತಮಾ ಎಂಬ ದಿವ್ಯಸ್ತ್ರೀಯನ್ನು ನಿರ್ಮಿಸುವನು. ಅವಳನ್ನು ನೋಡಿದಾಗ ಯೋನಿ ಸಹಸ್ರವು ಸಾವಿರ ಕಣ್ಣುಗಳಾಗುವವು" ಎಂದು ಗೌತಮನು ಇಂದ್ರನಿಗೆ ಶಾಪವನ್ನಿತ್ತನು.

೧೪೬. ಶಾಪವನ್ನು ಕೊಟ್ಟು ಆ ಋಷಿಯು ತನಗೆ ಇಷ್ಟಬಂದಂತೆ ತಪಸ್ಸಿಗಾಗಿ ಹೊರಟು ಹೋದನು. ಅಹಲ್ಯೆಯಾದರೋ ಶೋಚನೀಯವಾದ ಕಲ್ಲಿನ ಅವಸ್ಥೆಯನ್ನು ಪಡೆದಳು.

೧೪೭. ಇಂದ್ರನ ಶರೀರವೆಲ್ಲ ಯೋನಿಗಳಿಂದ ತುಂಬಿಹೋಯಿತು. ಕೆಟ್ಟ ನಡತೆಯು ಯಾರಿಗೆ ತಾನೆ ಅವಮಾನದ ಕಾರಣವಾಗುವುದಿಲ್ಲ ?

೧೪೮. ಹೀಗೆ ಎಲ್ಲರ ಕೆಟ್ಟ ಕೆಲಸವು ಅವರಲ್ಲೇ ಯಾವಾಗಲೂ ಫಲವನ್ನು ಕೊಡುತ್ತದೆ. ಯಾವನು ಯಾವ ಬೀಜವನ್ನು ನೆಡುತ್ತಾನೋ ಅವನು ಅದರ ಹಣ್ಣನ್ನೇ ಪಡೆಯುತ್ತಾನೆ.

೧೪೯. ಆದ್ದರಿಂದ ವಿಶಾಲ ಹೃದಯವನ್ನುಳ್ಳವರು ಬೇರೆಯವರಿಗೆ ವಿರುದ್ಧವಾದ ಕಾರ್ಯಗಳಲ್ಲಿ ಉತ್ಸಾಹವನ್ನು ತೋರಿಸುವುದಿಲ್ಲ. ಇದು ಉತ್ತಮಸ್ವಭಾವದವರಿಗೆ ವಿಧಿವಿಹಿತವಾದ ಒಳ್ಳೆಯ ವ್ರತವೇ ಆಗಿದೆ.

---

ವರಾಂಗಲುಬ್ಧಸ್ಯಾಂಗೇ ತೇ ತತ್ಸಹಸ್ರಂ ಭವಿಷ್ಯತಿ ।
ದಿವ್ಯಸ್ತ್ರೀಂ ವಿಶ್ವಕರ್ಮಾ ಯಾಂ ನಿರ್ಮಾಸ್ಯತಿ ತಿಲೋತ್ತಮಾಮ್ ॥ ೧೪೪
ತಾಂ ವಿಲೋಕ್ಯ ತದೇವಾಕ್ಷ್ಣಾಂ ಸಹಸ್ರಂ ಭವಿತಾ ಚ ತೇ ।
ಇತೀಂದ್ರಮಪಿ ತತ್ಕಾಲಂ ಶಪತಿ ಸ್ಮ ಸ ಗೌತಮಃ ॥ ೧೪೫
ದತ್ತಶಾಪೋ ಯಥಾಕಾಮಂ ತಪಸೇ ಸ ಮುನಿರ್ಯಯೌ ।
ಅಹಲ್ಯಾಪಿ ಶಿಲಾಭಾವಂ ದಾರುಣಂ ಪ್ರತ್ಯಪದ್ಯತ ॥ ೧೪೬
ಇಂದ್ರೋಽಪ್ಯಾವೃತಸರ್ವಾಂಗೋ ವರಾಂಗೈರಭವತ್ತತಃ ।
ಅಶೀಲಂ ಕಸ್ಯ ನಾಮ ಸ್ಯಾನ್ನ ಖಲೀಕಾರಕಾರಣಮ್ ॥ ೧೪೭
ಏವಂ ಕುಕರ್ಮ ಸರ್ವಸ್ಯ ಫಲತ್ಯಾತ್ಮನಿ ಸರ್ವದಾ ।
ಯೋ ಯದ್ವಪತಿ ಬೀಜಂ ಹಿ ಲಭತೇ ಸೋಽಪಿ ತತ್ಫಲಮ್ ॥ ೧೪೮
ತಸ್ಮಾತ್ ಪರವಿರುದ್ಧೇಷು ನೋತ್ಸಹಂತೇ ಮಹಾಶಯಾಃ ।
ಏತದುತ್ತಮಸತ್ತ್ವಾನಾಂ ವಿಧಿಸಿದ್ಧಂ ಹಿ ತದ್ವ್ರತಮ್ ॥ ೧೪೯

೧೫೦. ನೀವಿಬ್ಬರೂ ಪೂರ್ವಜನ್ಮದಲ್ಲಿ ಸೋದರಿಯರಾಗಿದ್ದ ದೇವತೆಗಳು. ಶಾಪದಿಂದ (ಕೆಳಗಿನ ಲೋಕಕ್ಕೆ) ಜಾರಿಬಂದಿದ್ದೀರಿ. ಆದ್ದರಿಂದಲೇ ನಿಮ್ಮಿಬ್ಬರ ಮನಸ್ಸು ಅನ್ಯೋನ್ಯ ಹಿತಕರವೂ, ವಿರೋಧವಿಲ್ಲದ್ದೂ ಆಗಿದೆ."

೧೫೧. ವಸಂತಕನಿಂದ ಇದನ್ನೆಲ್ಲ ಕೇಳಿ ವಾಸವದತ್ತೆಯೂ ಪದ್ಮಾವತಿಯೂ ಪೂರ್ಣವಾಗಿ ಅಸೂಯೆಯನ್ನು ತ್ಯಜಿಸಿದರು.

೧೫೨. ರಾಣಿ ವಾಸವದತ್ತೆಯೂ ಪತಿಯನ್ನು ಇಬ್ಬರಿಗೂ ಸಮಾನವಾಗಿ ಮಾಡಿಕೊಂಡು ತನ್ನ ಹಾಗೆಯೇ ಪದ್ಮಾವತಿಯಲ್ಲೂ ಹಿತವನ್ನು ಸಾಧಿಸಲು ಉದ್ಯುಕ್ತಳಾಗಿ ಪ್ರಿಯವನ್ನೇ ಮಾಡಿದಳು.

೧೫೩. ಪದ್ಮಾವತಿಯು ಕಳುಹಿಸಿದ್ದ ದೂತರಿಂದ ವಾಸವದತ್ತೆಯ ಮಹಾನುಭಾವತ್ವವನ್ನು ತಿಳಿದುಕೊಂಡು ಮಗಧರಾಜನೂ ಸಂತೋಷಪಟ್ಟನು.

೧೫೪. ಅನಂತರ ಮತ್ತೊಂದು ದಿನ ಮಂತ್ರಿ ಯೌಗಂಧರಾಯಣನು ವತ್ಸರಾಜನ ಬಳಿಗೆ ಬಂದು ರಾಣಿ ವಾಸವದತ್ತೆಯ ಸನ್ನಿಧಿಯಲ್ಲಿ ಇತರರೂ ಇದ್ದಾಗ ಹೀಗೆ ಹೇಳಿದನು.

೧೫೫. "ದೇವ, ಈಗ ಕಾರ್ಯಾರಂಭಕ್ಕಾಗಿ ನಾವು ಕೌಶಾಂಬಿಗೆ ಏಕೆ ಹೋಗಬಾರದು ? ಮಗಧೇಶ್ವರನು ನಮ್ಮಿಂದ ಮೋಸ ಹೋಗಿದ್ದರೂ ಈಗ ಅವನಿಂದ ಯಾವ ಭಯವೂ ಇಲ್ಲ.

---

ಯುವಾಂ ಪೂರ್ವಭಗಿನ್ಯೌ ಚ ದೇವ್ಯೌ ಶಾಪಚ್ಯುತೇ ಉಭೇ ।
ತದ್ವಾಮನ್ಯೋನ್ಯಹಿತಕೃನ್ನಿರ್ದ್ವಂದ್ವಂ ಹೃದಯಂ ಹಿ ವಾಮ್ ॥ ೧೫೦
ಏತದ್ವಸಂತಕಾಚ್ಛ್ರುತ್ವಾ ಮಿಥೋ ವಾಸವದತ್ತಯಾ ।
ಪದ್ಮಾವತ್ಯಾ ಚ ಸುತರಾಮೀರ್ಷ್ಯಾಲೇಶೋಽಪ್ಯಮುಚ್ಯತ ॥ ೧೫೧
ದೇವೀ ವಾಸವದತ್ತಾ ಚ ಕೃತ್ವಾ ಸಾಧಾರಣಂ ಪತಿಮ್ ।
ಆತ್ಮನೀವ ಪ್ರಿಯಂ ಚಕ್ರೇ ಪದ್ಮಾವತ್ಯಾಂ ಹಿತೋನ್ಮುಖೀ ॥ ೧೫೨
ತಸ್ಯಾ ಮಹಾನುಭಾವತ್ವಂ ತತ್ತಾದೃಙ್ಮಗಧೇಶ್ವರಃ ।
ಬುದ್ಧ್ವಾ ಪದ್ಮಾವತೀಸೃಷ್ಟದೂತೇಭ್ಯೋಽಪಿ ತುತೋಷ ಸಃ ॥ ೧೫೩
ಅನ್ಯೇದ್ಯುರಥ ವತ್ಸೇಶಂ ಮಂತ್ರೀ ಯೌಗಂಧರಾಯಣಃ ।
ಉಪೇತ್ಯ ಸಂನಿಧೌ ದೇವ್ಯಾಃ ಸ್ಥಿತೇಷ್ವನ್ಯೇಷ್ವಭಾಷತ ॥ ೧೫೪
ಉದ್ಯೋಗಾಯಾಧುನಾ ದೇವ ಕೌಶಾಂಬೀ ಕಿಂ ನ ಗಮ್ಯತೇ ।
ನಾಶಂಕಾ ಮಗಧೇಶಾಚ್ಚ ವಿದ್ಯತೇ ವಂಚಿತಾದಪಿ ॥ ೧೫೫

೧೫೬. ಮಗಳ ಸಂಬಂಧವೆಂಬ ಸಾಮೋಪಾಯದಿಂದ ಅವನು ದುರ್ಬಲನಾಗಿದ್ದಾನೆ. ಅವನು ತನ್ನ ಪ್ರಾಣಕ್ಕಿಂತಲೂ ಹೆಚ್ಚು ಇಷ್ಟವಾದ ಮಗಳನ್ನು ಯುದ್ಧ ಮಾಡಿ ಹೇಗೆ ತಾನೆ ಬಿಟ್ಟಾನು ?

೧೫೭. ಅವನು ತನ್ನ ಸತ್ಯವನ್ನು ಕಾಪಾಡಿಕೊಳ್ಳಲೇ ಬೇಕು. ನೀನು ಅವನಿಗೆ ಯಾವ ವಂಚನೆಯನ್ನೂ ಮಾಡಿಲ್ಲ. ಇದನ್ನೆಲ್ಲ ಮಾಡಿದ್ದು ನಾನು. ಅಲ್ಲದೆ, ಇದರಿಂದ ಅವನಿಗೆ ತೊಂದರೆಯೇನೂ ಆಗಿಲ್ಲ.

೧೫೮. ಮಗಧೇಶ್ವರನು ನಮಗೆ ಯಾವ ಅಪಾಯವನ್ನೂ ತಂದೊಡ್ಡುವುದಿಲ್ಲ ಎಂದು ನನಗೆ ಗೂಢಚಾರರಿಂದ ತಿಳಿಯಿತು. ಅದಕ್ಕೋಸ್ಕರವೇ ನಾವು ಇಷ್ಟು ದಿವಸ ಇಲ್ಲಿ ಉಳಿದುಕೊಂಡಿದ್ದು."

೧೫೯. ಹೀಗೆ ತನ್ನ ಕರ್ತವ್ಯವನ್ನು ನಿರ್ವಹಿಸಿದ್ದ ಯೌಗಂಧರಾಯಣನು ಮಾತನಾಡುತ್ತಿರಲು ಮಗಧೇಶ್ವರನ ದೂತನೊಬ್ಬನು ಬಂದನು.

೧೬೦. ಆ ಕ್ಷಣದಲ್ಲೇ ಒಳಗೆ ಪ್ರವೇಶಿಸಿದ ಆ ದೂತನು ದ್ವಾರಪಾಲಕನು ಪರಿಚಯಿಸಿದ ನಂತರ ನಮಸ್ಕರಿಸಿ ಕುಳಿತುಕೊಂಡು ವತ್ಸರಾಜನಿಗೆ ಬಿನ್ನವಿಸಿದನು.

೧೬೧. "ದೇವಿ ಪದ್ಮಾವತಿಯು ಕಳುಹಿಸಿದ್ದ ಸಂದೇಶದಿಂದ ಸಂತೋಷಪಟ್ಟ ಮಗಧರಾಜನು ಈಗ ತಮಗೆ ಹೀಗೆ ತಿಳಿಸುತ್ತಿದ್ದಾನೆ.

---

ಕನ್ಯಾಸಂಬಂಧನಾಮ್ನಾ ಹಿ ಸಾಮ್ನಾ ಸಮ್ಯಕ್ ಸ ಬಾಧಿತಃ ।
ವಿಗೃಹ್ಯ ಚ ಕಥಂ ಜಹ್ಯಾಜ್ಜೀವಿತಾದಧಿಕಾಂ ಸುತಾಮ್ ॥ ೧೫೬
ಸತ್ಯಂ ತಸ್ಯಾನುಪಾಲ್ಯಂ ಚ ತ್ವಯಾ ಚ ಸ ನ ವಂಚಿತಃ ।
ಮಯಾ ಸ್ವಯಂ ಕೃತಂ ಹ್ಯೇತನ್ನ ಚ ತಸ್ಯಾಸುಖಾವಹಮ್ ॥ ೧೫೭
ಚಾರೇಭ್ಯಶ್ಚ ಮಯಾ ಜ್ಞಾತಂ ಯಥಾ ವಿಕುರುತೇ ನ ಸಃ ।
ತದರ್ಥಮೇವ ಚಾಸ್ಮಾಭಿಃ ಸ್ಥಿತಂ ಚ ದಿವಸಾನಮೂನ್ ॥ ೧೫೮
ಏವಂ ವದತಿ ನಿರ್ವ್ಯೂಢಕಾರ್ಯೇ ಯೌಗಂಧರಾಯಣೇ ।
ಮಗಧೇಶ್ವರಸಂಬಂಧೀ ದೂತೋಽತ್ರ ಸಮುಪಾಯಯೌ ॥ ೧೫೯
ತತ್ಕ್ಷಣಂ ಸ ಪ್ರವಿಷ್ಟೋಽತ್ರ ಪ್ರತಿಹಾರನಿವೇದಿತಃ ।
ಪ್ರಣಾಮಾಂತರಮಾಸೀನೋ ವತ್ಸರಾಜಂ ವ್ಯಜಿಜ್ಞಪತ್ ॥ ೧೬೦
ದೇವೀಪದ್ಮಾವತೀದತ್ತಸಂದೇಶಪರಿತೋಷಿಣಾ ।
ಮಗಧೇಶೇನ ನಿರ್ದಿಷ್ಟಮಿದಂ ದೇವಸ್ಯ ಸಾಂಪ್ರತಮ್ ॥ ೧೬೧

೧೬೨. 'ಹೆಚ್ಚು ಹೇಳುವುದರಿಂದ ಏನು ಪ್ರಯೋಜನ ? ನನಗೆ ಎಲ್ಲವೂ ತಿಳಿಯಿತು. ನಿನ್ನ ವಿಷಯದಲ್ಲಿ ಪ್ರೀತಿಯುಳ್ಳವನಾಗಿದ್ದೇನೆ. ಯಾವುದಕ್ಕಾಗಿ ಇದೆಲ್ಲವನ್ನೂ ಆರಂಭಿಸಲಾಯಿತೋ ಅದನ್ನು ಮಾಡು. ನಾವು ನಿನಗೆ ವಿಧೇಯರು.'

೧೬೩. ಯೌಗಂಧರಾಯಣನ ರಾಜನೀತಿಯೆಂಬ ಮರದ ಹೂವಿನಂತೆ ಇದ್ದ ಸ್ಪಷ್ಟವಾದ ದೂತನ ಆ ಮಾತನ್ನು ವತ್ಸರಾಜನು ಅಭಿನಂದಿಸಿದನು.

೧೬೪. ಆಮೇಲೆ ರಾಣಿ ವಾಸವದತ್ತೆಯ ಜೊತೆಯಲ್ಲಿ ಪದ್ಮಾವತಿಯನ್ನು ಕರೆಸಿ ಕಾಣಿಕೆಯನ್ನು ನೀಡಿ ಆ ದೂತನನ್ನು ಸಮ್ಮಾನಿಸಿ ಕಳುಹಿಸಿದನು.

೧೬೫. ಅದಾದ ಮೇಲೆ ಅಲ್ಲಿಗೆ ಚಂಡಮಹಾಸೇನನ ದೂತನೂ ಬಂದನು. ಒಳಕ್ಕೆ ಪ್ರವೇಶಿಸಿ ಯಥೋಚಿತವಾಗಿ ರಾಜನಿಗೆ ನಮಸ್ಕಾರ ಮಾಡಿ ಅವನಿಂತೆಂದನು.

೧೬೬ "ದೇವ, ಕಾರ್ಯದ ತತ್ತ್ವಗಳನ್ನು ತಿಳಿದಿರುವ ಚಂಡಮಹಾಸೇನ ಭೂಪತಿಯು ನಿನ್ನ ವೃತ್ತಾಂತವನ್ನೆಲ್ಲ ತಿಳಿದು ಸಂತುಷ್ಟನಾಗಿ ನಿನಗೆ ಈ ಸಂದೇಶವನ್ನು ಕಳುಹಿಸಿದ್ದಾನೆ

೧೬೭ ಯೌಗಂಧರಾಯಣನು ನಿನ್ನ ಮಂತ್ರಿ ಎಂಬುದರಿಂದಲೇ ನಿನ್ನ ಪ್ರಾಶಸ್ತ್ಯವನ್ನು ಹೇಳಿದಂತಾಯಿತು. ಹೆಚ್ಚು ಮಾತುಗಳಿಂದೇನು ?

೧೬೮. ವಾಸವದತ್ತೆ ಧನ್ಯಳು. ನಿನ್ನಲ್ಲಿರುವ ಭಕ್ತಿಯಿಂದ ಮಾಡಿದ ಕಾರ್ಯದಿಂದ ಸಜ್ಜನರ ಮಧ್ಯದಲ್ಲಿ ನಮ್ಮ ತಲೆಯನ್ನು ಬಹುಕಾಲ ಎತ್ತಿಕೊಂಡು ಇರುವಂತಾಯಿತು.

---

ಬಹುನಾ ಕಿಂ ಮಯಾ ಸರ್ವಂ ಜ್ಞಾತಂ ಪ್ರೀತೋಽಸ್ಮಿ ಚ ತ್ವಯಿ ।
ತದ್ಯದರ್ಥೋಽಯಮಾರಂಭಸ್ತತ್ಕುರು ಪ್ರಣತಾ ವಯಮ್ ॥ ೧೬೨
ಏತದ್ದೂತವಚಃ ಸ್ಪಷ್ಟಂ ವತ್ಸೇಶೋಽಭಿನನಂದ ಸಃ ।
ಯೌಗಂಧರಾಯಣೀಯಸ್ಯ ಪುಷ್ಪಂ ನಯತರೋರಿವ ॥ ೧೬೩
ತತಃ ಪದ್ಮಾವತೀಂ ರಾಜ್ಞ್ಯಾ ಸಮಾನಾಯ್ಯ ಸಮಂ ತಯಾ ।
ತಂ ದತ್ತಪ್ರಾಭೃತಂ ದೂತಂ ಸ ಸಂಮಾನ್ಯ ವ್ಯಸರ್ಜಯತ್ ॥ ೧೬೪
ಅಥ ಚಂಡಮಹಾಸೇನದೂತೋಽಪ್ಯತ್ರ ಸಮಾಯಯೌ ।
ಪ್ರವಿಶ್ಯ ಸ ಯಥಾವಚ್ಚ ರಾಜಾನಂ ಪ್ರಣತೋಽಬ್ರವೀತ್ ॥ ೧೬೫
ದೇವ ಚಂಡಮಹಾಸೇನಭೂಪತಿಃ ಕಾರ್ಯತತ್ತ್ವವಿತ್ ।
ತವ ವಿಜ್ಞಾತವೃತ್ತಾಂತೋ ಹೃಷ್ಟಃ ಸಂದಿಷ್ಟವಾನಿದಮ್ ॥ ೧೬೬
ಪ್ರಾಶಸ್ತ್ಯಂ ಭವತಸ್ತಾವದಿಯತ್ಯೈವೋಪವರ್ಣಿತಮ್ ।
ಯೌಗಂಧರಾಯಣೋ ಯತ್ತೇ ಮಂತ್ರೀ ಕಿಮಧಿಕೋಕ್ತಿಭಿಃ ॥ ೧೬೭
ಧನ್ಯಾ ವಾಸವದತ್ತಾ ತು ತ್ವದ್ಭಕ್ತ್ಯಾ ತತ್ಕೃತಂ ತಯಾ ।
ಯೇನಾಸ್ಮಾಭಿಃ ಸತಾಂ ಮಧ್ಯೇ ಚಿರಮುನ್ನಮಿತಂ ಶಿರಃ ॥ ೧೬೮

೧೯. ನನಗೆ ಪದ್ಮಾವತಿಯು ವಾಸವದತ್ತೆಗಿಂತ ಬೇರೆ ಅಲ್ಲ. ಏಕೆಂದರೆ ಅವರಿಬ್ಬರಿಗೆ ಇರುವುದು ಒಂದೇ ಹೃದಯ. ಆದ್ದರಿಂದ ಪ್ರಯತ್ನವನ್ನು ಬೇಗ ಮಾಡಿರಿ."

೧೨೦. ತನ್ನ ಮಾವನ ದೂತನ ಈ ಮಾತನ್ನು ಕೇಳಿ ವತ್ಸೇಶ್ವರನ ಹೃದಯದಲ್ಲಿ ಕೂಡಲೇ ಹರ್ಷ ಉಕ್ಕಿತು. ರಾಣಿಯಲ್ಲಿ ಮಾತಿನಿಂದ ಹೇಳಲಾಗದ ಪ್ರೀತಿಯ ಹೊನಲು ಹರಿಯಿತು. ಮಂತ್ರಿಶ್ರೇಷ್ಠನಾದ ಯೌಗಂಧರಾಯಣನಲ್ಲೂ ಸ್ನೇಹದ ಬಂಧನವು ಮತ್ತೂ ಹೆಚ್ಚಾಗಿ ಬೆಳೆಯಿತು.

೧೨೧. ಆಮೇಲೆ ಆ ದೂತನಿಗೆ ಇಬ್ಬರು ರಾಣಿಯರೂ ಯೋಗ್ಯವಾದ ಸತ್ಕಾರಗಳಿಂದ ಆತಿಥ್ಯವನ್ನು ಮಾಡಿದರು. ಸಂತುಷ್ಟನಾದ ಆ ದೂತನನ್ನು ಕಳುಹಿಸಿಕೊಟ್ಟು ಮುಂದಿನ ಪ್ರಯತ್ನವನ್ನು ಮಾಡಲು ಅಪೇಕ್ಷಿಸಿ ವತ್ಸರಾಜನು ಬೇಗನೆ ಸಚಿವರೊಡನೆ ಮಂತ್ರಾಲೋಚನೆಯನ್ನು ಮಾಡಿ ಕೌಶಾಂಬಿಗೆ ಹೋಗಲು ನಿಶ್ಚಯ ಮಾಡಿದನು.

ಮಹಾಕವಿ ಸೋಮದೇವಭಟ್ಟನು ರಚಿಸಿದ
ಕಥಾಸರಿತ್ಸಾಗರದ ಲಾವಾಣಕಲಂಬಕದಲ್ಲಿ
ಮೂರನೆಯ ತರಂಗ ಮುಗಿಯಿತು.

---

ನ ಚ ವಾಸವದತ್ತಾತೋ ಭಿನ್ನಾ ಪದ್ಮಾವತೀ ಮಮ ।
ತಯೋರೇಕಂ ಹಿ ಹೃದಯಂ ತಚ್ಛೀಘ್ರಂ ಕುರುತೋದ್ಯಮಮ್ ॥ ೧೯
ಏತನ್ನಿಜಶ್ವಶುರದೂತವಚೋ ನಿಶಮ್ಯ
    ವತ್ಸೇಶ್ವರಸ್ಯ ಹೃದಯೇ ಸಪದಿ ಪ್ರಮೋದಃ ।
ದೇವ್ಯಾಂ ಚ ಕೋಽಪಿ ವವೃಧೇ ಪ್ರಣಯಪ್ರಕರ್ಷೋ
    ಭೂಯಾಂಶ್ಚ ಮಂತ್ರಿವೃಷಭೇ ಪ್ರಣಯಾನುಬಂಧಃ ॥ ೧೨೦
ತತಸ್ತಂ ದೇವೀಭ್ಯಾಂ ಸಮಮುಚಿತಸತ್ಕಾರವಿಧಿನಾ
    ಕೃತಾತಿಥ್ಯಂ ದೂತಂ ಸರಭಸಮನಾಃ ಪ್ರೇಷ್ಯ ಮುದಿತಮ್ ।
ವಿಧಾಸ್ಯನ್ನುದ್ಯೋಗಂ ತ್ವರಿತಮಥ ಸಂಮಂತ್ರ್ಯ ಸಚಿವೈಃ
    ಸ ಚಕ್ರೇ ಕೌಶಾಂಬೀಂ ಪ್ರತಿ ಗಮನಬುದ್ಧಿಂ ನರಪತಿಃ ॥ ೧೨೧

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ
ಕಥಾಸರಿತ್ಸಾಗರೇ ಲಾವಾಣಕಲಂಬಕೇ
ತೃತೀಯಸ್ತರಂಗಃ ।

# ನಾಲ್ಕನೆಯ ತರಂಗ

೧ ಅನಂತರ ಮಾರನೆಯ ದಿನ ವತ್ಸರಾಜನು ಲಾವಾಣಕದಿಂದ ಪತ್ನೀಸಮೇತನಾಗಿ ಸಚಿವರೊಡನೆ ಕೌಶಾಂಬಿಗೆ ಹೊರಟನು.

೨. ಅಕಾಲದಲ್ಲಿ ಉಕ್ಕಿದ ಕಡಲಿನ ತೆರೆಗಳಂತಿದ್ದ ಸೈನ್ಯಗಳು ಹೊಮ್ಮುತ್ತಿದ್ದ ಶಬ್ದಗಳಿಂದ ಭೂಮಂಡಲವನ್ನೆಲ್ಲ ತುಂಬಿಸುತ್ತ ಮುಂದೆ ಹೊರಟವು.

೩. ಸೂರ್ಯನು ಮೂಡಣ ಬೆಟ್ಟದೊಡನೆ ಆಕಾಶದಲ್ಲಿ ಪ್ರಯಾಣ ಮಾಡಿದರೆ, ಆನೆಯನ್ನೇರಿ ಹೋಗುತ್ತಿದ್ದ ಆ ರಾಜನಿಗೆ ಒಂದು ಹೋಲಿಕೆ ಸಿಕ್ಕಬಹುದು.

೪. ಸೂರ್ಯನ ಕಾಂತಿಯನ್ನು ಜಯಿಸಿದ್ದಕ್ಕಾಗಿ ಸಂತೋಷಪಟ್ಟು ಸೇವೆಮಾಡಲು ಬಂದಿದ್ದ ಚಂದ್ರನಿಂದ ಕೂಡಿರುವನೋ ಎಂಬಂತೆ ಬೆಳ್ಗೊಡೆಯ ನೆರಳಿನಲ್ಲಿದ್ದ ಆ ದೊರೆಯು ಶೋಭಿಸುತ್ತಿದ್ದನು.

೫. ತೇಜಸ್ವಿಯೂ ಎಲ್ಲರಿಗಿಂತ ಮೇಲೆ ಇರುವವನೂ ಆದ ವತ್ಸರಾಜನ ಸುತ್ತಲೂ ತಮ್ಮ ತಮ್ಮ ಸ್ಥಾನಗಳಲ್ಲಿ ನಿಂತ ಸಾಮಂತರು ಧ್ರುವನಕ್ಷತ್ರವನ್ನು ಗ್ರಹಗಳ ಗುಂಪುಗಳು ಸುತ್ತುವಂತೆ ಸುತ್ತುತ್ತಿದ್ದರು.

---

# ಚತುರ್ಥಸ್ತರಂಗಃ

ತತೋ ಲಾವಾಣಕಾತ್ ತಸ್ಮಾದನ್ಯೇದ್ಯುಃ ಸಚಿವೈಃ ಸಹ ।
ವತ್ಸರಾಜಃ ಸ ಕೌಶಾಂಬೀಂ ಪ್ರತಸ್ಥೇ ದಯಿತಾನ್ವಿತಃ ॥ ೧
ಪ್ರಸಸ್ರೇ ಚ ಲಸನ್ನಾದೈಸ್ತಸ್ಯಾಪೂರಿತಭೂತಲೈಃ ।
ಬಲೈರಸಮಯೋದ್ವೇಲಜಲರಾಶಿಜಲೈರಿವ ॥ ೨
ಉಪಮಾ ನೃಪತೇಸ್ತಸ್ಯ ಗಜೇಂದ್ರಸ್ಥಸ್ಯ ಗಚ್ಛತಃ ।
ಭವೇದ್‌ಯದಿ ರವಿರ್ಯಾಯಾದ್ ಗಗನೇ ಸೋದಯಾಚಲಃ ॥ ೩
ಸ ಸಿತೇನಾತಪತ್ರೇಣ ಕೃತಚ್ಛಾಯೋ ಬಭೌ ನೃಪಃ ।
ಜಿತಾರ್ಕತೇಜಃಪ್ರೀತೇನ ಸೇವ್ಯಮಾನ ಇವೇಂದುನಾ ॥ ೪
ತೇಜಸ್ವಿನಂ ಸ್ವಕಕ್ಷಾಭಿಸ್ತಂ ಸರ್ವೋರ್ಪರಿವರ್ತಿನಮ್ ।
ಸಾಮಂತಾಃ ಪರಿತೋ ಭ್ರೇಮುರ್ಧ್ರುವಂ ಗ್ರಹಗಣಾ ಇವ ॥ ೫

೬ ಅವನ ಹಿಂದೆ ಹೆಣ್ಣಾನೆಗಳ ಮೇಲೆ ಕುಳಿತಿದ್ದ ಅವನ ಇಬ್ಬರು ರಾಣಿಯರು ಪ್ರೀತಿಯಿಂದ ಅವನನ್ನು ಹಿಂಬಾಲಿಸಿದ ಶ್ರೀದೇವಿ–ಭೂದೇವಿಯರಂತೆ ಕಂಗೊಳಿಸುತ್ತಿದ್ದರು.

೭ ಚಲಿಸುತ್ತಿದ್ದ ಕುದುರೆಗಳ ಗುಂಪಿನ ಗೊರಸಿನ ಗುರುತುಗಳೆಂಬ ನಖಕ್ಷತವನ್ನು ಪಡೆದ ಭೂಮಿಯು ದಾರಿಯಲ್ಲಿ ಅವನಿಂದ ಉಪಭುಕ್ತಳಾದಂತೆ ಕಾಣಿಸುತ್ತಿತ್ತು.

೮ ಹೀಗೆ ಪಯಣಿಸುತ್ತಿದ್ದ ವತ್ಸರಾಜನನ್ನು ಹೊಗಳುಭಟರು ಸ್ತುತಿಸುತ್ತಿದ್ದರು. ಉತ್ಸವಗಳಿಂದ ವಿರಾಜಿಸುತ್ತಿದ್ದ ಕೌಶಾಂಬಿಯನ್ನು ಅವನು ಕೆಲವೇ ದಿನಗಳಲ್ಲಿ ತಲುಪಿದನು.

೯–೧೦. ಪ್ರವಾಸ ಮಾಡಿ ತನ್ನ ಒಡೆಯನು ಹಿಂದಿರುಗಿದಾಗ ಆ ನಗರಿಯು ಬಾವುಟಗಳ ಕೆಂಪುಬಟ್ಟೆಯಿಂದ ಆವೃತವಾಗಿ, ಗವಾಕ್ಷಗಳೆಂಬ ಕಣ್ಣುಗಳನ್ನು ಅರಳಿಸಿ, ಮಹಾದ್ವಾರದಲ್ಲಿ ತೋರಿಸಲ್ಪಟ್ಟ ಪೂರ್ಣಕುಂಭಗಳೆಂಬ ಕುಚದ್ವಯವನ್ನು ಹೊಂದಿ, ಜನಗಳ ಕೋಲಾಹಲವೆಂಬ ಸಂತೋಷದ ಮಾತುಗಳನ್ನಾಡಿ, ಬೆಳ್ಳಗಿನ ಸೌಧಗಳಿಂದ ನಗುವನ್ನು ತೋರಿಸಿ ಶೋಭಿಸುತ್ತಿತ್ತು.

೧೧ ಇಬ್ಬರು ರಾಣಿಯರೂ ಹಿಂಬಾಲಿಸುತ್ತಿರಲು ಆ ದೊರೆಯು ನಗರವನ್ನು ಪ್ರವೇಶಿಸಿದನು. ಅವನನ್ನು ನೋಡುವ ಪೌರಸ್ತ್ರೀಯರಿಗೆ ಅಲ್ಲಿ ಯಾವುದೋ ಹಬ್ಬ ಆದಂತಿತ್ತು.

---

ಪಶ್ಚಾತ್ಕರೇಣುಕಾರೂಢೇ ದೇವ್ಯೌ ದ್ವೇ ತಸ್ಯ ರೇಜತುಃ ।
ಶ್ರೀಭುವಾವನುರಾಗೇಣ ಸಾಕ್ಷಾದನುಗತೇ ಇವ ॥ ೬
ತ್ವಂಗತ್ತುರಂಗಸಂಘಾತಖುರಾಗ್ರಾಂಕನಖಕ್ಷತಾ ।
ಪಥಿ ತಸ್ಯಾಭವದ್ ಭೂಮಿರುಪಭುಕ್ತೇವ ಭೂಪತೇಃ ॥ ೭
ಏವಂ ವತ್ಸೇಶ್ವರೋ ಗಚ್ಛನ್ ಸ್ತೂಯಮಾನಃ ಸ ಬಂದಿಭಿಃ ।
ದಿನೈಃ ಕತಿಪಯೈಃ ಪ್ರಾಪ ಕೌಶಾಂಬೀಂ ವಿತತೋತ್ಸವಾಮ್ ॥ ೮
ಧ್ವಜರಕ್ತಾಂಶುಕಚ್ಛನ್ನಾ ಗವಾಕ್ಷೋತ್ಫುಲ್ಲಲೋಚನಾ ।
ಪ್ರದ್ವಾರದರ್ಶಿತೋತ್ತುಂಗಪೂರ್ಣಕುಂಭಕುಚದ್ವಯಾ ॥ ೯
ಜನಕೋಲಾಹಲಾನಂದಸಂಲಾಪಾ ಸೌಧಹಾಸಿನೀ ।
ಸಾ ಪ್ರವಾಸಾಗತೇ ಪತ್ಯೌ ತತ್ಕಾಲಂ ಶುಶುಭೇ ಪುರೀ ॥ ೧೦
ದೇವೀದ್ವಯಾನುಯಾತಶ್ಚ ಸ ರಾಜಾ ಪ್ರವಿವೇಶ ತಾಮ್ ।
ಪೌರಸ್ತ್ರೀಣಾಂ ಚ ಕೋಽಪ್ಯಾಸೀತ್ತತ್ರ ತದ್ದರ್ಶನೋತ್ಸವಃ ॥ ೧೧

೧೨. ರಾಣಿಯರ ಮುಖಗಳಿಗೆ ಸೋತ ಚಂದ್ರನ ಸೈನ್ಯಗಳು ಅವರ ಸೇವೆಯನ್ನು ಮಾಡಲು ಬಂದಿವೆಯೋ ಎಂಬಂತೆ ಇದ್ದ, ಸುಂದರವಾದ ಭವನಗಳಲ್ಲಿದ್ದ ಹೆಂಗಸರ ನೂರಾರು ಮುಖಗಳಿಂದ ಅಲ್ಲಿ ಆಕಾಶವು ತುಂಬಿಹೋಗಿತ್ತು.

೧೩. ಕಿಟಕಿಗಳಲ್ಲಿ ನಿಂತು ರೆಪ್ಪೆ ಮಿಟುಕಿಸದೆ ನೋಡುತ್ತಿದ್ದ ಬೇರೆ ಹೆಂಗಸರು ಕುತೂಹಲದಿಂದ ಬಂದು ವಿಮಾನಗಳಲ್ಲಿ ಕುಳಿತಿರುವ ಅಪ್ಸರೆಯರೋ ಎಂಬ ಭ್ರಾಂತಿಯನ್ನು ಹುಟ್ಟಿಸುತ್ತಿದ್ದರು.

೧೪. ಕೆಲವರು ಸ್ತ್ರೀಯರು ಗವಾಕ್ಷಗಳ ಬಲೆಯಲ್ಲಿ ಚೆಲುವಾದ ರೆಪ್ಪೆಗಳಿದ್ದ ಕಣ್ಣುಗಳನ್ನು ನೆಟ್ಟು ಮನ್ಮಥನ ಬಾಣಗಳ ಪಂಜರವನ್ನು ಸೃಷ್ಟಿಸುತ್ತಿರುವಂತಿತ್ತು.

೧೫. ಒಬ್ಬಳ ಔತ್ಸುಕ್ಯದಿಂದ ಕೂಡಿದ ದೃಷ್ಟಿಯು ರಾಜನನ್ನು ನೋಡಿದಾಗ ಅರಳಿತು. ರಾಜನನ್ನು ನೋಡದೆ ಇದ್ದ ಕಿವಿಗೆ ಅದನ್ನು ಹೇಳಲೋ ಎಂಬಂತೆ ಪಕ್ಕದವರೆಗೂ ಅದು ಹೋಯಿತು.

೧೬. ಬೇಗಬೇಗನೆ ಬಂದ ಒಬ್ಬಳ ಸ್ತನಗಳು ಮತ್ತೆ ಮತ್ತೆ ಏಳುತ್ತಿದ್ದು ಆ ರಾಜನನ್ನು ನೋಡುವ ಅಪೇಕ್ಷೆಯಿಂದ ಅವಳ ಕುಪ್ಪಸದಿಂದ ಹೊರಗೆ ಬರಲು ತವಕ ಪಡುತ್ತಿರುವಂತೆ ಕಾಣುತ್ತಿತ್ತು.

೧೭. ಇನ್ನೊಬ್ಬಳ ಹಾರವು ಸಂಭ್ರಮದಿಂದ ಹರಿದುಹೋದಾಗ ಅದರ ಮುತ್ತುಗಳು ಜಾರಿಬೀಳುತ್ತಿರುವ ಹೃದಯದ ಆನಂದಬಾಷ್ಪಗಳ ಹನಿಗಳಂತೆ ಹೊಳೆದುವು.

---

ಅಪೂರಿ ಹಾರಿಹರ್ಮ್ಯಸ್ಥರಾಮಾನನಶತೈರ್ನಭಃ ।
ದೇವೀಮುಖಜಿತಸ್ಯೇಂದೋಃ ಸೈನ್ಯೈಃ ಸೇವಾಗತೈರಿವ ॥ ೧೨
ವಾತಾಯನಗತಾಶ್ಚಾನ್ಯಾಃ ಪಶ್ಯಂತ್ಯೋಽನಿಮಿಷೇಕ್ಷಣಾಃ ।
ಚಕ್ರುಃ ಸಕೌತುಕಾಯಾತವಿಮಾನಸ್ಥಾಪ್ಸರೋಭ್ರಮಮ್ ॥ ೧೩
ಕಾಶ್ಚಿದ್ ಗವಾಕ್ಷಜಾಲಾಗ್ರಲಗ್ನಪಕ್ಷ್ಮಲಲೋಚನಾಃ ।
ಅಸೃಜನ್ನಿವ ನಾರಾಚಪಂಜರಾಣಿ ಮನೋಭುವಃ ॥ ೧೪
ಏಕಸ್ಯಾಃ ಸೋತ್ಸುಕಾ ದೃಷ್ಟಿರ್ನೃಪಾಲೋಕವಿಕಸ್ವರಾ ।
ಶ್ರುತೇಃ ಪಾರ್ಶ್ವಮಪಶ್ಯಂತ್ಯಾಸ್ತದಾಖ್ಯಾತುಮಿವಾಯಯೌ ॥ ೧೫
ದ್ರುತಾಗತಾಯಾಃ ಕಸ್ಯಾಶ್ಚಿನ್ಮುಹುರುಚ್ಛ್ವಸಿತೌ ಸ್ತನೌ ।
ಕಂಚುಕಾದಿವ ನಿರ್ಗಂತುಮೀಷತುಸ್ತದ್‌ದಿದೃಕ್ಷಯಾ ॥ ೧೬
ಅನ್ಯಸ್ಯಾಃ ಸಂಭ್ರಮಚ್ಛಿನ್ನಹಾರಮುಕ್ತಾಕಣಾ ಬಭುಃ ।
ಗಲಂತೋ ಹೃದಯಸ್ಯೇವ ಹರ್ಷಬಾಷ್ಪಾಂಬುಶೀಕರಾಃ ॥ ೧೭

೧೮. "ಈ ವಾಸವದತ್ತೆಗೆ ಅಗ್ನಿಯು ಲಾವಾಣಕದಲ್ಲಿ ಕೆಡುಕನ್ನು ಮಾಡಿದವನಾದರೆ ಅವನು ಪ್ರಕಾಶವುಳ್ಳವನಾದರೂ ಈ ಜಗತ್ತಿನಲ್ಲಿ ಕುರುಡುಕತ್ತಲೆಯನ್ನೇ ಉಂಟುಮಾಡಿಯಾನು.'

೧೯. ಎಂದು ವಾಸವದತ್ತೆಯನ್ನು ನೋಡಿ ಆ ಬೆಂಕಿಯ ಸುಡುವಿಕೆಯನ್ನೂ ನೆನಪಿಸಿಕೊಂಡು ಉತ್ಕಂಠಿತರಾದಂತೆ ಕೆಲವರು ಮಾತನಾಡಿಕೊಂಡರು.

೨೦. "ಸಖಿಯಂತೆ ಇರುವ ಸವತಿಯಿಂದ ದೇವಿ ವಾಸವದತ್ತೆಯು ಸುದೈವದಿಂದ ನಾಚಿಕೆಪಡುತ್ತಿಲ್ಲ' ಎಂದು ಪದ್ಮಾವತಿಯನ್ನು ನೋಡಿ ತನ್ನ ಗೆಳತಿಗೆ ಬೇರೊಬ್ಬಳು ಹೇಳಿದಳು.

೨೧–೨೨. "ಶಿವನೂ ವಿಷ್ಣುವೂ ಇವರಿಬ್ಬರ ರೂಪವನ್ನು ಖಂಡಿತವಾಗಿ ಕಂಡಿರಲಿಲ್ಲ. ಇಲ್ಲವಾದರೆ ಉಮೆಯೂ ಲಕ್ಷ್ಮಿಯೂ ಅವರ ಆದರವನ್ನು ಪಡೆಯುತ್ತಿದ್ದರೆ ?' ಎಂದು ಆ ಇಬ್ಬರು ರಾಣಿಯರನ್ನು ನೋಡಿದ ಬೇರೆ ಸ್ತ್ರೀಯರು ಸಂತೋಷದಿಂದ ಅರಳಿದ ಕಣ್ನೈದಿಲೆಗಳ ಹಾರಗಳನ್ನು ಎಸೆಯುತ್ತಾ ಒಬ್ಬರಿಗೊಬ್ಬರು ಹೇಳಿಕೊಂಡರು.

೨೩. ಹೀಗೆ ವತ್ಸರಾಜನು ಜನರ ಕಣ್ಣುಗಳಿಗೆ ಹಬ್ಬವನ್ನು ಉಂಟು ಮಾಡುತ್ತಾ ದೇವಿಯರೊಡನೆ ಮಂಗಳವನ್ನು ಆಚರಿಸಿ ತನ್ನ ಸೌಧದೊಳಕ್ಕೆ ಪ್ರವೇಶಿಸಿದನು.

---

ಯದ್ಯಸ್ಯಾಮಾಚರೇತ್ ಪಾಪಮಗ್ನಿರ್ಲಾವಾಣಕೇ ತತಃ ।
ಪ್ರಕಾಶಕೋಽಪ್ಯಸಾವಂಧಂ ತಮೋ ಜಗತಿ ಪಾತಯೇತ್ ॥ ೧೮
ಇತಿ ವಾಸವದತ್ತಾಂ ಚ ದೃಷ್ಟ್ವಾ ಸ್ಮೃತ್ವಾ ಚ ತತ್ತಥಾ ।
ದಾಹಪ್ರವಾದಂ ಸೋತ್ಕಂಠಾ ಇವ ಕಾಶ್ಚಿದ್ ಬಭಾಷಿರೇ ॥ ೧೯
ದಿಷ್ಟ್ಯಾ ನ ಲಜ್ಜಿತಾ ದೇವೀ ಸಪತ್ನ್ಯಾ ಸಖಿತುಲ್ಯಯಾ ।
ಇತಿ ಪದ್ಮಾವತೀಂ ವೀಕ್ಷ್ಯ ವಯಸ್ಯಾ ಜಗದೇಽನ್ಯಯಾ ॥ ೨೦
ನೂನಂ ಹರಮುರಾರಿಭ್ಯಾಂ ನ ದೃಷ್ಟಂ ರೂಪಮೇತಯೋಃ ।
ಕಿಮನ್ಯಥಾ ಭಜೇತಾಂ ತೌ ಬಹುಮಾನಮುಮಾಶ್ರಿಯೌ ॥ ೨೧
ಇತ್ಯೂಚುರಪರಾಸ್ತೇ ದ್ವೇ ದೃಷ್ಟ್ವಾ ದೇವ್ಯೌ ಪರಸ್ಪರಮ್ ।
ಕ್ಷಿಪಂತ್ಯಃ ಪ್ರಮದೋತ್ಫುಲ್ಲಲೋಚನೇಂದೀವರಸ್ರಜಃ ॥ ೨೨
ಏವಂ ವತ್ಸೇಶ್ವರಃ ಕುರ್ವನ್ ಜನತಾನಯನೋತ್ಸವಮ್ ।
ಸ್ವಮಂದಿರಂ ಸದೇವೀಕಃ ಪ್ರಾವಿಶತ್ ಕೃತಮಂಗಲಃ ॥ ೨೩

೨೪. ಬೆಳಗಿನಲ್ಲಿ ಕಮಲಸರೋವರದ ಸೌಂದರ್ಯವೂ ಚಂದ್ರನು ಹುಟ್ಟಿದಾಗ ಕಡಲಿಗೆ ಉಂಟಾಗುವ ಸೌಂದರ್ಯವೂ ಆ ಸಮಯದಲ್ಲಿ ರಾಜನ ಅರಮನೆಗೆ ಒಟ್ಟಿಗೆ ಉಂಟಾಯಿತು.

೨೫. ಸಮಸ್ತ ರಾಜರ ಕಾಣಿಕೆಗಳೂ ಬರುತ್ತಿವೆ ಎಂಬುದನ್ನು ಸೂಚಿಸುತ್ತಿವೆಯೋ ಎಂಬಂತೆ ಸಾಮಂತರಾಜರು ನೀಡಿದ ಉಪಹಾರಗಳಿಂದ ಒಂದು ಕ್ಷಣದಲ್ಲೇ ಅರಮನೆ ತುಂಬಿ ಹೋಯಿತು.

೨೬. ವತ್ಸರಾಜನು ಉತ್ಸವವನ್ನಾಚರಿಸಿ ರಾಜರ ಸಮೂಹವನ್ನು ಸಮ್ಮಾನಿಸಿ ಎಲ್ಲ ಜನರ ಮನಸ್ಸನ್ನೂ ಪ್ರವೇಶಿಸಿಸುವಂತೆ ಅಂತಃಪುರವನ್ನು ಒಳಹೊಕ್ಕನು.

೨೭. ರತಿ ಮತ್ತು ಪ್ರೀತಿಯರ ಮಧ್ಯದಲ್ಲಿ ನಿಂತುಕೊಂಡ ಮನ್ಮಥನಂತೆ ಇಬ್ಬರು ರಾಣಿಯರ ನಡುವೆ ನಿಂತ ವತ್ಸರಾಜನು ದಿನದ ಉಳಿದ ಭಾಗವನ್ನು ಪಾನವೇ ಮುಂತಾದ ವಿನೋದಗಳಿಂದ ಕಳೆದನು.

೨೮. ಒಂದಾನೊಂದು ದಿನ ರಾಜನು ಆಸ್ಥಾನದಲ್ಲಿ ಮಂತ್ರಿಗಳೊಡನೆ ಇದ್ದಾಗ ಯಾವನೋ ಬ್ರಾಹ್ಮಣನು ಬಾಗಿಲಲ್ಲಿ ಜೋರಾಗಿ ಕೂಗಿಕೊಂಡನು.

೨೯. "ಪ್ರಭು, ಅನ್ಯಾಯ ನಡೆಯುತ್ತಿದೆ. ಅಡವಿಯಲ್ಲಿ (ಹಸುಮೇಯಿಸುವ) ಪಾಪಿ ಗೋಪಾಲಕರು ಯಾವ ಕಾರಣವೂ ಇಲ್ಲದೆ ನನ್ನ ಮಗನ ಕಾಲುಗಳನ್ನು ಕತ್ತರಿಸಿ ಹಾಕಿದ್ದಾರೆ"

---

ಪ್ರಭಾತೇ ಯಾಬ್ಜಸರಸೋ ಯಾಬ್ಧೇರಿಂದೂದಯೇ ತಥಾ ।
ತತ್ಕಾಲಂ ತಸ್ಯ ಸಾ ಕಾಪಿ ಶೋಭಾಭೂದ್ ರಾಜವೇಶ್ಮನಃ ॥ ೨೪
ಕ್ಷಣಾದಪೂರಿ ಸಾಮಂತಮಂಗಲೋಪಾಯನೈಶ್ಚ ತತ್ ।
ಸೂಚಯದ್ಭಿರಿವಾಶೇಷಭೂಪಾಲೋಪಾಯನಾಗಮಮ್ ॥ ೨೫
ಸಂಮಾನ್ಯ ರಾಜಲೋಕಂ ಚ ವತ್ಸರಾಜಃ ಕೃತೋತ್ಸವಃ ।
ಚಿತ್ತಂ ಸರ್ವಜನಸ್ಯೇವ ವಿವೇಶಾಂತಃಪುರಂ ತತಃ ॥ ೨೬
ದೇವ್ಯೋರ್ಮಧ್ಯಸ್ಥಿತಸ್ತತ್ರ ರತಿಪ್ರೀತ್ಯೋರಿವ ಸ್ಮರಃ ।
ಪಾನಾದಿಲೀಲಯಾ ರಾಜಾ ದಿನಶೇಷಂ ನಿನಾಯ ಸಃ ॥ ೨೭
ಅಪರೇದ್ಯುಶ್ಚ ತಸ್ಯೈಕೋ ನೃಪಸ್ಯಾಸ್ಥಾನವರ್ತಿನಃ ।
ಮಂತ್ರಿಣಾಂ ಸಂನಿಧೌ ವಿಪ್ರೋ ದ್ವಾರಿ ಚಕ್ರಂದ ಕಶ್ಚನ ॥ ೨೮
ಅಬ್ರಹ್ಮಣ್ಯಮಟವ್ಯಾಂ ಮೇ ಪಾಪೈರ್ಗೋಪಾಲಕೈಃ ಪ್ರಭೋ ।
ಪುತ್ರಸ್ಯ ಚರಣೋಚ್ಛೇದೋ ವಿಹಿತಃ ಕಾರಣಂ ವಿನಾ ॥ ೨೯

೩೦. ಅದನ್ನು ಕೇಳಿ ಆ ಕ್ಷಣದಲ್ಲೇ ಇಬ್ಬರುಮೂವರು ಗೋಪಾಲಕರನ್ನು ಹಿಡಿದುತರಿಸಿ ರಾಜನು ಅವರನ್ನು ವಿಚಾರಿಸಿದನು; ಅವರೂ ಹೀಗೆಂದರು.

೩೧. "ಸ್ವಾಮಿ, ಗೋಪಾಲಕರಾದ ನಾವು ನಿರ್ಜನವಾದ ಪ್ರದೇಶಗಳಲ್ಲಿ ಆಟ ಆಡುತ್ತೇವೆ. ನಮ್ಮ ಮಧ್ಯದಲ್ಲಿ ದೇವಸೇನ ಎಂಬ ಹೆಸರಿನ ಒಬ್ಬ ಗೋಪಾಲಕನಿದ್ದಾನೆ.

೩೨. ಅಡವಿಯ ಒಂದು ಭಾಗದಲ್ಲಿ ಕಲ್ಲಿನ ಆಸನದಲ್ಲಿ ಕುಳಿತುಕೊಂಡು 'ನಾನು ನಿಮ್ಮ ರಾಜ' ಎಂದು ಅವನು ಹೇಳುತ್ತಾನೆ, ಆಜ್ಞೆಯನ್ನೂ ಮಾಡುತ್ತಾನೆ.

೩೩ ನಮ್ಮ ಮಧ್ಯದಲ್ಲಿ ಯಾರೂ ಅವನ ಆಜ್ಞೆಯನ್ನು ಮೀರುವುದಿಲ್ಲ. ಹೀಗೆ ಆ ಗೋಪಾಲಕನು ಅರಣ್ಯದಲ್ಲೇ ರಾಜ್ಯವನ್ನು ನಡೆಸುತ್ತಿದ್ದಾನೆ, ಪ್ರಭು.

೩೪. ಇಂದು ಈ ಬ್ರಾಹ್ಮಣನ ಮಗನು ಆ ದಾರಿಯಲ್ಲಿ ಹೋಗುತ್ತಿರುವಾಗ ಆ ಗೋಪಾಲರಾಜನಿಗೆ ನಮಸ್ಕಾರವನ್ನು ಮಾಡಲಿಲ್ಲ.

೩೫ ನಮಸ್ಕಾರ ಮಾಡದೆ ಮುಂದೆ ಹೋಗಬೇಡ ಎಂದು ನಾವು ರಾಜಾದೇಶದಂತೆ ಹೇಳುತ್ತಿದ್ದರೂ ಆದೇಶಿಸುತ್ತಿದ್ದ ನಮ್ಮನ್ನು ತಳ್ಳಿ ನಗುತ್ತಾ ಆ ವಟು ಹೊರಟನು.

೩೬ ಹೀಗೆ ಅವಿಧೇಯನಾಗಿದ್ದ ಆ ವಟುವಿನ ಕಾಲನ್ನು ಕತ್ತರಿಸಿ ಶಿಕ್ಷೆಯನ್ನು ನೀಡಲು ಗೋಪಾಲರಾಜನು ನಮಗೆ ಆಜ್ಞಾಪಿಸಿದನು.

---

ತಚ್ಛ್ರುತ್ವಾ ತತ್ಕ್ಷಣಂ ದ್ವಿತ್ರಾನ್ ವಷ್ಟಬ್ಧ್ಯಾನಾಯ್ಯ ಭೂಪತಿಃ ।
ಗೋಪಾಲಕಾನ್ ಸ ಪಪ್ರಚ್ಛ ತತಸ್ತೇಽಪ್ಯೇವಮಬ್ರುವನ್ ॥ ೩೦
ದೇವ ಗೋಪಾಲಕಾ ಭೂತ್ವಾ ಕ್ರೀಡಾಮೋ ವಿಜನೇ ವಯಮ್ ।
ತತ್ರೈಕೋ ದೇವಸೇನಾಖ್ಯೋ ಮಧ್ಯೇ ಗೋಪಾಲಕೋಽಸ್ತಿ ನಃ ॥ ೩೧
ಏಕದೇಶೇ ಚ ಸೋಽಟವ್ಯಾಮುಪವಿಷ್ಟ ಶಿಲಾಸನೇ ।
ರಾಜಾ ಯುಷ್ಮಾಕಮಸ್ಮೀತಿ ವಕ್ತ್ಯಸ್ಮಾನನುಶಾಸ್ತಿ ಚ ॥ ೩೨
ಅಸ್ಮನ್ಮಧ್ಯೇ ಚ ಕೇನಾಪಿ ತಸ್ಯಾಜ್ಞಾ ನ ವಿಲಂಘ್ಯತೇ ।
ಏವಂ ಗೋಪಾಲಕೋಽರಣ್ಯೇ ರಾಜ್ಯಂ ಸ ಕುರುತೇ ಪ್ರಭೋ ॥ ೩೩
ಅದ್ಯ ಚೈತಸ್ಯ ವಿಪ್ರಸ್ಯ ತನಯಸ್ತೇನ ವರ್ತ್ಮನಾ ।
ಗಚ್ಛನ್ ಗೋಪಾಲರಾಜಸ್ಯ ಪ್ರಣಾಮಂ ತಸ್ಯ ನಾಕರೋತ್ ॥ ೩೪
ಮಾ ಗಾಸ್ತ್ವಮಪ್ರಣಮ್ಯೇತಿ ರಾಜಾದೇಶೇನ ಜಲ್ಪತಃ ।
ಅಸ್ಮಾನ್ ವಿಧೂಯ ಸೋಽಯಾಸೀಚ್ಚಾಸಿತೋಽಪಿ ಹಸನ್ ವಟುಃ ॥ ೩೫
ತತಸ್ತಸ್ಯಾವಿನೀತಸ್ಯ ಪಾದಚ್ಛೇದೇನ ನಿಗ್ರಹಮ್ ।
ಕರ್ತುಂ ಗೋಪಾಲರಾಜೇನ ವಯಮಾಜ್ಞಾಪಿತಾ ವಟೋಃ ॥ ೩೬

೩೭. ಆಗ ನಾವು ಓಡಿಹೋಗಿ ಅವನ ಕಾಲನ್ನು ಕತ್ತರಿಸಿಹಾಕಿದೆವು. ನಮ್ಮಂಥ ಯಾವನು ಪ್ರಭುವಿನ ಆಜ್ಞೆಯನ್ನು ಉಲ್ಲಂಘಿಸಲು ಶಕ್ತನು ?"

೩೮. ಹೀಗೆ ಗೋಪಾಲಕರು ರಾಜನಿಗೆ ಬಿನ್ನವಿಸಲು ಅದನ್ನು ವಿಮರ್ಶಿಸಿ ಧೀಮಂತ ಯೌಗಂಧರಾಯಣನು ಏಕಾಂತದಲ್ಲಿ ರಾಜನಿಗೆ ಹೇಳಿದನು.

೩೯. "ನಿಶ್ಚಿತವಾಗಿ ಆ ಜಾಗದಲ್ಲಿ ನಿಧಿ ಇತ್ಯಾದಿಗಳು ಇದ್ದಿರಬೇಕು. ಅದರ ಪ್ರಭಾವದಿಂದಲೇ ಆ ಗೋಪಾಲಕನು ಅಷ್ಟು ಶಕ್ತಿಶಾಲಿಯಾಗಿದ್ದಾನೆ. ಆದ್ದರಿಂದ ಅಲ್ಲಿಗೆ ಹೋಗೋಣ."

೪೦. ಹೀಗೆ ಮಂತ್ರಿ ಹೇಳಿದಾಗ ರಾಜನು ಆ ಗೋಪಾಲಕರನ್ನೇ ಮುಂದಿಟ್ಟುಕೊಂಡು ಸಕಲಪರಿವಾರದೊಡನೆ ಸೈನ್ಯಸಮೇತನಾಗಿ ಆ ಅಡವಿಯ ಸ್ಥಾನಕ್ಕೆ ಹೋದನು.

೪೧. ಅಲ್ಲಿನ ಭೂಮಿಯನ್ನು ಪರೀಕ್ಷಿಸಿ ಕೆಲಸಗಾರರು ನೆಲವನ್ನು ಅಗೆದಾಗ ಕೆಳಗಿನಿಂದ ಕಲ್ಲಿನ ದೇಹದ ಯಕ್ಷನೊಬ್ಬನು ಎದ್ದುನಿಂತನು.

೪೨. "ರಾಜನ್, ಯಾವ ಒಂದು ನಿಧಿಯನ್ನು ನಾನು ದೀರ್ಘಕಾಲದಿಂದ ರಕ್ಷಿಸಿಕೊಂಡಿದ್ದೆನೋ ಅದು ನಿನ್ನ ತಾತನು ಹೂಳಿಟ್ಟಿದ್ದ ನಿಧಿ. ಅದನ್ನು ನೀನು ಸ್ವೀಕರಿಸು" ಎಂದು ಅವನು ಹೇಳಿದನು.

---

ಧಾವಿತ್ವಾ ಚ ತತೋಽಸ್ಮಾಭಿಶ್ಛಿನ್ನೋಽಸ್ಯ ಚರಣಃ ಪ್ರಭೋ ।
ಅಸ್ಮಾದೃಶಃ ಪ್ರಭೋರಾಜ್ಞಾಂ ಕೋಽತಿಲಂಘಯಿತುಂ ಕ್ಷಮಃ ? ॥ ೩೭
ಏವಂ ಗೋಪಾಲಕೈ ರಾಜ್ಞಿ ವಿಜ್ಞಪ್ತೇ ಸಂಪ್ರಧಾರ್ಯ ತತ್ ।
ಯೌಗಂಧರಾಯಣೋ ಧೀಮಾನ್ ರಾಜಾನಂ ವಿಜನೇಽಬ್ರವೀತ್ ॥ ೩೮
ನೂನಂ ನಿಧಾನಾದಿಯುತಂ ತತ್ಸ್ಥಾನಂ ಯತ್ಪ್ರಭಾವತಃ ।
ಗೋಪಾಲಕೋಽಪಿ ಪ್ರಭುವತ್ಯೇವಂ ತತ್ತ್ರ ಗಮ್ಯತಾಮ್ ॥ ೩೯
ಇತ್ಯುಕ್ತೋ ಮಂತ್ರಿಣಾ ರಾಜಾ ಕೃತ್ವಾ ಗೋಪಾಲಕಾನ್ ಪುರಃ ।
ಯಯೌ ತದಟವೀಸ್ಥಾನಂ ಸಸೈನ್ಯಃ ಸಪರಿಚ್ಛದಃ ॥ ೪೦
ಪರೀಕ್ಷ್ಯ ಭೂಮಿಂ ಯಾವಚ್ಚ ಖನ್ಯತೇ ತತ್ರ ಕರ್ಮಿಭಿಃ ।
ಅಧಸ್ತಾತ್ ತಾವದುತ್ತಸ್ಥೌ ಯಕ್ಷಃ ಶೈಲಮಯಾಕೃತಿಃ ॥ ೪೧
ಸೋಽಬ್ರವೀಚ್ಚ ಮಯಾ ರಾಜನ್ನಿದಂ ಯದ್ರಕ್ಷಿತಂ ಚಿರಮ್ ।
ಪಿತಾಮಹನಿಖಾತಂ ತೇ ನಿಧಾನಂ ಸ್ವೀಕುರುಷ್ವ ತತ್ ॥ ೪೨

೪೩. ಇಷ್ಟನ್ನು ವತ್ಸರಾಜನಿಗೆ ಹೇಳಿ ಅವನು ಮಾಡಿದ ಸತ್ಕಾರವನ್ನು ಸ್ವೀಕರಿಸಿ ಯಕ್ಷನು ಅದೃಶ್ಯನಾದನು. ಅನಂತರ ಅಗೆದಾಗ ಅಲ್ಲಿ ದೊಡ್ಡ ನಿಧಿಯು ಕಾಣಿಸಿತು.

೪೪. ಅಲ್ಲಿ ಬಹುಬೆಲೆ ಬಾಳುವ ರತ್ನಸಿಂಹಾಸನವೂ ಸಿಕ್ಕಿತು. ಅಭ್ಯುದಯದ ಕಾಲದಲ್ಲಿ ಒಳ್ಳೆಯ ಶುಭಪರಂಪರೆಗಳು ಉಂಟಾಗುವುವು.

೪೫. ಆ ಸಮಸ್ತ ನಿಧಿಯನ್ನೂ ತೆಗೆದುಕೊಂಡು, ಉತ್ಸವವನ್ನು ಆಚರಿಸಿ, ಆ ಗೋಪಾಲಕರನ್ನು ಹತೋಟಿಗೆ ತಂದು ವತ್ಸರಾಜನು ತನ್ನ ನಗರಕ್ಕೆ ಹಿಂದಿರುಗಿದನು.

೪೬. ಆ ಸಿಂಹಾಸನವು ಕೆಂಪು ರತ್ನಗಳ ಕಿರಣಗಳು ಹರಡಿ ಪ್ರಭು ಉದಯನನು ಮುಂದೆ ಎಲ್ಲ ದಿಕ್ಕುಗಳಲ್ಲಿ ತನ್ನ ಪ್ರತಾಪದಿಂದ (ದೇಶಗಳನ್ನು) ಆಕ್ರಮಿಸಿಕೊಳ್ಳುವನೆಂದು ಸೂಚಿಸುತ್ತಿರುವಂತಿತ್ತು.

೪೭. ಮೊಳಕೆಗಳಂತಿದ್ದ ಬೆಳ್ಳಿಯ ಕಡ್ಡಿಗಳಿಗೆ ಪೋಣಿಸಿದ್ದ ಮುತ್ತುಗಳ ಸಮೂಹದಿಂದ ಉಬ್ಬಿದ್ದ ಸಿಂಹಾಸನವು ಪ್ರಭುವಿನ ಮಂತ್ರಿಗಳ ಬುದ್ಧಿಯ ಆಶ್ಚರ್ಯಕಾರಕ ಕಾರ್ಯಗಳನ್ನು ನೋಡಿ ಪುನಃಪುನಃ ನಗುತ್ತಿರುವಂತಿತ್ತು.

೪೮. ರಾಜನು ತಂದ ಆ ಚಿನ್ನದ ಸಿಂಹಾಸನವನ್ನು ಪ್ರಜೆಗಳು ನೋಡಿದರು ಮತ್ತು ಆಗ ಮೊಳಗಿಸಿದ ಆನಂದದುಂದುಭಿಯ ಶಬ್ದದಿಂದ ಇನ್ನೂ ಚಂದವಾಗಿ ಕಾಣಿಸಿದ (ಅದನ್ನು ನೋಡಿ) ಆನಂದಿಸಿದರು.

---

ಇತಿ ವತ್ಸೇಶಮುಕ್ತ್ವಾ ಚ ತತ್ಪೂಜಾಂ ಪ್ರತಿಗೃಹ್ಯ ಚ ।
ಯಕ್ಷಸ್ತಿರೋಽಭೂತ್ ಖಾತೇ ಚ ಮಹಾನಾವಿರಭೂನ್ನಿಧಿಃ ॥ ೪೩
ಅಲಭ್ಯತ ಮಹಾರ್ಹಂ ಚ ರತ್ನಸಿಂಹಾಸನಂ ತತಃ ।
ಭವಂತ್ಯುದಯಕಾಲೇ ಹಿ ಸತ್ಕಲ್ಯಾಣಪರಂಪರಾಃ ॥ ೪೪
ತತಃ ಕೃತ್ಸ್ನಂ ಸಮಾದಾಯ ನಿಧಾನಂ ಸ ಕೃತೋತ್ಸವಃ ।
ತಾನ್ ಪ್ರಶಾಸ್ಯ ಚ ಗೋಪಾಲಾನ್ ವತ್ಸೇಶಃ ಸ್ವಪುರೀಂ ಯಯೌ ॥ ೪೫
ತತ್ರಾರುಣಮಣಿಗ್ರಾವಕಿರಣಪ್ರಸರೈಃ ಪ್ರಭೋಃ ।
ಪ್ರತಾಪಾಕ್ರಮಣಂ ದಿಕ್ಷು ಭವಿಷ್ಯದಿವ ದರ್ಶಯನ್ ॥ ೪೬
ರೌಪ್ಯಾಂಕುರಮುಖಪ್ರೋತಮುಕ್ತಾಸಂತತಿದಂತುರಮ್ ।
ಮುಹುರ್ಹಾಸಮಿವಾಲೋಚ್ಯ ತನ್ಮಂತ್ರಿಮತಿವಿಸ್ಮಯಮ್ ॥ ೪೭
ದದೃಶುಸ್ತನ್ನೃಪಾನೀತಂ ಹೇಮಸಿಂಹಾಸನಂ ಜನಾಃ ।
ನನಂದುಶ್ಚ ಹತಾನಂದದುಂದುಭಿಧ್ವಾನಸುಂದರಮ್ ॥ ೪೮

೪೯. ರಾಜನ ವಿಜಯವನ್ನು ನಿಶ್ಚಯವಾಗಿ ಊಹಿಸಿ ಮಂತ್ರಿಗಳೂ ಉತ್ಸವವನ್ನು ಆಚರಿಸಿದರು. ಆರಂಭದಲ್ಲಿ ತಾನಾಗಿ ಬಂದ ಶುಭವು ಕಾರ್ಯದ ಸಾಫಲ್ಯವನ್ನು ಸೂಚಿಸುವುದಲ್ಲವೆ ?

೫೦. ಆಮೇಲೆ ಬಾವುಟಗಳೆಂಬ ಮಿಂಚುಗಳು ಆಕಾಶವನ್ನೆಲ್ಲ ವ್ಯಾಪಿಸಲು ರಾಜನೆಂಬ ಮೋಡವು ತನ್ನನ್ನು ಅವಲಂಬಿಸಿದ್ದ ಪ್ರಜೆಗಳಿಗೆ ಹೊನ್ನಿನ ಮಳೆಯನ್ನು ಸುರಿಸಿತು.

೫೧. ಆ ದಿನವೆಲ್ಲ ಉತ್ಸವಾಚರಣೆಯಿಂದ ಕಳೆಯಿತು. ಅನಂತರ ಒಂದುದಿನ ವತ್ಸರಾಜನ ಮನಸ್ಸನ್ನು ಅರಿತುಕೊಳ್ಳುವುದಕ್ಕಾಗಿ ಯೌಗಂಧರಾಯಣನು ಅವನಿಗಿಂತೆಂದನು.

೫೨. "ದೇವ, ನಿನಗೆ ವಂಶಪಾರಂಪರ್ಯದಿಂದ ಬರಬೇಕಾಗಿದ್ದ ಮಹಾಸಿಂಹಾಸನವು ಸಿಕ್ಕಿದೆ. ಅದನ್ನು ಏರಿ ಅಲಂಕರಿಸು."

೫೩. "ನನ್ನ ಮುತ್ತಾತಂದಿರು ಭೂಮಿಯನ್ನೆಲ್ಲ ಗೆದ್ದು ಏರಿದ ಸಿಂಹಾಸನವನ್ನು ಎಲ್ಲ ದಿಕ್ಕುಗಳನ್ನೂ ಗೆಲ್ಲದೆ ಹತ್ತಿ ಕುಳಿತುಕೊಂಡರೆ ನನ್ನದೇನು ಅಗ್ಗಳಿಕೆ ?

೫೪. ಸಮುದ್ರಪರ್ಯಂತವಾದ, ಪೃಥುಮಹಾರಾಜನಿಗೆ ಒಡವೆಯಾಗಿದ್ದ ಈ ಭೂಮಿಯನ್ನೆಲ್ಲ ಗೆದ್ದ ಮೇಲೆಯೇ ನಾನು ನನ್ನ ಪೂರ್ವಜರ ಮಹಾರತ್ನ ಸಿಂಹಾಸನವನ್ನು ಏರುವೆನು.'

---

ಮಂತ್ರಿಣೋಽಪ್ಯುತ್ಸವಂ ಚಕ್ರುರ್ಜಯಂ ನಿಶ್ಚಿತ್ಯ ಭೂಪತೇಃ ।
ಆಮುಖಾಪಾತಿ ಕಲ್ಯಾಣಂ ಕಾರ್ಯಸಿದ್ಧಿಂ ಹಿ ಶಂಸತಿ ॥ ೪೯
ತತಃ ಪತಾಕಾವಿದ್ಯುದ್ಭಿರಾಕೀರ್ಣೇ ಗಗನಾಂತರೇ ।
ವವರ್ಷ ರಾಜಜಲದಃ ಕನಕಂ ಸೋಽನುಜೀವಿಷು ॥ ೫೦
ಉತ್ಸವೇನ ಚ ನೀತೇಽಸ್ಮಿನ್ ದಿನೇ ಯೌಗಂಧರಾಯಣಃ ।
ಚಿತ್ತಂ ಜಿಜ್ಞಾಸುರನ್ಯೇದ್ಯುರ್ವತ್ಸೇಶ್ವರಮಭಾಷತ ॥ ೫೧
ಏತತ್ ಕುಲಕ್ರಮಾಯಾತಂ ಮಹಾಸಿಂಹಾಸನಂ ತ್ವಯಾ ।
ಯತ್ ಪ್ರಾಪ್ತಂ ತತ್ಸಮಾರುಹ್ಯ ದೇವಾಲಂಕ್ರಿಯತಾಮಿತಿ ॥ ೫೨
ವಿಜಿತ್ಯ ಪೃಥ್ವೀಮಾರೂಢಾ ಯತ್ರ ಮೇ ಪ್ರಪಿತಾಮಹಾಃ ।
ತತ್ರಾಜಿತ್ವಾ ದಿಶಃ ಸರ್ವಾಃ ಕಾ ಮಮಾರೋಹತಃ ಪ್ರಥಾ ॥ ೫೩
ಜಿತ್ವೈವೇಮಾಂ ಸಮುದ್ರಾಂತಾಂ ಪೃಥ್ವೀಂ ಪೃಥುವಿಭೂಷಣಾಮ್ ।
ಅಲಂಕರೋಮಿ ಪೂರ್ವೇಷಾಂ ರತ್ನಸಿಂಹಾಸನಂ ಮಹತ್ ॥ ೫೪

೫೫. ಎಂದು ಹೇಳಿದ ವತ್ಸರಾಜನು ಆಗಲೇ ಸಿಂಹಾಸನವನ್ನೇರಲಿಲ್ಲ. ಸತ್ಕುಲಪ್ರಸೂತರಿಗೆ ಸಹಜವಾದ ಅಭಿಮಾನ ಇರುವುದಷ್ಟೆ.

೫೬. ಆಗ ಸಂತೋಷಪಟ್ಟ ಯೌಗಂಧರಾಯಣನು, "ದೊರೆ, ಒಳ್ಳೆಯದು. ಹಾಗಾದರೆ ಪೂರ್ವದಿಕ್ಕಿನಲ್ಲಿ ವಿಜಯೋದ್ಯೋಗವನ್ನು ಆರಂಭಿಸು" ಎಂದು ಹೇಳಿದನು.

೫೭. ಅದನ್ನು ಕೇಳಿ ಪ್ರಸಂಗ ಒದಗಿತೆಂದು ರಾಜನು ಮಂತ್ರಿಯನ್ನು ಕುರಿತು, "ಉತ್ತರವೇ ಮುಂತಾದ ದಿಕ್ಕುಗಳಿದ್ದರೂ ರಾಜರು ಮೊದಲು ಪೂರ್ವದಿಕ್ಕಿಗೇ ಏಕೆ (ದಂಡಯಾತ್ರೆಗೆ) ಹೋಗುತ್ತಾರೆ ?" ಎಂದು ಕೇಳಿದನು.

೫೮. ಈ ಮಾತನ್ನು ಕೇಳಿ ಮತ್ತೆ ಯೌಗಂಧರಾಯಣನಿಂತೆಂದನು "'ರಾಜನ್, ಉತ್ತರದಿಕ್ಕು ಸಮೃದ್ಧವಾಗಿದ್ದರೂ ಮ್ಲೇಚ್ಛರ ಸಂಪರ್ಕದಿಂದ ದೂಷಿತವಾಗಿದೆ.

೫೯. ಸೂರ್ಯ ಮುಂತಾದವುಗಳ ಅಸ್ತಮಯಕ್ಕೆ ಕಾರಣವಾದ ಪಶ್ಚಿಮದಿಕ್ಕೂ ಅಷ್ಟು ಪ್ರಶಸ್ತವಲ್ಲ. ಯಮನಿಂದ ಆಶ್ರಯಿಸಲ್ಪಟ್ಟಿರುವ ಮತ್ತು ರಾಕ್ಷಸರಿಂದ ಆಕ್ರಾಂತವಾದ ದಕ್ಷಿಣದಿಕ್ಕೂ ದುಷ್ಟವೇ.

೬೦. ಸೂರ್ಯನು ಪೂರ್ವದಲ್ಲಿ ಹುಟ್ಟುತ್ತಾನೆ. ಇಂದ್ರನೂ ಪೂರ್ವದಿಕ್ಕನ್ನೇ ಆಶ್ರಯಿಸಿದ್ದಾನೆ. ಗಂಗೆಯು ಪೂರ್ವದಿಕ್ಕಿಗೆ ಹರಿಯುತ್ತದೆ. ಆದ್ದರಿಂದ ಪೂರ್ವದಿಕ್ಕು ಪ್ರಶಸ್ತವಾಗಿದೆ.

---

ಇತ್ಯೂಚಿವಾನ್ನರಪತಿರ್ನಾರುರೋಹ ಸ ಸಂಪ್ರತಿ ।
ಸಂಭವತ್ಯಭಿಜಾತಾನಾಮಭಿಮಾನೋ ಹ್ಯಕೃತ್ರಿಮಃ ॥ ೫೫
ತತಃ ಪ್ರೀತಸ್ತಮಾಹ ಸ್ಮ ನೃಪಂ ಯೌಗಂಧರಾಯಣಃ ।
ಸಾಧು ದೇವ ಕುರು ಪ್ರಾಚ್ಯಾಂ ತರ್ಹಿ ಪೂರ್ವಂ ಜಯೋದ್ಯಮಮ್ ॥ ೫೬
ತಚ್ಛ್ರುತ್ವೈವ ಪ್ರಸಂಗಾತ್ತು ರಾಜಾ ಪಪ್ರಚ್ಛ ಮಂತ್ರಿಣಮ್ ।
ಸ್ಥಿತಾಸ್ವಪ್ಯುತ್ತರಾದ್ಯಾಸು ಪ್ರಾಕ್ ಪ್ರಾಚೀಂ ಯಾಂತಿ ಕಿಂ ನೃಪಾಃ ॥ ೫೭
ಏತಚ್ಛ್ರುತ್ವಾ ಜಗಾದೈನಂ ಪುನರ್ಯೌಗಂಧರಾಯಣಃ ।
ಸ್ಫೀತಾಪಿ ರಾಜನ್ ಕೌಬೇರೀ ಮ್ಲೇಚ್ಛಸಂಸರ್ಗಗರ್ಹಿತಾ ॥ ೫೮
ಅರ್ಕಾದ್ಯಸ್ತಮಯೇ ಹೇತುಃ ಪಶ್ಚಿಮಾಪಿ ನ ಪೂಜ್ಯತೇ ।
ಆಸನ್ನರಾಕ್ಷಸಾ ದುಷ್ಟಾ ದಕ್ಷಿಣಾಪ್ಯಂತಕಾಶ್ರಿತಾ ॥ ೫೯
ಪ್ರಾಚ್ಯಾಮುದೇತಿ ಸೂರ್ಯಸ್ತು ಪ್ರಾಚೀಮಿಂದ್ರೋऽಧಿತಿಷ್ಠತಿ ।
ಜಾಹ್ನವೀ ಯಾತಿ ಚ ಪ್ರಾಚೀಂ ತೇನ ಪ್ರಾಚೀ ಪ್ರಶಸ್ಯತೇ ॥ ೬೦

೬೧. ವಿಂಧ್ಯಪರ್ವತ ಮತ್ತು ಹಿಮಾಲಯಗಳ ಮಧ್ಯೆ ಇರುವ ದೇಶಗಳಲ್ಲೆಲ್ಲ ಗಂಗಾನದಿಯ ನೀರಿನಿಂದ ಪವಿತ್ರವಾದ ದೇಶವೇ ಅತ್ಯಂತ ಪ್ರಶಸ್ತ ಎಂದು ಹೇಳುತ್ತಾರೆ.

೬೨. ಆದ್ದರಿಂದ ಶುಭವನ್ನು ಅಪೇಕ್ಷಿಸುವ ರಾಜರು ಮೊದಲು ಪೂರ್ವಕ್ಕೆ ಹೋಗುತ್ತಾರೆ ಮತ್ತು ದೇವನದಿಯಾದ ಗಂಗೆಯು ಆಶ್ರಯಿಸಿದ ದೇಶದಲ್ಲಿ ವಾಸಮಾಡುತ್ತಾರೆ.

೬೩. ನಿನ್ನ ಪೂರ್ವಜರೂ ಪೂರ್ವದಿಕ್ಕಿನಿಂದ ಆರಂಭಿಸಿ ಎಲ್ಲ ದಿಕ್ಕುಗಳನ್ನೂ ಗೆದ್ದರು. ಗಂಗೆಯ ಸಮೀಪದಲ್ಲೇ ಇರುವ ಹಸ್ತಿನಾಪುರದಲ್ಲಿ ಅವರು ವಾಸವನ್ನೂ ಮಾಡಿದರು.

೬೪. ಸಾಮ್ರಾಜ್ಯವು ಪೌರುಷಕ್ಕೆ ಅಧೀನವಾಗಿರುವುದರಿಂದ ದೇಶ ಯಾವುದಕ್ಕೂ ಕಾರಣವಲ್ಲ ಎಂದು ಆಲೋಚಿಸಿ ಶತಾನೀಕನು ರಮಣೀಯತೆಗಾಗಿ ಕೌಶಾಂಬಿಯನ್ನು ಆಶ್ರಯಿಸಿದನಷ್ಟೆ"

೬೫. ಹೀಗೆ ಹೇಳಿ ಯೌಗಂಧರಾಯಣನು ವಿರಮಿಸಲು ಪುರುಷಪ್ರಯತ್ನವನ್ನೇ ಮೆಚ್ಚಿದ ವತ್ಸರಾಜನು ಹೀಗೆಂದನು.

೬೬ ""ದೇಶದ ನಿಯಮವು ಸಾಮ್ರಾಜ್ಯಕ್ಕೆ ಕಾರಣವಲ್ಲ ಎಂಬುದು ಸತ್ಯ. ಒಳ್ಳೆಯ ವ್ಯಕ್ತಿತ್ವವುಳ್ಳವರ ಸಂಪತ್ತುಗಳಿಗೆ ಮುಖ್ಯ ಕಾರಣ ಅವರ ಪೌರುಷವೇ ಆಗಿರುತ್ತದೆ.

---

ದೇಶೇಷ್ವ ಪಿ ಚ ವಿಂಧ್ಯಾದ್ರಿಹಿಮವನ್ಮಧ್ಯವರ್ತಿಷು ।
ಜಾಹ್ನವೀಜಲಪೂತೋ ಯಃ ಸ ಪ್ರಶಸ್ಯತಮೋ ಮತಃ ॥ ೬೧

ತಸ್ಮಾತ್ಪ್ರಾಚೀಂ ಪ್ರಯಾಂತ್ಯಾದೌ ರಾಜಾನೋ ಮಂಗಲೈಷಿಣಃ ।
ನಿವಸಂತಿ ಚ ದೇಶೇಽಪಿ ಸುರಸಿಂಧುಸಮಾಶ್ರಿತೇ ॥ ೬೨

ಪೂರ್ವಜೈರಪಿ ಹಿ ಪ್ರಾಚೀಪ್ರಕ್ರಮೇಣ ಜಿತಾ ದಿಶಃ ।
ಗಂಗೋಪಕಂಠೇ ವಾಸಶ್ಚ ವಿಹಿತೋ ಹಸ್ತಿನಾಪುರೇ ॥ ೬೩

ಶತಾನೀಕಸ್ತು ಕೌಶಾಂಬೀಂ ರಮ್ಯಭಾವೇನ ಶಿಶ್ರಿಯೇ ।
ಸಾಮ್ರಾಜ್ಯೇ ಪೌರುಷಾಧೀನೇ ಪಶ್ಯನ್ ದೇಶಮಕಾರಣಮ್ ॥ ೬೪

ಇತ್ಯುಕ್ತ್ವಾ ವಿರತೇ ತತ್ರ ತಸ್ಮಿನ್ ಯೌಗಂಧರಾಯಣೇ ।
ರಾಜಾ ಪುರುಷಕಾರೈಕಬಹುಮಾನಾದಭಾಷತ ॥ ೬೫

ಸತ್ಯಂ ನ ದೇಶನಿಯಮಃ ಸಾಮ್ರಾಜ್ಯಸ್ಯೇಹ ಕಾರಣಮ್ ।
ಸಂಪತ್ಸು ಹಿ ಸುಸತ್ತ್ವಾನಾಮೇಕಹೇತುಃ ಸ್ವಪೌರುಷಮ್ ॥ ೬೬

೬೭. ಸತ್ತ್ವಶಾಲಿಯು ಒಬ್ಬನೇ ಆದರೂ ಆಶ್ರಯವಿಲ್ಲದವನಾದರೂ ಐಶ್ವರ್ಯವನ್ನು ಪಡೆಯುವನು. ಈ ವಿಷಯದಲ್ಲಿ ಸತ್ತ್ವಶಾಲಿಪುರುಷನ ಕಥೆಯನ್ನು ಕೇಳಿಲ್ಲವೇನು ?"

೬೮. ಹೀಗೆ ಹೇಳಿದಾಗ ಸಚಿವರು ಅವನನ್ನು (ಆ ಕಥೆಯನ್ನು ಹೇಳಬೇಕೆಂದು) ಕೇಳಿಕೊಂಡರು. ಅವನು ರಾಣಿಯರ ಸನ್ನಿಧಿಯಲ್ಲಿ ಶುಭವೂ ವಿಚಿತ್ರವೂ ಆದ ಈ ಕಥೆಯನ್ನು ಹೇಳಿದನು.

## ವೀರ ವಿದೂಷಕನ ಕಥೆ

೬೯. ಪ್ರಪಂಚದಲ್ಲೆಲ್ಲ ಪ್ರಸಿದ್ಧವಾದ ಉಜ್ಜಯಿನೀ ಎಂಬ ನಗರವಿದೆಯಷ್ಟೆ. ಅದರಲ್ಲಿ ಹಿಂದೆ ಆದಿತ್ಯಸೇನನೆಂಬ ದೊರೆ ಇದ್ದನು.

೭೦. ಪ್ರತಾಪಕ್ಕೆ ಮನೆಯಾಗಿದ್ದ ಅವನ ರಥವು ಏಕಚಕ್ರವರ್ತಿತ್ವವೆಂಬ (ಜಗತ್ತಿಗೆಲ್ಲ ಒಬ್ಬನೇ ಚಕ್ರವರ್ತಿಯಾಗಿದ್ದುದರಿಂದ, ಒಂದೇ ಚಕ್ರವು ರಥದಲ್ಲಿ ಕೂಳಿತಿದ್ದುದರಿಂದ) ಕಾರಣದಿಂದ ಸೂರ್ಯನ ರಥದಂತೆ ಎಲ್ಲಿಯೂ ತಡೆಯನ್ನು ಹೊಂದಿರಲಿಲ್ಲ.

೭೧. ಎದ್ದು ನಿಂತಿದ್ದ, ಹಿಮದಂತೆ ಕಾಂತಿಯನ್ನು ಹೊಂದಿದ್ದ ಅವನ ಶ್ವೇತಚ್ಛತ್ರವು ಬಾನನ್ನು ಬೆಳಗುತ್ತಿದ್ದಾಗ ಊಷ್ಮ (ಗರ್ವ ಹಾಗೂ ಬಿಸಿಲು) ಇಲ್ಲದ ಕಾರಣದಿಂದ ಬೇರೆ ಎಲ್ಲ ರಾಜರ ಕೊಡೆಗಳೂ ದೂರ ಸರಿದುವು.

---

ಏಕೋಽಪ್ಯಾಶ್ರಯಹೀನೋಽಪಿ ಲಕ್ಷ್ಮೀಂ ಪ್ರಾಪ್ನೋತಿ ಸತ್ತ್ವವಾನ್ ।
ಶ್ರುತಾ ಕಿಂ ನಾತ್ರ ಯುಷ್ಮಾಭಿಃ ಪುಂಸಃ ಸತ್ತ್ವವತಃ ಕಥಾ ॥ ೬೭
ಏವಮುಕ್ತ್ವಾ ಸ ವತ್ಸೇಶಃ ಸಚಿವಾಭ್ಯರ್ಥಿತಃ ಶುಭಾಮ್ ।
ವಿಚಿತ್ರಾಂ ಸಂನಿಧೌ ದೇವ್ಯೋರಿಮಾಮಕಥಯತ್ ಕಥಾಮ್ ॥ ೬೮
ಅಸ್ತಿ ಭೂತಲವಿಖ್ಯಾತಾ ಯೇಯಮುಜ್ಜಯಿನೀ ಪುರೀ ।
ತಸ್ಯಾಮಾದಿತ್ಯಸೇನಾಖ್ಯಃ ಪೂರ್ವಮಾಸೀನ್ಮಹೀಪತಿಃ ॥ ೬೯
ಆದಿತ್ಯಸ್ಯೇವ ಯಸ್ಯೇಹ ನ ಚಸ್ಖಾಲ ಕಿಲ ಕ್ವಚಿತ್ ।
ಪ್ರತಾಪನಿಲಯಸ್ಯೈಕಚಕ್ರವರ್ತಿತಯಾ ರಥಃ ॥ ೭೦
ಭಾಸಯತ್ಯುಚ್ಛ್ರಿತೇ ವ್ಯೋಮ ತಚ್ಛತ್ರೇ ತುಹಿನತ್ವಿಷಿ ।
ನ್ಯವರ್ತಂತಾತಪತ್ರಾಣಿ ರಾಜ್ಞಾಮಪಗತೋಷ್ಮಣಾಮ್ ॥ ೭೧

೭೨. ಎಲ್ಲ ನೀರುಗಳಿಗೂ ಸಮುದ್ರವಿದ್ದಂತೆ ಅವನು ಸಮಸ್ತ ಭೂಮಂಡಲದ ವಿಶಾಲಪ್ರದೇಶದಲ್ಲಿ ಹುಟ್ಟಿದ ಎಲ್ಲ ರತ್ನ (ಉತ್ತಮವಸ್ತು)ಗಳಿಗೂ ಮುಖ್ಯ ಪಾತ್ರನಾಗಿದ್ದನು.

೭೩. ಒಮ್ಮೆ ಅವನು ಯಾವುದೋ ಕಾರಣದಿಂದ ಯಾತ್ರೆಗೆ ಹೊರಟನು. ಸೈನ್ಯ ಸಮೇತನಾಗಿ ಹೋದ ಆ ರಾಜನು ಗಂಗಾನದಿಯ ದಡವನ್ನು ತಲುಪಿ ನೆಲೆ ನಿಂತನು.

೭೪. ಅಲ್ಲಿ ಗುಣವರ್ಮನೆಂಬ ಆ ಪ್ರದೇಶದ ಒಬ್ಬ ಶ್ರೀಮಂತನು ಒಂದು ಕನ್ಯಾರತ್ನವನ್ನು ಕಾಣಿಕೆಯಾಗಿ ತೆಗೆದುಕೊಂಡು ರಾಜನ ಬಳಿಗೆ ಬಂದನು.

೭೫. "ಮೂರು ಲೋಕಗಳಲ್ಲೂ ರತ್ನ ಎನಿಸಿಕೊಳ್ಳುವ ಈ ಕನ್ಯೆ ನನ್ನ ಮನೆಯಲ್ಲಿ ಹುಟ್ಟಿದವಳು. ಇವಳನ್ನು ಬೇರೆ ಯಾರಿಗೂ ಕೊಡುವುದು ಆಗದು. ರಾಜನೇ ಇಂಥವಳಿಗೆ ತಕ್ಕ ಪ್ರಭು."

೭೬. ಎಂದು ದ್ವಾರಪಾಲಕನ ಮೂಲಕ ಬಿನ್ನವಿಸಿದ ಗುಣವರ್ಮನು ರಾಜನಿಗೆ ಆ ಕನ್ಯೆಯನ್ನು ತೋರಿಸಿದನು.

---

ಸಮಸ್ತಭೂತಲಾಭೋಗಸಂಭವಾನಾಂ ಬಭೂವ ಸಃ ।
ಭಾಜನಂ ಸರ್ವರತ್ನಾನಾಮಂಬುರಾಶಿರಿವಾಂಭಸಾಮ್ ॥ ೭೨
ಸ ಕದಾಚಿತ್ ಕಸ್ಯಾಪಿ ಹೇತೋರ್ಯಾತ್ರಾಗತೋ ನೃಪಃ ।
ಸಸೈನ್ಯೋ ಜಾಹ್ನವೀಕೂಲಮಾಸಾದ್ಯಾವಸ್ಥಿತೋಽಭವತ್ ॥ ೭೩
ತತ್ರ ತಂ ಗುಣವರ್ಮಾಖ್ಯಃ ಕೋಽಪ್ಯಾಢ್ಯಸ್ತತ್ಪ್ರದೇಶಜಃ ।
ಅಭ್ಯಾಗಾನ್ನೃಪಮಾದಾಯ ಕನ್ಯಾರತ್ನಮುಪಾಯನಮ್ ॥ ೭೪
ರತ್ನಂ ತ್ರಿಭುವನೇಽಪ್ಯೇಷಾ ಕನ್ಯೋತ್ಪನ್ನಾ ಗೃಹೇ ಮಮ ।
ನಾನ್ಯತ್ರ ದಾತುಂ ಶಕ್ಯಾ ಚ ದೇವೋ ಹಿ ಪ್ರಭುರೀದೃಶಃ ॥ ೭೫
ಇತ್ಯಾವೇದ್ಯ ಪ್ರತೀಹಾರಮುಖೇನಾಥ ಪ್ರವಿಶ್ಯ ಸಃ ।
ಗುಣವರ್ಮಾ ನಿಜಾಂ ತಸ್ಮೈ ರಾಜ್ಞೇ ಕನ್ಯಾಮದರ್ಶಯತ್ ॥ ೭೬

೭೭–೭೮. ಅವಳ ಹೆಸರು ತೇಜಸ್ವತಿ. ತನ್ನ ಕಾಂತಿಯಿಂದ ಅವಳು ಎಲ್ಲ ದಿಕ್ಕುಗಳನ್ನೂ ಬೆಳಗಿಸುತ್ತಿದ್ದಳು. ಮನ್ಮಥನ ಮಂಗಳಗೃಹದ ರತ್ನದೀಪದ ಜ್ವಾಲೆಯಂತೆ ಇದ್ದ ಅವಳನ್ನು ನೋಡಿ ಅವಳ ಕಾಂತಿಯ ಹೊಳಪಿನಿಂದ ನಲುಗಿದ ರಾಜನಲ್ಲಿ ಪ್ರೇಮ ತುಂಬಿತು. ಆಸೆಯ ಬೆಂಕಿಯ ಬೇಗೆಗೆ ಒಳಗಾಗಿ ಬೆವರಿದ ಅವನು ಕರಗಿ ಹೋಗುತ್ತಿದ್ದನು.

೭೯. ಆಗಲೇ ಮಹಾದೇವಿ ಎಂಬ ಸ್ಥಾನಕ್ಕೆ ಯೋಗ್ಯಳೆಂದು ಅವಳನ್ನು ಸ್ವೀಕರಿಸಿ ಸಂತೋಷದಿಂದ ಗುಣವರ್ಮನನ್ನು ತನಗೆ ಸಮಾನನನ್ನಾಗಿ ಮಾಡಿದನು.

೮೦. ಆ ಪ್ರಿಯೆ ತೇಜಸ್ವತಿಯನ್ನು ಮದುವೆಮಾಡಿಕೊಂಡು ಧನ್ಯನಾದೆ ಎಂದು ಭಾವಿಸಿದ ರಾಜನು ಅವಳೊಡನೆ ಉಜ್ಜಯಿನಿಗೆ ಹೋದನು.

೮೧. ಅಲ್ಲಿ ರಾಜನು ಅವಳ ಮುಖದಲ್ಲೇ ದೃಷ್ಟಿಯನ್ನು ನೆಟ್ಟು ಎಷ್ಟು ಮೈಮರೆತನೆಂದರೆ ಬಹಳ ದೊಡ್ಡ ರಾಜಕಾರ್ಯಗಳನ್ನೂ ಅವನು ಕಣ್ಣೆತ್ತಿ ನೋಡುತ್ತಿರಲಿಲ್ಲ.

೮೨. ತೇಜಸ್ವತಿಯ ಇಂಪಾದ ಮಾತುಗಳಿಗೆ ಅಂಟಿಕೊಂಡಿದೆಯೇನೋ ಎಂಬಂತೆ ಇದ್ದ ಅವನ ಕಿವಿಯನ್ನು ದುಃಖಿಗಳಾಗಿದ್ದ ಪ್ರಜೆಗಳ ಚೀತ್ಕಾರಗಳೂ ಸೆಳೆದುಕೊಳ್ಳಲಾಗಲಿಲ್ಲ.

---

ಸ ತಾಂ ತೇಜಸ್ವತೀಂ ನಾಮ ದೀಪ್ತಿದ್ಯೋತಿತದಿಙ್ಮುಖಾಮ್ ।
ಅನಂಗಮಂಗಲಾವಾಸರತ್ನದೀಪಶಿಖಾಮಿವ ॥ ೭೭

ಪಶ್ಯನ್ ಸ್ನೇಹಮಯೋ ರಾಜಾ ಕ್ಲಿಷ್ಟಸ್ತತ್ ಕಾಂತಿತೇಜಸಾ ।
ಕಾಮಾಗ್ನಿನೇವ ಸಂತಪ್ತಃ ಖಿನ್ನೋ ವಿಗಲತಿ ಸ್ಮ ಸಃ ॥ ೭೮

ಸ್ವೀಕೃತ್ಯೈತಾಂ ಚ ತತ್ಕಾಲಂ ಮಹಾದೇವೀಪದೋಚಿತಾಮ್ ।
ಚಕಾರ ಗುಣವರ್ಮಾಣಂ ಪರಿತುಷ್ಟ್ಯಾತ್ಮನಃ ಸಮಮ್ ॥ ೭೯

ತತಸ್ತಾಂ ಪರಿಣೀಯೈವ ಪ್ರಿಯಾಂ ತೇಜಸ್ವತೀಂ ನೃಪಃ ।
ಕೃತಾರ್ಥಮಾನೀ ಸ ತಯಾ ಸಾಕಮುಜ್ಜಯಿನೀಂ ಯಯೌ ॥ ೮೦

ತತ್ರ ತನ್ಮುಖಸಕ್ತೈಕದೃಷ್ಟೀ ರಾಜಾ ಸ್ಥಭೂತ್ತಥಾ ।
ದದರ್ಶ ರಾಜಕಾರ್ಯಾಣಿ ನ ಯಥಾ ಸುಮಹಾಂತ್ಯಪಿ ॥ ೮೧

ತೇಜಸ್ವತೀ ಕಲಾಲಾಪಕೀಲಿತೇವ ಕಿಲ ಶ್ರುತಿಃ ।
ನಾವಸನ್ನಪ್ರಜಾಕ್ರಂದೈಸ್ತಸ್ಯಾಕ್ರಷ್ಟುಮಶಕ್ಯತ ॥ ೮೨

೮೩. ಅಂತಃಪುರದೊಳಕ್ಕೆ ಹೋಗಿ ದೀರ್ಘಕಾಲವಾದರೂ ರಾಜನು ಅಲ್ಲಿಂದ ಹೊರಗೇ ಬರುತ್ತಿರಲಿಲ್ಲ. ಶತ್ರುಗಳ ಗುಂಪಿನ ಹೃದಯದಿಂದ ಚಿಂತೆಯ ಜ್ವರವು ಮಾತ್ರ ಹೊರಗೆ ಹೋಯಿತು.

೮೪. ಸ್ವಲ್ಪಕಾಲ ಕಳೆದ ಮೇಲೆ ರಾಜನಿಗೆ ದೇವಿ ತೇಜಸ್ವತಿಯಲ್ಲಿ ಎಲ್ಲರ ಅಭಿನಂದನೆಗೆ ಪಾತ್ರವಾದ ಒಬ್ಬ ಕನ್ಯೆಯೂ, ಬುದ್ಧಿಯಲ್ಲಿ (ಎಲ್ಲರನ್ನೂ) ಗೆಲ್ಲುವ ಅಪೇಕ್ಷೆಯೂ ಹುಟ್ಟಿದುವು.

೮೫. ಆ ಕನ್ಯೆಯು ಅತ್ಯಂತ ಅದ್ಭುತ ರೂಪವನ್ನು ಪಡೆದು ಮೂರುಲೋಕಗಳನ್ನೂ ತೃಣಸಮಾನವನ್ನಾಗಿ ಮಾಡಿ ಆ ರಾಜನಿಗೆ ಹರ್ಷವನ್ನುಂಟುಮಾಡಿದಳು. ಗೆಲ್ಲಬೇಕೆಂಬ ಅಪೇಕ್ಷೆಯೂ ಪ್ರತಾಪವನ್ನು ಹುಟ್ಟಿಸಿತು.

೮೬. ಗರ್ವಿಷ್ಠನಾಗಿದ್ದ ಒಬ್ಬ ಸಾಮಂತನನ್ನು ಬಗ್ಗುಬಡಿಯಲು ರಾಜ ಆದಿತ್ಯಸೇನನು ಒಮ್ಮೆ ಉಜ್ಜಯಿನಿಯಿಂದ ಹೊರಟನು.

೮೭. ಅವನ ರಾಣಿ ತೇಜಸ್ವತಿ ಹೆಣ್ಣಾನೆಯನ್ನೇರಿ ಅವನೊಡನೆ ಪ್ರಯಾಣ ಮಾಡಿದಳು. ಅವಳನ್ನು ರಾಜನು ಸೈನ್ಯದ ಅಧಿದೇವತೆಯನ್ನಾಗಿ ಮಾಡಿದನು.

೮೮. ದರ್ಪದಿಂದ ನೆಗೆಯುತ್ತಿದ್ದ ಧರ್ಮನಿರ್ಝರ ಎಂಬ ಶ್ರೇಷ್ಠವಾದ ಅಶ್ವವನ್ನು ರಾಜನು ಏರಿದನು. ಆ ಅಶ್ವವು ಶ್ರೀವೃಕ್ಷಗಳಿಂದಲೂ ತಪ್ಪಲು ಭೂಮಿಗಳಿಂದಲೂ ಕೂಡಿದ್ದ ಓಡಾಡುವ ಬೆಟ್ಟದಂತೆ ಎತ್ತರವಾಗಿತ್ತು.

---

ಚಿರಪ್ರವಿಷ್ಟೋ ನಿರಗಾನ್ನೈವ ಸೋಽಂತಃ ಪುರಾನ್ನೃಪಃ ।
ನಿರಗಾದರಿವರ್ಗಸ್ಯ ಹೃದಯಾತ್ತು ರುಜಾಜ್ವರಃ ॥ ೮೩

ಕಾಲೇನ ತಸ್ಯ ಜಜ್ಞೇ ಚ ರಾಜ್ಞಃ ಸರ್ವಾಭಿನಂದಿತಾ ।
ಕನ್ಯಾ ತೇಜಸ್ವತೀದೇವ್ಯಾಂ ಬುದ್ಧೌ ಚ ವಿಜಿಗೀಷುತಾ ॥ ೮೪

ಪರಮಾದ್ಭುತರೂಪಾ ಸಾ ತೃಣೀಕೃತ್ಯ ಜಗತ್ತ್ರಯಮ್ ।
ಹರ್ಷಂ ತಸ್ಯಾಕರೋತ್ ಕನ್ಯಾ ಪ್ರತಾಪಂ ಚ ಜಿಗೀಷುತಾ ॥ ೮೫

ಅಥಾಭಿಯೋಕ್ತುಮುತ್ಸಿಕ್ತಂ ಸಾಮಂತಂ ಕಂಚಿದೇಕದಾ ।
ಆದಿತ್ಯಸೇನಃ ಪ್ರಯಯಾವುಜ್ಜಯಿನ್ಯಾಃ ಸ ಭೂಪತಿಃ ॥ ೮೬

ತಾಂ ಚ ತೇಜಸ್ವತೀಂ ರಾಜ್ಞೀಂ ಸಮಾರೂಢಕರೇಣುಕಾಮ್ ।
ಸಹ ಪ್ರಯಾಯಿನೀಂ ಚಕ್ರೇ ಸೈನ್ಯಸ್ಯೇವಾಧಿದೇವತಾಮ್ ॥ ೮೭

ಆರುರೋಹ ವರಾಶ್ವಂ ಚ ದರ್ಪೋದ್ಯದ್ಧರ್ಮನಿರ್ಝರಮ್ ।
ಜಂಗಮಾದ್ರಿನಿಭಂ ತುಂಗಂ ಸಶ್ರೀವೃಕ್ಷಂ ಸಮೇಖಲಮ್ ॥ ೮೮

೮೯. ಮುಂಗಾಲುಗಳೆರಡನ್ನೂ ಕುಟವಾಯಿಗಳ ವರೆಗೆ ಎತ್ತಿ ನಿಂತ ಅಶ್ವವು ತಾನು ಹಿಂದೆ ನೋಡಿದ್ದ, ತನ್ನ ವೇಗಕ್ಕೆ ಸರಿಸಮಾನವಾದ ವೇಗವುಳ್ಳ ಗರುಡನ ಗಮನವನ್ನು ಆಕಾಶದಲ್ಲಿ ಅಭ್ಯಾಸ ಮಾಡುತ್ತಿರುವಂತಿತ್ತು.

೯೦. ನನ್ನ ವೇಗಕ್ಕೆ ಈ ಭೂಮಿಯು ಸಾಕೇ ಎಂದು ಕತ್ತನ್ನು ಮೇಲಕ್ಕೆ ಎತ್ತಿ ಗಂಭೀರದೃಷ್ಟಿಯಿಂದ ಭೂಮಿಯನ್ನು ಆ ಅಶ್ವ ಅಳೆಯುವಂತಿತ್ತು.

೯೧. ಸ್ವಲ್ಪ ದೂರ ಹೋಗಿ ಸಮತಲವಾದ ಭೂಮಿ ಸಿಕ್ಕಿದ ಮೇಲೆ ರಾಜನು ತೇಜಸ್ವತಿಗೆ (ಕುದುರೆಯ ವೇಗವನ್ನು) ತೋರಿಸುವುದಕ್ಕಾಗಿ ಕುದುರೆಯನ್ನು ಉತ್ತೇಜಿಸಿದನು.

೯೨. ಅವನ ಹಿಮ್ಮಡಿಯಿಂದ ಏಟನ್ನು ತಿಂದ ಆ ಕುದುರೆಯು ಯಂತ್ರದಿಂದ ಎಸೆಯಲ್ಪಟ್ಟ ಬಾಣದಂತೆ ಅತಿವೇಗದಿಂದ ಎಲ್ಲಿಗೋ ಜನರ ಕಣ್ಣಿಗೆ ಕಾಣಿಸದಂತೆ ಓಡಿತು.

೯೩. ಅದನ್ನು ನೋಡಿ ಸೈನ್ಯವು ಕಂಗೆಟ್ಟಿತು. ಕುದುರೆಸವಾರರು ಸಾವಿರಾರು ಜನ ಹಿಂಬಾಲಿಸಿದರೂ ಆ ಕುದುರೆಯು ಹಾರಿಸಿಕೊಂಡು ಹೋದ ರಾಜನು ಸಿಗಲಿಲ್ಲ.

೯೪. ಆಗ ಅನಿಷ್ಟವೇನೋ ಉಂಟಾಗಿರಬಹುದು ಎಂದು ಸಂಶಯಪಟ್ಟು ಭಯದಿಂದ ಮಂತ್ರಿಗಳು ಅಳುತ್ತಿದ್ದ ರಾಣಿಯನ್ನು ಸೈನ್ಯದೊಡನೆ ಕರೆದುಕೊಂಡು ಹಿಂದಿರುಗಿ ಉಜ್ಜಯಿನಿಗೆ ತಲುಪಿದರು.

---

ಆಸೃಕ್ಕೋತ್ಥಿತಪಾದಾಭ್ಯಾಮಭ್ಯಸ್ಯಂತಮಿವಾಂಬರೇ ।
ಗತಿಂ ಗರುತ್ಮತೋ ದೃಷ್ಟಾಂ ವೇಗಸಬ್ರಹ್ಮಚಾರಿಣಃ ॥ ೮೯
ಜವಸ್ಯ ಮಮ ಪರ್ಯಾಪ್ತಾ ಕಿಂ ನು ಸ್ಯಾದಿತಿ ಮೇದಿನೀಮ್ ।
ಕಲಯಂತಮಿವೋನ್ನಮ್ಯ ಕಂಧರಾಂ ಧೀರಯಾ ದೃಶಾ ॥ ೯೦
ಕಿಂಚಿದ್ ಗತ್ವಾ ಚ ಸಂಪ್ರಾಪ್ಯ ಸಮಾಂ ಭೂಮಿಂ ಸ ಭೂಪತಿಃ ।
ಅಶ್ವಮುತ್ತೇಜಯಾಮಾಸ ತೇಜಸ್ವತ್ಯಾಃ ಪ್ರದರ್ಶಯನ್ ॥ ೯೧
ಸೋಽಶ್ವಸ್ತತ್ಪಾರ್ಷ್ಣಿಘಾತೇನ ಯಂತ್ರೇಣೇವೇರಿತಃ ಶರಃ ।
ಜಗಾಮ ಕ್ವಾಪ್ಯತಿಜವಾದಲಕ್ಷ್ಯೋ ಲೋಕಲೋಚನೈಃ ॥ ೯೨
ತದ್‌ದೃಷ್ಟ್ವಾ ವಿಹ್ವಲೇ ಸೈನ್ಯೇ ಹಯಾರೋಹಾಃ ಸಹಸ್ರಧಾ ।
ಅನ್ವಧಾವನ್ನ ಚ ಪ್ರಾಪುಸ್ತಮಶ್ವಾಪಹೃತಂ ನೃಪಮ್ ॥ ೯೩
ತತಶ್ಚಾನಿಷ್ಟಮಾಶಂಕ್ಯ ಸಸೈನ್ಯಾ ಮಂತ್ರಿಣೋ ಭಯಾತ್ ।
ಆದಾಯ ದೇವೀಂ ಕ್ರಂದಂತೀಂ ನಿವೃತ್ಯೋಜ್ಜಯಿನೀಂ ಯಯುಃ ॥ ೯೪

೯೫. ಅಲ್ಲಿ ಅವರು ಕೋಟೆಯ ಬಾಗಿಲುಗಳನ್ನೆಲ್ಲ ಮುಚ್ಚಿ ರಕ್ಷಣೆಯನ್ನು ಮಾಡಿ ರಾಜನ ವಾರ್ತೆಯನ್ನು ನಿರೀಕ್ಷಿಸಿ ಹುಡುಕುತ್ತಾ ಪ್ರಜೆಗಳಿಗೆ ಆಶ್ವಾಸನೆಗಳನ್ನು ನೀಡುತ್ತಾ ನಿಂತರು.

೯೬. ಈ ಮಧ್ಯೆ ಆ ಕುದುರೆಯು ರಾಜನನ್ನು ಭಯಂಕರ ಸಿಂಹಗಳ ಸಂಚಾರವುಳ್ಳ ದುರ್ಗಮವಾದ ವಿಂಧ್ಯಾಟವಿಗೆ ಕ್ಷಣಮಾತ್ರದಲ್ಲಿ ಕರೆದೊಯ್ದಿತು.

೯೭. ಸುದೈವದಿಂದ ಕುದುರೆಯು ಅಲ್ಲಿ ನಿಂತುಕೊಂಡಿತು. ರಾಜನು ಆ ದೊಡ್ಡ ಅಡವಿಯಿಂದ ವಿಹ್ವಲನಾಗಿ, ದಿಕ್ಕುಗೆಟ್ಟು ವ್ಯಾಕುಲನಾದನು.

೯೮. ಬೇರೆ ದಾರಿಯನ್ನು ಕಾಣದೆ, ಅಶ್ವಶಾಸ್ತ್ರವನ್ನು ತಿಳಿದಿದ್ದ ಅವನು ಕುದುರೆಯಿಂದ ಇಳಿದು ಆ ಶ್ರೇಷ್ಠವಾದ ಕುದುರೆಗೆ ನಮಸ್ಕರಿಸಿ ಹೀಗೆ ಹೇಳಿದನು.

೯೯. "ನೀನೊಬ್ಬ ದೇವತೆ. ನಿನ್ನಂಥವನು ಸ್ವಾಮಿದ್ರೋಹವನ್ನು ಮಾಡಲಾರನು. ಆದ್ದರಿಂದ ನೀನೇ ನನಗೆ ಗತಿ. ನನ್ನನ್ನು ಸರಿಯಾದ ದಾರಿಯಲ್ಲಿ ಒಯ್ಯಿ."

೧೦೦. ಅದನ್ನು ಕೇಳಿ, ಅನುತಾಪವನ್ನು ತೋರಿಸಿದ ಅಶ್ವವು ತನ್ನ ಹಿಂದಿನ ಜನ್ಮವನ್ನು ನೆನಪಿಗೆ ತಂದುಕೊಂಡು 'ಹಾಗೇ ಆಗಲಿ' ಎಂದು ಬುದ್ಧಿಯಲ್ಲಿ ನಿರ್ಣಯಿಸಿಕೊಂಡಿತು. ಏಕೆಂದರೆ ಉತ್ತಮವಾದ ಕುದುರೆ ದೇವತೆಯೇ ಆಗಿರುತ್ತದೆ.

---

ತತ್ರ ತೇ ಪಿಹಿತದ್ವಾರಕೃತಪ್ರಾಕಾರಗುಪ್ತಯಃ ।
ರಾಜ್ಞಃ ಪ್ರವೃತ್ತಿಂ ಚಿನ್ವಂತಸ್ತಸ್ಥುರಾಶ್ವಾಸಿತಪ್ರಜಾಃ ॥ ೯೫
ಅತ್ರಾಂತರೇ ಸ ರಾಜಾಪಿ ನೀತೋಽಭೂತ್ತೇನ ವಾಜಿನಾ ।
ಸರೌದ್ರಸಿಂಹಸಂಚಾರಾಂ ದುರ್ಗಾಂ ವಿಂಧ್ಯಾಟವೀಂ ಕ್ಷಣಾತ್ ॥ ೯೬
ತತ್ರ ದೈವಾತ್ ಸ್ಥಿತೇ ತಸ್ಮಿನ್ ಅಶ್ವೇ ಸ ಸಹಸಾ ನೃಪಃ ।
ಆಸೀನ್ಮಹಾಟವೀದತ್ತದಿಙ್ಮೋಹೋ ವಿಹ್ವಲಾಕುಲಃ ॥ ೯೭
ಗತಿಮನ್ಯಾಮಪಶ್ಯಂಶ್ಚ ಸೋಽವತೀರ್ಯ ಪ್ರಣಮ್ಯ ಚ ।
ತಂ ಜಗಾದಾಶ್ವಜಾತಿಜ್ಞೋ ರಾಜಾ ವರತುರಂಗಮಮ್ ॥ ೯೮
ದೇವಸ್ತ್ವಂ ನ ಪ್ರಭುದ್ರೋಹಂ ತ್ವಾದೃಶಃ ಕರ್ತುಮರ್ಹತಿ ।
ತನ್ಮೇ ತ್ವಮೇವ ಶರಣಂ ಶಿವೇನ ನಯ ಮಾಂ ಪಥಾ ॥ ೯೯
ತಚ್ಛ್ರುತ್ವಾ ಸಾನುತಾಪಸ್ಸ ಸೋಽಶ್ವೋ ಜಾತಿಸ್ಮರಸ್ತದಾ ।
ತತ್ತಥೇತ್ಯಗ್ರಹೀದ್ ಬುದ್ಧ್ಯಾ ದೈವತಂ ಹಿ ಹಯೋತ್ತಮಃ ॥ ೧೦೦

೧೧೧. ಮತ್ತೆ ರಾಜನು ಏರಿ ಕುಳಿತುಕೊಂಡಾಗ ಆ ಕುದುರೆಯು ದಾರಿಯ ಆಯಾಸವನ್ನು ಕಳೆಯುವ ಶುದ್ಧ ತಣ್ಣನೆಯ ನೀರಿನ ಸರೋವರಗಳಿದ್ದ ಮಾರ್ಗದಿಂದ ಹೊರಟಿತು.

೧೧೨. ಸಾಯಂಕಾಲದ ವೇಳೆಗೆ ಆ ಶ್ರೇಷ್ಠ ಕುದುರೆಯು ನೂರುಯೋಜನಗಳಷ್ಟು ದೂರವಿದ್ದ ಉಜ್ಜಯಿನಿಯ ಸಮೀಪದ ಪ್ರದೇಶಕ್ಕೆ ರಾಜನನ್ನು ತಲುಪಿಸಿತು.

೧೧೩. ಅಷ್ಟು ಹೊತ್ತಿಗೆ ಸೂರ್ಯನು ತನ್ನ ಏಳು ಕುದುರೆಗಳೂ ಆ ಅಶ್ವದ ವೇಗಕ್ಕೆ ಸೋತದ್ದನ್ನು ಕಂಡು ಉಂಟಾದ ನಾಚಿಕೆಯಿಂದಲೋ ಎಂಬಂತೆ ಅಸ್ತಪರ್ವತದ ಕಣಿವೆಯಲ್ಲಿ ಮರೆಯಾದನು.

೧೧೪. ಕತ್ತಲೆ ಹರಡಿತು. ರಾಜನು ಉಜ್ಜಯಿನಿಯ ಕೋಟೆಬಾಗಿಲುಗಳೆಲ್ಲ ಮುಚ್ಚಿದ್ದುದನ್ನು ಕಂಡನು. ಹೊರಗೆ ಆ ವೇಳೆಯಲ್ಲಿ ಭಯಂಕರವಾಗಿದ್ದ ಶ್ಮಶಾನವು ಅವನ ಕಣ್ಣಿಗೆ ಬಿದ್ದಿತು.

೧೧೫. ಬುದ್ಧಿಶಾಲಿಯಾದ ಕುದುರೆಯು ಅವನನ್ನು ರಾತ್ರಿಯಲ್ಲಿ ತಂಗುವುದಕ್ಕಾಗಿ ಊರಿನ ಹೊರಗೆ ಏಕಾಂತ ಸ್ಥಳದಲ್ಲಿದ್ದ ಒಂದು ಗುಪ್ತವಾಗಿದ್ದ ಬ್ರಾಹ್ಮಣ ಮಠಕ್ಕೆ ಒಯ್ದಿತು.

೧೧೬. ರಾತ್ರಿಯನ್ನು ಕಳೆಯಲು ಆ ಮಠವು ಯೋಗ್ಯವಾಗಿರುವುದನ್ನು ಕಂಡು, ರಾಜ ಆದಿತ್ಯಸೇನನು ಒಳಗೆ ಪ್ರವೇಶಿಸಲು ಹೊರಟನು. ಅವನ ವಾಹನವೂ ತುಂಬ ಬಳಲಿತ್ತು.

---

ತತೋ ರಾಜ್ಞಿ ಸಮಾರೂಢೇ ಸ ಪ್ರತಸ್ಥೇ ತುರಂಗಮಃ ।
ಸ್ವಚ್ಛಶೀತಾಂಬುಸರಸಾ ಮಾರ್ಗೇಣಾಧ್ವಶ್ರಮಚ್ಛಿದಾ ॥ ೧೧೧
ಸಾಯಂ ಚ ಪ್ರಾಪಯಾಮಾಸ ಸ ಯೋಜನಶತಾಂತರಮ್ ।
ಉಜ್ಜಯಿನ್ಯಾಃ ಸಮೀಪಂ ತಂ ರಾಜಾನಂ ವಾಜಿಸತ್ತಮಃ ॥ ೧೧೨
ತದ್ವೇಗವಿಜಿತಾನ್ ವೀಕ್ಷ್ಯ ಸಪ್ತಾಪಿ ನಿಜವಾಜಿನಃ ।
ಅಸ್ತಾದ್ರಿಕಂದರಾಲೀನೇ ಲಜ್ಜಯೇವಾಂಶುಮಾಲಿನಿ ॥ ೧೧೩
ತಮಸಿ ಪ್ರಸೃತೇ ದ್ವಾರಾಣ್ಯುಜ್ಜಯಿನ್ಯಾ ವಿಲೋಕ್ಯ ಸಃ ।
ಪಿಹಿತಾನಿ ಶ್ಮಶಾನಂ ಚ ಬಹಿಸ್ತತ್ಕಾಲಭೀಷಣಮ್ ॥ ೧೧೪
ನಿನಾಯೈನಂ ನಿವಾಸಾಯ ಭೂಪತಿಂ ಬುದ್ಧಿಮಾನ್ ಹಯಃ ।
ಬಾಹ್ಯೈಕಾಂತಸ್ಥಿತಂ ತತ್ರ ಗುಪ್ತಂ ವಿಪ್ರಮಠಂ ನಿಶಿ ॥ ೧೧೫
ನಿಶಾತಿವಾಹಯೋಗ್ಯಂ ಚ ತಂ ಸ ದೃಷ್ಟ್ವಾ ಮಠಂ ನೃಪಃ ।
ಆದಿತ್ಯಸೇನಃ ಪ್ರಾರೇಭೇ ಪ್ರವೇಷ್ಟುಂ ಶ್ರಾಂತವಾಹನಃ ॥ ೧೧೬

೧೦೭ ಆ ಮಠದ ನಿವಾಸಿಗಳಾಗಿದ್ದ ವಿಪ್ರರು 'ಇವನು ಸ್ಮಶಾನದ ಕಾವಲುಗಾರನೋ ಕಳ್ಳನೋ ಆಗಿರಬೇಕು' ಎಂದು ಹೇಳುತ್ತಾ ಅವನ ಪ್ರವೇಶವನ್ನು ತಡೆದರು.

೧೦೮ ಆ ವಿಪ್ರರು ಜಗಳ ಮಾಡಿಕೊಂಡು ಚಂಚಲರೂ ನಿಷ್ಠುರರೂ ಆಗಿ ಹೊರಗೆ ಬಂದರು. ವೈದಿಕ ಬ್ರಾಹ್ಮಣರು ಭಯ, ಕರ್ಕಶಗುಣ ಮತ್ತು ಕೋಪಗಳಿಗೆ ಮನೆಯಲ್ಲವೆ ?

೧೦೯. ಅವರೆಲ್ಲ ಹರಟುತ್ತಿರಲು, ಅವರಲ್ಲಿ ಒಬ್ಬನಾದ ವಿದೂಷಕ ಎಂಬುವನು ಗುಣವಂತನೂ, ಸತ್ತ್ವವಂತರಲ್ಲಿ ಮುಖ್ಯನೂ ಆಗಿದ್ದನು. ಅವನು ಮಠದಿಂದ ಹೊರಗೆ ಬಂದನು.

೧೧೦. ಯುವಕನೂ ತೋಳ್ಬಲವುಳ್ಳವನೂ ಆಗಿದ್ದ ಅವನು ತಪಸ್ಸಿನಿಂದ ಅಗ್ನಿದೇವನನ್ನು ಆರಾಧಿಸಿ ಅವನಿಂದ ಧ್ಯಾನಮಾತ್ರದಿಂದಲೇ ಬಳಿಗೆ ಬರುವ ಶ್ರೇಷ್ಠ ಖಡ್ಗವನ್ನು ಪಡೆದುಕೊಂಡಿದ್ದನು.

೧೧೧. ಆ ಧೀರನು ರಾತ್ರಿಯಲ್ಲಿ ಬಂದ ಭವ್ಯವಾದ ಆಕಾರದ ರಾಜನನ್ನು ನೋಡಿ 'ಇವನು ಗುಪ್ತವಾಗಿರುವ ಯಾವುದೋ ದೇವತೆ ' ಎಂದು ಆಲೋಚಿಸಿದನು.

೧೧೨. ಯೋಗ್ಯವಾದ ಭಾವನೆಗಳುಳ್ಳ ಅವನು ಬೇರೆ ಎಲ್ಲ ವಿಪ್ರರನ್ನೂ ದೂಡಿ, ವಿನಯದಿಂದ ಬಗ್ಗಿ ರಾಜನನ್ನು ಮಠದೊಳಕ್ಕೆ ಪ್ರವೇಶ ಮಾಡಿಸಿದನು.

---

ರುರುಧುಸ್ತಸ್ಯ ವಿಪ್ರಾಶ್ಚ ಪ್ರವೇಶಂ ತನ್ನಿವಾಸಿನಃ ।
ಶ್ಮಶಾನಪಾಲಶ್ಚೋರೋ ವಾ ಕೋಽಪ್ಯಸಾವಿತಿ ವಾದಿನಃ ॥ ೧೦೭
ನಿರ್ಯಯುಸ್ತೇ ಚ ಸಂಸಕ್ತಕಲಹಾ ಲೋಲನಿಷ್ಠುರಾಃ ।
ಭಯಕಾರ್ಕಶ್ಯಕೋಪಾನಾಂ ಗೃಹಂ ಹಿ ಚ್ಛಾಂದಸಾ ದ್ವಿಜಾಃ ॥ ೧೦೮
ರಟತ್ಸು ತೇಷು ತತ್ರೈಕೋ ನಿರ್ಜಗಾಮ ತತೋ ಮಠಾತ್ ।
ವಿದೂಷಕಾಖ್ಯೋ ಗುಣವಾನ್ ಧುರ್ಯಃ ಸತ್ತ್ವವತಾಂ ದ್ವಿಜಃ ॥ ೧೦೯
ಯೋ ಯುವಾ ಬಾಹುಶಾಲೀ ಚ ತಪಸಾರಾಧ್ಯ ಪಾವಕಮ್ ।
ಪ್ರಾಪ ಖಡ್ಗೋತ್ತಮಂ ತಸ್ಮಾದ್ ಧ್ಯಾತಮಾತ್ರೋಪಗಾಮಿನಮ್ ॥ ೧೧೦
ಸ ದೃಷ್ಟ್ವಾ ತಂ ನಿಶಿ ಪ್ರಾಪ್ತಂ ಧೀರೋ ಭವ್ಯಾಕೃತಿಂ ನೃಪಮ್ ।
ಪ್ರಚ್ಛನ್ನಃ ಕೋಽಪಿ ದೇವೋಽಯಮಿತಿ ದಧ್ಯೌ ವಿದೂಷಕಃ ॥ ೧೧೧
ವಿಧೂಯ ವಿಪ್ರಾಂಶ್ಚಾನ್ಯಾಂಸ್ತಾನ್ ಸ ಸರ್ವಾನ್ ಉಚಿತಾಶಯಃ ।
ನೃಪಂ ಪ್ರವೇಶಯಾಮಾಸ ಮಠಾಂತಃ ಪ್ರಶ್ರಯಾನತಃ ॥ ೧೧೨

೧೧೩. ರಾಜನು ವಿಶ್ರಾಂತಿಯನ್ನು ತೆಗೆದುಕೊಂಡ ಮೇಲೆ ವಿದೂಷಕನು ದಾಸಿಯರಿಂದ ದಾರಿಯ ಧೂಳನ್ನು ತೆಗೆಸಿ ತನಗೆ ಉಚಿತವಾದ ಆಹಾರವನ್ನು ರಾಜನಿಗೂ ತಯಾರಿಸಿ ಒದಗಿಸಿದನು.

೧೧೪. ರಾಜನ ಕುದುರೆಯ ಜೀನುಲಗಾಮುಗಳನ್ನು ಬಿಚ್ಚಿಟ್ಟು ಆ ಶ್ರೇಷ್ಠ ತುರಗಕ್ಕೆ ಹೊಟ್ಟು ಇತ್ಯಾದಿಗಳನ್ನು ಕೊಟ್ಟು ಅದರ ಶ್ರಮವನ್ನು ನೀಗಿಸಿದನು.

೧೧೫. ""ಪ್ರಭು, ನಿನ್ನ ಶರೀರವನ್ನು ನಾನು ರಕ್ಷಿಸುತ್ತೇನೆ. ಆದ್ದರಿಂದ ಸುಖವಾಗಿ ಮಲಗು" ಎಂದು ಬಳಲಿದ್ದ ರಾಜನಿಗೆ ಹಾಸಿಗೆಯನ್ನು ಹಾಸಿ ಆ ವಿದೂಷಕನು ಹೇಳಿದನು.

೧೧೬. ರಾಜನು ಮಲಗಿಕೊಂಡ ಮೇಲೆ ಆ ಬ್ರಾಹ್ಮಣನು ನೆನೆದೊಡನೆ ಬಂದೊದಗಿದ, ಅಗ್ನಿದೇವ ಕೊಟ್ಟ ಖಡ್ಗವನ್ನು ಕೈಯಲ್ಲಿ ಹಿಡಿದು ಇಡೀ ರಾತ್ರಿ ಬಾಗಿಲಲ್ಲೇ ನಿಂತು ಎಚ್ಚರವಾಗಿದ್ದನು.

೧೧೭. ಬೆಳಗ್ಗೆ ರಾಜನಿಗೆ ಎಚ್ಚರವಾದಾಗ, ಹೇಳಿಸಿಕೊಳ್ಳದೆ ತಾನೇ ಅವನ ಕುದುರೆಯನ್ನು ವಿದೂಷಕನು ಸಜ್ಜುಗೊಳಿಸಿದನು.

೧೧೮. ರಾಜನೂ ಅವನಿಂದ ಬೀಳ್ಕೊಂಡು ಕುದುರೆಯನ್ನೇರಿ ಉಜ್ಜಯಿನಿಯನ್ನು ಪ್ರವೇಶಿಸಿದನು. ಹರ್ಷದಿಂದ ತುಂಬಿದ ಜನರು ದೂರದಿಂದ ಅವನನ್ನು ನೋಡುತ್ತಿದ್ದರು.

---

ವಿಶ್ರಾಂತಸ್ಯ ಚ ದಾಸೀಭಿರ್ಧೂತಾಧ್ವರಜಸಃ ಕ್ಷಣಾತ್ ।
ಆಹಾರಂ ಕಲ್ಪಯಾಮಾಸ ರಾಜ್ಞಸ್ತಸ್ಯ ನಿಜೋಚಿತಾಮ್ ॥ ೧೧೩

ತಂ ಚಾಪನೀತಪರ್ಯಾಣಂ ತದೀಯಂ ತುರಗೋತ್ತಮಮ್ ।
ಯವಸಾದಿಪ್ರದಾನೇನ ಚಕಾರ ವಿಗತಶ್ರಮಮ್ ॥ ೧೧೪

ರಕ್ಷಾಮ್ಯಹಂ ಶರೀರಂ ತೇ ತತ್ಸುಖಂ ಸ್ವಪಿಹಿ ಪ್ರಭೋ ।
ಇತ್ಯುವಾಚ ಚ ತಂ ಶ್ರಾಂತಮಾಸ್ತೀರ್ಣಶಯನಂ ನೃಪಮ್ ॥ ೧೧೫

ಸುಪ್ತೇ ಚ ತಸ್ಮಿನ್ ದ್ವಾರಸ್ಥೋ ಜಾಗರಾಮಾಸ ಸ ದ್ವಿಜಃ ।
ಚಿಂತಿತೋಪಸ್ಥಿತಾಗ್ನೇಯಖಡ್ಗಹಸ್ತೋಽಖಿಲಾಂ ನಿಶಾಮ್ ॥ ೧೧೬

ಪ್ರಾತಶ್ಚ ತಸ್ಯ ನೃಪತೇಃ ಪ್ರಬುದ್ಧಸ್ಯೈವ ಸ ಸ್ವಯಮ್ ।
ಅನುಕ್ತ ಏವ ತುರಗಂ ಸಜ್ಜೀಚಕ್ರೇ ವಿದೂಷಕಃ ॥ ೧೧೭

ರಾಜಾಪಿ ಸ ತಮಾಮಂತ್ರ್ಯ ಸಮಾರುಹ್ಯ ಚ ವಾಜಿನಮ್ ।
ವಿವೇಶೋಜ್ಜಯಿನೀಂ ದೂರಾದ್ದೃಷ್ಟೋ ಹರ್ಷಾಕುಲೈರ್ಜನೈಃ ॥ ೧೧೮

೧೧೯. ರಾಜನ ಆಗಮನದಿಂದ ಜನರಿಗೆ ಸಂತೋಷ ಉಕ್ಕಿ ಬಂದು ಆನಂದದಿಂದ ಕಲಕಲ ಶಬ್ದಗಳನ್ನು ಮಾಡುತ್ತಾ ಎಲ್ಲ ಪ್ರಜೆಗಳೂ ಎದುರುಗೊಂಡರು.

೧೨೦. ಸಚಿವಸಮೇತನಾಗಿ ರಾಜನು ರಾಜಭವನಕ್ಕೆ ಬಂದನು. ತೇಜಸ್ವತೀದೇವಿಯ ಹೃದಯದಿಂದ (ಚಿಂತೆಯ) ದೊಡ್ಡ ಜ್ವರವು ತೊಲಗಿತು.

೧೨೧. ಉತ್ಸವಕ್ಕೋಸ್ಕರ ಏರಿಸಲಾಗಿದ್ದ ಬಾವುಟಗಳ ಬಟ್ಟೆಗಳ ಸಾಲುಗಳು ಗಾಳಿಗೆ ತೂರಾಡುತ್ತಿದ್ದು ಆ ಕ್ಷಣದಲ್ಲಿ ನಗರದ ದುಃಖಗಳನ್ನೆಲ್ಲ ಆಚೆ ದೂಡುತ್ತಿರುವಂತಿದ್ದುವು.

೧೨೨. ದಿನದ ಕೊನೆಯವರೆಗೂ ದೇವಿಯು ಮಹೋತ್ಸವವನ್ನು ಆಚರಿಸಿದಳು. ಅದರಿಂದ ಆ ನಗರಲೋಕವು ಸಿಂದೂರದಿಂದ ಹೊಂಬಣ್ಣದ್ದಾಗಿ ಸೂರ್ಯಸಹಿತವಾದಂತೆ ಕಾಣಿಸಿತು.

೧೨೩. ಮರುದಿನ ರಾಜ ಆದಿತ್ಯಸೇನನು ಆ ವಿದೂಷಕನನ್ನು (ಮಠದ) ಎಲ್ಲ ವಿಪ್ರರೊಡನೆ ಆ ಮಠದಿಂದ ಕರೆಸಿದನು.

೧೨೪. ರಾತ್ರಿ ನಡೆದ ವೃತ್ತಾಂತವನ್ನು ಪ್ರಕಟಪಡಿಸಿ ತನಗೆ ಉಪಕಾರ ಮಾಡಿದ್ದ ಆ ವಿದೂಷಕನಿಗೆ ತತ್ಕ್ಷಣವೇ ಒಂದು ಸಾವಿರ ಗ್ರಾಮಗಳನ್ನು ದಾನ ಮಾಡಿದನು.

---

ಪ್ರವಿಷ್ಟಮಭಿಜಗ್ಮುಸ್ತಂ ಸರ್ವಾಃ ಪ್ರಕೃತಯಃ ಕ್ಷಣಾತ್ ।
ತದಾಗಮನಜಾನಂದಲಸತ್ಕಲಕಲಾರವಾಃ ॥ ೧೧೯

ಆಯಯೌ ರಾಜಭವನಂ ಸ ರಾಜಾ ಸಚಿವಾನ್ವಿತಃ ।
ಯಯೌ ತೇಜಸ್ವತೀದೇವ್ಯಾ ಹೃದಯಾಚ್ಚ ಮಹಾಜ್ವರಃ ॥ ೧೨೦

ವಾತಾಹತೋತ್ಸವಾಕ್ಷಿಪ್ತಪತಾಕಾಂಶುಕಪಂಕ್ತಿಭಿಃ ।
ಉತ್ಸಾರಿತಾ ಇವಾಭೂವನ್ ನಗರ್ಯಾಸ್ತತ್ಕ್ಷಣಂ ಶುಚಃ ॥ ೧೨೧

ಅಕರೋದಾ ದಿನಾಂತಂ ಚ ದೇವೀ ತಾವನ್ಮಹೋತ್ಸವಮ್ ।
ಯಾವನ್ನಗರಲೋಕೋಽಭೂತ್ ಸಾರ್ಕಃ ಸಿಂದೂರಪಿಂಗಲಃ ॥ ೧೨೨

ಅನ್ಯೇದ್ಯುಃ ಸ ತಮಾದಿತ್ಯಸೇನೋ ರಾಜಾ ವಿದೂಷಕಮ್ ।
ಮಠಾದಾನಾಯಯಾಮಾಸ ತಸ್ಮಾತ್ ಸರ್ವೈರ್ದ್ವಿಜೈಸ್ಸಹ ॥ ೧೨೩

ಪ್ರಖ್ಯಾಪ್ಯ ರಾತ್ರಿವೃತ್ತಾಂತಂ ದದೌ ತಸ್ಮೈ ಚ ತತ್ಕ್ಷಣಮ್ ।
ವಿದೂಷಕಾಯ ಗ್ರಾಮಾಣಾಂ ಸಹಸ್ರಮುಪಕಾರಿಣೇ ॥ ೧೨೪

೧೨೫. ಪೌರೋಹಿತ್ಯದಲ್ಲಿ (ನೆಲೆಗೊಳಿಸಿ) ಅವನಿಗೆ ಛತ್ರ ಮತ್ತು ವಾಹನಗಳನ್ನು (ಗೌರವ ಪೂರ್ವಕವಾಗಿ) ಕೃತಜ್ಞತೆಯಿಂದ ದೊರೆಯು ಕೊಟ್ಟನು. ಜನರೆಲ್ಲರೂ ಆಶ್ಚರ್ಯದಿಂದ ಅವನನ್ನು ನೋಡಿದರು.

೧೨೬. ಹೀಗೆ ವಿದೂಷಕನು ಆಗಲೇ ಸಾಮಂತರಾಜರಿಗೆ ಸಮಾನನಾಗಿಬಿಟ್ಟನು. ದೊಡ್ಡವರಿಗೆ ಮಾಡಿದ ಉಪಕಾರವು ವ್ಯರ್ಥ ಏಕೆ ತಾನೆ ಆದೀತು ?

೧೨೭. ವಿಶಾಲಹೃದಯದ ಆ ವಿದೂಷಕನು ರಾಜನಿಂದ ಪಡೆದ ಆ ಗ್ರಾಮಗಳನ್ನು ಮಠದ ಎಲ್ಲ ವಿಪ್ರರ ಜೊತೆಗೆ ತಾನೂ ಸಮಾನವಾಗಿ ಅನುಭವಿಸುವ ಆಸ್ತಿಯನ್ನಾಗಿ ಮಾಡಿದನು.

೧೨೮. ರಾಜನ ಆಶ್ರಿತನಾಗಿ ಅವನ ಸೇವೆಯನ್ನೇ ಮಾಡುತ್ತಾ ಬೇರೆ ಬ್ರಾಹ್ಮಣರ ಜೊತೆಯಲ್ಲಿ ಗ್ರಾಮಸಮೂಹವನ್ನು ಆಳುತ್ತಾ ವಿದೂಷಕನು ಇದ್ದುಬಿಟ್ಟನು.

೧೨೯. ಕಾಲವು ಕಳೆಯುತ್ತಿರಲಾಗಿ ಬೇರೆ ಎಲ್ಲ ಬ್ರಾಹ್ಮಣರೂ ತಮಗೇ ಪ್ರಾಧಾನ್ಯವು ಬೇಕೆಂದು ಅಪೇಕ್ಷಿಸಿ ವಿದೂಷಕನನ್ನು ಲೆಕ್ಕಕ್ಕೇ ಇಡಲಿಲ್ಲ.

೧೩೦. ಬೇರೆಬೇರೆಯವರಾಗಿ ಪರಸ್ಪರ ಜಗಳವಾಡುವ ಏಳುಸಂಖ್ಯೆಯ ದುಷ್ಟ ಗ್ರಹಗಳೋ ಎಂಬಂತಿದ್ದ ಆ ಬ್ರಾಹ್ಮಣರಿಂದ ಗ್ರಾಮಗಳು ಪೀಡೆಗೆ ಒಳಗಾದುವು.

---

ಪೌರೋಹಿತ್ಯೇ ಚ ಚಕ್ರೇ ತಂ ಪ್ರದತ್ತಚ್ಛತ್ರವಾಹನಮ್ ।
ವಿಪ್ರಂ ಕೃತಜ್ಞೋ ನೃಪತಿಃ ಕೌತುಕಾಲೋಕಿತಂ ಜನೈಃ ॥ ೧೨೫
ಏವಂ ತದೈವ ಸಾಮಂತತುಲ್ಯಃ ಸೋಽಭೂದ್ ವಿದೂಷಕಃ ।
ಮೋಘಾ ಹಿ ನಾಮ ಜಾಯೇತ ಮಹತ್ಸೂಪಕೃತಿಃ ಕುತಃ ॥ ೧೨೬
ಯಾಂಶ್ಚ ಪ್ರಾಪ ನೃಪಾದ್ ಗ್ರಾಮಾನ್ ತಾನ್ ಸರ್ವಾನ್ ಸ ಮಹಾಶಯಃ ।
ತನ್ಮಠಾಶ್ರಯಿಭಿರ್ವಿಪ್ರೈಃ ಸಮಂ ಸಾಧಾರಣಾನ್ ವ್ಯಧಾತ್ ॥ ೧೨೭
ತಸ್ಥೌ ಚ ಸೇವಮಾನಸ್ತಂ ರಾಜಾನಂ ಸ ತದಾಶ್ರಿತಃ ।
ಭುಂಜಾನಶ್ಚ ಸಹಾನ್ಯೈಸ್ತೈರ್ಬ್ರಾಹ್ಮಣೈರ್ಗ್ರಾಮಸಂಚಯಮ್ ॥ ೧೨೮
ಕಾಲೇ ಗಚ್ಛತಿ ಚಾನ್ಯೇ ತೇ ಸರ್ವೇ ಪ್ರಾಧಾನ್ಯಮಿಚ್ಛವಃ ।
ನೈವ ತಂ ಗಣಯಾಮಾಸುರ್ದ್ವಿಜಾ ಧನಮದೋದ್ಧತಾಃ ॥ ೧೨೯
ವಿಭಿನ್ನೈಃ ಸಪ್ತಸಂಖ್ಯಾಕೈರೇಕಸ್ಥಾನಾಶ್ರಯೈರ್ಮಿಥಃ ।
ಸಂಘರ್ಷಾತ್ತೈರಬಾಧ್ಯಂತ ಗ್ರಾಮಾ ದುಷ್ಟೈರ್ಗ್ರಹೈರಿವ ॥ ೧೩೦

೧೩೧. ಅವರೆಲ್ಲರೂ ಸ್ವಚ್ಛಂದರಾಗಿ ವರ್ತಿಸುತ್ತಿರಲು ವಿದೂಷಕನು ಅವರ ಬಗ್ಗೆ ಉದಾಸೀನನಾಗಿದ್ದುಬಿಟ್ಟನು. ಅಲ್ಪ ಭಾವನೆಯ ಜನರಲ್ಲಿ ಧೀರರ ಔದಾಸೀನ್ಯವೇ ಶೋಭಿಸುವುದಲ್ಲವೆ ?

೧೩೨. ಒಮ್ಮೆ ಆ ಬ್ರಾಹ್ಮಣರು ಜಗಳದಲ್ಲೇ ತೊಡಗಿರುವುದನ್ನು ನೋಡಿ ಸ್ವಭಾವದಿಂದಲೇ ಒರಟಾಗಿದ್ದ ಚಕ್ರಧರನೆಂಬ ವಿಪ್ರನೊಬ್ಬನು ಅವರ ಬಳಿಗೆ ಬಂದನು.

೧೩೩. ಆ ಚಕ್ರಧರನು ಒಕ್ಕಣ್ಣಿನವನಾಗಿದ್ದರೂ ಬೇರೆಯವರಿಗಾಗಿ ಮಾಡುವ ನ್ಯಾಯವಾದಗಳಲ್ಲಿ ಅವನಿಗೆ ಸ್ಪಷ್ಟವಾದ ದೃಷ್ಟಿ ಇತ್ತು. ಕುಳ್ಳನಾದರೂ ಮಾತನಲ್ಲಿ ಸುಸ್ಪಷ್ಟನಾಗಿದ್ದ ಆ ವಿಪ್ರನು (ಜಗಳವಾಡುತ್ತಿದ್ದ) ಅವರನ್ನು ಉದ್ದೇಶಿಸಿ ಇಂತೆಂದನು.

೧೩೪. "ಮೋಸಗಾರರೇ, ಹಿಂದೆ ನೀವು ಭಿಕ್ಷುಕರಾಗಿದ್ದು ಈಗ ಈ ಸಂಪತ್ತನ್ನು ಪಡೆದಿದ್ದೀರಿ. ಪರಸ್ಪರ ಸಹನೆಯಿಲ್ಲದವರಾಗಿ ಈಗೇಕೆ ಗ್ರಾಮಗಳನ್ನು ಹಾಳುಗೆಡುವುತ್ತಿದ್ದೀರಿ ?

೧೩೫. ನಿಮ್ಮನ್ನು ಉಪೇಕ್ಷಿಸಿದುದು ವಿದೂಷಕನದೇ ತಪ್ಪು. ಆದ್ದರಿಂದ ನೀವು ಮತ್ತೆ ಭಿಕ್ಷೆ ಎತ್ತಲು ಅಲೆದಾಡುವಿರಿ ಎಂಬುದರಲ್ಲಿ ಸಂದೇಹವಿಲ್ಲ.

೧೩೬. ನಾಯಕನೇ ಇಲ್ಲದಿದ್ದರೂ ಯಾವ ಸ್ಥಾನವು ದೈವಾಧೀನವಾದ ವೃದ್ಧಿಯನ್ನು ಪಡೆದಿರುವುದೋ ಅದೇ ಸ್ವಲ್ಪ ಲೇಸು. ಎಲ್ಲ ವಸ್ತುಗಳನ್ನೂ ಹಾಳುಗೆಡುವುವ, ಪರಸ್ಪರ ವಿರುದ್ಧಾಭಿಪ್ರಾಯದ ಅನೇಕ ನಾಯಕರಿರುವ ಸ್ಥಾನ ಲೇಸಲ್ಲ.

---

ಉಚ್ಛೃಂಖಲೇಷು ತೇಷ್ವಾಸೀದುದಾಸೀನೋ ವಿದೂಷಕಃ ।
ಅಲ್ಪಭಾವೇಷು ಧೀರಾಣಾಮವಜ್ಞೈವ ಹಿ ಶೋಭತೇ ॥ ೧೩೧
ಏಕದಾ ಕಲಹಾಸಕ್ತಾನ್ ದೃಷ್ಟ್ವಾ ತಾನಭ್ಯುಪಾಯಯೌ ।
ಕಶ್ಚಿಚ್ಚಕ್ರಧರೋ ನಾಮ ವಿಪ್ರಃ ಪ್ರಕೃತಿನಿಷ್ಠುರಃ ॥ ೧೩೨
ಪರಾರ್ಥನ್ಯಾಯವಾದೇಷು ಕಾಣೋಽಪ್ಯಮ್ಲಾನದರ್ಶನಃ ।
ಕುಬ್ಜೋಽಪಿ ವಾಚಿ ಸುಸ್ಪಷ್ಟೋ ವಿಪ್ರಸ್ತಾನಿತ್ಯಭಾಷತ ॥ ೧೩೩
ಪ್ರಾಪ್ತಾ ಭಿಕ್ಷಾಚರೈರ್ಭೂತ್ವಾ ಭವದ್ಭಿಃ ಶ್ರೀರಿಯಂ ಶಠಾಃ ।
ತನ್ನಾಶಯಥ ಕಿಂ ಗ್ರಾಮಾನ್ ಅನ್ಯೋನ್ಯಮಸಹಿಷ್ಣವಃ ॥ ೧೩೪
ವಿದೂಷಕಸ್ಯ ದೋಷೋಽಯಂ ಯೇನ ಯೂಯಮುಪೇಕ್ಷಿತಾಃ ।
ತದಸಂದಿಗ್ಧಮಚಿರಾತ್ ಪುನರ್ಭಿಕ್ಷಾಂ ಭ್ರಮಿಷ್ಯಥ ॥ ೧೩೫
ವರಂ ಹಿ ದೈವಾಯತ್ತೈಕವೃದ್ಧಿಸ್ಥಾನಮನಾಯಕಮ್ ।
ನ ತು ವಿಪ್ಲುತಸರ್ವಾರ್ಥಂ ವಿಭಿನ್ನಬಹುನಾಯಕಮ್ ॥ ೧೩೬

೧೩೭. ನಿಮ್ಮ ಮುಖಂಡರು ರಕ್ಷಿಸಿದ ಸಂಪತ್ತಿನಿಂದ ನಿಮಗೆ ಪ್ರಯೋಜನವಾಗಬೇಕಿದ್ದರೆ, ನನ್ನ ಮಾತಿನಂತೆ ನೀವು ಯಾವನನ್ನಾದರೂ ಧೀರನನ್ನು ನಿಮ್ಮ ನಾಯಕನನ್ನಾಗಿ ಮಾಡಿಕೊಳ್ಳಿರಿ.'

೧೩೮. ಆ ಮಾತನ್ನು ಕೇಳಿದ ಅವರಲ್ಲಿ ಪ್ರತಿಯೊಬ್ಬನೂ ತಾನೇ ನಾಯಕನಾಗಬೇಕು ಎಂದು ಅಪೇಕ್ಷಿಸಿದನು.  ಆಗ ಚಕ್ರಧರನು ಚೆನ್ನಾಗಿ ಆಲೋಚಿಸಿ ಆ ಮೂಢರಿಗೆ ಹೀಗೆ ಹೇಳಿದನು.

೧೩೯. "ಹಾಗಿದ್ದರೆ ಸ್ಪರ್ಧಿಗಳಾದ ನಿಮಗೆ ನಾನು ಈ (ನಿಯಮವನ್ನು) ವಿಧಿಸುತ್ತೇನೆ. ಇಲ್ಲಿನ ಶ್ಮಶಾನದ ಗಲ್ಲಿಗೇರಿಸುವ ಸ್ಥಳದಲ್ಲಿ ಇಂದು ಮೂವರು ಕಳ್ಳರನ್ನು ವಧಿಸಿದ್ದಾರೆ.

೧೪೦. ರಾತ್ರಿಯಲ್ಲಿ ಹೋಗಿ ಯಾವ ಧೈರ್ಯಶಾಲಿಯು ಆ ಕಳ್ಳರ ಮೂಗುಗಳನ್ನು ಕತ್ತರಿಸಿ ಇಲ್ಲಿಗೆ ತರುವನೋ ಅವನೇ ನಿಮ್ಮ ನಾಯಕನಾಗಲಿ.  ಏಕೆಂದರೆ ವೀರನೇ ನಾಯಕನಾಗಲು ಅರ್ಹನು.'

೧೪೧. ಹೀಗೆ ಚಕ್ರಧರನು ವಿಪ್ರರಿಗೆ ಹೇಳಲು ಸಮೀಪದಲ್ಲೇ ಇದ್ದ ವಿದೂಷಕನು "ಹಾಗೇ ಮಾಡಿರಿ, ಅದರಲ್ಲಿ ತಪ್ಪೇನು ? " ಎಂದು ಅವರಿಗೆ ಹೇಳಿದನು.

೧೪೨. ಆಗ ಆ ವಿಪ್ರರಿಂತೆಂದರು ""ನಾವು ಈ ಕಾರ್ಯವನ್ನು ಮಾಡಲು ಶಕ್ತರಲ್ಲ. ಯಾವನು ಶಕ್ತನೋ ಅವನು ಮಾಡಲಿ.  ನಾವು ನಿಯಮಕ್ಕೆ ಬದ್ಧರಾಗಿರುತ್ತೇವೆ."

---

ತದೇಕಂ ನಾಯಕಂ ಧೀರಂ ಕುರುಧ್ವಂ ವಚಸಾ ಮಮ ।
ಸ್ಥಿರಯಾ ಯದಿ ಕೃತ್ಯಂ ವೋ ಧುರ್ಯರಕ್ಷಿತಯಾ ಶ್ರಿಯಾ ॥ ೧೩೭
ತಚ್ಛ್ರುತ್ವಾ ನಾಯಕತ್ವಂ ತೇ ಸರ್ವೇಽಪ್ಯೈಚ್ಛನ್ ಯದಾತ್ಮನಃ ।
ತದಾ ವಿಚಿಂತ್ಯ ಮೂಢಾಂಸ್ತಾನ್ ಪುನಶ್ಚಕ್ರಧರೋಽಬ್ರವೀತ್ ॥ ೧೩೮
ಸಂಘರ್ಷಶಾಲಿನಾಂ ತರ್ಹಿ ಸಮಯಂ ವೋ ದದಾಮ್ಯಹಮ್ ।
ಇತಃ ಶ್ಮಶಾನೇ ಶೂಲಾಯಾಂ ತ್ರಯಶ್ಚೌರಾ ನಿಷೂದಿತಾಃ ॥ ೧೩೯
ನಾಸಾಸ್ತೇಷಾಂ ನಿಶಿ ಛಿತ್ವಾ ಯಃ ಸುಸತ್ತ್ವ ಇಹಾನಯೇತ್ ।
ಸ ಯುಷ್ಮಾಕಂ ಪ್ರಧಾನಃ ಸ್ಯಾದ್ ವೀರೋ ಹಿ ಸ್ವಾಮ್ಯಮರ್ಹತಿ ॥ ೧೪೦
ಇತಿ ಚಕ್ರಧರೇಣೋಕ್ತಾನ್ ವಿಪ್ರಾಂಸ್ತಾನ್ ಅಂತಿಕಸ್ಥಿತಃ ।
ಕುರುಧ್ವಮೇತತ್ಕೋ ದೋಷ ಇತ್ಯುವಾಚ ವಿದೂಷಕಃ ॥ ೧೪೧
ತತಸ್ತೇಽಸ್ಯಾವದನ್ ವಿಪ್ರಾ ನೈತತ್ಕರ್ತುಂ ಕ್ಷಮಾ ವಯಮ್ ।
ಯೋ ವಾ ಶಕ್ತಃ ಸ ಕುರುತಾಂ ಸಮಯೇ ಚ ವಯಂ ಸ್ಥಿತಾಃ ॥ ೧೪೨

೧೪೩ ಆಗ ವಿದೂಷಕನು "ಅಯ್ಯ, ನಾನೇ ಆ ಕೆಲಸವನ್ನು ಮಾಡುತ್ತೇನೆ. ಶ್ಮಶಾನದಿಂದ ಅವರ ಮೂಗುಗಳನ್ನು ಕತ್ತರಿಸಿ ತರುತ್ತೇನೆ " ಎಂದು ಹೇಳಿದನು.

೧೪೪. ಅದು ಮಾಡಲು ಕಷ್ಟವಾದ ಕೆಲಸವೆಂದು ತಿಳಿದುಕೊಂಡು ಆ ಮೂಢರು "ಹಾಗೆ ಮಾಡಿದರೆ ನೀನೇ ನಮ್ಮ ಒಡೆಯ, ಇದು ನಮ್ಮ ಒಪ್ಪಂದ" ಎಂದು ಹೇಳಿದರು.

೧೪೫ ಹೀಗೆ ಅವರಿಂದ ಒಪ್ಪಂದವನ್ನು ಹೇಳಿಸಿ ರಾತ್ರಿ ಆದಾಗ ಅವರಿಗೆ ಹೋಗಿಬರುವೆನೆಂದು ಹೇಳಿ ವಿದೂಷಕನು ಶ್ಮಶಾನಕ್ಕೆ ಹೋದನು.

೧೪೬ ಯೋಚನೆ ಮಾಡಿದ ಕೂಡಲೇ ಬಳಿ ಬರುವ ಅಗ್ನಿದತ್ತವಾದ ಖಡ್ಗವೊಂದನ್ನೇ ಸಹಾಯವಾಗಿಟ್ಟುಕೊಂಡು ತನ್ನ ಕರ್ಮದಂತೆ ಭಯಂಕರವಾಗಿದ್ದ ಶ್ಮಶಾನವನ್ನು ಪ್ರವೇಶಿಸಿದನು.

೧೪೭ ಡಾಕಿನಿಯರ ಕೂಗಿನಿಂದ ಶ್ಮಶಾನದಲ್ಲಿ ಹದ್ದುಗಳ ಮತ್ತು ಕಾಗೆಗಳ ಕಿರಿಚಾಟವು ಅಧಿಕವಾಗುತ್ತಿತ್ತು. ಉಲ್ಕಾಮುಖಿಗಳ ಬಾಯಿನ ಜ್ವಾಲೆಗಳ ಬೆಂಕಿಯಿಂದ ಚಿತೆಗಳ ಅಗ್ನಿಯು ಇನ್ನೂ ಹರಡುತ್ತಿತ್ತು.

೧೪೮. ಅವುಗಳ ಮಧ್ಯದಲ್ಲಿ ಶೂಲಕ್ಕೆ ಏರಿಸಲ್ಪಟ್ಟಿದ್ದ ಆ ಪುರುಷರನ್ನು ಅವನು ನೋಡಿದನು. ಮೂಗನ್ನು ಕತ್ತರಿಸಿಬಿಟ್ಟಾರು ಎಂಬ ಭಯದಿಂದಲೋ ಎಂಬಂತೆ ಅವರು ಮುಖಗಳನ್ನು ಮೇಲಕ್ಕೆ ತಿರುಗಿಸಿಕೊಂಡಿದ್ದರು.

---

ತತೋ ವಿದೂಷಕೋಽವಾದೀದಹಮೇತತ್ ಕರೋಮಿ ಭೋಃ ।
ಆನಯಾಮಿ ನಿಶಿ ಚ್ಛಿತ್ವಾ ನಾಸಾಸ್ತೇಷಾಂ ಶ್ಮಶಾನತಃ ॥ ೧೪೩
ತತಸ್ತದ್ ದುಷ್ಕರಂ ಮತ್ವಾ ತೇಽಪಿ ಮೂಢಾಸ್ತಮಬ್ರುವನ್ ।
ಏವಂ ಕೃತೇ ತ್ವಮಸ್ಮಾಕಂ ಸ್ವಾಮೀ ನಿಯಮ ಏಷ ನಃ ॥ ೧೪೪
ಇತ್ಯೇವಾಖ್ಯಾಪ್ಯ ಸಮಯಂ ಪ್ರಾಪ್ತಾಯಾಂ ರಜನೌ ಚ ತಾನ್ ।
ಆಮಂತ್ರ್ಯ ವಿಪ್ರಾನ್ ಪ್ರಯಯೌ ಶ್ಮಶಾನಂ ಸ ವಿದೂಷಕಃ ॥ ೧೪೫
ಪ್ರವಿವೇಶ ಚ ತದ್ವೀರೋ ನಿಜಂ ಕರ್ಮೇವ ಭೀಷಣಮ್ ।
ಚಿಂತಿತೋಪಸ್ಥಿತಾಗ್ನೇಯಕೃಪಾಣೈಕಪರಿಗ್ರಹಃ ॥ ೧೪೬
ಡಾಕಿನೀನಾದಸಂವೃದ್ಧಗೃಧ್ರವಾಯಸವಾಶಿತೇ ।
ಉಲ್ಕಾಮುಖಮುಖೋಲ್ಕಾಗ್ನಿವಿಸ್ಫಾರಿತಚಿತಾನಲೇ ॥ ೧೪೭
ದದರ್ಶ ತತ್ರ ಮಧ್ಯೇ ಚ ಸ ತಾನ್ ಶೂಲಾಧಿರೋಪಿತಾನ್ ।
ಪುರುಷಾನ್ ನಾಸಿಕಾಛೇದಭಿಯೇವೋರ್ಧ್ವೀಕೃತಾನನಾನ್ ॥ ೧೪೮

೧೪೯. ವಿದೂಷಕನು ಅವರ ಬಳಿಗೆ ಹೋಗುವ ಹೊತ್ತಿಗೆ ಅವರನ್ನು ಬೇತಾಳಗಳು ಮೆಟ್ಟಿಕೊಂಡಿದ್ದವು. ಮೂವರೂ ಅವನನ್ನು ಮುಷ್ಟಿಗಳಿಂದ ಹೊಡೆದರು.

೧೫೦. ಯಾವ ಹೆದರಿಕೆಯೂ ಇಲ್ಲದೆ ಅವನು ಅವರನ್ನು ಖಡ್ಗದಿಂದ ತಿರುಗಿಸಿ ಹೊಡೆದನು. ಧೀರರ ಹೃದಯದಲ್ಲಿ ಭಯದಿಂದ ಪ್ರಯತ್ನಿಸುವುದನ್ನು ಯಾರೂ ಕಲಿಸಿಲ್ಲವಷ್ಟೆ.

೧೫೧. ಅದರಿಂದ ಬೇತಾಳಗಳ ವಿಕಾರವು ದೂರವಾದ ಮೇಲೆ ಅವರ ಮೂಗುಗಳನ್ನು ಕತ್ತರಿಸಿ ಆ ಜಾಣನು ಅವುಗಳನ್ನು ಭದ್ರವಾಗಿ ಬಟ್ಟೆಯಲ್ಲಿ ಕಟ್ಟಿ ಹಿಡಿದುಕೊಂಡನು.

೧೫೨. ಹಿಂದಿರುಗಿ ಬರುವಾಗ ವಿದೂಷಕನು ಶ್ಮಶಾನದಲ್ಲಿ ಒಂದು ಶವದ ಮೇಲೆ ಕುಳಿತುಕೊಂಡು ಜಪ ಮಾಡುತ್ತಿದ್ದ ಸಂನ್ಯಾಸಿಯನ್ನು ಕಂಡನು.

೧೫೩. ಆ ಸಂನ್ಯಾಸಿಯ ಚೇಷ್ಟೆಗಳನ್ನು ನೋಡುವ ಕುತೂಹಲದಿಂದ ಹತ್ತಿರ ಹೋಗಿ ಅವನ ಬೆನ್ನ ಹಿಂದೆ ಗುಟ್ಟಾಗಿ ಬಚ್ಚಿಟ್ಟುಕೊಂಡು ನಿಂತುಕೊಂಡನು.

೧೫೪. ಒಂದು ಕ್ಷಣ ಕಳೆಯುವಷ್ಟರಲ್ಲಿ ಸಂನ್ಯಾಸಿಯ ಕೆಳಗಿದ್ದ ಶವವು ಫೂತ್ಕಾರ ಶಬ್ದವನ್ನು ಮಾಡಿತು. ಅದರ ಬಾಯಿಂದ ಜ್ವಾಲೆಗಳು ಹೊರಬಂದುವು. ಹೊಕ್ಕಳಿನಿಂದ ಸಾಸಿವೆಗಳು ಸಿಡಿದುವು.

---

ಯಾವಚ್ಚ ನಿಕಟಂ ತೇಷಾಂ ಪ್ರಾಪ ತಾವತ್ ತ್ರಯೋಽಪಿ ತೇ ।
ವೇತಾಲಾಧಿಷ್ಠಿತಾಸ್ತಸ್ಮಿನ್ ಪ್ರಹರಂತಿ ಸ್ಮ ಮುಷ್ಟಿಭಿಃ ॥ ೧೪೯
ನಿಷ್ಕಂಪ ಏವ ಖಡ್ಗೇನ ಸೋಽಪಿ ಪ್ರತಿಜಘಾನ ತಾನ್ ।
ನ ಶಿಕ್ಷಿತಃ ಪ್ರಯತ್ನೋ ಹಿ ಧೀರಾಣಾಂ ಹೃದಯೇ ಭಿಯಾ ॥ ೧೫೦
ತೇನಾಪಗತವೇತಾಲವಿಕಾರಾಣಾಂ ಸ ನಾಸಿಕಾಃ ।
ತೇಷಾಂ ಚಕರ್ತ ಬದ್ಧ್ವಾ ಚ ಕೃತೀ ಜಗ್ರಾಹ ವಾಸಸಿ ॥ ೧೫೧
ಆಗಚ್ಛಂಶ್ಚ ದದರ್ಶೈಕಂ ಶವಸ್ಯೋಪರಿ ಸಂಸ್ಥಿತಮ್ ।
ಪ್ರವ್ರಾಜಕಂ ಶ್ಮಶಾನೇಽತ್ರ ಜಪಂತಂ ಸ ವಿದೂಷಕಃ ॥ ೧೫೨
ತಚ್ಚೇಷ್ಟಾಲೋಕನಕ್ರೀಡಾಕೌತುಕಾದುಪಗಮ್ಯ ತಮ್ ।
ಪ್ರಚ್ಛನ್ನಃ ಪೃಷ್ಠತಸ್ತಸ್ಯ ತಸ್ಥೌ ಪ್ರವ್ರಾಜಕಸ್ಯ ಸಃ ॥ ೧೫೩
ಕ್ಷಣಾತ್ ಪ್ರವ್ರಾಜಕಸ್ಯಾಧಃ ಫೂತ್ಕಾರಂ ಮುಕ್ತವಾನ್ ಶವಃ ।
ನಿರಗಾಚ್ಚ ಮುಖಾತ್ತಸ್ಯ ಜ್ವಾಲಾ ನಾಭೇಶ್ಚ ಸರ್ಷಪಾಃ ॥ ೧೫೪

೧೫೫. ಸಂನ್ಯಾಸಿಯು ಆ ಸಾಸಿವೆಗಳನ್ನು ತೆಗೆದುಕೊಂಡು ಎದ್ದು ಅಂಗೈಯಿಂದ ಆ ಶವಕ್ಕೆ ಹೊಡೆದನು.

೧೫೬. ಆಗ ಶಕ್ತಿಯುತವಾದ ಬೇತಾಳವು ಮೆಟ್ಟಿಕೊಂಡುದರಿಂದ ಶವವು ಎದ್ದು ನಿಂತುಕೊಂಡಿತು. ಆಮೇಲೆ ಸಂನ್ಯಾಸಿಯು ಆ ಶವದ ಹೆಗಲ ಮೇಲೆ ಏರಿದನು.

೧೫೭. ಹಾಗೆ ಅದನ್ನು ಏರಿ ಕುಳಿತು ಸಂನ್ಯಾಸಿಯು ಬೇಗನೆ ಅಲ್ಲಿಂದ ಹೊರಟನು. ಅವನಿಗೆ ಕಾಣದಂತೆ ವಿದೂಷಕನೂ ಅವನನ್ನು ಸದ್ದಿಲ್ಲದೆ ಹಿಂಬಾಲಿಸಿದನು.

೧೫೮. ಸ್ವಲ್ಪ ದೂರ ಹೋದ ಮೇಲೆ ವಿದೂಷಕನಿಗೆ ಕಾತ್ಯಾಯನಿಯ ವಿಗ್ರಹ ಇದ್ದ ನಿರ್ಜನವಾದ ಒಂದು ದೇವಾಲಯವು ಕಂಡು ಬಂದಿತು.

೧೫೯. ಅಲ್ಲಿ ಬೇತಾಳನ ಹೆಗಲಿನಿಂದ ಇಳಿದ ಸಂನ್ಯಾಸಿಯು ಅಲ್ಲಿಂದ ಗರ್ಭಗುಡಿಯೊಳಕ್ಕೆ ಹೋದನು. ಬೇತಾಳ ಭೂಮಿಯ ಮೇಲೆ ಉರುಳಿತು.

೧೬೦. ವಿದೂಷಕನು ಜಾಣತನದಿಂದ ಯಾರಿಗೂ ಕಾಣಿಸದೆ ಅಲ್ಲೇ ಇದ್ದು ನೋಡುತ್ತಿದ್ದನು. ಸಂನ್ಯಾಸಿಯು ದೇವಿಗೆ ಪೂಜೆ ಮಾಡಿ ಹೀಗೆ ಬಿನ್ನವಿಸಿದನು.

೧೬೧. "ದೇವಿ, ನೀನು ಸಂತುಷ್ಟಳಾಗಿದ್ದರೆ, ನನಗೆ ಇಷ್ಟವಾದ ವರವನ್ನು ನೀಡು. ಇಲ್ಲದಿದ್ದರೆ ನಾನು ಆತ್ಮಾರ್ಪಣೆ ಮಾಡಿ ನಿನ್ನನ್ನು ಸಂತೋಷಪಡಿಸುವೆನು."

---

ಗೃಹೀತ್ವಾ ಸರ್ಷಪಾನ್ ತಾಂಶ್ಚ ಸ ಪರಿವ್ರಾಜಕಸ್ತತಃ ।
ಉತ್ಥಾಯ ತಾಡಯಾಮಾಸ ಶವಂ ಪಾಣಿತಲೇನ ತಮ್ ॥ ೧೫೫

ಉದತಿಷ್ಠತ್ ಸ ಚೋತ್ತಾಲವೇತಾಲಾಧಿಷ್ಠಿತಃ ಶವಃ ।
ಆರುರೋಹ ಚ ತಸ್ಯೈವ ಸ್ಕಂಧೇ ಪ್ರವ್ರಾಜಕೋಽಥ ಸಃ ॥ ೧೫೬

ತದಾರೂಢಶ್ಚ ಸಹಸಾ ಗಂತುಂ ಪ್ರವವೃತೇ ತತಃ ।
ವಿದೂಷಕೋಽಪಿ ತಂ ತೂಷ್ಣೀಮನ್ವಗಚ್ಛದಲಕ್ಷಿತಃ ॥ ೧೫೭

ನಾತಿದೂರಮತಿಕ್ರಮ್ಯ ಸ ದದರ್ಶ ವಿದೂಷಕಃ ।
ಶೂನ್ಯಂ ಕಾತ್ಯಾಯನೀಮೂರ್ತಿಸನಾಥಂ ದೇವತಾಗೃಹಮ್ ॥ ೧೫೮

ತತ್ರಾವತೀರ್ಯವೇತಾಲಸ್ಕಂಧಾತ್ ಪ್ರವ್ರಾಜಕಸ್ತತಃ ।
ವಿವೇಶ ಗರ್ಭಭವನಂ ವೇತಾಲೋಽಪ್ಯಪತದ್ ಭುವಿ ॥ ೧೫೯

ವಿದೂಷಕಶ್ಚ ತತ್ರಾಸೀದ್ಯುಕ್ತ್ಯಾ ಪಶ್ಯನ್ನಲಕ್ಷಿತಃ ।
ಪ್ರವ್ರಾಜಕೋಽಪಿ ಸಂಪೂಜ್ಯ ತತ್ರ ದೇವೀಂ ವ್ಯಜಿಜ್ಞಪತ್ ॥ ೧೬೦

ತುಷ್ಟಾಸಿ ಯದಿ ತದ್ದೇವಿ ದೇಹಿ ಮೇ ವರಮೀಪ್ಸಿತಮ್ ।
ಅನ್ಯಥಾತ್ಮೋಪಹಾರೇಣ ಪ್ರೀಣಾಮಿ ಭವತೀಮಹಮ್ ॥ ೧೬೧

೧೬೨. ತೀವ್ರವಾದ ಮಂತ್ರಸಾಧನೆಯಿಂದ ಗರ್ವಪಡುತ್ತಿದ್ದ ಆ ಸಂನ್ಯಾಸಿಗೆ ಗರ್ಭಗೃಹದಿಂದ ಹೊಮ್ಮಿದ ವಾಣಿಯು ಹೀಗೆಂದಿತು.

೧೬೩. "ಆದಿತ್ಯಸೇನಮಹಾರಾಜನ ಮಗಳನ್ನು ಇಲ್ಲಿಗೆ ತಂದು ಬಲಿಯಾಗಿ ಅರ್ಪಿಸು. ಆಮೇಲೆ ನಿನ್ನ ಇಷ್ಟಾರ್ಥವನ್ನು ಪಡೆಯುವೆ."

೧೬೪. ಈ ಮಾತನ್ನು ಕೇಳಿ ಸಂನ್ಯಾಸಿಯು ಗುಡಿಯಿಂದ ಹೊರಗೆ ಬಂದು ಕೈಯಿಂದ ತಟ್ಟಿ ಫೂತ್ಕಾರ ಮಾಡುತ್ತಿದ್ದ ಬೇತಾಳನನ್ನೆಬ್ಬಿಸಿದನು.

೧೬೫. ಬೇತಾಳನ ಬಾಯಿಂದ ಬೆಂಕಿಯ ಜ್ವಾಲೆಗಳು ಹೊಮ್ಮುತ್ತಿದ್ದುವು. ಅವನ ಹೆಗಲಿನ ಮೇಲೆ ಕುಳಿತು ಸಂನ್ಯಾಸಿಯು ರಾಜಪುತ್ರಿಯನ್ನು ತರುವುದಕ್ಕಾಗಿ ಆಕಾಶಮಾರ್ಗದಿಂದ ಹಾರುತ್ತಾ ಹೋದನು.

೧೬೬. ಅದೆಲ್ಲವನ್ನೂ ನೋಡಿದ ವಿದೂಷಕನು 'ನಾನು ಬದುಕಿರುವಾಗ ಇವನು ರಾಜಕುಮಾರಿಯನ್ನು ಹೇಗೆ ಕೊಲ್ಲುತ್ತಾನೆ' ಎಂದು ಚಿಂತಿಸಿದನು.

೧೬೭. "ಈ ದುಷ್ಟನು ಬರುವವರೆಗೂ ಇಲ್ಲೇ ಇರುವೆನು' ಎಂದು ಆಲೋಚಿಸಿದ ಆ ವಿದೂಷಕನು ಅಲ್ಲೇ ಬಚ್ಚಿಟ್ಟುಕೊಂಡಿದ್ದನು.

೧೬೮. ಸಂನ್ಯಾಸಿಯು ವಾಯುಮಾರ್ಗದಿಂದಲೇ ಹೋಗಿ ಕಿಟಕಿಯಿಂದ ಅಂತಃಪುರವನ್ನು ಪ್ರವೇಶಿಸಿ ಮಲಗಿದ್ದ ರಾಜಕುಮಾರಿಯನ್ನು ತಲುಪಿದನು.

---

ಇತ್ಯುಕ್ತವಂತಂ ತಂ ತೀವ್ರಮಂತ್ರಸಾಧನಗರ್ವಿತಮ್ ।
ಪ್ರವ್ರಾಜಕಂ ಜಗಾದೈವಂ ವಾಣೀ ಗರ್ಭಗೃಹೋದ್ಗತಾ ॥ ೧೬೨
ಆದಿತ್ಯಸೇನನೃಪತೇಃ ಸುತಾಮಾನೀಯ ಕನ್ಯಕಾಮ್ ।
ಉಪಹಾರೀಕುರುಷ್ವೇಹ ತತಃ ಪ್ರಾಪ್ಸ್ಯಸಿ ವಾಂಛಿತಮ್ ॥ ೧೬೩
ಏತಚ್ಛ್ರುತ್ವಾ ಸ ನಿರ್ಗತ್ಯ ಕರೇಣಾಹತ್ಯ ತಂ ಪುನಃ ।
ಪ್ರವ್ರಾಡುತ್ಥಾಪಯಾಮಾಸ ವೇತಾಲಂ ಮುಕ್ತಫೂತ್ಕೃತಿಮ್ ॥ ೧೬೪
ತಸ್ಯ ಚ ಸ್ಕಂಧಮಾರುಹ್ಯ ನಿರ್ಯದ್ವಕ್ತ್ರಾನಲಾರ್ಚಿಷಃ ।
ಆನೇತುಂ ರಾಜಪುತ್ರೀಂ ತಾಮುತ್ಪತ್ಯ ನಭಸಾ ಯಯೌ ॥ ೧೬೫
ವಿದೂಷಕೋಽಪಿ ತತ್ಸರ್ವಂ ದೃಷ್ಟ್ವಾ ತತ್ರ ವ್ಯಚಿಂತಯತ್ ।
ಕಥಂ ರಾಜಸುತಾನೇನ ಹನ್ಯತೇ ಮಯಿ ಜೀವತಿ ॥ ೧೬೬
ಇಹೈವ ತಾವತ್ತಿಷ್ಠಾಮಿ ಯಾವದಾಯಾತ್ಯಸೌ ಶಠಃ ।
ಇತ್ಯಾಲೋಚ್ಯ ಸ ತತ್ರೈವ ತಸ್ಥೌ ಛನ್ನೋ ವಿದೂಷಕಃ ॥ ೧೬೭
ಪ್ರವ್ರಾಜಕಶ್ಚ ಗತ್ವೈವ ವಾತಾಯನಪಥೇನ ಸಃ ।
ಪ್ರವಿಶ್ಯಾಂತಃ ಪುರಂ ಪ್ರಾಪ ಸುಪ್ತಾಂ ನಿಶಿ ನೃಪಾತ್ಮಜಾಮ್ ॥ ೧೬೮

೧೬೯. ತನ್ನ ಬೆಳಕಿನಿಂದ ದಿಕ್ಕುಗಳನ್ನು ಬೆಳಗುವ ಚಂದ್ರಕಲೆಯನ್ನು ರಾಹು ಹಿಡಿದಂತೆ ತಮೋಗುಣದಿಂದ ತುಂಬಿದ್ದ ಆ ಸಂನ್ಯಾಸಿಯು ರಾಜಕುಮಾರಿಯನ್ನು ಹಿಡಿದುಕೊಂಡು ಆಕಾಶದಲ್ಲೇ (ಹಾರುತ್ತಾ) ಬಂದನು.

೧೭೦. 'ಹಾ ಅಪ್ಪಾ ಹಾ ಅಮ್ಮಾ' ಎಂದು ಜೋರಾಗಿ ಅರಚುತ್ತಿದ್ದ ಅವಳನ್ನು ಹೊತ್ತುಕೊಂಡು ಬಂದ ಅವನು ಅದೇ ದೇವಸ್ಥಾನದಲ್ಲಿ ಆಕಾಶದಿಂದ ಇಳಿದನು.

೧೭೧. ಕೂಡಲೇ ಬೇತಾಳನನ್ನು ಬಿಟ್ಟು ಆ ಕನ್ಯಾರತ್ನವನ್ನು ಹಿಡಿದುಕೊಂಡು ಅವನು ದೇವಿಯ ಗರ್ಭಗೃಹದೊಳಕ್ಕೆ ನುಗ್ಗಿದನು.

೧೭೨. ಅಲ್ಲಿ ಅವನು ರಾಜಪುತ್ರಿಯನ್ನು ಕೊಲ್ಲಲು ಸಿದ್ಧನಾಗುವುದರೊಳಗೆ ಖಡ್ಗವನ್ನು ಸೆಳೆದು ವಿದೂಷಕನೂ ಅಲ್ಲಿಗೆ ಪ್ರವೇಶಿಸಿದನು.

೧೭೩. "ಆಹ್ ಪಾಪಿ, ಮಾಲತೀಪುಷ್ಪವನ್ನು ಕಲ್ಲಿನಿಂದ ಜಜ್ಜಲು ಬಯಸುವೆಯಾ ? ಇಂಥ ಆಕೃತಿಯಲ್ಲಿ ಶಸ್ತ್ರವನ್ನು ಬಳಸಲು ಅಪೇಕ್ಷಿಸುವೆಯಾ ?'

೧೭೪. ಎಂದು ಹೇಳಿ ಎಗರಾಡುತ್ತಿದ್ದ ಸಂನ್ಯಾಸಿಯ ತಲೆಗೂದಲನ್ನು ಹಿಡಿದೆಳೆದು ವಿದೂಷಕನು ಅವನ ತಲೆಯನ್ನು ಕತ್ತರಿಸಿ ಹಾಕಿದನು.

೧೭೫. ರಾಜಕುಮಾರಿಯೋ ಹೆದರಿಕೆಯಿಂದ ಕಂಗಾಲಾಗಿ ತನ್ನಲ್ಲೇ ತಾನು ಹುದುಗಿಕೊಳ್ಳುವಂತೆ ಇದ್ದು ಯಾರನ್ನೂ ಪೂರ್ಣವಾಗಿ ಗುರುತು ಹಿಡಿಯದ ಸ್ಥಿತಿಯಲ್ಲಿದ್ದಳು. ವಿದೂಷಕನು ಅವಳಿಗೆ ಆಶ್ವಾಸನೆಯನ್ನಿತ್ತನು.

---

ಆಯಯೌ ಚ ಗೃಹೀತ್ವಾ ತಾಂ ಗಗನೇನ ತಮೋಮಯಃ ।
ಕಾಂತಿಪ್ರಕಾಶಿತದಿಶಂ ರಾಹುಃ ಶಶಿಕಲಾಮಿವ ॥ ೧೬೯

ಹಾ ತಾತ ಹಾಂಬೇತಿ ಚ ತಾಂ ಕ್ರುದಂತೀಂ ಕನ್ಯಕಾಂ ವಹನ್ ।
ತತ್ರೈವ ದೇವೀಭವನೇ ಸೋಽಂತರಿಕ್ಷಾದವಾತರತ್ ॥ ೧೭೦

ಪ್ರವಿವೇಶ ಚ ತತ್ಕಾಲಂ ವೇತಾಲಂ ಪ್ರವಿಮುಚ್ಯ ಸಃ ।
ಕನ್ಯಾರತ್ನಂ ತದಾದಾಯ ದೇವಿಗರ್ಭಗೃಹಾಂತರಮ್ ॥ ೧೭೧

ತತ್ರ ಯಾವನ್ನಿಹಂತುಂ ತಾಂ ರಾಜಪುತ್ರೀಮಿಯೇಷ ಸಃ ।
ತಾವದಾಕೃಷ್ಟಖಡ್ಗೋಽತ್ರ ಪ್ರವಿವೇಶ ವಿದೂಷಕಃ ॥ ೧೭೨

ಆಃ ಪಾಪ ಮಾಲತೀಪುಷ್ಪಮಶ್ಮನಾ ಹಂತುಮೀಹಸೇ ।
ಯದಸ್ಯಾಮಾಕೃತೌ ಶಸ್ತ್ರಂ ವ್ಯಾಪಾರಯಿತುಮಿಚ್ಛಸಿ ॥ ೧೭೩

ಇತ್ಯುಕ್ತ್ವಾ ಕೃಷ್ಯ ಕೇಶೇಷು ಶಿರಸ್ತಸ್ಯ ವಿವೇಲ್ಲತಃ ।
ಪ್ರವ್ರಾಜಕಸ್ಯ ಚಿಚ್ಛೇದ ಖಡ್ಗೇನ ಸ ವಿದೂಷಕಃ ॥ ೧೭೪

ಆಶ್ವಾಸಯಾಮಾಸ ಚ ತಾಂ ರಾಜಪುತ್ರೀಂ ಭಯಾಕುಲಾಮ್ ।
ಪ್ರವಿಶಂತೀಮಿವಾಂಗಾನಿ ಕಿಂಚಿತ್ ಪ್ರತ್ಯಭಿಜಾನತೀಮ್ ॥ ೧೭೫

೧೭೬. ಆ ಧೀರನು ಆಗ 'ಈ ರಾಜಪುತ್ರಿಯನ್ನು ರಾಜನ ಅಂತಃಪುರಕ್ಕೆ ಹೇಗೆ ಇಲ್ಲಿಂದ ಕರೆದುಕೊಂಡು ಹೋಗಲಿ' ಎಂದು ಆಲೋಚಿಸತೊಡಗಿದನು.

೧೭೭. "ಹೇ ವಿದೂಷಕ, ಇದನ್ನು ಕೇಳು. ನೀನು ಯಾವ ಸಂನ್ಯಾಸಿಯನ್ನು ಕೊಂದೆಯೋ ಅವನಿಗೆ ದೊಡ್ಡ ಬೇತಾಳ ವಶವಾಗಿದ್ದಾನೆ. ಹಾಗೆಯೇ (ಮಂತ್ರದ) ಸಾಸಿವೆಕಾಳುಗಳೂ.

೧೭೮. ಆ ಸಂನ್ಯಾಸಿಗೆ ಭೂಮಿಯ ರಾಜ್ಯದಲ್ಲೂ ರಾಜಕುಮಾರಿಯರಲ್ಲೂ ಆಸೆ ಹುಟ್ಟಿತ್ತು. ಅದರಿಂದ ಆ ಮೂಢನು ಹೀಗೆ ಮೋಸ ಹೋದನು.

೧೭೯. ಹೇ ವೀರ, ನೀನು ಅವನ ಸಾಸಿವೆ ಕಾಳುಗಳನ್ನು ತೆಗೆದುಕೋ. ಅದರಿಂದ ಈ ಒಂದು ರಾತ್ರಿ ನಿನಗೆ ಆಕಾಶದಲ್ಲಿ ಹೋಗುವ ಶಕ್ತಿ ಉಂಟಾಗುತ್ತದೆ."

೧೮೦. ಎಂದು ಆಕಾಶದಿಂದ ವಾಣಿಯು ಅವನಿಗೆ ಹೇಳಿತು. ಅವನಿಗೆ ಅದರಿಂದ ಹರ್ಷ ಉಂಟಾಯಿತು. ಅಂಥ ವ್ಯಕ್ತಿಗೆ ದೇವತೆಗಳೂ ಪ್ರಾಯಶಃ ಅನುಗ್ರಹಿಸುತ್ತಾರಲ್ಲವೆ ?

೧೮೧. ಆಮೇಲೆ ವಿದೂಷಕನು ಆ ಸಂನ್ಯಾಸಿಯ ಬಟ್ಟೆಯ ಸೆರಗಿನಿಂದ ಸಾಸಿವೆಕಾಳುಗಳನ್ನು ತನ್ನ ಕೈಯಲ್ಲಿ ತೆಗೆದಿಟ್ಟುಕೊಂಡನು. ರಾಜಕುಮಾರಿಯನ್ನು ಮಡಿಲಲ್ಲಿ ಕುಳ್ಳಿರಿಸಿಕೊಂಡನು.

---

ಕಥಮಂತಃ ಪುರಂ ರಾಜ್ಞೋ ರಾಜಪುತ್ರೀಮಿಮಾಮಿತಃ ।
ನಯೇಯಮಿತಿ ತತ್ಕಾಲಮಸೌ ಧೀರೋ ವ್ಯಚಿಂತಯತ್ ॥ ೧೭೬
ಭೋ ವಿದೂಷಕ ಶೃಣ್ವೇತದ್ ಯೋಽಯಂ ಪ್ರವ್ರಾಟ್ ತ್ವಯಾ ಹತಃ ।
ಮಹಾನೇತಸ್ಯ ವೇತಾಲಃ ಸಿದ್ಧೋಽಭೂತ್ ಸರ್ಷಪಾಸ್ತಥಾ ॥ ೧೭೭
ತತೋಽಸ್ಯ ಪೃಥ್ವೀರಾಜ್ಯೇ ಚ ವಾಂಛಾ ರಾಜಾತ್ಮಜಾಸು ಚ ।
ಉದಪದ್ಯತ ತೇನಾಯಮೇವಂ ಮೂಢೋಽದ್ಯ ವಂಚಿತಃ ॥ ೧೭೮
ತದ್ ಗೃಹಾಣೈತದೀಯಾಂಸ್ತ್ವಂ ಸರ್ಷಪಾನ್ ವೀರ ಯೇನ ತೇ ।
ಇಮಾಮೇಕಾಂ ನಿಶಾಮದ್ಯ ಭವಿಷ್ಯತ್ಯಂಬರೇ ಗತಿಃ ॥ ೧೭೯
ಇತ್ಯಾಕಾಶಗತಾ ವಾಣೀ ಜಾತಹರ್ಷಂ ಜಗಾದ ತಮ್ ।
ಅನುಗೃಹ್ಣಂತಿ ಹಿ ಪ್ರಾಯೋ ದೇವತಾ ಅಪಿ ತಾದೃಶಮ್ ॥ ೧೮೦
ತತೋ ವಸ್ತ್ರಾಂಚಲಾತ್ತಸ್ಯ ಸ ಪರಿವ್ರಾಜಕಸ್ಯ ತಾನ್ ।
ಜಗ್ರಾಹ ಸರ್ಷಪಾನ್ ಹಸ್ತೇ ತಾಮಂಕೇ ಚ ನೃಪಾತ್ಮಜಾಮ್ ॥ ೧೮೧

೧೮೨. ದೇವಿಯ ಆಲಯದಿಂದ ಅವನು ಹೊರಗೆ ಬರುವಷ್ಟರಲ್ಲಿ ಆಕಾಶದಲ್ಲಿ ಕೇಳಿಸಿದ ಇನ್ನೊಂದು ವಾಣಿಯು ಹೀಗೆ ಮೊಳಗಿತು.

೧೮೩. "ಎಲೈ ಮಹಾವೀರ, ತಿಂಗಳ ಕೊನೆಯಲ್ಲಿ ನೀನು ಮತ್ತೊಮ್ಮೆ ಈ ದೇವಿಯ ಆಲಯಕ್ಕೆ ಬರಬೇಕು. ಇದನ್ನು ನೀನು ಮರೆಯಕೂಡದು."

೧೮೪. ಅದನ್ನು ಕೇಳಿ 'ಹಾಗೆಯೇ ಆಗಲಿ' ಎಂದು ಹೇಳಿ ಕೂಡಲೇ ದೇವಿಯ ಅನುಗ್ರಹದಿಂದ ರಾಜಪುತ್ರಿಯನ್ನು ಎತ್ತಿಕೊಂಡು ವಿದೂಷಕನು ಬಾನಿಗೆ ಜಿಗಿದನು.

೧೮೫. ಆಕಾಶದ ಮಾರ್ಗದಿಂದ ಬೇಗನೆ ಹೋಗಿ ಆ ರಾಜಕುಮಾರಿಯನ್ನು ಅಂತಃಪುರದೊಳಗೆ ಸೇರಿಸಿ, ಸಮಾಧಾನವನ್ನು ತಂದುಕೊಂಡ ಅವಳಿಗಿಂತೆಂದನು.

೧೮೬ "ಬೆಳಗಾದ ಮೇಲೆ ಆಕಾಶದಲ್ಲಿ ನಾನು ಹೋಗಲಾಗದು. ಆಗ ಹೊರಟರೆ ನನ್ನನ್ನು ಎಲ್ಲರೂ ನೋಡಿಬಿಡುತ್ತಾರೆ. ಆದ್ದರಿಂದ ಈಗಲೇ ನಾನು ಹೋಗುತ್ತೇನೆ."

೧೮೭–೧೮೮. ಹೀಗೆ ಅವನು ಹೇಳಿದಾಗ ಆ ಹುಡುಗಿ ಹೆದರಿಕೊಂಡು ಅವನಿಗೆ ಹೇಳಿದಳು "ನೀನು ಹೋದರೆ ಭೀತಿಯಿಂದ ಆಕ್ರಾಂತವಾದ ನನ್ನ ಪ್ರಾಣಗಳು ಹೋಗಿಯೇ ಬಿಡುತ್ತವೆ. ಆದ್ದರಿಂದ ಮಹಾಶಯ, ನೀನು ಹೋಗಬೇಡ. ನನಗೆ ಜೀವವನ್ನು ಮತ್ತೆ ಕೊಡು. ಒಪ್ಪಿಕೊಂಡ ಕೆಲಸವನ್ನು ಪೂರ್ಣಗೊಳಿಸುವುದು ಸಜ್ಜನರ ಸಹಜವಾದ ವ್ರತವಲ್ಲವೆ ?"

---

ಯಾವಚ್ಚ ದೇವಿಭವನಾತ್ಸ ತಸ್ಮಾನ್ನಿರ್ಯಯೌ ಬಹಿಃ ।
ಉಚ್ಚಚಾರ ಪುನಸ್ತಾವದನ್ಯಾ ನಭಸಿ ಭಾರತೀ ॥ ೧೮೨
ಇಹೈವ ದೇವೀಭವನೇ ಮಾಸಸ್ಯಾಂತೇ ಪುನಸ್ತ್ವಯಾ ।
ಆಗಂತವ್ಯಂ ಮಹಾವೀರ ವಿಸ್ಮರ್ತವ್ಯಮಿದಂ ನ ತೇ ॥ ೧೮೩
ತಚ್ಛ್ರುತ್ವಾ ಸ ತಥೇತ್ಯುಕ್ತ್ವಾ ಸದ್ಯೋ ದೇವೀಪ್ರಸಾದತಃ ।
ಉತ್ಪಪಾತ ನಭೋ ಬಿಭ್ರದ್ರಾಜಪುತ್ರೀಂ ವಿದೂಷಕಃ ॥ ೧೮೪
ಗತ್ವಾ ಚ ಗಗನೇನಾಶು ಸ ತಾಮಂತಃಪುರಾಂತರಮ್ ।
ಪ್ರಾವೇಶಯದ್ ರಾಜಸುತಾಂ ಸಮಾಶ್ವಸ್ತಾಮುವಾಚ ಚ ॥ ೧೮೫
ನ ಮೇ ಭವಿಷ್ಯತಿ ಪ್ರಾತರ್ಗತಿರ್ವ್ಯೋಮ್ನಿ ತತಶ್ಚ ಮಾಮ್ ।
ಸರ್ವೇ ದ್ರಕ್ಷ್ಯಂತಿ ನಿರ್ಯಾಂತಂ ತತ್ಸಂಪ್ರತ್ಯೇವ ಯಾಮ್ಯಹಮ್ ॥ ೧೮೬
ಇತಿ ತೇನೋದಿತಾ ಬಾಲಾ ಬಿಭ್ಯತೀ ಸಾ ಜಗಾದ ತಮ್ ।
ಗತೇ ತ್ವಯಿ ಮಮ ಪ್ರಾಣಾಸ್ತ್ರಾಸಾಕ್ರಾಂತಾಃ ಪ್ರಯಾಂತ್ಯಮೀ ॥ ೧೮೭
ತನ್ಮಹಾಭಾಗ ಮಾ ಗಾಸ್ತ್ವಂ ದೇಹಿ ಮೇ ಜೀವಿತಂ ಪುನಃ ।
ಪ್ರತಿಪನ್ನಾರ್ಥನಿರ್ವಾಹಃ ಸಹಜಂ ಹಿ ಸತಾಂ ವ್ರತಮ್ ॥ ೧೮೮

೧೮೯–೧೯೦. ಅದನ್ನು ಕೇಳಿ ಒಳ್ಳೆಯ ಸ್ವಭಾವದ ಆ ವಿದೂಷಕನು 'ನನಗೆ ಏನಾದರೂ ಆಗಲಿ, ನಾನು ಹೋಗುವುದಿಲ್ಲ. ಇವಳು ಭಯಪಟ್ಟು ಪ್ರಾಣಗಳನ್ನೇ ಬಿಟ್ಟಾಳು. ಹಾಗಾದರೆ ನಾನು ರಾಜಭಕ್ತಿಯನ್ನು ಹೇಗೆ ನಿರ್ವಹಿಸಿದಂತಾಗುತ್ತದೆ ?' ಎಂದು ಆಲೋಚಿಸಿ ಅಂತಃಪುರದೊಳಗೇ ಆ ರಾತ್ರಿ ನಿಂತುಬಿಟ್ಟನು.

೧೯೧. ಶ್ರಮದಿಂದಲೂ ಜಾಗರಣೆಯಿಂದಲೂ ಬಳಲಿದ್ದ ವಿದೂಷಕನು ಮೆಲ್ಲನೆ ನಿದ್ದೆ ಮಾಡಿದನು. ಆದರೆ ಹೆದರಿದ್ದ ರಾಜಪುತ್ರಿಯು ನಿದ್ದೆ ಮಾಡದೆ ಆ ರಾತ್ರಿಯನ್ನು ಕಳೆದಳು.

೧೯೨. ಒಂದು ಕ್ಷಣ ವಿಶ್ರಾಂತಿಯನ್ನು ಪಡೆಯಲಿ ಎಂಬ ಭಾವನೆಯಿಂದ, ಒಲವಿನಿಂದ ಆರ್ದ್ರವಾಗಿದ್ದ ಮನಸ್ಸಿನ ರಾಜಕುಮಾರಿ ಮಲಗಿದ್ದ ಅವನನ್ನು ಬೆಳಗಾದರೂ ಎಬ್ಬಿಸಲೇ ಇಲ್ಲ.

೧೯೩. ಆಮೇಲೆ ಒಳಗೆ ಬಂದ ಅಂತಃಪುರದ ಪರಿಚಾರಿಕೆಯರು ಅವನನ್ನು ನೋಡಿಬಿಟ್ಟರು. ಗಾಬರಿಪಟ್ಟು ಅವರು ಹೋಗಿ ರಾಜನಿಗೆ ತಿಳಿಸಿದರು.

೧೯೪. ಸತ್ಯವೇನೆಂಬುದನ್ನು ತಿಳಿದುಕೊಂಡು ಬರಲು ರಾಜನು ಒಬ್ಬ ದ್ವಾರಪಾಲಕನನ್ನು ಕಳುಹಿಸಿದನು. ದ್ವಾರಪಾಲಕನು ಒಳಗೆ ಹೋಗಿ ಅಲ್ಲಿ ವಿದೂಷಕನನ್ನು ಕಂಡನು.

---

ತಚ್ಛ್ರುತ್ವಾ ಚಿಂತಯಾಮಾಸ ಸ ಸುಸತ್ತ್ವೋ ವಿದೂಷಕಃ ।
ಯದಸ್ತು ಮೇ ನ ಗಚ್ಛಾಮಿ ಮುಂಚೇತ್ ಪ್ರಾಣಾನ್ ಭಯಾದಿಯಮ್ ॥ ೧೮೯

ತತಶ್ಚ ನೃಪತೇರ್ಭಕ್ತಿಃ ಕಾ ಮಯಾ ವಿಹಿತಾ ಭವೇತ್ ।
ಇತ್ಯಾಲೋಚ್ಯ ಸ ತತ್ರೈವ ತಸ್ಥಾವಂತಃಪುರೇ ನಿಶಿ ॥ ೧೯೦
ವ್ಯಾಯಾಮಜಾಗರಶ್ರಾಂತೋ ಯಯೌ ನಿದ್ರಾಂ ಶನೈಶ್ಚ ಸಃ ।
ರಾಜಪುತ್ರೀ ತ್ವನಿದ್ರೈವ ಭೀತಾ ತಾಮನಯನ್ನಿಶಾಮ್ ॥ ೧೯೧
ವಿಶ್ರಾಮ್ಯತು ಕ್ಷಣಂ ತಾವದಿತಿ ಪ್ರೇಮಾರ್ದ್ರಮಾನಸಾ ।
ಸುಪ್ತಂ ಪ್ರಬೋಧಯಾಮಾಸ ಸಾ ಪ್ರಭಾತೇಽಪಿ ನೈವ ತಮ್ ॥ ೧೯೨
ತತಃ ಪ್ರವಿಷ್ಟಾ ದದೃಶುಸ್ತಮಂತಃಪುರಚಾರಿಕಾಃ ।
ಸಸಂಭ್ರಮಾಶ್ಚ ಗತ್ವೈವ ರಾಜಾನಂ ತಂ ವ್ಯಜಿಜ್ಞಪನ್ ॥ ೧೯೩
ರಾಜಾಪ್ಯವೇಕ್ಷಿತುಂ ತತ್ತ್ವಂ ಪ್ರತೀಹಾರಂ ವ್ಯಸರ್ಜಯತ್ ।
ಪ್ರತೀಹಾರಶ್ಚ ಗತ್ವಾಂತಸ್ತತ್ರಾಪಶ್ಯದ್ ವಿದೂಷಕಮ್ ॥ ೧೯೪

೧೯೫. ರಾಜಕುಮಾರಿಯ ಬಾಯಿಂದಲೇ ಅವನು ನಡೆದುದೆಲ್ಲವನ್ನೂ ಆಲಿಸಿದನು. ಆಮೇಲೆ ಹೋಗಿ ರಾಜನಿಗೆ ಎಲ್ಲ ವಿಷಯವನ್ನೂ ಹೇಳಿದನು.

೧೯೬. ಅದನ್ನು ಕೇಳಿದ ಮಹಾರಾಜನು ವಿದೂಷಕನ ಸ್ವಭಾವ ಎಂತಹುದೆಂದು ತಿಳಿದವನಾಗಿ ಕೂಡಲೇ 'ಇದೇನಾಗಿರಬಹುದು' ಎಂದು ಭ್ರಾಂತನಂತೆ ಆದನು.

೧೯೭. ಮಗಳ ಅರಮನೆಯಿಂದ ಆ ವಿದೂಷಕನನ್ನು ಕರೆಸಿದನು. ರಾಜಕುಮಾರಿಯ ಮನಸ್ಸು ಸ್ನೇಹಮಯವಾಗಿ ಅವನ ಹಿಂದೆಯೇ ಬಂದಿತು.

೧೯೮. ಅವನು ಬಂದಾಗ ರಾಜನು 'ಏನೇನು ನಡೆಯಿತು' ಎಂದು ಅವನನ್ನು ಕೇಳಿದನು. (ವಿದೂಷಕನೆಂಬ) ಆ ವಿಪ್ರನು ಆರಂಭದಿಂದ ಹಿಡಿದು ಎಲ್ಲ ವೃತ್ತಾಂತವನ್ನೂ ಹೇಳಿದನು.

೧೯೯. ತನ್ನ ಬಟ್ಟೆಯ ತುದಿಯಲ್ಲಿ ಕಟ್ಟಿಕೊಂಡಿದ್ದ ಕಳ್ಳರ ಮೂಗುಗಳನ್ನೂ, ಭೂಮಿಯನ್ನೇ ಭೇದಿಸುವ ಸಂನ್ಯಾಸಿನಿಯ ಸಾಸಿವೆಕಾಳುಗಳನ್ನೂ ವಿದೂಷಕನು ರಾಜನಿಗೆ ತೋರಿಸಿದನು.

---

ಶುಶ್ರಾವ ಚ ಯಥಾವೃತ್ತಂ ಸ ತದ್ರಾಜಸುತಾಮುಖಾತ್ ।
ತಥೈವ ಗತ್ವಾ ರಾಜ್ಞೇ ಚ ಸ ಸಮಗ್ರಂ ನ್ಯವೇದಯತ್ ॥ ೧೯೫
ವಿದೂಷಕಸ್ಯ ಸತ್ತ್ವಜ್ಞಸ್ತಚ್ಛ್ರುತ್ವಾ ಸ ಮಹೀಪತಿಃ ।
ಕಿಮೇತತ್ಸ್ಯಾದಿತಿ ಕ್ಷಿಪ್ರಂ ಸಮುದ್ಭ್ರಾಂತ ಇವಾಭವತ್ ॥ ೧೯೬
ಆನಾಯಯಚ್ಚ ದುಹಿತುರ್ಮಂದಿರಾತ್ತಂ ವಿದೂಷಕಮ್ ।
ದತ್ತಾನುಯಾತ್ರಂ ಮನಸಾ ತಸ್ಯಾಃ ಸ್ನೇಹಾನುಪಾತಿನಾ ॥ ೧೯೭
ಪಪ್ರಚ್ಛ ಚ ಯಥಾವೃತ್ತಂ ಸ ರಾಜಾ ತಮುಪಾಗತಮ್ ।
ಆ ಮೂಲತಶ್ಚ ಸೋಽಪ್ಯಸ್ಮೈ ವಿಪ್ರೋ ವೃತ್ತಾಂತಮಬ್ರವೀತ್ ॥ ೧೯೮
ಅದರ್ಶಯಚ್ಚ ವಸ್ತ್ರಾಂತೇ ನಿಬದ್ಧಾಶ್ಚೌರನಾಸಿಕಾಃ ।
ಪ್ರವ್ರಾಟ್‌ಸಂಬಂಧಿನಸ್ತಾಂಶ್ಚ ಸರ್ಷಪಾನ್ ಭೂಮಿಭೇದಿನಃ ॥ ೧೯೯

೨೦೦–೨೦೧–೨೦೨. ಅದೆಲ್ಲ ಸತ್ಯವಿರಬಹುದೆಂದು ಊಹಿಸಿ, ಆ ಮಠದ ಬ್ರಾಹ್ಮಣರೆಲ್ಲರನ್ನೂ ಚಕ್ರಧರನೊಡನೆ ಕರೆಸಿ ಆ ಘಟನೆಯ ಮೂಲಕಾರಣವೇನೆಂಬುದನ್ನು ಕೇಳಿ, ತಾನೇ ಶ್ಮಶಾನಕ್ಕೆ ಹೋಗಿ ಮೂಗು ಕತ್ತರಿಸಿದ ಆ ಪುರುಷರನ್ನು ನೋಡಿ, ಕತ್ತು ಕುಯ್ಯಲ್ಪಟ್ಟಿದ್ದ ಆ ನೀಚ ಸಂನ್ಯಾಸಿಯನ್ನೂ ಕಂಡಾಗ ರಾಜನಿಗೆ ನಂಬಿಕೆ ಹುಟ್ಟಿತು. ಮಗಳಿಗೆ ಜೀವವನ್ನು ಕೊಟ್ಟ ಚತುರ ವಿದೂಷಕನ ಬಗೆಗೆ ವಿಶಾಲಹೃದಯದ ರಾಜನಿಗೆ ಸಂತೋಷವಾಯಿತು.

೨೦೩. ಆಗಲೇ ಅವನು ತನ್ನ ಆ ಮಗಳನ್ನೇ ವಿದೂಷಕನಿಗೆ ಕೊಟ್ಟು ಮದುವೆ ಮಾಡಿದನು. ಉಪಕಾರ ಮಾಡಿದವರ ಬಗೆಗೆ ಸಂತುಷ್ಟರಾದ ಉದಾರಹೃದಯದವರು ಕೊಡಲಾಗದ್ದು ಏನಿದೆ ?

೨೦೪. ಕಮಲದಲ್ಲಿ ಇರುವ ಪ್ರೀತಿಯಿಂದ ಲಕ್ಷ್ಮಿಯು ವಾಸಮಾಡುತ್ತಿದ್ದಿರಲೇ ಬೇಕು. ಏಕೆಂದರೆ ಅವಳ ಕೈ ಹಿಡಿದ ವಿದೂಷಕನು ಆ ರಾಜಪುತ್ರಿಯ ಕೈಯಲ್ಲಿ ಲಕ್ಷ್ಮಿಯನ್ನೂ ಪಡೆದುಕೊಂಡನು.

೨೦೫. ಆಮೇಲೆ ಪ್ರಶಂಸಾರ್ಹವಾದ ಕೀರ್ತಿಯನ್ನು ಪಡೆದ ವಿದೂಷಕನು ತನ್ನ ಕಾಂತೆಯೊಡನೆ ರಾಜೋಪಚಾರಗಳನ್ನನುಭವಿಸುತ್ತಾ ಆದಿತ್ಯಸೇನ ಮಹಾರಾಜನ ಮನೆಯಲ್ಲಿ ವಾಸಿಸಿದನು.

---

ತತಃ ಸಂಭಾವ್ಯ ಸತ್ಯಂ ತತ್ ತಾಂಶ್ಚಾನಾಯ್ಯ ಮಠದ್ವಿಜಾನ್ ।
ಸರ್ವಾಂಶ್ಚಕ್ರಧರೋಪೇತಾನ್ ಪೃಷ್ಟ್ವಾ ತನ್ಮೂಲಕಾರಣಮ್ ॥ ೨೦೦
ಸ್ವಯಂ ಶ್ಮಶಾನೇ ಗತ್ವಾ ಚ ದೃಷ್ಟ್ವಾ ತಾಂಶ್ಛಿನ್ನನಾಸಿಕಾನ್ ।
ಪುರುಷಾಂಸ್ತಂ ಚ ನಿರ್ಲೂನಕಂಠಂ ಪ್ರವ್ರಾಜಕಾಧಮಮ್ ॥ ೨೦೧
ಉತ್ಪನ್ನ ಪ್ರತ್ಯಯೋ ರಾಜಾ ಸ ತುತೋಷ ಮಹಾಶಯಃ ।
ವಿದೂಷಕಾಯ ಕೃತಿನೇ ಸುತಾಪ್ರಾಣಪ್ರದಾಯಿನೇ ॥ ೨೦೨
ದದೌ ತಸ್ಮೈ ಚ ತಾಮೇವ ತದೈವ ತನಯಾಂ ನಿಜಾಮ್ ।
ಕಿಮದೇಯಮುದಾರಾಣಾಮುಪಕಾರಿಷು ತುಷ್ಯತಾಮ್ ॥ ೨೦೩
ಶ್ರೀರುವಾಸಾಂಬುಜಪ್ರೀತ್ಯಾ ನೂನಂ ರಾಜಸುತಾಕರೇ ।
ಗೃಹೀತಪಾಣಿರ್ಯೇನಾಸ್ಯಾ ಲೇಭೇ ಲಕ್ಷ್ಮೀಂ ವಿದೂಷಕಃ ॥ ೨೦೪
ತತೋ ರಾಜೋಪಚಾರೇಣ ಸ ತಯಾ ಕಾಂತಯಾ ಸಹ ।
ಆದಿತ್ಯಸೇನನೃಪತೇಸ್ತಸ್ಥೌ ಶ್ಲಾಘ್ಯಯಶಾ ಗೃಹೇ ॥ ೨೦೫

೨೦೬ ಹೀಗೆ ದಿನಗಳು ಕಳೆಯುತ್ತಿರಲು ವಿಧಿಪ್ರೇರಣೆಯಿಂದ ರಾಜಪುತ್ರಿಯು ಒಮ್ಮೆ ರಾತ್ರಿಯಲ್ಲಿ ವಿದೂಷಕನಿಗಿಂತೆಂದಳು.

೨೦೭ "ನಾಥ, ದೇವಿಯ ಆಲಯದಲ್ಲಿ ಅಂದು ರಾತ್ರಿ ದೇವಲೋಕದ ವಾಣಿಯು 'ತಿಂಗಳ ಕೊನೆಯಲ್ಲಿ ನೀನಿಲ್ಲಿಗೆ ಬರಬೇಕು' ಎಂದು ಹೇಳಿದುದು ನಿನಗೆ ನೆನಪಿನಲ್ಲಿದೆಯೆ ?

೨೦೮. ಅಂದಿನಿಂದ ಇವತ್ತಿಗೆ ತಿಂಗಳು ಕಳೆದು ಹೋಯಿತು. ನೀನು ಅದನ್ನು ಮರೆತುಬಿಟ್ಟೆ" ಎಂದು ಪ್ರಿಯೆಯು ಹೇಳಿದಾಗ ಅದನ್ನು ನೆನಪಿಸಿಕೊಂಡು ವಿದೂಷಕನು ನೆನಪಿಸಿದುದಕ್ಕೆ ಸಂತೋಷಪಟ್ಟು ಹೀಗೆಂದನು.

೨೦೯. "ಕೃಶಾಂಗಿಯೇ, ನೀನು ಸರಿಯಾಗಿ ನೆನಪಿಸಿದೆ. ನಾನು ಅದನ್ನು ಮರೆತುಬಿಟ್ಟಿದ್ದೆ" ಎಂದು ಹೇಳಿ ಅವನು ಅವಳಿಗೆ ಒಂದು ಆಲಿಂಗನವನ್ನೇ ಬಹುಮಾನವಾಗಿ ಕೊಟ್ಟನು.

೨೧೦. ಅವಳು ಮಲಗಿ ನಿದ್ದೆ ಮಾಡಿದ ಮೇಲೆ ರಾತ್ರಿಯಲ್ಲಿ ಅಂತಃಪುರದಿಂದ ಹೊರಗೆ ಬಂದು ಖಡ್ಗವನ್ನು ತೆಗೆದುಕೊಂಡು ಸ್ವಸ್ಥನಾಗಿ ದೇವಿಯ ಆಲಯಕ್ಕೆ ಹೋದನು.

೨೧೧. "ವಿದೂಷಕನೆಂಬ ನಾನು ಬಂದಿದ್ದೇನೆ" ಎಂದು ಹೊರಗಿನಿಂದ ಅವನು ಕೂಗಿದಾಗ ಯಾರೋ 'ಒಳಗೆ ಬಾ' ಎಂಬ ನುಡಿಯನ್ನು ಹೇಳಿದುದು ಕೇಳಿಸಿತು.

---

ಅಥ ಯಾತೇಷು ದಿವಸೇಷ್ವೇಕದಾ ದೈವಚೋದಿತಾ ।
ತಮುವಾಚ ನಿಶಾಯಾಂ ಸಾ ರಾಜಪುತ್ರೀ ವಿದೂಷಕಮ್ ॥ ೨೦೬
ನಾಥ ಸ್ಮರಸಿ ಯತ್ತತ್ರ ತವ ದೇವೀಗೃಹೇ ನಿಶಿ ।
ಮಾಸಾಂತೇ ತ್ವಮಿಹಾಗಚ್ಛೇರಿತ್ಯುಕ್ತಂ ದಿವ್ಯಯಾ ಗಿರಾ ॥ ೨೦೭
ತತ್ರ ಚಾದ್ಯ ಗತೋ ಮಾಸೋ ಭವತಸ್ತಚ್ಚ ವಿಸ್ಮೃತಮ್ ।
ಇತ್ಯುಕ್ತಃ ಪ್ರಿಯಯಾ ಸ್ಮೃತ್ವಾ ಸ ಜಹರ್ಷ ವಿದೂಷಕಃ ॥ ೨೦೮
ಸಾಧು ಸ್ಮೃತಂ ತ್ವಯಾ ತನ್ವಿ ವಿಸ್ಮೃತಂ ತನ್ಮಯಾ ಪುನಃ ।
ಇತ್ಯುಕ್ತ್ವಾಲಿಂಗನಂ ಚಾಸ್ಯೈ ಸ ದದೌ ಪಾರಿತೋಷಿಕಮ್ ॥ ೨೦೯
ಸುಪ್ತಾಯಾಂ ಚ ತತಸ್ತಸ್ಯಾಂ ನಿರ್ಗತ್ಯಾಂತಃಪುರಾನ್ನಿಶಿ ।
ಆದಾಯ ಖಡ್ಗಂ ಸ್ವಸ್ಥಃ ಸಂಸ್ತದ್ದೇವೀಭವನಂ ಯಯೌ ॥ ೨೧೦
ಪ್ರಾಪ್ತೋ ವಿದೂಷಕೋಽಹಂ ಭೋರಿತಿ ತತ್ರ ವದನ್ ಬಹಿಃ ।
ಪ್ರವಿಶೇತ್ಯಶೃಣೋದ್ವಾಚಮಂತಃ ಕೇನಾಪ್ಯುದೀರಿತಮ್ ॥ ೨೧೧

೨೧೨. ಒಳಗೆ ಪ್ರವೇಶಿಸಿದ ವಿದೂಷಕನು ಒಂದು ದಿವ್ಯವಾದ ಮನೆಯನ್ನೂ ಅದರಲ್ಲಿ ದಿವ್ಯಾಭರಣಗಳನ್ನು ಧರಿಸಿದ್ದ ಮತ್ತು ದಿವ್ಯರೂಪವನ್ನು ಹೊಂದಿದ್ದ ಒಬ್ಬ ಕನ್ಯೆಯನ್ನೂ ಕಂಡನು.

೨೧೩. ಅವಳು ತನ್ನ ಕಾಂತಿಯಿಂದ ರಾತ್ರಿಯಲ್ಲಿ ಹೊಳೆಯುವ, ಶಿವನ ಕ್ರೋಧಾಗ್ನಿಯಿಂದ ಸುಟ್ಟುಹೋದ ಮನ್ಮಥನ ಸಂಜೀವನೌಷಧಿಯಂತೆ ಕತ್ತಲೆಯನ್ನು ಭೇದಿಸುತ್ತಿದ್ದಳು.

೨೧೪. ಇದೇನು ಎಂದು ಆಶ್ಚರ್ಯಪಟ್ಟ ಅವನನ್ನು ಅವಳೇ ಸಂತೋಷದಿಂದ ಸ್ನೇಹಬಹುಮಾನಯುಕ್ತವಾದ ಸ್ವಾಗತದಿಂದ ಅಭಿನಂದಿಸಿದಳು.

೨೧೫. ಪ್ರೇಮವನ್ನು ತೋರಿಸಿದ್ದರಿಂದ ವಿಶ್ವಾಸಪೂರ್ಣನಾಗಿ ಕುಳಿತ ಅವನು ಅವಳ ಸ್ವರೂಪವನ್ನು ಅರಿಯುವುದರಲ್ಲಿ ಆಸಕ್ತನಾದಾಗ ಅವಳೇ ಹೀಗೆ ನುಡಿದಳು.

೨೧೬. "ಭದ್ರಾ ಎಂಬ ವಿದ್ಯಾಧರ ಕನ್ಯೆ ನಾನು. ದೊಡ್ಡವಂಶದವಳು. ನನಗೆ ಇಷ್ಟಬಂದಂತೆ ಸಂಚಾರ ಮಾಡಬಲ್ಲವಳಾದುದರಿಂದ ಆಗ ನಾನು ನಿನ್ನನ್ನು ನೋಡಿದೆನು.

೨೧೭. ನಿನ್ನ ಗುಣಗಳು ನನ್ನ ಮನಸ್ಸನ್ನು ಸೆಳೆದುಕೊಂಡ ಕಾರಣ ನಾನೇ ಆಗ ನೀನು ಮತ್ತೆ ಬರುವಂತಾಗಲಿ ಎಂದು ಅದೃಶ್ಯವಾಣಿಯನ್ನು ಸೃಷ್ಟಿಸಿದೆನು.

---

ಪ್ರವಿಶ್ಯ ಚಾಂತರೇ ಸೋಽತ್ರ ದಿವ್ಯಮಾವಾಸಮೈಕ್ಷತ ।
ತದಂತರ್ದಿವ್ಯರೂಪಾಂ ಚ ಕನ್ಯಾಂ ದಿವ್ಯಪರಿಚ್ಛದಾಮ್ ॥ ೨೧೨
ಸ್ವಪ್ರಭಾಭಿನ್ನತಿಮಿರಾಂ ರಜನಿಜ್ವಲಿತಾಮಿವ ।
ಹರಕೋಪಾಗ್ನಿನಿರ್ದಗ್ಧಸ್ಮರಸಂಜೀವನೌಷಧಿಮ್ ॥ ೨೧೩
ಕಿಮೇತದಿತಿ ಸಾಶ್ಚರ್ಯಃ ಸ ತಯಾ ಹೃಷ್ಟಯಾ ಸ್ವಯಮ್ ।
ಸಸ್ನೇಹಬಹುಮಾನೇನ ಸ್ವಾಗತೇನಾಭ್ಯನಂದ್ಯತ ॥ ೨೧೪
ಉಪವಿಷ್ಟಂ ಚ ಸಂಜಾತವಿಸ್ರಂಭಂ ಪ್ರೇಮದರ್ಶನಾತ್ ।
ತತ್ಸ್ವರೂಪಪರಿಜ್ಞಾನಸೋತ್ಸುಕಂ ಸಾ ತಮಬ್ರವೀತ್ ॥ ೨೧೫
ಅಹಂ ವಿದ್ಯಾಧರೀ ಕನ್ಯಾ ಭದ್ರಾ ನಾಮ ಮಹಾನ್ವಯಾ ।
ಇಹ ಕಾಮಚರತ್ವಾಚ್ಚ ತ್ವಾಮಪಶ್ಯಮಹಂ ತದಾ ॥ ೨೧೬
ತ್ವದ್ಗುಣಾಕೃಷ್ಟಚಿತ್ತಾ ಚ ತತ್ಕಾಲಮಹಮೇವ ತಾಮ್ ।
ಅದೃಶ್ಯವಾಣೀಮಸೃಜಂ ಪುನರಾಗಮನಾಯ ತೇ ॥ ೨೧೭

೨೧೮. ಇಂದು ಕೂಡ ವಿದ್ಯೆಯ ಪ್ರಯೋಗದಿಂದ ರಾಜಕುಮಾರಿಯನ್ನು ಸಂಮೋಹನಕ್ಕೆ ಒಳಪಡಿಸಿ ಪ್ರೇರಿಸಿದೆನು. ಅವಳೇ ಈ ಕಾರ್ಯದಲ್ಲಿ ನಿನಗೆ ನೆನಪನ್ನು ಹುಟ್ಟಿಸಿದಳು.

೨೧೯. ಚೆಲುವನೆ, ನಿನಗೋಸ್ಕರ ನಾನಿಲ್ಲಿದ್ದೇನೆ. ನಿನಗೆ ಈ ಶರೀರ ನನ್ನಿಂದ ಅರ್ಪಿತವಾಗಿದೆ ನನ್ನನ್ನು ಮದುವೆ ಮಾಡಿಕೋ."

೨೨೦. ಹೀಗೆ ವಿದ್ಯಾಧರಿ ಭದ್ರೆಯು ಹೇಳಿದಾಗ ಭವ್ಯಸ್ವಭಾವದ ವಿದೂಷಕನು 'ಹಾಗೆಯೇ ಆಗಲಿ' ಎಂದು ಅವಳನ್ನು ಆಗಲೇ ಗಾಂಧರ್ವವಿಧಾನದಿಂದ ಮದುವೆ ಮಾಡಿಕೊಂಡನು.

೨೨೧. ತನ್ನ ಪೌರುಷದ ಫಲಸಮೃದ್ಧಿಯೋ ಎಂಬಂತಿದ್ದ ಆ ಪ್ರಿಯೆಯೊಡನೆ ಸಂಗಮವನ್ನು ಹೊಂದಿದ ಅವನು ದಿವ್ಯ ಭೋಗಗಳನ್ನು ಅನುಭವಿಸುತ್ತಾ ಅಲ್ಲೇ ಇದ್ದುಬಿಟ್ಟನು.

೨೨೨. ಈ ಮಧ್ಯದಲ್ಲಿ ರಾತ್ರಿ ಕಳೆದ ಮೇಲೆ ಎಚ್ಚೆತ್ತ ರಾಜಪುತ್ರಿಯು ಗಂಡನನ್ನು ಕಾಣದೆ ಕೂಡಲೇ ವಿಷಣ್ಣಳಾದಳು.

೨೨೩. ಎದ್ದು ಎಡರುತ್ತಿದ್ದ ಹೆಜ್ಜೆಗಳನ್ನಿಡುತ್ತಾ ಕಂಗೆಟ್ಟವಳಾಗಿ, ಕಣ್ಣುಗಳಿಂದ ಕಂಬನಿಯನ್ನು ಸುರಿಸುತ್ತಾ ತಾಯಿಯ ಬಳಿಗೆ ಹೋದಳು.

---

ಅದ್ಯ ವಿದ್ಯಾಪ್ರಯೋಗಾಚ್ಚ ಸಂಮೋಹ್ಯ ಪ್ರೇರಿತಾ ಮಯಾ ।
ಸಾ ತೇ ರಾಜಸುತೈವಾಸ್ಮಿನ್ ಕಾರ್ಯೇ ಸ್ಮೃತಿಮಜೀಜನತ್ ॥ ೨೧೮

ತ್ವದರ್ಥಂ ಚ ಸ್ಥಿತಾಸ್ಮೀಹ ತತ್ತುಭ್ಯಮಿದಮರ್ಪಿತಮ್ ।
ಶರೀರಂ ಸುಂದರ ಮಯಾ ಕುರು ಪಾಣಿಗ್ರಹಂ ಮಮ ॥ ೨೧೯

ಇತ್ಯುಕ್ತೋ ಭದ್ರಯಾ ಭವ್ಯೋ ವಿದ್ಯಾಧರ್ಯಾ ವಿದೂಷಕಃ ।
ತಥೇತಿ ಪರಿಣಿನ್ಯೇ ತಾಂ ಗಾಂಧರ್ವವಿಧಿನಾ ತದಾ ॥ ೨೨೦

ಅತಿಷ್ಠದಥ ತತ್ರೈವ ದಿವ್ಯಂ ಭೋಗಮವಾಪ್ಯ ಸಃ ।
ಸ್ವಪೌರುಷಫಲರ್ದ್ಧ್ಯೇವ ಪ್ರಿಯಯಾ ಸಂಗತಸ್ತಯಾ ॥ ೨೨೧

ಅತ್ರಾಂತರೇ ಪ್ರಬುದ್ಧಾ ಸಾ ರಾಜಪುತ್ರೀ ನಿಶಾಕ್ಷಯೇ ।
ಭರ್ತಾರಂ ತಮಪಶ್ಯಂತೀ ವಿಷಾದಂ ಸಹಸಾಗಮತ್ ॥ ೨೨೨

ಉತ್ಥಾಯ ಚಾಂತಿಕಂ ಮಾತುಃ ಪ್ರಸ್ಖಲದ್ಭಿಃ ಪದೈರ್ಯಯೌ ।
ವಿಹ್ವಲಾ ಸಂಗಲದ್ಬಾಷ್ಪತರಂಗಿತವಿಲೋಚನಾ ॥ ೨೨೩

೨೨೪. ತಾನು ಮಾಡಿದ ತಪ್ಪಿಗೆ ಭಯಪಡುತ್ತಾ, ಅನುತಾಪವನ್ನು ಅನುಭವಿಸುತ್ತಾ ಅವಳು ತಾಯಿಗೆ "ನನ್ನ ಗಂಡ ಇರುಳಿನಲ್ಲಿ ಎಲ್ಲಿಗೋ ಹೋಗಿಬಿಟ್ಟಿದ್ದಾನೆ" ಎಂದು ಹೇಳಿದಳು.

೨೨೫. ಅವಳಲ್ಲಿದ್ದ ಪ್ರೀತಿಯಿಂದ ತಾಯಿಯೂ ಗಾಬರಿಗೊಂಡಳು. ಕ್ರಮವಾಗಿ ಅದನ್ನು ತಿಳಿದುಕೊಂಡ ರಾಜನೂ ಅಲ್ಲಿಗೆ ಬಂದು ತುಂಬ ವ್ಯಾಕುಲನಾದನು.

೨೨೬ 'ಶ್ಮಶಾನದ ಹೊರಗೆ ಇರುವ ದೇವಾಲಯಕ್ಕೆ ಅವನು ಹೋಗಿದ್ದಾನೆ ಎಂದು ನಾನು ಅಂದುಕೊಂಡಿದ್ದೇನೆ' ಎಂದು ರಾಜಪುತ್ರಿ ಹೇಳಿದಾಗ ಅಲ್ಲಿಗೆ ರಾಜನು ತಾನೇ ಹೋದನು.

೨೨೭ ಆದರೆ ಅಲ್ಲಿ ವಿದ್ಯಾಧರಿಯ ವಿದ್ಯೆಯ ಪ್ರಭಾವದಿಂದ ವಿದೂಷಕನು ಅವಿಸಿಡಲ್ಪಟ್ಟಿದ್ದನು. ಹಾಗಾಗಿ ರಾಜನು ಹುಡುಕಿದರೂ ವಿದೂಷಕನು ಸಿಕ್ಕಲಿಲ್ಲ.

೨೨೮. ಆಮೇಲೆ ರಾಜನು ಹಿಂದಿರುಗಿ ಬರಲಾಗಿ ರಾಜಕುಮಾರಿ ನಿರಾಶಳಾಗಿ ತನ್ನ ಶರೀರವನ್ನೇ ತ್ಯಜಿಸಲು ಸಿದ್ಧಳಾದಾಗ ಯಾವನೋ ಜ್ಞಾನಿಯು ಬಂದು ಹೀಗೆ ನುಡಿದನು.

೨೨೯. "ಅಶುಭವನ್ನು ಊಹಿಸುವುದು ಬೇಡ. ನಿನ್ನ ಪತಿಯು ದಿವ್ಯವಾದ ಭೋಗಗಳನ್ನು ಅನುಭವಿಸುತ್ತಿದ್ದಾನೆ. ಸ್ವಲ್ಪ ಕಾಲದಲ್ಲೇ ಅವನು ಬಂದು ನಿನ್ನನ್ನು ಸೇರುತ್ತಾನೆ.

---

ಸ ಪತಿರ್ಮೇ ಗತಃ ಕ್ವಾಪಿ ರಾತ್ರಾವಿತಿ ಚ ಮಾತರಮ್ ।
ಆತ್ಮಾಪರಾಧಸಭಯಾ ಸಾನುತಾಪಾ ಚ ಸಾಭ್ಯಧಾತ್ ॥ ೨೨೪
ತತಸ್ತನ್ಮಾತರಿ ಸ್ನೇಹಾತ್ ಸಂಭ್ರಾಂತಾಯಾಂ ಕ್ರಮೇಣ ತತ್ ।
ಬುದ್ಧ್ವಾ ರಾಜಾಪಿ ತತ್ರೈತ್ಯ ಪರಮಾಕುಲತಾಮಗಾತ್ ॥ ೨೨೫
ಜಾನೇ ಶ್ಮಶಾನಬಾಹ್ಯಂ ತಂ ಗತೋಽಸೌ ದೇವತಾಗೃಹಮ್ ।
ಇತ್ಯುಕ್ತೇ ರಾಜಸುತಯಾ ರಾಜಾ ತತ್ರ ಸ್ವಯಂ ಯಯೌ ॥ ೨೨೬
ತತ್ರ ವಿದ್ಯಾಧರೀವಿದ್ಯಾಪ್ರಭಾವೇಣ ತಿರೋಹಿತಮ್ ।
ವಿಚಿತ್ಯಾಪಿ ನ ಲೇಭೇ ತಂ ಸ ಕ್ಷಿತೀಶೋ ವಿದೂಷಕಮ್ ॥ ೨೨೭
ತತೋ ರಾಜ್ಞಿ ಪರಾವೃತ್ತೇ ನಿರಾಶಾಂ ತಾಂ ನೃಪಾತ್ಮಜಾಮ್ ।
ದೇಹತ್ಯಾಗೋನ್ಮುಖೀಮೇತ್ಯ ಜ್ಞಾನೀ ಕೋಽಪ್ಯಬ್ರವೀದಿದಮ್ ॥ ೨೨೮
ನಾರಿಷ್ಟಶಂಕಾ ಕರ್ತವ್ಯಾ ಸ ಹಿ ತೇ ವರ್ತತೇ ಪತಿಃ ।
ಯುಕ್ತೋ ದಿವ್ಯೇನ ಭೋಗೇನ ತ್ವಾಮುಪೈಷ್ಯತಿ ಚಾಚಿರಾತ್ ॥ ೨೨೯

೨೩೦. ಅದನ್ನು ಕೇಳಿ ರಾಜಪುತ್ರಿಯು ಹೃದಯದೊಳಗೆ ಹೊಕ್ಕ ಅವನ ಪುನರಾಗಮನದ ಆಸೆಯಿಂದ ಜೀವವನ್ನು ಹಿಡಿದುಕೊಂಡಿದ್ದಳು.

೨೩೧. ವಿದೂಷಕನು (ಭದ್ರೆಯ ಜೊತೆಯಲ್ಲಿ) ಇದ್ದಾಗ, ಅವನ ಪ್ರಿಯೆ ಭದ್ರೆಯ ಬಳಿಗೆ ಯೋಗೇಶ್ವರೀ ಎಂಬ ಗೆಳತಿಯು ಬಂದಳು.

೨೩೨. ಅವಳು ಏಕಾಂತದಲ್ಲಿ ಬಂದು ಭದ್ರೆಗೆ ಹೀಗೆ ಹೇಳಿದಳು. "ಸಖಿ, ನೀನು ಮನುಷ್ಯ ಸಂಪರ್ಕವನ್ನು ಮಾಡಿದ್ದರಿಂದ ವಿದ್ಯಾಧರರು ನಿನ್ನ ಮೇಲೆ ಕೋಪ ಮಾಡಿಕೊಂಡಿದ್ದಾರೆ.

೨೩೩. ಅವರು ನಿನಗೆ ಕೆಟ್ಟದ್ದನ್ನು ಮಾಡಲು ಬಯಸಿದ್ದಾರೆ. ಆದ್ದರಿಂದ ಇಲ್ಲಿಂದ ನೀನು (ದೂರ) ಹೊರಟುಹೋಗು. ಪೂರ್ವಸಮುದ್ರದ ಆಚೆ ದಡದಲ್ಲಿ ಕಾರ್ಕೋಟಕವೆಂಬ ನಗರವಿದೆ.

೨೩೪. ಅದನ್ನು ದಾಟಿ ನಡೆದರೆ ಶೀತೋದಾ ಎಂಬ ಪವಿತ್ರವಾದ ನದಿ ಇದೆ. ಅದನ್ನೂ ದಾಟಿದರೆ ಮುಂದೆ ಸಿದ್ಧರ ಸ್ಥಳವಾದ ಉದಯ ಎಂಬ ದೊಡ್ಡ ಪರ್ವತವಿದೆ.

೨೩೫. ಅಲ್ಲಿಗೆ ವಿದ್ಯಾಧರರು ಬರಲು ಸಾಧ್ಯವಿಲ್ಲ. ಅಲ್ಲಿಗೆ ನೀನೀಗ ಹೋಗು. ಈ ನಿನ್ನ ಪ್ರಿಯ ಮನುಷ್ಯನ ಬಗೆಗೆ ಚಿಂತೆ ಮಾಡಬೇಡ.

---

ತಚ್ಛ್ರುತ್ವಾ ರಾಜಪುತ್ರೀ ಸಾ ಧಾರಯಾಮಾಸ ಜೀವಿತಮ್ ।
ಹೃದಿ ಪ್ರವಿಷ್ಟಯಾ ರುದ್ಧಂ ತತ್ಪ್ರತ್ಯಾಗಮವಾಂಛಯಾ ॥ ೨೩೦
ವಿದೂಷಕಸ್ಯಾಪಿ ತತಸ್ತಿಷ್ಠತಸ್ತತ್ರ ತಾಂ ಪ್ರಿಯಾಮ್ ।
ಭದ್ರಾಂ ಯೋಗೇಶ್ವರೀ ನಾಮ ಸಖೀ ಕಾಚಿದುಪಾಯಯೌ ॥ ೨೩೧
ಉಪೇತ್ಯ ಸಾ ರಹಸ್ಯೇನಮಿದಂ ಭದ್ರಾಮಥಾಬ್ರವೀತ್ ।
ಸಖಿ ಮಾನುಷಸಂಸರ್ಗಾತ್ ಕ್ರುದ್ಧಾ ವಿದ್ಯಾಧರಾಸ್ತ್ವಯಿ ॥ ೨೩೨
ಪಾಪಂ ಚ ತೇ ಚಿಕೀರ್ಷಂತಿ ತದಿತೋ ಗಮ್ಯತಾಂ ತ್ವಯಾ ।
ಅಸ್ತಿ ಪೂರ್ವಾಂಬುಧೇಃ ಪಾರೇ ಪುರಂ ಕಾರ್ಕೋಟಕಾಭಿಧಮ್ ॥ ೨೩೩
ತದತಿಕ್ರಮ್ಯ ಚ ನದೀ ಶೀತೋದಾ ನಾಮ ಪಾವನೀ ।
ತೀರ್ತ್ವಾ ತಾಮುದಯಾಖ್ಯಶ್ಚ ಸಿದ್ಧಕ್ಷೇತ್ರಂ ಮಹಾಗಿರಿಃ ॥ ೨೩೪
ವಿದ್ಯಾಧರೈರನಾಕ್ರಮ್ಯಸ್ತತ್ರ ತ್ವಂ ಗಚ್ಛ ಸಾಂಪ್ರತಮ್ ।
ಪ್ರಿಯಸ್ಯ ಮಾನುಷಸ್ಯಾಸ್ಯ ಕೃತೇ ಚಿಂತಾಂ ಚ ಮಾ ಕೃಥಾಃ ॥ ೨೩೫

೨೩೬. ಈ ವಿಷಯವನ್ನೆಲ್ಲ ಅವನಿಗೆ ಹೇಳಿ ನೀನು ಹೋಗಬೇಕು. ಬಲಶಾಲಿಯಾದ ಅವನು ಆಮೇಲೆ ತಾನೇ ಅಲ್ಲಿಗೆ ಬರುವನು.”

೨೩೭. ಹೀಗೆ ಅವಳು ಹೇಳಿದಾಗ ಭಯಪಟ್ಟ ಭದ್ರೆಯು ವಿದೂಷಕನಲ್ಲಿ ಪ್ರೀತಿಯನ್ನಿಟ್ಟಿದ್ದರೂ ‘ಹಾಗೆಯೇ ಆಗಲಿ’ ಎಂದು ಒಪ್ಪಿಕೊಂಡಳು.

೨೩೮. ಎಲ್ಲ ವಿಷಯವನ್ನೂ ಜಾಣತನದಿಂದ ವಿದೂಷಕನಿಗೆ ಹೇಳಿ, ತನ್ನ ಉಂಗುರವನ್ನು ಕೊಟ್ಟು ರಾತ್ರಿಯ ಕೊನೆಯ ವೇಳೆಯಲ್ಲಿ ಭದ್ರೆ ಅದೃಶ್ಯಳಾದಳು.

೨೩೯. ಒಂದೇ ಕ್ಷಣದಲ್ಲಿ ವಿದೂಷಕನು ನಿರ್ಜನವಾದ ಹಳೆಯ ದೇವಾಲಯದಲ್ಲಿ ತಾನಿದ್ದುದನ್ನು ಕಂಡನು. ಭದ್ರೆಯಾಗಲಿ ಅರಮನೆಯಾಗಲಿ ಏನೂ ಕಾಣಿಸಲಿಲ್ಲ.

೨೪೦. ವಿದ್ಯೆಯ ವಿಸ್ತಾರವನ್ನು ಸ್ಮರಿಸುತ್ತಾ, ಆ ಉಂಗುರವನ್ನು ನೋಡುತ್ತಾ ವಿಷಾದ, ಆಶ್ಚರ್ಯಗಳ ಆವೇಶಕ್ಕೆ ವಿದೂಷಕನು ಒಳಗಾದನು.

೨೪೧. ಅವಳ ಮಾತನ್ನು ಕನಸಿನಂತೆ ನೆನಪಿಸಿಕೊಂಡು ಹೀಗೆ ಚಿಂತಿಸಿದನು. “ಅವಳು ನನಗೆ ಉದಯಪರ್ವತದ ವಿಷಯವನ್ನು ಹೇಳಿ ಹೋಗಿದ್ದಾಳೆ.

೨೪೨. ಅವಳನ್ನು ಪಡೆಯುವುದಕ್ಕೆ ನಾನೂ ಅಲ್ಲಿಗೆ ಹೋಗಬೇಕು. ಆಗ ಜನರು ನನ್ನನ್ನು ನೋಡಿ ನಾನು ಸಿಕ್ಕಿದಾಗ ರಾಜನು ನನ್ನನ್ನು ಬಿಡಲಾರನು.

---

ಏತದ್ಧಿ ಸರ್ವಮೇತಸ್ಯ ಕಥಯಿತ್ವಾ ಗಮಿಷ್ಯಸಿ ।
ಯೇನೈವ ಪಶ್ಚಾತ್ತತ್ರೈವ ಸತ್ತ್ವವಾನಾಗಮಿಷ್ಯತಿ ॥ ೨೩೬
ಇತ್ಯುಕ್ತಾ ಸಾ ತಯಾ ಸಖ್ಯಾ ಭದ್ರಾ ಭಯವಶೀಕೃತಾ ।
ವಿದೂಷಕಾನುರಕ್ತಾಪಿ ಪ್ರತಿಪೇದೇ ತಥೇತಿ ತತ್ ॥ ೨೩೭
ಉಕ್ತ್ವಾ ಚ ತಸ್ಯ ತದ್ಯುಕ್ತ್ಯಾ ದತ್ತ್ವಾ ಚ ಸ್ವಾಂಗುಲೀಯಕಮ್ ।
ವಿದೂಷಕಸ್ಯ ರಾತ್ರ್ಯಂತಸಮಯೇ ಸಾ ತಿರೋದಧೇ ॥ ೨೩೮
ವಿದೂಷಕಶ್ಚ ಪೂರ್ವಸ್ಮಿನ್ ಶೂನ್ಯೇ ವಾಸಗೃಹೇ ಸ್ಥಿತಮ್ ।
ಕ್ಷಣಾದಪಶ್ಯದಾತ್ಮಾನಂ ನ ಭದ್ರಾಂ ನ ಚ ಮಂದಿರಮ್ ॥ ೨೩೯
ಸ್ಮರನ್ ವಿದ್ಯಾಪ್ರಪಂಚಂ ತಂ ಪಶ್ಯಂಶ್ಚೈವಾಂಗುಲೀಯಕಮ್ ।
ವಿಷಾದವಿಸ್ಮಯಾವೇಶವಶಃ ಸೋಽಭೂದ್ ವಿದೂಷಕಃ ॥ ೨೪೦
ಅಚಿಂತಯಚ್ಚ ತಸ್ಯಾಃ ಸ ವಚಃ ಸ್ವಪ್ನಮಿವ ಸ್ಮರನ್ ।
ಗತಾ ತಾವನ್ನಿವೇದ್ಯೈವ ಸಾ ಮಮೋದಯಪರ್ವತಮ್ ॥ ೨೪೧
ತನ್ಮಯಾಪ್ಯಾಶು ತತ್ರೈವ ಗಂತವ್ಯಂ ತದವಾಪ್ತಯೇ ।
ನ ಚೈವಂ ಲೋಕದೃಷ್ಟಂ ಮಾಂ ಲಬ್ಧ್ವಾ ರಾಜಾ ಪರಿತ್ಯಜೇತ್ ॥ ೨೪೨

೨೪೩. ಆದ್ದರಿಂದ ನನ್ನ ಕೆಲಸವಾಗುವಂತೆ ಒಂದು ಯುಕ್ತಿಯನ್ನು ಮಾಡುವೆನು." — ಹೀಗೆ ಆಲೋಚಿಸಿ ಬುದ್ಧಿಶಾಲಿಯಾದ ವಿದೂಷಕನು ಬೇರೆ ರೂಪವನ್ನು ಧರಿಸಿದನು.

೨೪೪. ಹಳೆಯ ಬಟ್ಟೆಗಳನ್ನು ಹಾಕಿಕೊಂಡು ಮೈಗೆಲ್ಲ ಧೂಳನ್ನು ಮೆತ್ತಿಕೊಂಡು ಆ ದೇವಾಲಯದಿಂದ "ಹಾ ಭದ್ರೇ, ಹಾ ಭದ್ರೇ" ಎಂದು ಕಿರಿಚುತ್ತಾ ಹೊರಗೆ ಬಂದನು.

೨೪೫. ಆ ಕ್ಷಣದಲ್ಲೇ ಅವನನ್ನು ಕಂಡ ಆ ಪ್ರದೇಶದಲ್ಲಿದ್ದ ಜನರು 'ಆ ವಿದೂಷಕ ಬಂದಿದ್ದಾನೆ' ಎಂದು ಕೋಲಾಹಲವನ್ನು ಮಾಡಿದರು.

೨೪೬. ರಾಜನಿಗೆ ಈ ವಿಷಯ ತಿಳಿದುಬಂದಾಗ ಅವನು ತಾನೇ ಬಂದು ಹುಚ್ಚನಂತೆ ಆಡುತ್ತಿದ್ದ ಅವನನ್ನು ನೋಡಿ (ಭಟರಿಂದ) ಹಿಡಿಸಿ ತನ್ನ ಅರಮನೆಗೆ ಕರೆದುಕೊಂಡು ಹೋದನು.

೨೪೭. ಅಲ್ಲಿ ಸೇವಕರೂ ಬಂಧುಗಳೂ ಸ್ನೇಹದಿಂದ ಏನು ಕೇಳಿದರೂ ಎಲ್ಲದಕ್ಕೂ 'ಹಾ ಭದ್ರೇ' ಎಂಬ ಉತ್ತರವನ್ನೇ ಅವನು ಕೊಡುತ್ತಿದ್ದನು.

೨೪೮. ವೈದ್ಯರು ಹೇಳಿದ ಅಭ್ಯಂಗಸ್ನಾನವನ್ನು ಮಾಡಿಸಿದರೂ ಅವನು ಕ್ಷಣಮಾತ್ರದಲ್ಲಿ ಇನ್ನೂ ಹೆಚ್ಚು ಬೂದಿಯನ್ನೂ ಧೂಳನ್ನೂ ಮೈಗೆ ಉಜ್ಜಿಕೊಳ್ಳುತ್ತಿದ್ದನು.

---

ತಸ್ಮಾದ್ ಯುಕ್ತಿಂ ಕರೋಮೀಹ ಕಾರ್ಯಂ ಸಿಧ್ಯತಿ ಮೇ ಯಥಾ ।
ಇತಿ ಸಂಚಿಂತ್ಯ ಮತಿಮಾನ್ ರೂಪಮನ್ಯತ್ ಸ ಶಿಶ್ರಿಯೇ ॥ ೨೪೩

ಜೀರ್ಣವಾಸಾ ರಜೋಲಿಪ್ತೋ ಭೂತ್ವಾ ದೇವೀಗೃಹಾತ್ತತಃ ।
ನಿರಗಾದಥ ಹಾ ಭದ್ರೇ ಹಾ ಭದ್ರೇ ಇತಿ –ಸ ಬ್ರುವನ್ ॥ ೨೪೪

ತತ್ಕ್ಷಣಂ ಚ ವಿಲೋಕ್ಯೈನಂ ಜನಾಸ್ತದ್ದೇಶವರ್ತಿನಃ ।
ಸೋಽಯಂ ವಿದೂಷಕಃ ಪ್ರಾಪ್ತ ಇತಿ ಕೋಲಾಹಲಂ ವ್ಯಧುಃ ॥ ೨೪೫

ಬುದ್ಧ್ವಾ ಚ ರಾಜ್ಞಾ ನಿರ್ಗತ್ಯ ಸ್ವಯಂ ದೃಷ್ಟ್ವಾ ತಥಾವಿಧಃ ।
ಉನ್ಮತ್ತಚೇಷ್ಟೋಽವಷ್ಟಭ್ಯ ಸ ನೀತೋಽಭೂತ್ ಸ್ವಮಂದಿರಮ್ ॥ ೨೪೬

ತತ್ರ ಸ್ನೇಹಾಕುಲೈರ್ಯದ್ಯದುಕ್ತೋಽಭೂದ್ ಭೃತ್ಯಬಾಂಧವೈಃ ।
ತತ್ರ ತತ್ರ ಸ ಹಾ ಭದ್ರೇ ಇತಿ ಪ್ರತ್ಯುತ್ತರಂ ದದೌ ॥ ೨೪೭

ವೈದ್ಯೋಪದಿಷ್ಟೈರಭ್ಯಂಗೈರಭ್ಯಕ್ತೋಽಪಿ ಸ ತತ್ಕ್ಷಣಮ್ ।
ಅಂಗಮುದ್ಧೂಲಯಾಮಾಸ ಭೂರಿಣಾ ಭಸ್ಮರೇಣುನಾ ॥ ೨೪೮

೨೪೯. ರಾಜಪುತ್ರಿಯು ಪ್ರೀತಿಯಿಂದ ತನ್ನ ಕೈಯಿಂದಲೇ ನೀಡಿದ ಆಹಾರವನ್ನು ಅವನು ತತ್‌ಕ್ಷಣವೇ ಕಾಲಿನಿಂದ ಒದ್ದು ತಳ್ಳಿಹಾಕುತ್ತಿದ್ದನು.

೨೫೦. ಹೀಗೆ ಕೆಲವು ದಿನಗಳವರೆಗೆ ಅಲ್ಲಿ ವಿದೂಷಕನು ಯಾವ ಆಸಕ್ತಿಯೂ ಇಲ್ಲದ ಹಾಗೆ ಬಟ್ಟೆಗಳನ್ನು ಹರಿದುಹಾಕುತ್ತಾ ಹುಚ್ಚನ್ನು ಅಭಿನಯಿಸುತ್ತಾ ಇದ್ದನು.

೨೫೧–೨೫೨. ಇವನ ಚಿಕಿತ್ಸೆ ಸಾಧ್ಯವಲ್ಲ. ಸುಮ್ಮನೆ ಇವನನ್ನೇಕೆ ಹಿಂಸೆಗೆ ಒಳಪಡಿಸಬೇಕು ? ಎಂದಾದರೂ ಇವನು ಪ್ರಾಣ ಬಿಟ್ಟರೆ ಬ್ರಹ್ಮಹತ್ಯೆ ಆದೀತು. ಇವನು ತನಗಿಷ್ಟಬಂದಂತೆ ತಿರುಗಾಡಿದರೆ ಸ್ವಲ್ಪ ಕಾಲಾನಂತರ ಒಳ್ಳೆಯದಾದೀತು, ಎಂದು ಆಲೋಚಿಸಿ ಆದಿತ್ಯಸೇನರಾಜನು ಅವನನ್ನು ಬಿಟ್ಟುಬಿಟ್ಟನು.

೨೫೩. ಆಮೇಲೆ ತನಗಿಷ್ಟಬಂದಂತೆ ತಿರುಗಾಡುತ್ತಾ ಮತ್ತೊಂದು ದಿನ ಉಂಗುರಸಹಿತ ವೀರ ವಿದೂಷಕನು ಭದ್ರೆಯ ಕಡೆಗೆ ಸ್ವೇಚ್ಛೆಯಿಂದ ಹೊರಟನು.

೨೫೪. ಪ್ರತಿದಿನವೂ ಪೂರ್ವದಿಕ್ಕಿನ ಕಡೆಗೆ ಹೋಗುತ್ತಾ ಕ್ರಮವಾಗಿ ಅವನು ದಾರಿಯಲ್ಲಿ ಪೌಂಡ್ರವರ್ಧನ ಎಂಬ ನಗರವನ್ನು ತಲುಪಿದನು.

೨೫೫. "ತಾಯಿ, ಇಲ್ಲಿ ಒಂದು ರಾತ್ರಿ ಉಳಿದುಕೊಳ್ಳುತ್ತೇನೆ" ಎಂದು ಹೇಳಿ ಯಾವಳೋ ಒಬ್ಬ ಬ್ರಾಹ್ಮಣ ಮುದುಕಿಯ ಮನೆಯೊಳಗೆ ಹೋದನು.

---

ಸ್ನೇಹೇನ ರಾಜಪುತ್ರ್ಯಾ ಚ ಸ್ವಹಸ್ತಾಭ್ಯಾಮುಪಾಹೃತಃ ।
ಆಹಾರಸ್ತೇನ ಸಹಸಾ ಪಾದೇನಾಹತ್ಯ ಚಿಕ್ಷಿಪೇ ॥ ೨೪೯

ಏವಂ ಸ ತಸ್ಥೌ ಕತಿಚಿದ್ ದಿವಸಾಂಸ್ತತ್ರ ನಿಃಸ್ಪೃಹಃ ।
ಪಾಟಯನ್ನಿಜವಸ್ತ್ರಾಣಿ ಕೃತೋನ್ಮಾದೋ ವಿದೂಷಕಃ ॥ ೨೫೦

ಅಶಕ್ಯಪ್ರತಿಕಾರೋಽಯಂ ತತ್ ಕಿಮರ್ಥಂ ಕದರ್ಥ್ಯತೇ ।
ತ್ಯಜೇತ್ ಕದಾಚನ ಪ್ರಾಣಾನ್ ಬ್ರಹ್ಮಹತ್ಯಾ ಭವೇತ್ತತಃ ॥ ೨೫೧

ಸ್ವಚ್ಛಂದಚಾರಿಣಸ್ತ್ವಸ್ಯ ಕಾಲೇನ ಕುಶಲಂ ಭವೇತ್ ।
ಇತ್ಯಾಲೋಚ್ಯ ಸ ಚಾದಿತ್ಯಸೇನೋ ರಾಜಾ ಮುಮೋಚ ತಮ್ ॥ ೨೫೨

ತತಃ ಸ್ವಚ್ಛಂದಚಾರೀ ಸನ್ನನ್ಯೇದ್ಯುಃ ಸಾಂಗುಲೀಯಕಃ ।
ವೀರೋ ಭದ್ರಾಂ ಪ್ರತಿ ಸ್ವೈರಂ ಸ ಪ್ರತಸ್ಥೇ ವಿದೂಷಕಃ ॥ ೨೫೩

ಗಚ್ಛನ್ನಹರಹಃ ಪ್ರಾಚ್ಯಾಂ ದಿಶಿ ಪ್ರಾಪ ಸ ಚ ಕ್ರಮಾತ್ ।
ಮಧ್ಯೇ ಮಾರ್ಗವಶಾಯಾತಂ ನಗರಂ ಪೌಂಡ್ರವರ್ಧನಮ್ ॥ ೨೫೪

ಮಾತರತ್ರ ವಸಾಮ್ಯೇಕಾಂ ರಾತ್ರಿಮಿತ್ಯಭಿಧಾಯ ಸಃ ।
ಬ್ರಾಹ್ಮಣ್ಯಾಸ್ತತ್ರ ಕಸ್ಯಾಶ್ಚಿದ್ ವೃದ್ಧಾಯಾಃ ಪ್ರಾವಿಶದ್ ಗೃಹಮ್ ॥ ೨೫೫

೨೫೬. ಆಸರೆಯನ್ನು ಕೊಡಲು ಒಪ್ಪಿದ ಆ ಬ್ರಾಹ್ಮಣಿಯು ಅವನಿಗೆ ಆತಿಥ್ಯವನ್ನು ಮಾಡಿ ಒಂದು ಕ್ಷಣವಾದ ಮೇಲೆ ಅವನ ಬಳಿಗೆ ಬಂದು ಒಳಗೇ ಇದ್ದ ದುಃಖದಿಂದ ಅವನಿಗಿಂತೆಂದಳು.

೨೫೭. "ಮಗನೆ, ಈ ಮನೆಯನ್ನೆಲ್ಲ ನಾನು ನಿನಗೆ ಕೊಟ್ಟಿದ್ದೇನೆ, ತೆಗೆದುಕೋ. ಏಕೆಂದರೆ ನನಗೆ ಈಗ ಬದುಕೇ ಇಲ್ಲ.'

೨೫೮. "ಹೀಗೇಕೆ ಅನ್ನುತ್ತಿದ್ದೀ' ಎಂದು ಅವನು ಆಶ್ಚರ್ಯಪಟ್ಟು ಕೇಳಿದಾಗ ಮತ್ತೆ ಅವಳು ನುಡಿದಳು— "ಅದನ್ನು ಹೇಳುತ್ತೇನೆ, ಕೇಳು.

೨೫೯. ಮಗನೆ, ಈ ಊರಿನಲ್ಲಿ ದೇವಸೇನನೆಂಬ ದೊರೆ ಇದ್ದಾನೆ ಅವನಿಗೆ ಭೂಮಂಡಲಕ್ಕೇ ಭೂಷಣವೆನಿಸುವ ಮಗಳು ಹುಟ್ಟಿದಳು.

೨೬೦. ಮಗಳಲ್ಲಿ ಅತ್ಯಂತ ಪ್ರೀತಿಯನ್ನಿಟ್ಟ ದೊರೆಯು 'ನಾನು ಇವಳನ್ನು ಹೆಚ್ಚು ಕಷ್ಟಪಟ್ಟು ಪಡೆದೆನು' ಎಂಬ ಭಾವನೆಯಿಂದ ಅವಳಿಗೆ ದುಃಖಲಬ್ಧಿಕಾ ಎಂದು ಹೆಸರಿಟ್ಟನು.

೨೬೧. ಕಾಲಕ್ರಮದಲ್ಲಿ ಅವಳು ತಾರುಣ್ಯವನ್ನೇರಲು ರಾಜನು ತನ್ನ ಮನೆಗೆ ಕಚ್ಛಪನಾಥ ಎಂಬ ರಾಜನನ್ನು ಕರೆದು ಅವನಿಗೆ ಅವಳನ್ನು ಮದುವೆ ಮಾಡಿಕೊಟ್ಟನು.

---

ಪ್ರತಿಪನ್ನಾಶ್ರಯಾ ಸಾ ಚ ಕೃತಾತಿಥ್ಯಾ ಕ್ಷಣಾಂತರೇ ।
ಬ್ರಾಹ್ಮಣೀ ಸಮುಪೇತ್ಯೈವಂ ಸಾಂತರ್ದುಃಖಾ ಜಗಾದ ತಮ್॥ ೨೫೬
ತುಭ್ಯಮೇವ ಮಯಾ ದತ್ತಂ ಪುತ್ರ ಸರ್ವಮಿದಂ ಗೃಹಮ್।
ತದ್ಗೃಹಾಣ ಯತೋ ನಾಸ್ತಿ ಜೀವಿತಂ ಮಮ ಸಾಂಪ್ರತಮ್॥ ೨೫೭
ಕಸ್ಮಾದೇವಂ ಬ್ರವೀಷೀತಿ ತೇನೋಕ್ತಾ ವಿಸ್ಮಿತೇನ ಸಾ ।
ಶ್ರೂಯತಾಂ ಕಥಯಾಮ್ಯೇತದಿತ್ಯುಕ್ತ್ವಾ ಪುನರಬ್ರವೀತ್ ॥ ೨೫೮
ಆಸ್ತೀಹ ದೇವಸೇನಾಖ್ಯೋ ನಗರೇ ಪುತ್ರ ಭೂಪತಿಃ ।
ತಸ್ಯ ಚೈಕಾ ಸಮುತ್ಪನ್ನಾ ಕನ್ಯಾ ಭೂತಲಭೂಷಣಮ್ ॥ ೨೫೯
ಮಯಾ ದುಃಖೇನ ಲಬ್ಧೇಯಮಿತಿ ತಾಂ ದುಃಖಲಬ್ಧಿಕಾಮ್ ।
ನಾಮ್ನಾ ಚಕಾರೈಷ ನೃಪಸ್ತನಯಾಮತಿವತ್ಸಲಃ ॥ ೨೬೦
ಕಾಲೇನ ಯೌವನಾರೂಢಾಮಾನೀತಾಯ ಸ್ವವೇಶ್ಮನಿ ।
ರಾಜ್ಞೇ ಕಚ್ಛಪನಾಥಾಯ ತಾಂ ಪ್ರಾದಾಚ್ಚೈವ ಭೂಪತಿಃ ॥ ೨೬೧

೨೬೨. ಆ ಕಚ್ಛಪನಾಥನು (ಮೊದಲನೆಯ ರಾತ್ರಿ) ಅವಳ ವಾಸಗೃಹವನ್ನು ಪ್ರವೇಶಿಸಿದ ಕೂಡಲೇ ಮರಣವನ್ನು ಹೊಂದಿದನು.

೨೬೩. ಆ ಮೇಲೆ ರಾಜನು ಬೇಸರಪಟ್ಟುಕೊಂಡು ಮತ್ತೊಮ್ಮೆ ಮಗಳನ್ನು ಬೇರೆ ರಾಜನಿಗೆ ಕೊಟ್ಟನು. ಅವನೂ ಅದೇ ರೀತಿಯಲ್ಲಿ ಸತ್ತುಹೋದನು.

೨೬೪. ಆ ಭಯದಿಂದ ಬೇರೆ ದೊರೆಗಳೂ ಅವಳನ್ನು (ಮದುವೆ ಮಾಡಿಕೊಳ್ಳಲು) ಬಯಸುತ್ತಿಲ್ಲವಾದ್ದರಿಂದ ರಾಜನು ತನ್ನ ಸೇನಾಪತಿಗೆ ಹೀಗೆ ಆದೇಶಿಸಿದ್ದಾನೆ

೨೬೫. "ಈ ದೇಶದಿಂದ ಕ್ರಮವಾಗಿ ಒಂದೊಂದು ಮನೆಯಿಂದ ಒಬ್ಬೊಬ್ಬ ಗಂಡಸನ್ನು, ಕ್ಷತ್ರಿಯನನ್ನು ಅಥವಾ ಬ್ರಾಹ್ಮಣನನ್ನು, ನೀನು ಹಿಡಿದು ತರಬೇಕು.

೨೬೬. ಹಾಗೆ ಹಿಡಿದು ತಂದು ನನ್ನ ಮಗಳ ಕೋಣೆಯೊಳಗೆ ಅವನನ್ನು ಕಳುಹಿಸಬೇಕು. ಎಷ್ಟು ಕಾಲದ ವರೆಗೆ ಎಷ್ಟು ಜನ ಇಲ್ಲಿ ಸಾಯುವರೋ, ನೋಡೇಬಿಡೋಣ.

೨೬೭. ಈ ಪರೀಕ್ಷೆಯಲ್ಲಿ ಯಾವನು ಉತ್ತೀರ್ಣನಾಗುವನೋ ಅವನೇ ಅವಳ ಗಂಡನಾಗುವನು. ವಿಧಿಯ ಅದ್ಭುತ ರೀತಿಯ ದಾರಿಯನ್ನು ನಿಶ್ಚಯಿಸಲು ಅಶಕ್ಯವಲ್ಲವೆ ?"

---

ಸ ಕಚ್ಛಪೇಶ್ವರಸ್ತಸ್ಯಾ ವಧ್ವಾ ವಾಸಗೃಹಂ ನಿಶಿ ।
ಪ್ರವಿಷ್ಟ ಏವ ಪ್ರಥಮಂ ತತ್ಕಾಲಂ ಪಂಚತಾಂ ಯಯೌ ॥ ೨೬೨
ತತೋ ವಿಮನಸಾ ರಾಜ್ಞಾ ಭೂಯೋಽಪ್ಯೇತೇನ ಸಾ ಸುತಾ ।
ದತ್ತಾನ್ಯಸ್ಮೈ ನೃಪಾಯಾಭೂತ್ ಸೋಽಪಿ ತದ್ವದ್ ವ್ಯಪದ್ಯತ ॥ ೨೬೩
ತದ್ಭಯಾಚ್ಚ ಯದಾನ್ಯೇಽಪಿ ನೃಪಾ ವಾಂಛಂತಿ ನೈವ ತಾಮ್ ।
ತದಾ ಸೇನಾಪತಿಂ ರಾಜಾ ನಿಜಮೇವಂ ಸಮಾದಿಶತ್ ॥ ೨೬೪
ಇತೋ ದೇಶಾತ್ ತ್ವಯೈಕೈಕಃ ಕ್ರಮಾದೇಕೈಕತೋ ಗೃಹಾತ್ ।
ಪುಮಾನ್ ಪ್ರತ್ಯಹಮಾನೇಯೋ ಬ್ರಾಹ್ಮಣಃ ಕ್ಷತ್ರಿಯೋಽಥವಾ ॥ ೨೬೫
ಆನೀಯ ಚ ಪ್ರವೇಶ್ಯೋಽತ್ರ ರಾತ್ರೌ ಮತ್ಪುತ್ರಿಕಾಗೃಹೇ ।
ಪಶ್ಯಾಮೋಽತ್ರ ವಿಪದ್ಯಂತೇ ಕಿಯಂತೋಽತ್ರ ಕಿಯಚ್ಚಿರಮ್ ॥ ೨೬೬
ಉತ್ತರಿಷ್ಯತಿ ಯಶ್ಚಾತ್ರ ಸೋಽಸ್ಯಾ ಭರ್ತಾ ಭವಿಷ್ಯತಿ ।
ಗತಿಃ ಶಕ್ಯಾ ಪರಿಚ್ಛೇತ್ತುಂ ನ ಹ್ಯದ್ಭುತವಿಧೇರ್ವಿಧೇಃ ॥ ೨೬೭

೨೬೮. ಹೀಗೆ ರಾಜನಿಂದ ಆಜ್ಞಾಪಿತನಾದ ಸೇನಾಪತಿ ದಿನದಿನವೂ ಸರದಿಯ ಪ್ರಕಾರ ಮನೆಗಳಿಂದ ಗಂಡಸರನ್ನು ಎಳೆದುಕೊಂಡು ಹೋಗುತ್ತಿದ್ದಾನೆ.

೨೬೯. ಈ ರೀತಿಯಾಗಿ ಅಲ್ಲಿಗೆ ನೂರಾರು ಜನರು ಹೋದರು. ಪುಣ್ಯವನ್ನು ಮಾಡಿಲ್ಲದ ನನಗೆ ಒಬ್ಬನೇ ಮಗನಿದ್ದಾನೆ.

೨೭೦. ವಿಪತ್ತಿಯ ಸರದಿ ಅವನಿಗೆ ಇಂದು ಬಂದಿದೆ. ಅವನು ಇಲ್ಲವಾಗುವುದರಿಂದ ಬೆಳಗಾದ ಮೇಲೆ ನಾನು ಅಗ್ನಿಪ್ರವೇಶ ಮಾಡಬೇಕಾಗಿದೆ.

೨೭೧. ಆದ್ದರಿಂದ ಬದುಕಿರುವಾಗಲೇ ನನ್ನ ಕೈಯಿಂದ ಗುಣಶಾಲಿಯಾದ ನಿನಗೆ ಸಂಪೂರ್ಣಗೃಹವನ್ನು ಕೊಡುತ್ತಿದ್ದೇನೆ. ಅದರಿಂದ ಪುನಃ ನಾನು ದುಃಖಭಾಗಿನಿಯಾಗದಂತಾಗಲಿ.”

೨೭೨. ಹೀಗೆ ಹೇಳಿದ ಆ ಮುದುಕಿಗೆ ಧೀರ ವಿದೂಷಕನು ಹೀಗೆ ಹೇಳಿದನು. “ಅಮ್ಮ, ಪರಿಸ್ಥಿತಿ ಹೀಗಿದ್ದರೆ ನೀನು ಎದೆಗುಂದಬೇಡ.

೨೭೩. ನಾನಿಂದು ಅಲ್ಲಿಗೆ ಹೋಗುತ್ತೇನೆ, ನಿನ್ನ ಒಬ್ಬನೇ ಮಗನು ಬದುಕಲಿ. ನನ್ನನ್ನು ಕೊಂದು ಹಾಕಿದಂತಾಗುವುದೇನೋ ಎಂದು ನನ್ನಲ್ಲಿ ಮರುಕವೂ ಬೇಡ.

೨೭೪. ನನಗೆ ಸಿದ್ಧಿಯೋಗವಿರುವುದರಿಂದ ಅಲ್ಲಿಗೆ ಹೋದರೂ ನನಗೆ ಯಾವ ಭಯವೂ ಇಲ್ಲ” ಎಂದು ವಿದೂಷಕನು ಹೇಳಿದಾಗ ಆ ಬ್ರಾಹ್ಮಣ ಹೆಂಗಸು ಇಂತೆಂದಳು.

---

ಇತಿ ಸೇನಾಪತೀ ರಾಜ್ಞಾ ಸಮಾದಿಷ್ಟೋ ದಿನೇದಿನೇ ।
ವಾರಕ್ರಮೇಣ ಗೇಹೇಭ್ಯೋ ನಯತ್ಯೇವ ನರಾನಿಹ ॥ ೨೬೮
ಏವಂ ಚ ತತ್ರ ಯಾತಾನಿ ಕ್ಷಯಂ ನರಶತಾನ್ಯಪಿ ।
ಮಮ ಚಾಕೃತಪುಣ್ಯಾಯಾ ಏಕಃ ಪುತ್ರೋಽತ್ರ ವರ್ತತೇ ॥ ೨೬೯
ತಸ್ಯ ವಾರೋಽದ್ಯ ಸಂಪ್ರಾಪ್ತಸ್ತತ್ರ ಗಂತುಂ ವಿಪತ್ತಯೇ ।
ತದಭಾವೇ ಮಯಾ ಕಾರ್ಯಂ ಪ್ರಾತರಗ್ನಿಪ್ರವೇಶನಮ್ ॥ ೨೭೦
ತಜ್ಜೀವಂತೀ ಸ್ವಹಸ್ತೇನ ತುಭ್ಯಂ ಗುಣವತೇ ಗೃಹಮ್ ।
ದದಾಮಿ ಸರ್ವಂ ಯೇನ ಸ್ಯಾಂ ನ ಪುನರ್ದುಃಖಭಾಗಿನೀ ॥ ೨೭೧
ಏವಮುಕ್ತವತೀಂ ಧೀರಸ್ತಾಮವೋಚದ್ ವಿದೂಷಕಃ ।
ಯದ್ಯೇವಮಂಬ ತರ್ಹಿ ತ್ವಂ ಮಾ ಸ್ಮ ವಿಕ್ಲವತಾಂ ಕೃಥಾಃ ॥ ೨೭೨
ಅಹಂ ತತ್ರಾದ್ಯ ಗಚ್ಛಾಮಿ ಜೀವತ್ವೇಕಸುತಸ್ತವ ।
ಕಿಮೇತಂ ಘಾತಯಾಮೀತಿ ಕೃಪಾ ತೇ ಮಯಿ ಮಾ ಚ ಭೂತ್ ॥ ೨೭೩
ಸಿದ್ಧಿಯೋಗಾದ್ಧಿ ನಾಸ್ತ್ಯೇವ ಭಯಂ ತತ್ರ ಗತಸ್ಯ ಮೇ ।
ಏವಂ ವಿದೂಷಕೇಣೋಕ್ತಾ ಬ್ರಾಹ್ಮಣೀ ಸಾ ಜಗಾದ ತಮ್ ॥ ೨೭೪

೨೨೫. "ಹಾಗಾದರೆ ನನ್ನ ಪುಣ್ಯದಿಂದ ಇಲ್ಲಿಗೆ ಬಂದ ಯಾರೋ ದೇವತೆಯೇ ನೀನು. ಮಗನೇ, ನಮಗೆ ಪ್ರಾಣಗಳನ್ನು ಕೊಡು, ನಿನಗೂ ಕುಶಲವನ್ನು ಸಾಧಿಸಿಕೋ."

೨೨೬. ಹೀಗೆ ಅವಳಿಂದ ಅನುಮತಿಯನ್ನು ಪಡೆದ ವಿದೂಷಕನು ಸಂಜೆಯಲ್ಲಿ ಸೇನಾಪತಿಯು ಕಳುಹಿಸಿದ್ದ ಸೇವಕನೊಡನೆ ರಾಜಪುತ್ರಿಯ ಮನೆಗೆ ಹೋದನು.

೨೨೭. ತುಂಬಿತುಳುಕುವ ಹೂವುಗಳನ್ನು ಯಾರೂ ಕೀಳದ ಕಾರಣ ಹೂವಿನ ಭಾರದಿಂದ ಬಗ್ಗಿದ ಬಳ್ಳಿಯಂತೆ ತಾರುಣ್ಯದ ಮದದಿಂದ ಕೊಬ್ಬಿದ ರಾಜಪುತ್ರಿಯನ್ನು ಅಲ್ಲಿ ಅವನು ಕಂಡನು.

೨೨೮. ರಾತ್ರಿಯಾದ ಮೇಲೆ ರಾಜಪುತ್ರಿ ಹಾಸಿಗೆಯನ್ನೇರಿದಳು. ವಿದೂಷಕನು ಚಿಂತಾಮಾತ್ರದಿಂದಲೇ ಕೈಗೆ ಬಂದ, ಅಗ್ನಿದೇವನು ನೀಡಿದ್ದ ಖಡ್ಗವನ್ನು ಕೈಯಲ್ಲಿ ಹಿಡಿದು ಎಚ್ಚರವಾಗಿಯೇ ಇದ್ದನು.

೨೨೯. ಹಾಗೆ ವಿದೂಷಕನು (ಅವಳ) ವಾಸಗೃಹದಲ್ಲಿ 'ಇಲ್ಲಿ ಯಾವನು ಮನುಷ್ಯರನ್ನು ಕೊಲ್ಲುವನೋ ನೋಡುತ್ತೇನೆ ' ಎಂದು ಎಚ್ಚರದಿಂದಲೇ ಇದ್ದನು.

೨೩೦. ಎಲ್ಲ ಜನರೂ ಮಲಗಿದ ಮೇಲೆ ಬಾಗಿಲನ್ನು ತಟಕ್ಕನೆ ತೆರೆದು ಘೋರರೂಪದ ರಾಕ್ಷಸನೊಬ್ಬನು ಒಳಕ್ಕೆ ಬರುವುದನ್ನು ವಿದೂಷಕನು ಕಂಡನು.

---

ತರ್ಹಿ ಪುಣ್ಯೈರ್ಮಮಾಯಾತಃ ಕೋಽಪಿ ದೇವೋ ಭವಾನಿಹ ।
ತತ್ ಪ್ರಾಣಾನ್ ದೇಹಿ ನಃ ಪುತ್ರ ಕುಶಲಂ ಚ ತಥಾತ್ಮನಿ ॥ ೨೨೫

ಏವಂ ತಯಾ ಸೋಽನುಮತಃ ಸಾಯಂ ರಾಜಸುತಾಗೃಹಮ್ ।
ಸೇನಾಪತಿನಿಯುಕ್ತೇನ ಕಿಂಕರೇಣ ಸಮಂ ಯಯೌ ॥ ೨೨೬

ತತ್ರಾಪಶ್ಯನ್ನೃಪಸುತಾಂ ತಾಂ ಯೌವನಮದೋದ್ಧತಾಮ್ ।
ಲತಾಮನುಚ್ಚಿತಸ್ಫೀತಪುಷ್ಪಭಾರನತಾಮಿವ ॥ ೨೨೭

ತತೋ ನಿಶಾಯಾಂ ಶಯನೇ ರಾಜಪುತ್ರ್ಯಾ ತಯಾಶ್ರಿತೇ ।
ಧ್ಯಾತೋಪನತಮಾಗ್ನೇಯಂ ಖಡ್ಗಂ ಬಿಭ್ರತ್ ಕರೇಣ ಸಃ ॥ ೨೨೮

ವಾಸವೇಶ್ಮನಿ ತತ್ರಾಸೀಜ್ಜಾಗ್ರದೇವ ವಿದೂಷಕಃ ।
ಪಶ್ಯಾಮಿ ತಾವತ್ ಕೋ ಹಂತಿ ನರಾನತ್ರೇತಿ ಚಿಂತಯನ್ ॥ ೨೨೯

ಪ್ರಸುಪ್ತೇ ಚ ಜನೇ ಕ್ಷಿಪ್ರಾದಪಾವೃತಕಪಾಟಕಮ್ ।
ಸ ದ್ವಾರದೇಶಾದಾಯಾಂತಂ ಘೋರಂ ರಾಕ್ಷಸಮೈಕ್ಷತ ॥ ೨೩೦

೨೮೧. ರಾಕ್ಷಸನು ಬಾಗಿಲಲ್ಲೇ ನಿಂತು ನೂರಾರು ಜನರಿಗೆ ಅಕಾಲದಲ್ಲಿ ಸಾವನ್ನು ತಂದಿದ್ದ ಯಮದಂಡವಾಗಿದ್ದ ತನ್ನ ತೋಳನ್ನು ಕೋಣೆಯೊಳಕ್ಕೆ ಚಾಚಿದನು.

೨೮೨. ವಿದೂಷಕನು ಧಾವಿಸಿ ಕೋಪದಿಂದ, ಖಡ್ಗದ ಒಂದೇ ಏಟಿನಿಂದ ರಾಕ್ಷಸನ ಆ ತೋಳನ್ನು ಚಕ್ಕನೆ ಕತ್ತರಿಸಿದನು.

೨೮೩. ಕೈಯನ್ನು ಕತ್ತರಿಸಿದಾಗ ಆ ರಾಕ್ಷಸನು ತಟ್ಟನೆ ಪಲಾಯನ ಮಾಡಿ ಮತ್ತೆಂದೂ ಬರದೆ ಇರಲು ನಿಶ್ಚಯಿಸಿ ವಿದೂಷಕನ ಬಲದ ಅಗ್ಗಳಿಕೆಗೆ ಹೆದರಿ (ಎಲ್ಲಿಗೋ) ಹೋದನು.

೨೮೪. ಆಗ ಎಚ್ಚರಗೊಂಡ ರಾಜಪುತ್ರಿಯು ಕೆಳಗೆ ಬಿದ್ದಿದ್ದ ರಾಕ್ಷಸನ ತೋಳನ್ನು ನೋಡಿ ಹೆದರಿಕೊಂಡಳು, ಅವಳಿಗೆ ಸಂತೋಷ ಆಯಿತು. ಹಾಗೆಯೇ ಆಶ್ಚರ್ಯವೂ ಆಯಿತು.

೨೮೫. ಬೆಳಗ್ಗೆ ದೇವಸೇನ ಮಹಾರಾಜನೂ ತನ್ನ ಮಗಳ ಅಂತಃಪುರದ ಬಾಗಿಲಿನಲ್ಲಿ ಕತ್ತರಿಸಿ ಬಿದ್ದಿದ್ದ ಆ ತೋಳನ್ನು ನೋಡಿದನು.

೨೮೬. ಇನ್ನು ಮುಂದೆ ಇಲ್ಲಿ ಬೇರೆ ಯಾರೂ ಪ್ರವೇಶಿಸಬಾರದು ಎಂದು ವಿದೂಷಕನು ಅಲ್ಲಿ ಹಾಕಿರುವ ತುಂಬ ಉದ್ದವಾದ ಅಡ್ಡ ಅಗಳಿಯಂತೆ ಆ ತೋಳು ಕಾಣಿಸುತ್ತಿತ್ತು.

---

ಸ ಚ ದ್ವಾರಿ ಸ್ಥಿತಸ್ತತ್ರ ರಾಕ್ಷಸೋ ವಾಸಕಾಂತರೇ ।
ಭುಜಂ ನರಶತಾಕಾಂಡಯಮದಂಡಂ ನ್ಯವೇಶಯತ್ ॥ ೨೮೧

ವಿದೂಷಕಶ್ಚ ಚಿಚ್ಛೇದ ಧಾವಿತ್ವಾ ತಸ್ಯ ತಂ ಕ್ರುಧಾ ।
ಏಕಖಡ್ಗಪ್ರಹಾರೇಣ ಬಾಹುಂ ಸಪದಿ ರಕ್ಷಸಃ ॥ ೨೮೨

ಛಿನ್ನಬಾಹುಃ ಪಲಾಯ್ಯಾಶು ಜಗಾಮ ಸ ನಿಶಾಚರಃ ।
ಭೂಯೋಽನಾಗಮನಾಯೈವ ತತ್ಸತ್ತ್ವೋತ್ಕರ್ಷಭೀತಿತಃ ॥ ೨೮೩

ಪ್ರಬುದ್ಧಾ ವೀಕ್ಷ್ಯ ಪತಿತಂ ರಕ್ಷೋಬಾಹುಂ ನೃಪಾತ್ಮಜಾ ।
ಭೀತಾ ಚ ಜಾತಹರ್ಷಾ ಚ ವಿಸ್ಮಿತಾ ಚ ಬಭೂವ ಸಾ ॥ ೨೮೪

ಪ್ರಾತಶ್ಚ ದದೃಶೇ ರಾಜ್ಞಾ ದೇವಸೇನೇನ ತತ್ರ ಸಃ ।
ಸ್ವಸುತಾಂತಃಪುರದ್ವಾರಿ ಸ್ಥಿತಶ್ಛಿನ್ನಚ್ಯುತೋ ಭುಜಃ ॥ ೨೮೫

ಇತಃ ಪ್ರಭೃತಿ ನೇಹಾನ್ಯೈಃ ಪ್ರವೇಷ್ಟವ್ಯಂ ನರೈರಿತಿ ।
ದತ್ತೋ ವಿದೂಷಕೇಣೇವ ಸುದೀರ್ಘಃ ಪರಿಘಾರ್ಗಲಃ ॥ ೨೮೬

೨೮೭. ದಿವ್ಯಪ್ರಭಾವದಿಂದ ಕೂಡಿದ್ದ ಆ ವಿದೂಷಕನ ಬಗ್ಗೆ ಸಂತುಷ್ಟನಾಗಿದ್ದ ದೊರೆಯು ತನ್ನ ಮಗಳನ್ನು ಐಶ್ವರ್ಯಸಹಿತವಾಗಿ ಅವನಿಗೇ ಕೊಟ್ಟನು.

೨೮೮. ರೂಪವನ್ನು ಧರಿಸಿದ ಸಂಪತ್ತೋ ಎಂಬಂತಿದ್ದ ಆ ಕಾಂತೆಯೊಡನೆ ವಿದೂಷಕನು ಕೆಲವು ದಿನಗಳ ವರೆಗೆ ಅಲ್ಲಿಯೇ ಇದ್ದನು.

೨೮೯. ಒಂದು ದಿನ ವಿದೂಷಕನು ಮಲಗಿನಿದ್ರಿಸುತ್ತಿದ್ದ ರಾಜಪುತ್ರಿಯನ್ನು ಬಿಟ್ಟು ಭದ್ರೆಗಾಗಿ ರಾತ್ರಿಯಲ್ಲೇ ತ್ವರೆಯಿಂದ ಹೊರಟುಬಿಟ್ಟನು.

೨೯೦. ರಾಜಪುತ್ರಿಯು ಬೆಳಗಾದ ಮೇಲೆ ಅವನನ್ನು ಕಾಣದೆ ದುಃಖಿತಳಾದಳು. ಅವನು ಮತ್ತೆ ಬರುವನೆಂಬ ಆಶೆಯಿಂದ ಅವಳ ತಂದೆ ಅವಳಿಗೆ ಭರವಸೆಯನ್ನು ನೀಡಿದನು.

೨೯೧. ಆ ವಿದೂಷಕನಾದರೋ ಪ್ರತಿದಿನವೂ ಪಯಣಿಸುತ್ತಾ ಕ್ರಮಶಃ ಪೂರ್ವಸಮುದ್ರದ ಹತ್ತಿರ ಇರುವ ತಾಮ್ರಲಿಪ್ತಿ ಎಂಬ ನಗರಕ್ಕೆ ಹೋಗಿ ಸೇರಿದನು.

೨೯೨. ಸಮುದ್ರದ ಆಚೆ ದಡಕ್ಕೆ ಹೋಗಬೇಕೆಂದಿದ್ದ ಸ್ಕಂದದಾಸನೆಂಬ ಒಬ್ಬ ವ್ಯಾಪಾರಿಯೊಡನೆ ಅವನು ಸ್ನೇಹ ಮಾಡಿಕೊಂಡನು.

೨೯೩. ಆ ವ್ಯಾಪಾರಿಗೆ ಸೇರಿದ ಅಪಾರ ಸಂಪತ್ತಿನಿಂದ ತುಂಬಿದ್ದ ಹಡಗನ್ನು ಏರಿ ಸಮುದ್ರಮಾರ್ಗದಿಂದ ವಿದೂಷಕನು ಹೊರಟನು.

---

ತತೋ ದಿವ್ಯಪ್ರಭಾವಾಯ ತಸ್ಮೈ ಪ್ರೀತಃ ಸ ಪಾರ್ಥಿವಃ ।
ವಿದೂಷಕಾಯ ತನಯಾಂ ತಾಂ ದದೌ ವಿಭವೋತ್ತರಾಮ್ ॥ ೨೮೭
ತತಸ್ತಯಾ ಸಮಂ ತತ್ರ ಕಾಂತಯಾ ಸ ವಿದೂಷಕಃ ।
ತಸ್ಥೌ ದಿನಾನಿ ಕತಿಚಿದ್ರೂಪವತ್ಯೇವ ಸಂಪದಾ ॥ ೨೮೮
ಏಕಸ್ಮಿಂಶ್ಚ ದಿನೇ ಸುಪ್ತಾಂ ರಾಜಪುತ್ರೀಂ ವಿಹಾಯ ತಾಮ್ ।
ಸ ತತಃ ಪ್ರಯಯೌ ರಾತ್ರೌ ತಾಂ ಭದ್ರಾಂ ಪ್ರತಿ ಸತ್ವರಃ ॥ ೨೮೯
ರಾಜಪುತ್ರೀ ಚ ಸಾ ಪ್ರಾತಸ್ತದದರ್ಶನದುಃಖಿತಾ ।
ಆಸೀದಾಶ್ವಾಸಿತಾ ಪಿತ್ರಾ ತತ್ಪ್ರತ್ಯಾವರ್ತನಾಶಯಾ ॥ ೨೯೦
ಸೋऽಪಿ ಗಚ್ಛನ್ನಹರಹಃ ಕ್ರಮಾತ್ ಪ್ರಾಪ ವಿದೂಷಕಃ ।
ಪೂರ್ವಾಂಬುಧೇರದೂರಸ್ಥಾಂ ನಗರೀಂ ತಾಮ್ರಲಿಪ್ತಿಕಾಮ್ ॥ ೨೯೧
ತತ್ರ ಚಕ್ರೇ ಸ ಕೇನಾಪಿ ವಣಿಜಾ ಸಹ ಸಂಗತಿಮ್ ।
ಸ್ಕಂದದಾಸಾಭಿಧಾನೇನ ಪಾರಮಬ್ಧೇರ್ಯಿಯಾಸತಾ ॥ ೨೯೨
ತೇನೈವ ಸಹ ಸೋऽನಲ್ಪತದೀಯಧನಸಂಭೃತಮ್ ।
ಯಾನಪಾತ್ರಂ ಸಮಾರುಹ್ಯ ಪ್ರತಸ್ಥೇऽಂಬುಧಿವರ್ತ್ಮನಾ ॥ ೨೯೩

೯೫. ಕಡಲಿನ ಮಧ್ಯದಲ್ಲಿ ಬಂದ ಆ ಹಡಗು ಯಾರೋ ತಡೆಹಿಡಿದು ನಿಲ್ಲಿಸಿದಂತೆ ಇದ್ದಕ್ಕಿದ್ದ ಹಾಗೆ ನಿಂತುಬಿಟ್ಟಿತು.

೯೬. ಅನೇಕ ಪ್ರಶಸ್ತ ಪದಾರ್ಥಗಳಿಂದ ಕಡಲನ್ನು ಪೂಜಿಸಿದರೂ ಹಡಗು ಮುಂದಕ್ಕೆ ಕದಲಲೇ ಇಲ್ಲ. ಆಗ ಕಂಗೆಟ್ಟ ವ್ಯಾಪಾರಿ ಸ್ಕಂದದಾಸನು ಹೀಗೆ ನುಡಿದನು.

೯೭. "ಇಲ್ಲಿ ನಿಂತುಬಿಟ್ಟಿರುವ ನನ್ನ ಹಡಗನ್ನು ಯಾವನು ಬಿಡುಗಡೆಗೊಳಿಸುವನೋ ಅವನಿಗೆ ನನ್ನ ಅರ್ಧಸಂಪತ್ತನ್ನೂ ಮಗಳನ್ನೂ ಕೊಡುತ್ತೇನೆ."

೯೮. ಅದನ್ನು ಕೇಳಿ ಧೀರ ಹೃದಯದ ವಿದೂಷಕನಿಂತೆಂದನು. "ನಾನು ಇಲ್ಲಿ ನೀರಿನೊಳಗೆ ಮುಳುಗಿ ಕಡಲಿನ ಜಲದೊಳಗೆ (ಕಾರಣವನ್ನು) ಹುಡುಕುತ್ತೇನೆ.

೯೯. ನಿಂತುಬಿಟ್ಟಿರುವ ನಿನ್ನ ಹಡಗನ್ನು ಕ್ಷಣಮಾತ್ರದಲ್ಲಿ ಬಿಡಿಸುತ್ತೇನೆ. ಬಲೆ, ಹಗ್ಗಗಳನ್ನು ನನಗೆ ಕಟ್ಟಿ (ತುದಿಯನ್ನು) ನೀವು ಹಿಡಿದುಕೊಂಡಿರಿ.

೯೯. ಹಡಗು ಬಿಡುಗಡೆ ಹೊಂದಿದಾಗ ಆ ಕ್ಷಣದಲ್ಲೇ ನನ್ನನ್ನು ನೀರಿನ ಮಧ್ಯದಿಂದ ನೀವು ಹಿಡಿದುಕೊಂಡಿರುವ ಹಗ್ಗಗಳಿಂದ ಮೇಲಕ್ಕೆ ಎತ್ತಬೇಕು."

೧೦೦. ಆಗಲಿ ಎಂದು ವ್ಯಾಪಾರಿಯು ಅವನ ಮಾತನ್ನು ಒಪ್ಪಿಕೊಳ್ಳಲು ನಾವಿಕರು ವಿದೂಷಕನ ಎರಡೂ ಕಂಕುಳಲ್ಲಿ ಹಗ್ಗಗಳನ್ನು ಕಟ್ಟಿದರು.

---

ತತಃ ಸಮುದ್ರಮಧ್ಯೇ ತದ್ಯಾನಪಾತ್ರಮುಪಾಗತಮ್ ।
ಅಕಸ್ಮಾದಭವದ್ ರುದ್ಧಂ ವ್ಯಾಸಕ್ತಮಿವ ಕೇನಚಿತ್ ॥ ೯೫
ಅರ್ಚಿತೇಽಪ್ಯರ್ಣವೇ ರತ್ನೈರ್ಯದಾ ನ ವಿಚಚಾಲ ತತ್ ।
ತದಾ ಸ ವಣಿಗಾರ್ತಸ್ಸನ್ ಸ್ಕಂದದಾಸೋಽಬ್ರವೀದಿದಮ್ ॥ ೯೬
ಯೋ ಮೋಚಯತಿ ಸಂರುದ್ಧಮಿದಂ ಪ್ರವಹಣಂ ಮಮ ।
ತಸ್ಮೈ ನಿಜಧನಾರ್ಧಂ ಚ ಸ್ವಸುತಾಂ ಚ ದದಾಮ್ಯಹಮ್ ॥ ೯೭
ತಚ್ಛ್ರುತ್ವೈವ ಜಗಾದೈವಂ ಧೀರಚೇತಾ ವಿದೂಷಕಃ ।
ಅಹಮತ್ರಾವತೀರ್ಯಾಂತರ್ವಿಚಿನೋಮ್ಯಂಬುಧೇರ್ಜಲಮ್ ॥ ೯೮
ಕ್ಷಣಾಚ್ಚ ಮೋಚಯಾಮ್ಯೇತದ್ರುದ್ಧಂ ಪ್ರವಹಣಂ ತವ ।
ಯೂಯಂ ಚಾಪ್ಯವಲಂಬಧ್ವಂ ಬದ್ಧ್ವಾ ಮಾಂ ಪಾಶರಜ್ಜುಭಿಃ ॥ ೯೯
ವಿಮುಕ್ತೇ ಚ ಪ್ರವಹಣೇ ತತ್ಕ್ಷಣಂ ವಾರಿಮಧ್ಯತಃ ।
ಉದ್ಧರ್ತವ್ಯೋಽಸ್ಮಿ ಯುಷ್ಮಾಭಿರವಲಂಬನರಜ್ಜುಭಿಃ ॥ ೯೯
ತಥೇತಿ ತೇನ ವಣಿಜಾ ತದ್ವಾಕ್ಯೇಽಭಿನಂದಿತೇ ।
ಬಬಂಧುಃ ಕರ್ಣಧಾರಾಸ್ತಂ ರಜ್ಜುಬಂಧೇನ ಕಕ್ಷಯೋಃ ॥ ೧೦೦

೩೧೧. ಹಾಗೆ ಕಟ್ಟಿಸಿಕೊಂಡು ವಿದೂಷಕನು ಕಡಲಿನೊಳಗೆ ಇಳಿದನು. ಅವಕಾಶ ಒದಗಿ ಬಂದಾಗ ಎಂದೂ ಸತ್ತ್ವಶಾಲಿಗಳು ಹಿಂಜರಿಯುವುದಿಲ್ಲವಷ್ಟೆ?

೩೧೨. ಧ್ಯಾನಮಾಡಿದಾಗ ಒದಗಿಬಂದ, ಅಗ್ನಿದೇವನು ಕೊಟ್ಟಿದ್ದ ಖಡ್ಗವನ್ನು ಕೈಯಲ್ಲಿ ಹಿಡಿದು ನೀರಿನ ಮಧ್ಯದಲ್ಲಿ ಹಡಗಿನ ಕೆಳಗೆ ಆ ವೀರನು ನುಗ್ಗಿದನು.

೩೧೩. ಅಲ್ಲಿ ದೊಡ್ಡ ಗಾತ್ರದ ಮನುಷ್ಯನೊಬ್ಬ ಮಲಗಿದ್ದುದನ್ನೂ ಅವನ ಕಾಲಿನಲ್ಲಿ ಸಿಕ್ಕಿಕೊಂಡು ಹಡಗು ತಡೆಯಲ್ಪಟ್ಟಿರುವುದನ್ನು ವಿದೂಷಕನೂ ಕಂಡನು.

೩೧೪. ಆ ಕ್ಷಣದಲ್ಲೇ ಅವನು ಆ ಮನುಷ್ಯನ ಕಾಲನ್ನು ಖಡ್ಗದಿಂದ ಕತ್ತರಿಸಿ ಹಾಕಿದನು. ತಡೆಯಿಂದ ಬಿಡುಗಡೆ ಹೊಂದಿದ ಹಡಗು ಕೂಡಲೇ ಚಲಿಸಲಾರಂಭಿಸಿತು.

೩೧೫. ಅದನ್ನು ನೋಡಿದ ಕೂಡಲೇ ಆ ಪಾಪಿ ವ್ಯಾಪಾರಿಯು ತಾನು ಒಪ್ಪಿಕೊಂಡಂತೆ ಹಣವನ್ನು ಕೊಡಬೇಕಾಗುವುದಲ್ಲ ಎಂಬ ಲೋಭದಿಂದ ವಿದೂಷಕನ ಹಗ್ಗಗಳನ್ನು ಕಡಿಸಿಹಾಕಿದನು.

೩೧೬. ತನ್ನ ಚಾರಿತ್ರ್ಯದಿಂದಲೋ ಎಂಬಂತೆ ಬಿಡುಗಡೆಗೊಳಿಸಲ್ಪಟ್ಟ ಹಡಗಿನಿಂದ ಆ ವ್ಯಾಪಾರಿಯು ತನ್ನ ಲೋಭದಂತೆ ದೊಡ್ಡದಾಗಿದ್ದ ಸಮುದ್ರದ ಆಚೆಯ ದಡವನ್ನು ಬೇಗನೆ ಸೇರಿಕೊಂಡನು.

---

ತದ್‌ಬದ್ಧೋಽವತತಾರೈವ ವಾರಿಧೌ ಸ ವಿದೂಷಕಃ ।
ನ ಜಾತ್ವವಸರೇ ಪ್ರಾಪ್ತೇ ಸತ್ತ್ವವಾನವಸೀದತಿ ॥ ೩೧೧
ಧ್ಯಾತೋಪಸ್ಥಿತಮಾಗ್ನೇಯಂ ಖಡ್ಗಂ ಕೃತ್ವಾ ಚ ತಂ ಕರೇ ।
ವೀರಃ ಪ್ರವಹಣಸ್ಯಾಧೋ ಮಧ್ಯೇವಾರಿ ವಿವೇಶ ಸಃ ॥ ೩೧೨
ತತ್ರ ಚೈಕಂ ಮಹಾಕಾಯಂ ಸುಪ್ತಂ ಪುರುಷಮೈಕ್ಷತ ।
ಜಂಘಾಯಾಂ ತಸ್ಯ ರುದ್ಧಂ ಚ ಯಾನಪಾತ್ರಂ ವ್ಯಲೋಕಯತ್ ॥ ೩೧೩
ಚಿಚ್ಛೇದ ತಾಂ ಸ ಜಂಘಾಂ ಚ ತಸ್ಯ ಖಡ್ಗೇನ ತತ್‌ಕ್ಷಣಮ್ ।
ಚಚಾಲ ಚ ಪ್ರವಹಣಂ ರೋಧಮುಕ್ತಂ ತದೈವ ತತ್ ॥ ೩೧೪
ತದ್‌ದೃಷ್ಟ್ವೈವ ವಣಿಕ್‌ಪಾಪಶ್ಛೇದಯಾಮಾಸ ತಸ್ಯ ತತ್ ।
ವಿದೂಷಕಸ್ಯ ರಜ್ಜೂಸ್ತಾಃ ಪ್ರತಿಪನ್ನಾರ್ಥಲೋಭತಃ ॥ ೩೧೫
ವೃತ್ತೇನೈವ ಚ ಮುಕ್ತೇನ ದ್ರುತಂ ಪ್ರವಹಣೇನ ಸಃ ।
ಸ್ವಲೋಭಸ್ಯೇವ ಮಹತಃ ಪಾರಮಂಬುನಿಧೇರ್ಯಯೌ ॥ ೩೧೬

೩೦೭. ಹಗ್ಗದ ಅವಲಂಬನವು ಕತ್ತರಿಸಿಹೋದಾಗ ಕಡಲಿನ ಒಳಗಿದ್ದ ಧೀರ ವಿದೂಷಕನು ಮೇಲಕ್ಕೆ ಬಂದು (ಹಡಗು ಹೊರಟು ಹೋಗುತ್ತಿರುವುದನ್ನು) ನೋಡಿ ಒಂದು ಕ್ಷಣಕಾಲ ಹೀಗೆ ಆಲೋಚಿಸಿದನು.

೩೦೮. "ಆ ವ್ಯಾಪಾರಿಯ ಹೀಗೇಕೆ ಮಾಡಿದನು ? ಅಥವಾ ಹೇಳುವುದೇನಿದೆ ? ಹಣದ ಆಸೆಯಿಂದ ಕುರುಡರಾದ ಕೃತಘ್ನರು ಉಪಕಾರವನ್ನು ನೋಡಲು ಅಶಕ್ತರು.

೩೦೯. ಆದ್ದರಿಂದ ಈ ಸಮಯ ಧೈರ್ಯವನ್ನವಲಂಬಿಸುವುದಕ್ಕೆ ಸರಿಯಾಗಿದೆ. ಧೈರ್ಯವನ್ನು ಕಳೆದುಕೊಂಡರೆ ಸಣ್ಣ ವಿಪತ್ತನ್ನೂ ದಾಟಲು ಅಶಕ್ಯ.'

೩೧೦. ಹೀಗೆ ಆಲೋಚಿಸಿ ತಾನೇ ಕತ್ತರಿಸಿದ್ದ , ನೀರಿನೊಳಗೆ ಮುಳುಗಿದ್ದ ಮನುಷ್ಯನ ಕಾಲಿನ ಮೇಲೆ ವಿದೂಷಕನು ಹತ್ತಿಕುಳಿತುಕೊಂಡನು.

೩೧೧. ಕೈಗಳಿಂದ ನೀರನ್ನು ತಳ್ಳುತ್ತಾ ಆ ಕಾಲಿನ ಸಹಾಯದಿಂದಲೇ ನೌಕೆಯಿಂದ ದಾಟಿದಂತೆ ಸಮುದ್ರವನ್ನು ದಾಟಿದನು. ಸತ್ತ್ವಶಾಲಿಗಳಿಗೆ ದೈವವೇ ನೆರವನ್ನು ನೀಡುವುದಲ್ಲವೆ ?

೩೧೨. ರಾಮನಿಗೋಸ್ಕರ ಸಮುದ್ರವನ್ನು ದಾಟಿಬಂದ ಮಾರುತಿಯಂತೆ ಬಲಶಾಲಿಯಾದ ಅವನನ್ನು ಕುರಿತು ಅಂತರಿಕ್ಷದಿಂದ ವಾಣಿ ಹೀಗೆ ಹೇಳಿತು.

---

ವಿದೂಷಕೋಽಪಿ ಸ ಚ್ಛಿನ್ನರಜ್ಜ್ವಾಲಂಬೋಽಂಬುಮಧ್ಯಗಃ ।<br>
ಉನ್ಮಜ್ಜ್ಯ ತತ್ ತಥಾ ದೃಷ್ಟ್ವಾ ಧೀರಃ ಕ್ಷಣಮಚಿಂತಯತ್ ॥ ೩೦೭<br>
ಕಿಮಿದಂ ವಣಿಜಾ ತೇನ ಕೃತಂ ಕಿಮಥವೋಚ್ಯತೇ ? ।<br>
ಕೃತಘ್ನಾ ಧನಲೋಭಾಂಧಾ ನೋಪಕಾರೇಕ್ಷಣಕ್ಷಮಾಃ ॥ ೩೦೮<br>
ತದೇಷ ಕಾಲಃ ಸುತರಾಮವ್ಟೆಕ್ಲವ್ಯಸ್ಯ ಸಾಂಪ್ರತಮ್ ।<br>
ನ ಹಿ ಸತ್ತ್ವಾವಸಾದೇನ ಸ್ವಲ್ಪಾಪ್ಯಾಪದ್ ವಿಲಂಘ್ಯತೇ ॥ ೩೦೯<br>
ಇತಿ ಸಂಚಿಂತ್ಯ ತತ್ಕಾಲಂ ಜಂಘಾಂ ತಾಮಾರುರೋಹ ಸಃ ।<br>
ಯಾ ಸಾಂತರ್ಜಲಸುಪ್ತಸ್ಯ ಪುಂಸಸ್ತಸ್ಯ ನ್ಯಕೃತ್ಯತ ॥ ೩೧೦<br>
ತಯಾ ತತಾರ ನಾವೇವ ಹಸ್ತನ್ಯಸ್ತಾಂಬುರಂಬುಧಿಮ್ ।<br>
ದೈವಮೇವ ಹಿ ಸಾಹಾಯ್ಯಂ ಕುರುತೇ ಸತ್ತ್ವಶಾಲಿನಾಮ್ ॥ ೩೧೧<br>
ತಂ ಮಾರುತಿಮಿವಾಂಭೋಧಿಪಾರಂ ರಾಮಾರ್ಥಮಾಗತಮ್ ।<br>
ಬಲವಂತಮುವಾಚೈವಮಂತರಿಕ್ಷಾತ್ ಸರಸ್ವತೀ ॥ ೩೧೨

೩೧೩ "ಭಲೇ ಭಲೇ ವಿದೂಷಕ, ನಿನಗಿಂತ ಹೆಚ್ಚು ಬಲಶಾಲಿ ಬೇರೆ ಯಾವನಿದ್ದಾನೆ ? ನಿನ್ನ ಈ ಧೈರ್ಯದಿಂದ ಸಂತುಷ್ಟನಾಗಿದ್ದೇನೆ. ಆದ್ದರಿಂದ ಇದನ್ನು ಕೇಳು.

೩೧೪. ಈಗ ನಗ್ನವಿಷಯವೆಂಬ ದೇಶಕ್ಕೆ ಬಂದಿದ್ದೀಯೆ. ಇಲ್ಲಿಂದ ಮುಂದೆ ಏಳು ದಿನಗಳಲ್ಲಿ ಕಾರ್ಕೋಟಕವೆಂಬ ನಗರವನ್ನು ತಲುಪುವೆ.

೩೧೫ ಅಲ್ಲಿ ಸ್ಥೈರ್ಯವನ್ನು ಪಡೆದು ಮುಂದೆ ಬೇಗನೆ ನಿನ್ನ ಇಷ್ಟಾರ್ಥವನ್ನು ಪಡೆಯುವೆ. ಹಿಂದೆ ನೀನು ಆರಾಧಿಸಿದ ಹವ್ಯಕವ್ಯಗಳನ್ನು ಭಕ್ಷಿಸುವ ಅಗ್ನಿದೇವನು ನಾನು.

೩೧೬ ನ್ನ ವರದಿಂದ ನಿನಗೆ ಈಗ ಹಸಿವು, ಬಾಯಾರಿಕೆಗಳು ಇರುವುದಿಲ್ಲ. ಆದ್ದರಿಂದ ನಿಶ್ಚಿಂತನಾಗಿ ಸಿದ್ಧಿಯನ್ನು ಪಡೆಯಲು ಹೋಗು." ಎಂದು ಹೇಳಿ ವಾಣಿಯು ನಿಂತಿತು.

೩೧೭ ಅದನ್ನು ಕೇಳಿ ವಿದೂಷಕನು ಸಂತುಷ್ಟನಾಗಿ ಅಗ್ನಿಗೆ ನಮಸ್ಕರಿಸಿ ಮುಂದೆ ಹೊರಟನು. ಏಳನೆಯ ದಿನ ಕಾರ್ಕೋಟಕಪುರಕ್ಕೆ ತಲುಪಿದನು.

೩೧೮. ನಾನಾದೇಶಗಳಲ್ಲಿ ಹುಟ್ಟಿದವರೂ ಅತಿಥಿಗಳಲ್ಲಿ ಆದರವುಳ್ಳವರೂ ಆರ್ಯರೂ ಆದ ಬ್ರಾಹ್ಮಣರು ಆಶ್ರಯಿಸಿದ್ದ ಮಠವೊಂದನ್ನು ಅವನು ಅಲ್ಲಿ ಪ್ರವೇಶಿಸಿದನು.

---

ಸಾಧು ಸಾಧು ಸುಸತ್ತ್ವೋಽಸ್ತಿ ಕೋಽನ್ಯಸ್ತ್ವತ್ತೋ ವಿದೂಷಕ ।
ಅನೇನ ತವ ಧೈರ್ಯೇಣ ತುಷ್ಟೋಽಸ್ಮಿ ತದಿದಂ ಶೃಣು ॥ ೩೧೩
ಪ್ರಾಪ್ತೋಽಸಿ ನಗ್ನವಿಷಯಮಿಮಂ ಸಂಪ್ರತ್ಯತೋಽಪಿ ಚ ।
ಕಾರ್ಕೋಟಕಾಖ್ಯಂ ನಗರಂ ದಿನೈಃ ಪ್ರಾಪ್ಸ್ಯಸಿ ಸಪ್ತಭಿಃ ॥ ೩೧೪
ತತೋ ಲಬ್ಧಧೃತಿರ್ಗತ್ವಾ ಶೀಘ್ರಂ ಪ್ರಾಪ್ಸ್ಯಸಿ ಚೇಪ್ಸಿತಮ್ ।
ಅಹಂ ಚಾರಾಧಿತಃ ಪೂರ್ವಂ ಭವತಾ ಹವ್ಯಕವ್ಯಭುಕ್ ॥ ೩೧೫
ಮದ್ವರಾಚ್ಚ ತವೇದಾನೀಂ ಕ್ಷುತ್ತೃಷ್ಣಾ ಚ ನ ವತ್ಸ್ಯತಿ ।
ತದ್ಗಚ್ಛ ಸಿದ್ಧ್ಯೈ ವಿಸ್ರಬ್ಧಮಿತ್ಯುಕ್ತ್ವಾ ವಿರರಾಮ ವಾಕ್ ॥ ೩೧೬
ವಿದೂಷಕಶ್ಚ ತಚ್ಛ್ರುತ್ವಾ ಪ್ರಣಮ್ಯಾಗ್ನಿಂ ಪ್ರಹರ್ಷಿತಃ ।
ಪ್ರತಸ್ಥೇ ಸಪ್ತಮೇ ಚಾಹ್ನಿ ಪ್ರಾಪ ಕಾರ್ಕೋಟಕಂ ಪುರಮ್ ॥ ೩೧೭
ತತ್ರ ಚ ಪ್ರವಿವೇಶೈಕಂ ಮಠಮಾರ್ಯೈರಧಿಷ್ಠಿತಮ್ ।
ನಾನಾ ದೇಶೋದ್ಭವೈಸ್ತೈಸ್ತೈರ್ದ್ವಿಜೈರಭ್ಯಾಗತಪ್ರಿಯೈಃ ॥ ೩೧೮

೩೯. ಆ ಮಠವನ್ನು ಆ ಊರಿನ ಆರ್ಯವರ್ಮನೆಂಬ ಶ್ರೀಮಂತರಾಜನು ನಿರ್ಮಿಸಿದ್ದನು. ಸಂಪೂರ್ಣವಾಗಿ ಚಿನ್ನದಿಂದ ಮಾಡಿದ್ದ ಸುಂದರವಾದ ಒಂದು ದೇವಾಲಯವೂ ಅದರಲ್ಲಿದ್ದು ಅದು ಸಮೃದ್ಧವಾಗಿತ್ತು.

೩೦. ಎಲ್ಲರೂ ಅಲ್ಲಿ ಅವನಿಗೆ ಆತಿಥ್ಯವನ್ನು ಮಾಡಿದರು. ಒಬ್ಬ ಬ್ರಾಹ್ಮಣನು ಈ ಅತಿಥಿಯನ್ನು ಮನೆಗೊಯ್ದು ಸ್ನಾನ, ಭೋಜನ, ವಸ್ತ್ರಗಳಿಂದ ಉಪಚರಿಸಿದನು.

೩೧. ಆ ಮಠದಲ್ಲಿ ತಂಗಿದ್ದ ವಿದೂಷಕನಿಗೆ ಸಾಯಂಕಾಲ ನಗರದಲ್ಲಿ ತಮಟೆಯ ಸದ್ದಿನೊಂದಿಗೆ ಮಾಡುತ್ತಿದ್ದ ಘೋಷಣೆಯ ಈ ಮಾತು ಕೇಳಿಸಿತು.

೩೨. "ರಾಜಕುಮಾರಿಯನ್ನು ಮದುವೆಯಾಗಲು ಬಯಸುವ ಕ್ಷತ್ರಿಯನಾಗಲಿ ಬ್ರಾಹ್ಮಣನಾಗಲಿ ರಾತ್ರಿಯ ವೇಳೆ ಅವಳ ಮನೆಯಲ್ಲಿ ಇಂದು ವಾಸವನ್ನು ಮಾಡಲಿ."

೩೩. ಅದನ್ನು ಕೇಳಿದ ವಿದೂಷಕನು ಅದಕ್ಕೇನೋ ಕಾರಣವಿರಬೇಕೆಂದು ಊಹಿಸಿ ಸಾಹಸಪ್ರಿಯನಾದುದರಿಂದ ಆ ಕ್ಷಣದಲ್ಲೇ ರಾಜಪುತ್ರಿಯ ಅರಮನೆಗೆ ಹೋಗಲು ಅಪೇಕ್ಷಿಸಿದನು.

೩೪. ಆಗ ಮಠದ ಬ್ರಾಹ್ಮಣರು ಅವನಿಗೆ ಹೇಳಿದರು. "ವಿಪ್ರನೆ, ಸಾಹಸ ಮಾಡಬೇಡ. ಅದು ರಾಜಕುಮಾರಿಯ ಮನೆ ಅಲ್ಲ. ಅದು ಮೃತ್ಯುವಿನ ತೆರೆದ ಬಾಯಿ.

---

ಶ್ರೀಮತಾ ನಿರ್ಮಿತಂ ರಾಜ್ಞಾ ತತ್ರತ್ಯೇನಾರ್ಯವರ್ಮಣಾ ।
ಋದ್ಧಂ ಸಮಗ್ರಸೌವರ್ಣಹೃದ್ಯದೇವಕುಲಾನ್ವಿತಮ್ ॥ ೨೯
ತತ್ರ ಸರ್ವೈಃ ಕೃತಾತಿಥ್ಯಮೇಕಸ್ತಂ ಬ್ರಾಹ್ಮಣೋಽತಿಥಿಮ್ ।
ಸ್ನಾನೇನ ಭೋಜನೈರ್ವಸ್ತ್ರೈರ್ನೀತ್ವಾ ಗೃಹಮುಪಾಚರತ್ ॥ ೩೦
ಸಾಯಂ ಚ ತನ್ಮಠಸ್ಥಃ ಸನ್ ಪುರೇ ಶುಶ್ರಾವ ತತ್ರ ಸಃ ।
ವಿದೂಷಕಃ ಸಪಟಹಂ ಘೋಷ್ಯಮಾಣಮಿದಂ ವಚಃ ॥ ೩೧
ಬ್ರಾಹ್ಮಣಃ ಕ್ಷತ್ರಿಯೋ ವಾಪಿ ಪರಿಣೇತುಂ ನೃಪಾತ್ಮಜಾಮ್ ।
ಪ್ರಾತರಿಚ್ಛತಿ ಯಃ ಸೋಽದ್ಯ ರಾತ್ರೌ ವಸತು ತದ್‌ಗೃಹೇ ॥ ೩೨
ತಚ್ಛ್ರುತ್ವಾ ಸನಿಮಿತ್ತಂ ಸ ತದಾಶಂಕ್ಯ ಚ ತತ್‌ಕ್ಷಣಮ್ ।
ಗಂತುಂ ರಾಜಸುತಾವಾಸಮಿಯೇಷ ಪ್ರಿಯಸಾಹಸಃ ॥ ೩೩
ಊಚುಸ್ತಂ ಮಠವಿಪ್ರಾಸ್ತೇ ಬ್ರಹ್ಮನ್ ಮಾ ಸಾಹಸಂ ಕೃಥಾಃ ।
ತನ್ನ ರಾಜಸುತಾಸದ್ಮ ತನ್ಮೃತ್ಯೋರ್ವಿವೃತಂ ಮುಖಮ್ ॥ ೩೪

೩೨೫. ರಾತ್ರಿಯ ವೇಳೆ ಯಾವನು ಅಲ್ಲಿ ಪ್ರವೇಶಿಸುವನೋ ಅವನು ಬದುಕುವುದೇ ಇಲ್ಲ. ಹೀಗೆ ಅನೇಕರು ಸಾಹಸ ಮಾಡಲು ಹೋಗಿ ನಾಶ ಹೊಂದಿದ್ದಾರೆ.

೩೨೬. ಹೀಗೆ ಆ ಬ್ರಾಹ್ಮಣರು ಹೇಳಿದರೂ ಅವರ ಮಾತನ್ನು ಒಪ್ಪದೆ ವಿದೂಷಕನು ರಾಜಸೇವಕರ ಜೊತೆಯಲ್ಲಿ ರಾಜನ ಅರಮನೆಗೆ ಹೋದನು.

೩೨೭. ಅಲ್ಲಿ ರಾಜ ಆರ್ಯವರ್ಮನು ಇವನನ್ನು ಕಂಡು ಅಭಿನಂದಿಸಿದನು. ರಾತ್ರಿಯಲ್ಲಿ ಸೂರ್ಯನು ಬೆಂಕಿಯನ್ನು ಪ್ರವೇಶಿಸುವಂತೆ ವಿದೂಷಕನು ರಾಜನ ಮಗಳ ಅಂತಃಪುರವನ್ನು ಪ್ರವೇಶಿಸಿದನು.

೩೨೮. ಆಕಾರದಿಂದ ಅನುರಾಗವನ್ನು ಸೂಸುತ್ತಿದ್ದ ರಾಜಕುಮಾರಿಯನ್ನು ಅವನು ಕಂಡನು. ಕಣ್ಣೀರು ತುಂಬಿದ್ದ ದೃಷ್ಟಿಯಿಂದ ಅವಳು ನಿರಾಶೆಯ ದುಃಖದಿಂದ ಶೂನ್ಯವನ್ನು ನೋಡುತ್ತಿದ್ದಳು.

೩೨೯. ಚಿಂತಿಸಿದಾಗ ಒದಗುವ ಅಗ್ನಿಯ ಖಡ್ಗವನ್ನು ಕೈಯಲ್ಲಿ ಹಿಡಿದು ವಿದೂಷಕನು ರಾತ್ರಿಯಲ್ಲಿ ಎಚ್ಚರವಾಗಿದ್ದು ಗಮನಿಸುತ್ತಿದ್ದನು.

೩೩೦. ಇದ್ದಕ್ಕಿದ್ದಂತೆ ಅವನು ಬಾಗಿಲಿನಲ್ಲಿ ಮಹಾಭಯಂಕರನಾಗಿದ್ದ ರಾಕ್ಷಸನನ್ನು ನೋಡಿದನು. ಅವನ ಬಲತೋಳು ಕತ್ತರಿಸಿಹೋಗಿದ್ದುದರಿಂದ ಎಡಗೈಯನ್ನು ಅವನು ಒಳಕ್ಕೆ ಚಾಚಿದ್ದನು.

---

ಯೋ ಹಿ ತತ್ರ ಪ್ರವಿಶತಿ ಕ್ಷಪಾಯಾಂ ನ ಸ ಜೀವತಿ ।
ಗತಾಃ ಸುಬಹವಶ್ಚೈವಮತ್ರ ಸಾಹಸಿಕಾಃ ಕ್ಷಯಮ್ ॥ ೩೨೫

ಇತ್ಯುಕ್ತೋಽಪಿ ಸ ತೈರ್ವಿಪ್ರೈರನಂಗೀಕೃತತದ್ವಚಾಃ ।
ವಿದೂಷಕೋ ರಾಜಗೃಹಂ ಯಯೌ ತತ್ಕಿಂಕರೈಸ್ಸಹ ॥ ೩೨೬

ತತ್ರಾರ್ಯವರ್ಮಣಾ ರಾಜ್ಞಾ ಸ್ವಯಂ ದೃಷ್ಟ್ವಾಭಿನಂದಿತಃ ।
ವಿವೇಶ ತತ್ಸುತಾವಾಸಂ ನಕ್ತಮರ್ಕ ಇವಾನಲಮ್ ॥ ೩೨೭

ದದರ್ಶ ರಾಜಕನ್ಯಾಂ ಚ ತಾಮಾಕೃತ್ಯನುರಾಗಿಣೀಮ್ ।
ನೈರಾಶ್ಯದುಃಖವಿಧುರಾಂ ಪಶ್ಯಂತೀಂ ಸಾಸ್ರಯಾ ದೃಶಾ ॥ ೩೨೮

ಆಸೀಚ್ಚ ಜಾಗ್ರದೇವಾತ್ರ ಸ ರಾತ್ರಾವವಲೋಕಯನ್ ।
ಕರೇ ಕೃಪಾಣಮಾಗ್ನೇಯಂ ಚಿಂತಿತೋಪನತಂ ದಧತ್ ॥ ೩೨೯

ಅಕಸ್ಮಾಚ್ಚ ಮಹಾಘೋರಂ ದದರ್ಶ ದ್ವಾರಿ ರಾಕ್ಷಸಮ್ ।
ಭಿನ್ನದಕ್ಷಿಣಬಾಹುತ್ವಾತ್ ಪ್ರಸಾರಿತಭುಜಾಂತರಮ್ ॥ ೩೩೦

೩೩೧. ಅದನ್ನು ನೋಡಿ ವಿದೂಷಕನು ಹೀಗೆ ಯೋಚಿಸಿದನು — "ಆಹಾ, ಪೌಂಡ್ರವರ್ಧನನಗರದಲ್ಲಿ ಯಾವ ರಾಕ್ಷಸನ ತೋಳನ್ನು ನಾನು ಕತ್ತರಿಸಿದ್ದೆನೋ ಆ ರಾಕ್ಷಸನೇ ಇವನು.

೩೩೨. ಆದ್ದರಿಂದ ಇಂದು ಇವನ ಕೈಗೆ ನಾನು ಹೊಡೆಯುವುದಿಲ್ಲ. ಹಾಗೆ ಮಾಡಿದರೆ ಹಿಂದಿನಂತೆ ಇವನು ಓಡಿಹೋಗುತ್ತಾನೆ. ಆದ್ದರಿಂದ ಇವನನ್ನು ಸರಿಯಾಗಿ ಕೊಂದುಹಾಕುತ್ತೇನೆ."

೩೩೩. ಹೀಗೆ ಆಲೋಚಿಸಿ ಓಡಿಬಂದು ಅವನ ಕೂದಲನ್ನು ಹಿಡಿದು ವಿದೂಷಕನು ತಲೆಯನ್ನು ಕತ್ತರಿಸಲಾರಂಭಿಸಿದನು.

೩೩೪. ಆಗ ತುಂಬ ಹೆದರಿದ ರಾಕ್ಷಸನು "ನನ್ನನ್ನು ಕೊಲ್ಲಬೇಡ. ನೀನು ಒಳ್ಳೆಯ ಸತ್ತ್ವವುಳ್ಳವನು. ಆದ್ದರಿಂದ ದಯೆಯನ್ನು ತೋರಿಸು" ಎಂದು ಅವನಿಗೆ ಹೇಳಿದನು.

೩೩೫. 'ನಿನ್ನ ಹೆಸರೇನು ? ನಿನ್ನ ಈ ಚೇಷ್ಟೆ ಏನು ?' ಎಂದು ಅವನನ್ನು ಬಿಟ್ಟು ವೀರ ವಿದೂಷಕನು ಕೇಳಿದಾಗ ರಾಕ್ಷಸನು ಮತ್ತೆ ಇಂತೆಂದನು.

೩೩೬. "ಯಮದಂಷ್ಟ್ರ ಎಂಬ ಹೆಸರಿನ ನನಗೆ ಇವರಿಬ್ಬರು ಮಕ್ಕಳು. ಒಬ್ಬಳು ಈ ರಾಜಕುಮಾರಿ, ಮತ್ತೊಬ್ಬಳು ಪೌಂಡ್ರವರ್ಧನದಲ್ಲಿರುವವಳು.

---

ದೃಷ್ಟ್ವಾ ವ್ಯಚಿಂತಯಚ್ಚಾಸೌ ಹಂತ ಸೋಽಯಂ ನಿಶಾಚರಃ ।
ಯಸ್ಯ ಬಾಹುರ್ಮಯಾ ಛಿನ್ನೋ ನಗರೇ ಪೌಂಡ್ರವರ್ಧನೇ ॥ ೩೩೧
ತದದ್ಯ ನ ಪುನರ್ಬಾಹೌ ಪ್ರಹರಿಷ್ಯಾಮ್ಯಸೌ ಹಿ ಮೇ ।
ಪಲಾಯ್ಯ ಪೂರ್ವವದ್ ಗಚ್ಛೇತ್ತಸ್ಮಾತ್ ಸಾಧು ನಿಹನ್ಮ್ಯಮುಮ್ ॥ ೩೩೨
ಇತ್ಯಾಲೋಚ್ಯ ಪ್ರಧಾವ್ಯೈವ ಕೇಶೇಷ್ವಾಕೃಷ್ಯ ತತ್ರ ಸಃ ।
ರಾಕ್ಷಸಸ್ಯ ಶಿರಶ್ಛೇತ್ತುಂ ಸಮಾರೇಭೇ ವಿದೂಷಕಃ ॥ ೩೩೩
ತತ್ಕ್ಷಣಂ ಭಯಭೀತಶ್ಚ ತಮುವಾಚ ಸ ರಾಕ್ಷಸಃ ।
ಮಾ ಮಾಂ ವಧೀಃ ಸುಸತ್ತ್ವಸ್ತ್ವಂ ತತ್ಕುರುಷ್ವ ಕೃಪಾಮಿತಿ ॥ ೩೩೪
ಕಿಂನಾಮಾ ತ್ವಂ ಚ ಕೇಯಂ ಚ ತವ ಚೇಷ್ಟೇತಿ ತೇನ ಸಃ ।
ಮುಕ್ತ್ವಾ ಪೃಷ್ಟಶ್ಚ ವೀರೇಣ ಪುನರಾಹ ಸ ರಾಕ್ಷಸಃ ॥ ೩೩೫
ಯಮದಂಷ್ಟ್ರಾಭಿಧಾನಸ್ಯ ಮಮಾಭೂತಾಂ ಸುತೇ ಇಮೇ ।
ಇಯಮೇಕಾ ತಥಾನ್ಯಾ ಚ ಪೌಂಡ್ರವರ್ಧನವರ್ತಿನೀ ॥ ೩೩೬

೩೩೭ ವೀರನಲ್ಲದ ಪುರುಷನ ಸಂಪರ್ಕದಿಂದ ಈ ಇಬ್ಬರು ರಾಜಕುಮಾರಿಯರನ್ನು ರಕ್ಷಿಸಬೇಕು ಎಂದು ಶಂಕರನ ಆಜ್ಞೆ ನನಗೆ ಆಯಿತು.

೩೩೮. ಅಲ್ಲಿ ಮೊದಲನೆಯದಾಗಿ ಪೌಂಡ್ರವರ್ಧನ ನಗರದಲ್ಲಿ ಒಬ್ಬನು ನನ್ನ ತೋಳನ್ನು ಕತ್ತರಿಸಿಹಾಕಿದನು. ಮತ್ತೆ ಇಂದು ನಿನ್ನಿಂದ ನಾನು ಸೋತುಹೋದೆನು. ಆದ್ದರಿಂದ ನನ್ನ ಕರ್ತವ್ಯ ಮುಗಿಯಿತು.”

೩೩೯. ಅದನ್ನು ಕೇಳಿ ಜೋರಾಗಿ ನಕ್ಕು ವಿದೂಷಕನು ಅವನಿಗೆ ಹೇಳಿದನು. “ಪೌಂಡ್ರವರ್ಧನದಲ್ಲಿ ನಿನ್ನ ತೋಳನ್ನು ಕತ್ತರಿಸಿ ಹಾಕಿದ್ದು ನಾನೇ.”

೩೪೦. ಆಗ ರಾಕ್ಷಸನು "'ಹಾಗಾದರೆ ನೀನು ದೇವಾಂಶ. ಮನುಷ್ಯನಲ್ಲ. ನಿನಗೋಸ್ಕರವೇ ಶಿವನ ಅನುಗ್ರಹ ನನಗಾಯಿತು ಎಂದು ಅಂದುಕೊಂಡಿದ್ದೇನೆ.

೩೪೧. ಈಗ ನೀನು ನನ್ನ ಮಿತ್ರ. ನೀನು ನೆನೆಸಿಕೊಂಡಾಗ ನಾನು ನಿನ್ನ ಬಳಿ ಬರುತ್ತೇನೆ, ಸಿದ್ಧಿಗಾದರೂ ಸರಿ, ಸಂಕಟಗಳಲ್ಲಾದರೂ ಸರಿ.”

೩೪೨. ಹೀಗೆ ಆ ರಾಕ್ಷಸ ಯಮದಂಷ್ಟ್ರನು ವಿದೂಷಕನನ್ನು ಸ್ನೇಹದಿಂದ ಒಲಿಸಿಕೊಂಡು ಅವನಿಂದ ಅಭಿನಂದಿತನಾಗಿ ಅದೃಶ್ಯನಾದನು.

೩೪೩ ಪರಾಕ್ರಮಕ್ಕಾಗಿ ಅಭಿನಂದಿಸಲ್ಪಟ್ಟ ವಿದೂಷಕನು ರಾಜಪುತ್ರಿಯ ಜೊತೆಯಲ್ಲಿ ಆನಂದದಿಂದ ಆ ರಾತ್ರಿಯನ್ನು ಕಳೆದನು.

---

ಅವೀರಪುರುಷಾಸಂಗಾದ್ ರಕ್ಷಣೀಯೇ ನೃಪಾತ್ಮಜೇ ।
ಶಂಕರಾಜ್ಞಾಪ್ರಸಾದೋ ಹಿ ಮಮಾಭೂದಯಮೀದೃಶಃ ॥ ೩೩೭
ತತ್ರಾದೌ ಬಾಹುರೇಕೇನ ಛಿನ್ನೋ ಮೇ ಪೌಂಡ್ರವರ್ಧನೇ ।
ತ್ವಯಾ ಚಾದ್ಯ ಜಿತೋಽಸ್ಮೀಹ ತತ್ಸಮಾಪ್ತಮಿದಂ ಮಮ ॥ ೩೩೮
ತಚ್ಛ್ರುತ್ವಾ ಸ ವಿಹಸ್ಯೈನಂ ಪ್ರತ್ಯುವಾಚ ವಿದೂಷಕಃ ।
ಮಯ್ಯೈವ ಸ ಭುಜಸ್ತತ್ರ ಲೂನಸ್ತೇ ಪೌಂಡ್ರವರ್ಧನೇ ॥ ೩೩೯
ರಾಕ್ಷಸೋಽಪ್ಯವದತ್ತರ್ಹಿ ದೇವಾಂಶಸ್ತ್ವಂ ನ ಮಾನುಷಃ ।
ಮನ್ಯೇ ತ್ವದರ್ಥಮೇವಾಭೂಚ್ಛರ್ವಾಜ್ಞಾನುಗ್ರಹಃ ಸ ಮೇ ॥ ೩೪೦
ತದಿದಾನೀಂ ಸುಹೃನ್ಮೇ ತ್ವಂ ಯದಾ ಮಾಂ ಚ ಸ್ಮರಿಷ್ಯಸಿ ।
ತದಾಹಂ ಸಂನಿಧಾಸ್ಯೇ ತೇ ಸಿದ್ಧಯೇ ಸಂಕಟೇಷ್ವಪಿ ॥ ೩೪೧
ಏವಂ ಸ ರಾಕ್ಷಸೋ ಮೈತ್ರ್ಯಾ ವರಯಿತ್ವಾ ವಿದೂಷಕಮ್ ।
ತೇನಾಭಿನಂದಿತವಚಾ ಯಮದಂಷ್ಟ್ರಸ್ತಿರೋದಧೇ ॥ ೩೪೨
ವಿದೂಷಕೋಽಪಿ ಸಾನಂದಮಭಿನಂದಿತವಿಕ್ರಮಃ ।
ರಾಜಪುತ್ರ್ಯಾ ತಯಾ ತತ್ರ ಹೃಷ್ಟಸ್ತಾಮನಯನ್ನಿಶಾಮ್ ॥ ೩೪೩

೩೮೪. ಬೆಳಗಾದ ಮೇಲೆ ವೃತ್ತಾಂತವನ್ನೆಲ್ಲ ತಿಳಿದುಕೊಂಡು ಸಂತುಷ್ಟನಾದ ರಾಜನು ವೈಭವಗಳೊಡನೆ ಶೌರ್ಯಪತಾಕೆಯೆಂಬಂತಿದ್ದ ತನ್ನ ಮಗಳನ್ನು ವಿದೂಷಕನಿಗೆ ಕೊಟ್ಟನು. (ವಿವಾಹ ಮಾಡಿದನು).

೩೮೫. ಸದ್ಗುಣಗಳೆಂಬ ಹಗ್ಗಗಳಿಂದ ಬಂಧಿಸಲ್ಪಟ್ಟ ಲಕ್ಷ್ಮಿಯೆಂಬಂತೆ ಹೆಜ್ಜೆಹೆಜ್ಜೆಗೂ ಅವನನ್ನು ಬಿಡದೆ ಅನುಸರಿಸುತ್ತಿದ್ದ ಆ ರಾಜಪುತ್ರಿಯೊಡನೆ ಅವನು ಕೆಲವು ರಾತ್ರಿಗಳವರೆಗೆ ಆ ನಗರದಲ್ಲಿದ್ದನು.

೩೮೬. ಒಮ್ಮೆ ಇರುಳಲ್ಲಿ ತನ್ನ ಪ್ರಿಯೆಯನ್ನು (ಭದ್ರೆಯನ್ನು) ನೋಡಲು ಉತ್ಸುಕನಾಗಿ ಅಲ್ಲಿಂದ ಹೊರಟುಬಿಟ್ಟನು. ದೇವಲೋಕದ ಸುಖದ ಸವಿಯನ್ನು ಪಡೆದ ಯಾವನು ತಾನೆ ಬೇರೆ ಸುಖದಲ್ಲಿ ಆಸಕ್ತನಾದಾನು ?

೩೮೭. ನಗರದಿಂದ ಹೊರಗೆ ಬಂದು ಅವನು ರಾಕ್ಷಸನನ್ನು ನೆನಪಿಸಿಕೊಂಡನು. ನೆನಪಿಸಿಕೊಂಡಷ್ಟರಲ್ಲೇ ಬಂದು ನಮಸ್ಕರಿಸಿದ ರಾಕ್ಷಸನು ಅವನಿಗೆ ಹೀಗೆಂದನು.

೩೮೮. "ಭದ್ರಾ ಎಂಬ ವಿದ್ಯಾಧರಿಗೋಸ್ಕರ ನಾನು ಉದಯಾದ್ರಿಯಲ್ಲಿರುವ ಸಿದ್ಧಕ್ಷೇತ್ರಕ್ಕೆ ಹೋಗಬೇಕು. ಮಿತ್ರ ಆದ್ದರಿಂದ ನೀನು ನನ್ನನ್ನು ಅಲ್ಲಿಗೆ ಒಯ್ಯಿ.'

೩೮೯. "ಹಾಗೇ ಆಗಲಿ' ಎಂದ ರಾಕ್ಷಸನ ಹೆಗಲನ್ನೇರಿ ವಿದೂಷಕನು ಅದೇ ರಾತ್ರಿಯಲ್ಲಿ ದುರ್ಗಮವಾದ ಅರುವತ್ತು ಯೋಜನಗಳನ್ನು ದಾಟಿ ಹೋದನು.

---

ಪ್ರಾತಶ್ಚ ಜ್ಞಾತವೃತ್ತಾಂತಸ್ತುಷ್ಟಸ್ತಸ್ಮೈ ದದೌ ನೃಪಃ ।
ವಿಭವೈಃ ಸಹ ಶೌರ್ಯೈಕಪತಾಕಾಮಿವ ತಾಂ ಸುತಾಮ್ ॥ ೩೮೪
ಸ ತಯಾ ಸಹ ತತ್ರಾಸೀದ್ ರಾತ್ರೀಃ ಕಾಶ್ಚಿದ್ ವಿದೂಷಕಃ ।
ಪದಾತ್ ಪದಮಮುಂಚಂತ್ಯಾ ಲಕ್ಷ್ಮ್ಯೇವ ಗುಣಬದ್ಧಯಾ ॥ ೩೮೫
ಏಕದಾ ಚ ನಿಶಿ ಸ್ವೈರಂ ತತಃ ಪ್ರಾಯಾತ್ ಪ್ರಿಯೋತ್ಸುಕಃ ।
ಲಬ್ಧದಿವ್ಯರಸಾಸ್ವಾದಃ ಕೋ ಹಿ ರಜ್ಯೇದ್ ರಸಾಂತರೇ ॥ ೩೮೬
ನಗರಾಚ್ಚ ವಿನಿರ್ಗತ್ಯ ಸ ತಂ ಸಸ್ಮಾರ ರಾಕ್ಷಸಮ್ ।
ಸ್ಮೃತಮಾತ್ರಾಗತಂ ತಂ ಚ ಜಗಾದ ರಚಿತಾನತಿಮ್ ॥ ೩೮೭
ಸಿದ್ಧಿಕ್ಷೇತ್ರೇ ಪ್ರಯಾತವ್ಯಮುದಯಾದ್ರೌ ಮಯಾ ಸಖೇ ।
ಭದ್ರಾವಿಧ್ಯಾಧರೀಹೇತೋರತಸ್ತ್ವಂ ತತ್ರ ಮಾಂ ನಯ ॥ ೩೮೮
ತಥೇತ್ಯುಕ್ತವತಸ್ತಸ್ಯ ಸ್ಕಂಧಮಾರುಹ್ಯ ರಕ್ಷಸಃ ।
ಯಯೌ ಚ ಸ ತಯಾ ರಾತ್ರ್ಯಾ ದುರ್ಗಮಾಂ ಷಷ್ಟಿಯೋಜನೀಮ್ ॥
೩೮೯

೩೫೦. ಮನುಷ್ಯನಿಗೆ ದಾಟಲು ಅಶಕ್ಯವಾದ ಶೀತೋದಾ ಎಂಬ ನದಿಯನ್ನು ಬೆಳಗ್ಗೆ ಸುಲಭವಾಗಿ ದಾಟಿ ಅವನು ಉದಯಪರ್ವತದ ಹತ್ತಿರ ಬಂದನು.

೩೫೧. “ಸಂಪದ್ಭರಿತವಾದ ಉದಯಪರ್ವತವು ನಿನ್ನ ಮುಂದೆ ಇದೆ. ಇಲ್ಲಿಂದ ಮೇಲೆ ಇರುವ ಸಿದ್ಧಿಕ್ಷೇತ್ರದಲ್ಲಿ ನನಗೆ ಚಲನೆ ಇಲ್ಲವೇ ಇಲ್ಲ.”

೩೫೨. ಎಂದು ಹೇಳಿ ಆ ರಾಕ್ಷಸನು ಅಪ್ಪಣೆಯನ್ನು ಪಡೆದು ಕಣ್ಮರೆಯಾಗಲು ಅಲ್ಲಿ ರಮಣೀಯವಾಗಿದ್ದ ಒಂದು ಕೊಳವು ವಿದೂಷಕನ ಕಣ್ಣಿಗೆ ಬಿದ್ದಿತು.

೩೫೩. ಸುತ್ತುತ್ತಿದ್ದ ದುಂಬಿಗಳ ನಾದದಿಂದ ಆ ಕೊಳವು ಸ್ವಾಗತವನ್ನು ಹೇಳುತ್ತಿರುವಂತಿತ್ತು. ಅರಳಿದ ಪದ್ಮಗಳೆಂಬ ಮುಖದ ಸಿರಿಯನ್ನು ಹೊತ್ತಿದ್ದ ಆ ಕೊಳದ ದಡದ ಮೇಲೆ ವಿದೂಷಕನು ಕುಳಿತನು.

೩೫೪. ಅಲ್ಲಿ ಹೆಜ್ಜೆಗಳ ಒಂದು ದೊಡ್ಡ ಸಾಲು ಅವನಿಗೆ ಕಂಡಿತು. ಅದು ಹೆಂಗಸರ ಹೆಜ್ಜೆಗಳ ಗುರುತುಗಳಂತಿತ್ತು. ನಿನ್ನ ಪ್ರಿಯೆ ಬರುವುದಕ್ಕೆ ಇದು ಮಾರ್ಗ ಎಂದು ಆ ಸಾಲು ಹೇಳುತ್ತಿರುವಂತಿತ್ತು.

೩೫೫ "ಈ ಬೆಟ್ಟವನ್ನೇರಲು ಮನುಷ್ಯರು ಶಕ್ತರಲ್ಲ. ಆದ್ದರಿಂದ ಇಲ್ಲೇ ಸ್ವಲ್ಪಕಾಲ ನಾನಿರುವುದು ಲೇಸು. ಈ ಹೆಜ್ಜೆಗಳ ಸಾಲು ಯಾರದು ಎಂದು ನೋಡುತ್ತೇನೆ.’

೩೫೬ ಎಂದು ಅವನು ಚಿಂತಿಸುತ್ತಿದ್ದಾಗ ಅಲ್ಲಿಗೆ ನೀರಿಗಾಗಿ ಚಿನ್ನದ ಕೊಡಗಳನ್ನು ಹೊತ್ತಿದ್ದ ಭವ್ಯಾಕಾರದ ಅನೇಕ ಹೆಂಗಸರು ಬಂದರು.

---

ಪ್ರಾತಶ್ಚ ತೀರ್ತ್ವಾ ಶೀತೋದಾಮಲಂಘ್ಯಾಂ ಮಾನುಷೈರ್ನದೀಮ್ ।
ಉದಯಾದ್ರೇರಥ ಪ್ರಾಪತ್ ಸಂನಿಕರ್ಷಮಯತ್ನತಃ ॥ ೩೫೦
ಅಯಂ ಸ ಪರ್ವತಃ ಶ್ರೀಮಾನುದಯಾಖ್ಯಃ ಪುರಸ್ತವ ।
ಅತ್ರೋಪರಿ ಚ ನಾಸ್ತ್ಯೇವ ಸಿದ್ಧಧಾಮ್ನಿ ಗತಿರ್ಮಮ ॥ ೩೫೧
ಇತ್ಯುಕ್ತ್ವಾ ರಾಕ್ಷಸೇ ತಸ್ಮಿನ್ ಪ್ರಾಪ್ತಾನುಜ್ಞೇ ತಿರೋಹಿತೇ ।
ದೀರ್ಘಿಕಾಂ ಸ ದದರ್ಶೈಕಾಂ ರಮ್ಯಾಂ ತತ್ರ ವಿದೂಷಕಃ ॥ ೩೫೨
ವದಂತ್ಯಾಃ ಸ್ವಾಗತಮಿವ ಭ್ರಮದ್‌ಭ್ರಮರಗುಂಜಿತೈಃ ।
ತಸ್ಯಾಸ್ತೀರೇ ನ್ಯಷೀದಚ್ಚ ಫುಲ್ಲಪದ್ಮಾನನಶ್ರಿಯಃ ॥ ೩೫೩
ಸ್ತ್ರೀಣಾಮಿವಾತ್ರ ಚಾಪಶ್ಯತ್ ಪದಪಂಕ್ತಿಂ ಸುವಿಸ್ತರಾಮ್ ।
ಅಯಂ ಪ್ರಿಯಾಗಮೇ ಮಾರ್ಗಸ್ತವೇತಿ ಬ್ರುವತೀಮಿವ ॥ ೩೫೪
ಅಲಂಘ್ಯೋಽಯಂ ಗಿರಿರ್ಮರ್ತ್ಯೈಸ್ತದಿಹೈವ ವರಂ ಕ್ಷಣಮ್ ।
ಸ್ಥಿತೋ ಭವಾಮಿ ಪಶ್ಯಾಮಿ ಕಸ್ಯೇಯಂ ಪದಪದ್ಧತಿಃ ॥ ೩೫೫
ಇತಿ ಚಿಂತಯತಸ್ತಸ್ಯ ತತ್ರ ತೋಯಾರ್ಥಮಾಯಯುಃ ।
ಗೃಹೀತಕಾಂಚನಘಟಾ ಭವ್ಯಾಃ ಸುಬಹವಃ ಸ್ತ್ರಿಯಃ ॥ ೩೫೬

೩೫೭ ನೀರಿನಿಂದ ಕೊಡಗಳನ್ನು ತುಂಬಿಸಿಕೊಂಡ ಅವರನ್ನು ವಿದೂಷಕನು ಸ್ನೇಹಪೂರ್ಣವಾಗಿ "ಯಾರಿಗಾಗಿ ಈ ನೀರನ್ನು ಒಯ್ಯುತ್ತಿರುವಿರಿ ?" ಎಂದು ಕೇಳಿದನು.

೩೫೮. ""ಈ ಪರ್ವತದಲ್ಲಿ ಭದ್ರಾ ಎಂಬ ವಿದ್ಯಾಧರಿ ಇದ್ದಾಳೆ. ಅವಳ ಸ್ನಾನಕ್ಕಾಗಿ ಈ ನೀರನ್ನು ಒಯ್ಯುತ್ತಿದ್ದೇವೆ" ಎಂದು ಅವರು ಹೇಳಿದರು.

೩೫೯. ಮಹಾಕಾರ್ಯವನ್ನು ಹಮ್ಮಿಕೊಂಡಿರುವ ಧೀರರಿಗೆ ಬ್ರಹ್ಮನು ತಾನೇ ಸಂತೋಷದಿಂದ ಅವರಿಗೆ ಉಪಯೋಗವಾಗುವ ಸಾಮಗ್ರಿಯನ್ನು ಒದಗಿಸಿಕೊಡುತ್ತಾನೆ, ಆಶ್ಚರ್ಯ !

೩೬೦. ಅವರಲ್ಲೊಬ್ಬಳು ಹೆಂಗಸು ವಿದೂಷಕನನ್ನು ಕುರಿತು "ಮಹಾಭಾಗ, ಈ ಕೊಡವನ್ನು ನನ್ನ ಹೆಗಲಮೇಲಿಡು" ಎಂದು ಹೇಳಿದಳು.

೩೬೧. ಆಗಬಹುದು ಎಂದು ಹೇಳಿ ಅವಳ ಹೆಗಲ ಮೇಲೆ ಕುಂಭವನ್ನು ಇಟ್ಟ ಬುದ್ಧಿಶಾಲಿ ವಿದೂಷಕನು ತನಗೆ ಭದ್ರೆ ಹಿಂದೆ ನೀಡಿದ್ದ ರತ್ನದ ಉಂಗುರವನ್ನು ಆ ಕೊಡದಲ್ಲಿ ಹಾಕಿದನು.

೩೬೨. ಮತ್ತೆ ಅವನು ಆ ಕೊಳದ ದಡದಲ್ಲೇ ಕುಳಿತುಕೊಂಡನು. ಆ ಹೆಂಗಸರು ನೀರನ್ನು ಹೊತ್ತುಕೊಂಡು ಭದ್ರೆಯ ಮನೆಗೆ ಹೋದರು.

೩೬೩ ಅಲ್ಲಿ ಅವರು ಭದ್ರೆಯ ಸ್ನಾನಕ್ಕಾಗಿ ನೀರನ್ನು ಎರೆದಾಗ ಅವಳ ಮಡಿಲಿನೊಳಗೆ ಉಂಗುರವು ಬಿದ್ದಿತು.

---

ವಾರಿಪೂರಿತಕುಂಭಾಶ್ಚ ತಾಃ ಸ ಪಪ್ರಚ್ಛ ಯೋಷಿತಃ ।
ಕಸ್ಯೇದಂ ನೀಯತೇ ತೋಯಮಿತಿ ಪ್ರಣಯಪೇಶಲಮ್ ॥ ೩೫೭
ಆಸ್ತೇ ವಿದ್ಯಾಧರೀ ಭದ್ರ ಭದ್ರಾನಾಮಾತ್ರ ಪರ್ವತೇ ।
ಇದಂ ಸ್ನಾನೋದಕಂ ತಸ್ಯಾ ಇತಿ ತಾಶ್ಚ ತಮಬ್ರುವನ್ ॥ ೩೫೮
ಚಿತ್ರಂ ಧಾತ್ರೈವ ಧೀರಾಣಾಮಾರಬ್ಧೋದ್ದಾಮಕರ್ಮಣಾಮ್ ।
ಪರಿತುಷ್ಯೇವ ಸಾಮಗ್ರೀಂ ಘಟಯತ್ಯುಪಯೋಗಿನೀಮ್ ॥ ೩೫೯
ಯದೇಕಾ ಸಹಸೈವ ಸ್ತ್ರೀ ತಾಸಾಂ ಮಧ್ಯಾದುವಾಚ ತಮ್ ।
ಮಹಾಭಾಗ ಮಮ ಸ್ಕಂಧೇ ಕುಂಭ ಉತ್ಕ್ಷಿಪ್ಯತಾಮಿತಿ ॥ ೩೬೦
ತಥೇತಿ ಚ ಘಟೇ ತಸ್ಯಾಃ ಸ್ಕಂಧೋತ್ಕ್ಷಿಪ್ತೇ ಸ ಬುದ್ಧಿಮಾನ್ ।
ನಿದಧೇ ಭದ್ರಯಾ ಪೂರ್ವಂ ದತ್ತಂ ರತ್ನಾಂಗುಲೀಯಕಮ್ ॥ ೩೬೧
ಉಪಾವಿಶಚ್ಚ ತತ್ರೈವ ಸ ಪುನರ್ದೀರ್ಘಿಕಾತಟೇ ।
ತಾಶ್ಚ ತಜ್ಜಲಮಾದಾಯ ಯಯುರ್ಭದ್ರಾಗೃಹಂ ಸ್ತ್ರಿಯಃ ॥ ೩೬೨

೩೬೪. ಅದನ್ನು ನೋಡಿ ಗುರುತಿಸಿದ ಭದ್ರೆಯು ಅವರನ್ನು "ಇಲ್ಲಿ ಯಾವನಾದರೂ ಅಪೂರ್ವ ಪುರುಷನು ನಿಮಗೆ ಕಾಣಿಸಿದನೆ ?" ಎಂದು ಕೇಳಿದಳು.

೩೬೫. 'ನಾವು ಒಬ್ಬ ಮಾನವಯುವಕನನ್ನು ಬಾವಿಯ ದಡದಲ್ಲಿ ಕಂಡೆವು. ಅವನೇ ಈ ಕೊಡವನ್ನು ಎತ್ತಿಕೊಟ್ಟನು' ಎಂದು ಅವರು ಉತ್ತರಿಸಿದರು.

೩೬೬. (ಅದನ್ನು ಕೇಳಿ) ಅವರಿಗೆ ಭದ್ರೆಯು "ಬೇಗನೆ ಅವನಿಗೆ ಸ್ನಾನ ಮಾಡಿಸಿ ಅಲಂಕರಿಸಿ ಇಲ್ಲಿಗೆ ಕರೆದುಕೊಂಡು ಬನ್ನಿರಿ. ಅವನೇ ನನ್ನ ಗಂಡ, ಈಗ ಇಲ್ಲಿಗೆ ಬಂದಿದ್ದಾನೆ" ಎಂದು ಹೇಳಿದಳು.

೩೬೭. ಹೀಗೆ ಭದ್ರೆಯು ಹೇಳಿದಾಗ ಅವಳ ಸಖಿಯರು ಹೋಗಿ ವಸ್ತುಸ್ಥಿತಿಯನ್ನು ತಿಳಿಸಿ ವಿದೂಷಕನಿಗೆ ಸ್ನಾನ ಮಾಡಿಸಿ ಅಲ್ಲಿಗೆ ಕರೆದುತಂದರು.

೩೬೮. ಅಲ್ಲಿಗೆ ಬಂದ ವಿದೂಷಕನು ಎಷ್ಟೋ ಹೊತ್ತಿನಿಂದ ಅವನ ದಾರಿಯನ್ನೇ ಕಾಯುತ್ತಿದ್ದ ಭದ್ರೆಯನ್ನು ನೋಡಿದನು. ಅವನ ಶಕ್ತಿಯೆಂಬ ವೃಕ್ಷದ ಮಾಗಿದ ಫಲಸಂಪತ್ತಿನಂತೆ ಅವಳಿದ್ದಳು.

೩೬೯. ಅವನನ್ನು ನೋಡಿ ಅವಳು ಎದ್ದು ನಿಂತು ಆನಂದಬಾಷ್ಪಗಳ ಹನಿಗಳಿಂದ ಅರ್ಘ್ಯವನ್ನು ಕೊಟ್ಟವಳಂತೆ ಅವನ ಕತ್ತಿನಲ್ಲಿ ಲತೆಗಳಂತಿದ್ದ ಭುಜಗಳ ಹಾರವನ್ನು ಹಾಕಿದಳು.

---

ತತ್ರ ತಾಭಿಶ್ಚ ಭದ್ರಾಯಾ ಯಾವತ್ ಸ್ನಾನಾಂಬು ದೀಯತೇ ।
ತಾವತ್ ತಸ್ಯಾಸ್ತದುತ್ಸಂಗೇ ನಿಪಪಾತಾಂಗುಲೀಯಕಮ್ ॥ ೩೬೩

ತದ್‌ದೃಷ್ಟ್ವಾ ಪ್ರತ್ಯಭಿಜ್ಞಾಯ ಭದ್ರಾ ಪಪ್ರಚ್ಛ ತಾಃ ಸಖೀಃ ।
ದೃಷ್ಟಃ ಕಿಂ ಕೋಽಪಿ ಯುಷ್ಮಾಭಿರಿಹಾಪೂರ್ವಃ ಪುಮಾನಿತಿ ॥ ೩೬೪

ದೃಷ್ಟ ಏಕೋ ಯುವಾಸ್ಮಾಭಿರ್ಮಾನುಷೋ ವಾಪಿಕಾತಟೇ ।
ತೇನೋತ್‌ಕ್ಷಿಪ್ತೋ ಘಟಶ್ಚಾಯಮಿತಿ ಪ್ರತ್ಯಬ್ರುವಂಶ್ಚ ತಾಃ ॥ ೩೬೫

ತತೋ ಭದ್ರಾಬ್ರವೀಚ್ಛೀಘ್ರಂ ಕ್ಲೃಪ್ತಸ್ನಾನಮಂಡನಮ್ ।
ಇಹಾನಯತ ಗತ್ವಾ ತಂ ಸ ಹಿ ಭರ್ತಾ ಮಮಾಗತಃ ॥ ೩೬೬

ಇತ್ಯುಕ್ತೇ ಭದ್ರಯಾ ಗತ್ವಾ ಯಥಾವಸ್ತು ನಿವೇದ್ಯ ಚ ।
ಸ್ನಾತಶ್ಚ ತದ್ವಯಸ್ಯಾಭಿಸ್ತತ್ರಾನಿನ್ಯೇ ವಿದೂಷಕಃ ॥ ೩೬೭

ಪ್ರಾಪ್ತಶ್ಚ ಸ ದದರ್ಶಾತ್ರ ಭದ್ರಾಂ ಮಾರ್ಗೋನ್ಮುಖೀಂ ಚಿರಾತ್ ।
ನಿಜಸತ್ತ್ವತರೋಃ ಸಾಕ್ಷಾತ್ ಪಕ್ವಾಮಿವ ಫಲಶ್ರಿಯಮ್ ॥ ೩೬೮

ಸಾಪಿ ದೃಷ್ಟ್ವಾ ತಮುತ್ಥಾಯ ಹರ್ಷಬಾಷ್ಪಾಂಬುಶೀಕರೈಃ ।
ದತ್ತಾರ್ಘೇವ ಬಬಂಧಾಸ್ಯ ಕಂಠೇ ಭುಜಲತಾಸ್ರಜಮ್ ॥ ೩೬೯

೩೭೦. ಪರಸ್ಪರ ಅವರು ಆಲಂಗಿಸಿಕೊಂಡಾಗ ಅವರ ಬೆವರಿನ ನೆವದಿಂದ ಬಹುಕಾಲದವರೆಗೆ ಒಳಗೆ ಕೂಡಿಸಿಟ್ಟಿದ್ದ ಸ್ನೇಹವು (ಪ್ರೇಮ ಅಥವಾ ಎಣ್ಣೆ) ಅತಿಯಾಗಿ ಹಿಂಡಿದುದರಿಂದಲೋ ಎಂಬಂತೆ ಒಸರಿತು.

೩೭೧. ಆಮೇಲೆ ಇಬ್ಬರೂ ಪರಸ್ಪರ ನೋಡುವುದರಲ್ಲಿ ತೃಪ್ತಿಯಿಲ್ಲದೆ ಕುಳಿತು ಕೊಂಡರು. ಇಬ್ಬರೂ ನೂರುಪಟ್ಟು ಹೆಚ್ಚಾದಂತಿದ್ದ ಉತ್ಕಂಠೆಯನ್ನು ಅನುಭವಿಸುತ್ತಿದ್ದರು.

೩೭೨. "ಈ ಭೂಮಿಗೆ ಹೇಗೆ ಬಂದೆ ?' ಎಂದು ಭದ್ರೆಯು ಕೇಳಿದಾಗ ಕೂಡಲೇ ವಿದೂಷಕನು ಹೀಗೆಂದನು.

೩೭೩. "ಸುಂದರಿ, ನಿನ್ನ ಪ್ರೇಮವನ್ನೇ ಅವಲಂಬಿಸಿಕೊಂಡು, ಪ್ರಾಣವನ್ನು ಅನೇಕ ಅಪಾಯಗಳಿಗೆ ಒಡ್ಡಿ ಇಲ್ಲಿಗೆ ಬಂದೆನು. ಬೇರೆ ಏನು ಹೇಳಲಿ ?'

೩೭೪. ಅದನ್ನು ಕೇಳಿ ಪ್ರಾಣದಲ್ಲೂ ಆಸೆಯನ್ನು ತೊರೆಯುವಷ್ಟು ಹೆಚ್ಚಾದ ಅವನ ಪ್ರೀತಿಯನ್ನು ನೋಡಿ ಅವಳ ಪ್ರೇಮವು ಪರಾಕಾಷ್ಠೆಯನ್ನು ಮುಟ್ಟಿತು. ಅವಳು ಹೀಗೆಂದಳು.

೩೭೫. "ಆರ್ಯಪುತ್ರ, ನನಗೆ ಸಖಿಯರಿಂದ ಏನೂ ಆಗಬೇಕಾಗಿಲ್ಲ. ಸಿದ್ಧಿಗಳೂ ನನಗೆ ಬೇಕಿಲ್ಲ. ನೀನೇ ನನ್ನ ಪ್ರಾಣ. ಪ್ರಭು, ನಾನು ನಿನ್ನ ಗುಣಗಳಿಂದ ಕೊಳ್ಳಲ್ಪಟ್ಟ ದಾಸಿ.'

---

ಪರಸ್ಪರಾಲಿಂಗಿತಯೋಸ್ತಯೋಃ ಸ್ವೇದಚ್ಛಲಾದಿವ ।
ಅತಿಪೀಡನತಃ ಸ್ನೇಹಃ ಸಸ್ಯಂದೇ ಚಿರಸಂಭೃತಃ ॥ ೩೭೦
ಅಥೋಪವಿಷ್ಟಾವನ್ಯೋನ್ಯಮವಿತೃಪ್ತೌ ವಿಲೋಕನೇ ।
ಉಭೌ ಶತಗುಣೀಭೂತಾಮಿವೋತ್ಕಂಠಾಮುದೂಹತುಃ ॥ ೩೭೧
ಆಗತೋಽಸಿ ಕಥಂ ಭೂಮಿಮಿಮಾಮಿತಿ ಚ ಭದ್ರಯಾ ।
ಪರಿಪೃಷ್ಟಃ ಸ ತತ್ಕಾಲಮುವಾಚೇದಂ ವಿದೂಷಕಃ ॥ ೩೭೨
ಸಮಾಲಂಬ್ಯ ಭವತ್ಸ್ನೇಹಮಾರುಹ್ಯ ಪ್ರಾಣಸಂಶಯಾನ್ ।
ಸುಬಹೂನಾಗತೋಽಸ್ಮೀಹ ಕಿಮನ್ಯದ್ ವಚ್ಮಿ ಸುಂದರಿ ॥ ೩೭೩
ತಚ್ಛ್ರುತ್ವಾ ತಸ್ಯ ದೃಷ್ಟ್ವಾ ತಾಮನಪೇಕ್ಷಿತಜೀವಿತಾಮ್ ।
ಪ್ರೀತಿಂ ಕಾಷ್ಠಾಗತಸ್ನೇಹಾ ಸಾ ಭದ್ರಾ ತಮಭಾಷತ ॥ ೩೭೪
ಆರ್ಯಪುತ್ರ ನ ಮೇ ಕಾರ್ಯಂ ಸಖೀಭಿರ್ನ ಚ ಸಿದ್ಧಿಭಿಃ ।
ತ್ವಂ ಮೇ ಪ್ರಾಣಾ ಗುಣಕ್ರೀತಾ ದಾಸೀ ಚಾಹಂ ತವ ಪ್ರಭೋ ॥ ೩೭೫

೩೭೬. ಆಗ ವಿದೂಷಕನಿಂತೆಂದನು. "ಹಾಗಿದ್ದರೆ ಪ್ರಿಯೆ, ಈ ದಿವ್ಯವಾದ ಭೋಗವನ್ನು ಬಿಟ್ಟು ಉಜ್ಜಯಿನಿಯಲ್ಲಿ ವಾಸಿಸಲು ನನ್ನೊಡನೆ ಬಾ."

೩೭೭. ಕೂಡಲೇ ಭದ್ರೆಯು 'ಹಾಗೆಯೇ ಆಗಲಿ' ಎಂದು ಆ ಮಾತಿಗೆ ಒಪ್ಪಿಕೊಂಡಳು. ಆ ಸಂಕಲ್ಪದಿಂದ ತನ್ನ ಮಾರ್ಗವನ್ನು ಬಿಟ್ಟು ವಿದ್ಯೆಗಳನ್ನೆಲ್ಲ ತೃಣದಂತೆ ತ್ಯಜಿಸಿದಳು.

೩೭೮. ಅನಂತರ ಅವಳೊಡನೆ ಆ ರಾತ್ರಿ ವಿಶ್ರಾಂತಿಯನ್ನು ವಿದೂಷಕನು ಪಡೆದನು. ಅವಳ ಸಖಿ ಯೋಗೇಶ್ವರಿ ಎಂಬುವಳು ಅವನಿಗೆ ಉಪಚಾರ ಮಾಡಿದಳು.

೩೭೯. ಬೆಳಗ್ಗೆ ಭದ್ರೆಯೊಡನೆ ಉದಯಪರ್ವತದಿಂದ ಇಳಿದ ಧೀಮಂತ ವಿದೂಷಕನು ರಾಕ್ಷಸ ಯಮದಂಷ್ಟ್ರನನ್ನು ನೆನಪಿಸಿಕೊಂಡನು.

೩೮೦. ಸ್ಮರಣಮಾತ್ರದಿಂದಲೇ ಬಂದ ಆ ರಾಕ್ಷಸನಿಗೆ ತಾನು ಹೋಗಬೇಕಾದ ಹಾದಿಯ ಕ್ರಮವನ್ನು ತಿಳಿಸಿ, ಮೊದಲು ಭದ್ರೆಯನ್ನು ಅವನ ಹೆಗಲ ಮೇಲೆ ಕೂಡಿಸಿ ಅನಂತರ ತಾನೂ ಏರಿ ಕುಳಿತನು.

೩೮೧. ಅತಿಘೋರನಾದ ಆ ರಾಕ್ಷಸನ ಹೆಗಲ ಮೇಲೆ ಏರಿ ಕುಳಿತುಕೊಳ್ಳುವುದನ್ನೂ ಭದ್ರೆಯು ಸಹಿಸಿಕೊಂಡಳು. ಪ್ರೀತಿಗೆ ಅಧೀನರಾದ ಹೆಣ್ಣುಮಕ್ಕಳು ಏನನ್ನು ತಾನೆ ಮಾಡರು ?

---

ವಿದೂಷಕಸ್ತತೋಽವಾದೀತ್ ತರ್ಹ್ಯಾಗಚ್ಛ ಮಯಾ ಸಹ ।
ಮುಕ್ತ್ವಾ ದಿವ್ಯಮಿಮಂ ಭೋಗಂ ವಸ್ತುಮುಜ್ಜಯಿನೀಂ ಪ್ರಿಯೇ ॥ ೩೭೬
ತಥೇತಿ ಪ್ರತಿಪೇದೇ ಸಾ ಭದ್ರಾ ಸಪದಿ ತದ್ವಚಃ ।
ತತ್ಸಂಕಲ್ಪಪರಿಭ್ರಷ್ಟಾ ವಿದ್ಯಾಶ್ಚ ತೃಣವಜ್ಜಹೌ ॥ ೩೭೭
ತತಸ್ತಯಾ ಸಮಂ ತತ್ರ ಸ ವಿಶಶ್ರಾಮ ತಾಂ ನಿಶಾಮ್ ।
ಕ್ಲೃಪ್ತೋಪಚಾರಸ್ತತ್ಸಖ್ಯಾ ಯೋಗೇಶ್ವರ್ಯಾ ವಿದೂಷಕಃ ॥ ೩೭೮
ಪ್ರಾತಶ್ಚ ಭದ್ರಯಾ ಸಾಕಮವತೀರ್ಯೋದಯಾದ್ರಿತಃ ।
ಸಸ್ಮಾರ ಯಮದಂಷ್ಟ್ರಂ ತಂ ರಾಕ್ಷಸಂ ಸ ಪುನಃ ಕೃತೀ ॥ ೩೭೯
ಸ್ಮೃತಮಾತ್ರಾಗತಸ್ಯೋಕ್ತ್ವಾ ಗಂತವ್ಯಾಧ್ವಕ್ರಮಂ ನಿಜಮ್ ।
ತಸ್ಯಾರುರೋಹ ಸ ಸ್ಕಂಧೇ ಭದ್ರಾಮಾರೋಪ್ಯ ತಾಂ ಪುರಃ ॥ ೩೮೦
ಸಾಪಿ ಸೇಹೇ ತದತ್ಯುಗ್ರರಾಕ್ಷಸಾಂಸಾಧಿರೋಹಣಮ್ ।
ಅನುರಾಗಪರಾಯತ್ತಾಃ ಕುರ್ವತೇ ಕಿಂ ನ ಯೋಷಿತಃ ॥ ೩೮೧

೩೮೨. ರಾಕ್ಷಸನ ಮೇಲೆ ಕುಳಿತ ವಿದೂಷಕನು ಪ್ರಿಯೆಯೊಡನೆ ಹೊರಟು ಮತ್ತೆ ಕಾರ್ಕೋಟಕ ಪುರಕ್ಕೆ ಬಂದು ಸೇರಿದನು.

೩೮೩. ರಾಕ್ಷಸನ ದರ್ಶನದಿಂದ ಹೆದರಿದ ಜನರು ನೋಡುತ್ತಿದ್ದಂತೆ ವಿದೂಷಕನು ಆರ್ಯವರ್ಮರಾಜನನ್ನು ಕಂಡು (ಅವನ ಮಗಳಾದ) ತನ್ನ ಹೆಂಡತಿಯನ್ನು ಕೊಡಬೇಕೆಂದು ಕೇಳಿಕೊಂಡನು.

೩೮೪. ವಿದೂಷಕನು ಆಗ ತನ್ನ ಭುಜಬಲದಿಂದ ಪಡೆದುಕೊಂಡಿದ್ದ ಹೆಂಡತಿಯನ್ನು ರಾಜನು ಅವನಿಗೆ ಕೊಟ್ಟನು. ಅವಳನ್ನೂ ಕರೆದುಕೊಂಡು ರಾಕ್ಷಸನ ಮೇಲೆ ಏರಿ ಆ ಪುರದಿಂದ ಮತ್ತೆ ಹೊರಟನು.

೩೮೫. ಅಲ್ಲಿಂದ ಹೋಗಿ ಸಮುದ್ರದ ತೀರದಲ್ಲಿ ಪಾಪಿ ವ್ಯಾಪಾರಿಯ ಬಳಿಗೆ ತಲುಪಿದನು. ಆ ಪಾಪಿಯು ಹಿಂದೆ ಸಮುದ್ರದಲ್ಲಿ ಮುಳುಗಿದ್ದ ವಿದೂಷಕನ ಹಗ್ಗಗಳನ್ನು ಕಡಿದುಹಾಕಿದ್ದನು.

೩೮೬. ಆ ವ್ಯಾಪಾರಿಯ ಮಗಳನ್ನು ಧನಸಮೇತವಾಗಿ ವಿದೂಷಕನು ವಶಪಡಿಸಿಕೊಂಡನು. ಹಿಂದೆ ಸಮುದ್ರದಲ್ಲಿ ಹಡಗನ್ನು ಬಿಡಿಸಿದುದಕ್ಕೆ ಪ್ರತಿಫಲವಾಗಿ ಅವುಗಳನ್ನು ಅವನು ಸಂಪಾದಿಸಿದ್ದನು.

೩೮೭. ಆ ಪಾಪಿಗೆ ಹಣವನ್ನು ಕಿತ್ತುಕೊಂಡ ಶಿಕ್ಷೆಯೇ ಮರಣದಂಡನೆ ಎಂದು ವಿದೂಷಕನು ಭಾವಿಸಿದನು. ಪ್ರಾಯಶಃ ಜಿಪುಣರಿಗೆ ಹಣದ ರಾಶಿಗಳೇ ಮುಖ್ಯವಾದ ಪ್ರಾಣಗಳಲ್ಲವೆ ?

---

ರಕ್ಷೋಽಧಿರೂಢಶ್ಚ ತತಃ ಸ ಪ್ರತಸ್ಥೇ ಪ್ರಿಯಾಸಖಃ ।
ವಿದೂಷಕಃ ಪುನಃ ಪ್ರಾಪ ತಚ್ಚ ಕಾರ್ಕೋಟಕಂ ಪುರಮ್ ॥ ೩೮೨
ರಕ್ಷೋದರ್ಶನಸತ್ರಾಸಂ ತತ್ರ ಚಾಲೋಕಿತೋ ಜನೈಃ ।
ದೃಷ್ಟ್ವಾರ್ಯವರ್ಮನೃಪತಿಂ ಸ್ವಾಂ ಭಾರ್ಯಾಂ ಮಾರ್ಗತಿ ಸ್ಮ ಸಃ ॥ ೩೮೩
ದತ್ತಾಂ ತೇನ ಗೃಹೀತ್ವಾ ಚ ತತ್ಸುತಾಂ ತಾಂ ಭುಜಾರ್ಜಿತಾಮ್ ।
ತಥೈವ ರಾಕ್ಷಸಾರೂಢಃ ಸ ಪ್ರತಸ್ಥೇ ಪುರಾತ್ತತಃ ॥ ೩೮೪
ಗತ್ವಾಂಬುಧೇಸ್ತಟೇ ಪ್ರಾಪ ಪಾಪಂ ತಂ ವಣಿಜಂ ಚ ಸಃ ।
ಯೇನಾಸ್ಯ ವಾರಿಧೌ ಪೂರ್ವಂ ಛಿನ್ನಾಃ ಕ್ಷಿಪ್ತಸ್ಯ ರಜ್ಜವಃ ॥ ೩೮೫
ಜಹಾರ ತಸ್ಯ ಚ ಸುತಾಂ ವಣಿಜಃ ಸ ಧನೈಸ್ಸಹ ।
ಪ್ರಾಗಂಬುಧೌ ಪ್ರವಹಣಪ್ರಮೋಚನಪಣಾರ್ಜಿತಾಮ್ ॥ ೩೮೬
ಧನಾಪಹಾರಮೇವಾಸ್ಯ ವಧಂ ಮೇನೇ ಚ ಪಾಪ್ಮನಃ ।
ಕದರ್ಯಾಣಾಂ ಪರೇ ಪ್ರಾಣಾಃ ಪ್ರಾಯೇಣ ಹ್ಯರ್ಥಸಂಚಯಾಃ ॥ ೩೮೭

೩೮೮. ರಾಕ್ಷಸನೆಂಬ ರಥವನ್ನು ವ್ಯಾಪಾರಿಯ ಮಗಳೊಡನೆ, ಭದ್ರೆ ಮತ್ತು ರಾಜಪುತ್ರಿಯ ಸಹಿತವಾಗಿ ಏರಿ ವಿದೂಷಕನು ಆಕಾಶದಲ್ಲಿ ಹಾರಿದನು.

೩೮೯. ಆಕಾಶಮಾರ್ಗದಿಂದ ಹೋಗುತ್ತಾ ತನ್ನ ಕಾಂತೆಯರಿಗೆ ತನ್ನ ಪೌರುಷದಂತೆ ಸತ್ತ್ವಸಂರಂಭದಿಂದ (ಬಲದ ಅತಿಶಯದಿಂದ ಹಾಗೂ ಪ್ರಾಣಿಗಳ ಸಂಚಾರದಿಂದ) ಹೊಳೆಯುತ್ತಿದ್ದ ಸಮುದ್ರವನ್ನು ತೋರಿಸುತ್ತಾ (ಪಯಣಿಸಿ) ಅದನ್ನು ದಾಟಿದನು.

೩೯೦. ಮತ್ತೊಮ್ಮೆ ಅವನು ಪೌಂಡ್ರವರ್ಧನ ನಗರವನ್ನು ತಲುಪಿದನು. ರಾಕ್ಷಸನನ್ನು ವಾಹನವನ್ನಾಗಿ ಮಾಡಿಕೊಂಡಿದ್ದ ಅವನನ್ನು ಜನರು ವಿಸ್ಮಯದಿಂದ ನೋಡಿದರು.

೩೯೧. ಅಲ್ಲಿ ಅವನು ರಾಕ್ಷಸನನ್ನು ಸೋಲಿಸಿ ಪಡೆದುಕೊಂಡಿದ್ದ, ದೀರ್ಘಕಾಲದಿಂದ ಅವನಿಗಾಗಿ ಕಾದಿದ್ದ, ದೇವಸೇನರಾಜನ ಮಗಳನ್ನು ಸಂಧಿಸಿ ಪ್ರೀತಿಯಿಂದ ಸಂತೈಸಿದನು.

೩೯೨. ಅವಳ ತಂದೆಯು ತಡೆದರೂ ಕೇಳದೆ, ತನ್ನ ದೇಶವನ್ನು ನೋಡಲು ಉತ್ಸುಕನಾಗಿ ಅವಳನ್ನೂ ಕರೆದುಕೊಂಡು ಉಜ್ಜಯಿನಿಯ ಕಡೆಗೆ ವಿದೂಷಕನು ತೆರಳಿದನು.

೩೯೩. ಸ್ವದೇಶದರ್ಶನಸುಖವೇ ಹೊರಗೆ ಬಂದು ನಿಂತಂತಿದ್ದ ಆ ನಗರವನ್ನು ಅವನು ರಾಕ್ಷಸನ ಬಲದಿಂದ ಬೇಗನೆ ಬಂದು ಸೇರಿದನು.

---

ತತೋರಕ್ಷೋರಥಾರೂಢಸ್ತಾಮಾನೀಯ ವಣಿಕ್ಸುತಾಮ್ ।
ಸ ಭದ್ರಾರಾಜಪುತ್ರೀಭ್ಯಾಂ ಸಹೈವೋದಪತನ್ನಭಃ ॥ ೩೮೮

ದರ್ಶಯನ್ನಿಜಕಾಂತಾನಾಂ ದ್ಯುಮಾರ್ಗೇಣ ತತಾರ ಚ ।
ವಿಲಸತ್ಸತ್ತ್ವಸಂರಂಭಂ ಸ್ವಪೌರುಷಮಿವಾಂಬುಧಿಮ್ ॥ ೩೮೯

ಪ್ರಾಪ ತಚ್ಚ ಸ ಭೂಯೋಽಪಿ ನಗರಂ ಪೌಂಡ್ರವರ್ಧನಮ್ ।
ದೃಷ್ಟಃ ಸವಿಸ್ಮಯಂ ಸರ್ವೈರ್ವಾಹನೀಕೃತರಾಕ್ಷಸಃ ॥ ೩೯೦

ತತ್ರ ತಾಂ ದೇವಸೇನಸ್ಯ ಸುತಾಂ ರಾಜ್ಞಶ್ಚಿರೋತ್ಸುಕಾಮ್ ।
ಭಾರ್ಯಾಂ ಸಂಭಾವಯಾಮಾಸ ರಾಕ್ಷಸಾವಜಯಾರ್ಜಿತಾಮ್ ॥ ೩೯೧

ರುಧ್ಯಮಾನೋಽಪಿ ತತ್ಪಿತ್ರಾ ಸ ಸ್ವದೇಶಸಮುತ್ಸುಕಃ ।
ಗೃಹಿತ್ವಾ ತಾಮಪಿ ತತಃ ಪ್ರಾಯಾದುಜ್ಜಯಿನೀಂ ಪ್ರತಿ ॥ ೩೯೨

ಅಚಿರೇಣ ಚ ತಾಂ ಪ್ರಾಪ ಪುರೀಂ ರಾಕ್ಷಸಯೋಗತಃ ।
ಬಹಿರ್ಗತಾಮಿವಾತ್ಮೀಯದೇಶದರ್ಶನನಿರ್ವೃತಿಮ್ ॥ ೩೯೩

೩೯೪-೩೯೫. ಹೆಗಲ ಮೇಲಿದ್ದ ವಧುಗಳ ಕಾಂತಿಯಿಂದ ಎಲ್ಲರಿಗೂ ಕಾಣಿಸುವಂತೆ ಹೊಳೆಯುತ್ತಿದ್ದ ದೊಡ್ಡ ಶರೀರದ ರಾಕ್ಷಸನ ಮೇಲೆ ಕುಳಿತಿದ್ದ ವಿದೂಷಕನು ಉದಯಕಾಲದಲ್ಲಿ ಗಿಡಮೂಲಿಕೆಗಳಿಂದ ಕಂಗೊಳಿಸುವ ಪೂರ್ವದಿಕ್ಕಿನ ಪರ್ವತದ ಮೇಲಿರುವ ಚಂದ್ರನಂತೆ ಜನರಿಗೆ ಕಾಣಿಸಿದನು.

೩೯೬ ಜನರು ಅಚ್ಚರಿಪಡುತ್ತಾ ಹೆದರುತ್ತಿರಲು, ವಿದೂಷಕನ ಮಾವ ಆದಿತ್ಯಸೇನ ಮಹಾರಾಜನು ವಿಷಯವನ್ನರಿತು ಮುಂದೆ ಬಂದು ನಿಂತನು.

೩೯೭ ವಿದೂಷಕನು ಅವನನ್ನು ನೋಡಿ ಬೇಗನೆ ರಾಕ್ಷಸನ ಮೇಲಿಂದ ಇಳಿದು ನಮಸ್ಕರಿಸಿ ಅವನ ಕಡೆಗೆ ನಡೆದನು. ರಾಜನೂ ಅವನನ್ನು ಅಭಿನಂದಿಸಿದನು.

೩೯೮. ರಾಕ್ಷಸನ ಹೆಗಲಿಂದ ತನ್ನ ಎಲ್ಲ ಪತ್ನಿಯರನ್ನೂ ಇಳಿಸಿಕೊಂಡು ವಿದೂಷಕನು ರಾಕ್ಷಸನನ್ನು ಅವನಿಗಿಷ್ಟಬಂದಂತೆ ಹೋಗಲು ಬಿಟ್ಟನು.

೩೯೯. ರಾಕ್ಷಸನು ಹೋದ ಮೇಲೆ ತನ್ನ ಮಾವನಾದ ಆ ರಾಜನ ಜೊತೆಯಲ್ಲಿ ಭಾರ್ಯಾಸಹಿತನಾಗಿ ರಾಜನ ಅರಮನೆಯೊಳಕ್ಕೆ ಪ್ರವೇಶ ಮಾಡಿದನು.

೪೦೦. ಬಹುಕಾಲದಿಂದ ಉತ್ಕಂಠೆಗೆ ವಶಳಾಗಿದ್ದ, ಆ ರಾಜನ ಮಗಳಾದ ತನ್ನ ಮೊದಲನೆಯ ಹೆಂಡತಿಯನ್ನು ಸಮೀಪಿಸಿ ಆನಂದಗೊಳಿಸಿದನು.

---

ಅಥೋಪರಿ ಸ್ಥಿತಸ್ತಸ್ಯ ಮಹಾಕಾಯಸ್ಯ ರಕ್ಷಸಃ ।
ಅಂಸಸ್ಥತದ್ವಧೂಚಕ್ರಕಾಂತಿಪ್ರಕಟಿತಾತ್ಮನಃ ॥ ೩೯೪
ಸ ಜನೈರ್ದದೃಶೇ ತತ್ರ ಶಿಖರೇ ಜ್ವಲಿತೌಷಧೌ ।
ಶಶಾಂಕ ಇವ ಪೂರ್ವಾದ್ರೇರುದಯಸ್ಥೋ ವಿದೂಷಕಃ ॥ ೩೯೫
ತತೋ ವಿಸ್ಮಿತವಿತ್ರಸ್ತೇ ಜನೇ ಬುದ್ಧ್ವಾತ್ರ ಭೂಪತಿಃ ।
ಆದಿತ್ಯಸೇನೋ ನಿರಗಾಚ್ಛ್ವಶುರೋಽಸ್ಯ ತದಾ ಪುರಃ ॥ ೩೯೬
ವಿದೂಷಕಸ್ತು ದೃಷ್ಟ್ವಾ ತಮವತೀರ್ಯಾಶು ರಾಕ್ಷಸಾತ್ ।
ಪ್ರಣಮ್ಯ ನೃಪಮಭ್ಯಾಗಾನ್ನೃಪೋಽಪ್ಯಭಿನನಂದ ತಮ್ ॥ ೩೯೭
ಅವತಾರ್ಯೈವ ತತ್ಸ್ಕಂಧಾತ್ತಾಃ ಸ್ವಭಾರ್ಯಾಸ್ತತೋಽಖಿಲಾಃ ।
ಮುಮೋಚ ಕಾಮಚಾರಾಯ ರಾಕ್ಷಸಂ ಸ ವಿದೂಷಕಃ ॥ ೩೯೮
ಗತೇ ಚ ರಾಕ್ಷಸೇ ತಸ್ಮಿನ್ ಸ ತೇನ ಸಹ ಭೂಭುಜಾ ।
ಶ್ವಶುರೇಣ ಸಭಾರ್ಯಃ ಸನ್ ಪ್ರಾವಿಶದ್ ರಾಜಮಂದಿರಮ್ ॥ ೩೯೯
ತತ್ರ ತಾಂ ಪ್ರಥಮಾಂ ಭಾರ್ಯಾಂ ತನಯಾಂ ತಸ್ಯ ಭೂಪತೇಃ ।
ಆನಂದಯದುಪಾಗತ್ಯ ಚಿರೋತ್ಕಂಠಾವಶೀಕೃತಾಮ್ ॥ ೪೦೦

೪೦೧. "ಈ ಪತ್ನಿಯರೆಲ್ಲ ನಿನಗೆ ಹೇಗೆ ದೊರಕಿದರು, ಈ ರಾಕ್ಷಸನು ಯಾರು ?' ಎಂದು ರಾಜನು ಕೇಳಿದಾಗ ವಿದೂಷಕನು ಎಲ್ಲವನ್ನೂ ಹೇಳಿದನು.

೪೦೨. ಅಳಿಯನ ಪ್ರಭಾವದಿಂದ ಸಂತುಷ್ಟನಾಗಿ ಕರ್ತವ್ಯವನ್ನು ತಿಳಿದವನಾದ ರಾಜನು ವಿದೂಷಕನಿಗೆ ಅರ್ಧರಾಜ್ಯವನ್ನು ಕೊಟ್ಟನು.

೪೦೩. ಬ್ರಾಹ್ಮಣನಾಗಿದ್ದ ವಿದೂಷಕನು ಆ ಕ್ಷಣದಿಂದಲೇ ರಾಜನಾದನು. ಅವನಿಗೆ ಬೆಳ್ಗೊಡೆಯನ್ನು ಏರಿಸಲಾಯಿತು, ಮತ್ತು ಎರಡು ಪಕ್ಕಗಳಿಂದಲೂ ಚಾಮರಗಳನ್ನು ಬೀಸಲಾಯಿತು.

೪೦೪. ಆಗ ಉಜ್ಜಯಿನೀನಗರಿಯು ಮಂಗಳವಾದ್ಯಗಳ ಶಬ್ದದಿಂದ ತುಂಬಿತುಳುಕಿ ಆನಂದದಿಂದ ನಾದವನ್ನು ಹೊರಡಿಸುತ್ತಿದ್ದೆಯೋ ಎಂಬಂತೆ ಶೋಭಿಸಿತು.

೪೦೫. ಹೀಗೆ ರಾಜ್ಯದ ವೈಭವವನ್ನು ಪಡೆದುಕೊಂಡ ವಿದೂಷಕನು ಕ್ರಮಶಃ ಸಮಸ್ತ ಭೂಮಿಯನ್ನೂ ಗೆದ್ದು ಅಖಿಲ ರಾಜಸಮೂಹದಿಂದ ಪಾದಪೂಜೆಯನ್ನು ಮಾಡಿಸಿಕೊಂಡು, ಮಾತ್ಸರ್ಯವಿಲ್ಲದೆ ಸುಖವಾಗಿದ್ದ ತನ್ನ ಪ್ರಿಯೆಯರೊಡನೆ ಭದ್ರಾಸಖನಾಗಿ ದೀರ್ಘಕಾಲ ಸುಖಿಸಿದನು.

೪೦೬. ಹೀಗೆ ದೈವವು ಅನುಕೂಲವಾಗಿದ್ದಾಗ ಧೀರರಿಗೆ ಅವರ ಬಲವೇ ಲಕ್ಷ್ಮಿಯನ್ನು ವೇಗದಿಂದ ಆಕರ್ಷಿಸುವ, ಸಿದ್ಧವಾದ ಮಹಾಸಂತೋಷದ ಮಂತ್ರವಾಗಿ ಬಿಡುತ್ತದೆ

---

ಕಥಮೇತಾಸ್ತ್ವಯಾ ಭಾರ್ಯಾಃ ಪ್ರಾಪ್ತಾಃ ಕಶ್ಚೈಷ ರಾಕ್ಷಸಃ ।
ಇತಿ ಪೃಷ್ಟಃ ಸ ರಾಜಾತ್ರ ಸರ್ವಮಸ್ಮೈ ಶಶಂಸ ತತ್ ॥ ೪೦೧
ತತಃ ಪ್ರಭಾವತುಷ್ಟೇನ ತೇನ ತಸ್ಯ ಮಹೀಭೃತಾ ।
ಜಾಮಾತುರ್ನಿಜರಾಜ್ಯಾರ್ಧಂ ಪ್ರದತ್ತಂ ಕಾರ್ಯವೇದಿನಾ ॥ ೪೦೨
ತತ್ಕ್ಷಣಾಚ್ಚ ಸ ರಾಜಾಭೂದ್ ವಿಪ್ರೋ ಭೂತ್ವಾ ವಿದೂಷಕಃ ।
ಸಮುಚ್ಛ್ರಿತಸಿತಚ್ಛತ್ರೋ ವಿಧೂತೋಭಯಚಾಮರಃ ॥ ೪೦೩
ತದಾ ಚ ಮಂಗಲಾತೋದ್ಯವಾದ್ಯನಿರ್ಹ್ರಾದನಿರ್ಭರಾ ।
ಪ್ರಹರ್ಷಮುಕ್ತನಾದೇವ ರರಾಜೋಜ್ಜಯಿನೀ ಪುರೀ ॥ ೪೦೪
ಇತ್ಯಾಪ್ತರಾಜ್ಯವಿಭವಃ ಕ್ರಮಶಃ ಸ ಕೃತ್ಸ್ನಾಂ
ಜಿತ್ವಾ ಮಹೀಮಖಿಲರಾಜಕಪೂಜಿತಾಂಘ್ರಿಃ ।
ತಾಭಿಃ ಸಮಂ ವಿಗತಮತ್ಸರನಿರ್ವೃತಾಭಿ-
ರ್ಭದ್ರಾಸಖಶ್ಚಿರಮರಂಸ್ತ ನಿಜಪ್ರಿಯಾಭಿಃ ॥ ೪೦೫
ಇತ್ಯನುಕೂಲೇ ದೈವೇ ಭಜತಿ ನಿಜಂ ಸತ್ತ್ವಮೇವ ಧೀರಾಣಾಮ್ ।
ಲಕ್ಷ್ಮೀರಭಸಾಕರ್ಷಣಸಿದ್ಧಮಹಾಮೋದಮಂತ್ರತ್ವಮ್ ॥ ೪೦೬

೪೦೭ ವತ್ಸರಾಜನ ಬಾಯಿಂದ ಅಚ್ಚುಗೊಳಿಸುವ ಅದ್ಭುತವಾದ ಅರ್ಥವುಳ್ಳ ಈ ಕಥೆಯನ್ನು ಕೇಳಿ ಅವನ ಪಕ್ಕದಲ್ಲಿ ಕುಳಿತಿದ್ದ ಎಲ್ಲ ಮಂತ್ರಿಗಳೂ ಇಬ್ಬರು ರಾಣಿಯರೂ ಪರಮಾನಂದವನ್ನು ಹೊಂದಿದರು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಲಾವಾಣಕಲಂಬಕದಲ್ಲಿ

ನಾಲ್ಕನೆಯ ತರಂಗ ಮುಗಿಯಿತು.

---

ಇತ್ಥಂ ಶ್ರುತ್ವಾ ವತ್ಸರಾಜಸ್ಯ ವಕ್ತ್ರಾ-
ಚ್ಚಿತ್ರಾಮೇತಾಮದ್ಭುತಾರ್ಥಾಂ ಕಥಾಂತೇ ।
ಪಾರ್ಶ್ವಾಸೀನಾ ಮಂತ್ರಿಣಶ್ಚಾಸ್ಯ ಸರ್ವೇ
ದೇವ್ಯೌ ಚಾಪಿ ಪ್ರೀತಿಮಗ್ರ್ಯಾಮವಾಪುಃ ॥ ೪೦೭

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ ಲಾವಾಣಕಲಂಬಕೇ

ಚತುರ್ಥಸ್ತರಂಗಃ

## ಐದನೆಯ ತರಂಗ

೧–೨. ಅಲ್ಲಿ ಯೌಗಂಧರಾಯಣನು ವತ್ಸರಾಜನಿಗೆ "ರಾಜನ್, ನಿನಗೆ ದೈವವೂ ಅನುಕೂಲವಾಗಿದೆ, ಪೌರುಷವೂ ಇದೆ. ನೀತಿಶಾಸ್ತ್ರದಲ್ಲಿ ನಾವೂ ಸಾಕಷ್ಟು ಪರಿಶ್ರಮವನ್ನು ಮಾಡಿದ್ದೇವೆ. ಆದ್ದರಿಂದ ಹಿಂದೆ ಆಲೋಚಿಸಿದ್ದಂತೆ ಬೇಗನೆ ದಿಗ್ವಿಜಯವನ್ನು ಆರಂಭಿಸು' ಎಂದು ಹೇಳಿದನು.

೩–೪. ಹೀಗೆ ಮುಖ್ಯಮಂತ್ರಿಯು ಹೇಳಲು ವತ್ಸೇಶ್ವರನು "ಇದೆಲ್ಲ ಹಾಗಿರಲಿ. ಮಂಗಳದ ಸಿದ್ಧಿಗಳಿಗೆ ಅಡ್ಡಿಗಳು ಅನೇಕವಿರುತ್ತವೆ. ಅದಕ್ಕೋಸ್ಕರ ನಾನು ಮೊದಲು ಶಿವನನ್ನಾರಾಧಿಸುತ್ತೇನೆ. ಶಿವನ ಅನುಗ್ರಹವಿಲ್ಲದೆ ಇಷ್ಟಾರ್ಥಗಳ ಸಾಫಲ್ಯ ಹೇಗೆ ಸಾಧ್ಯ ?' ಎಂದನು.

೫ ಸಮುದ್ರದ ಮೇಲೆ ಸೇತುವೆಯನ್ನು ಕಟ್ಟಲು ಹೊರಟ ರಾಮನ ಪ್ರಯತ್ನವನ್ನು ಕಪೀಶ್ವರರು ಅನುಮೋದಿಸಿದಂತೆ ವತ್ಸರಾಜನ ತಪಸ್ಸನ್ನು ಮಂತ್ರಿಗಳೂ ಅನುಮೋದಿಸಿದರು.

---

## ಪಂಚಮಸ್ತರಂಗಃ

ತತೋ ವತ್ಸೇಶ್ವರಂ ಪ್ರಾಹ ತತ್ರ ಯೌಗಂಧರಾಯಣಃ ।
ರಾಜನ್ ದೈವಾನುಕೂಲ್ಯಂ ಚ ವಿದ್ಯತೇ ಪೌರುಷಂ ಚ ತೇ ॥ ೧
ನೀತಿಮಾರ್ಗೇ ಚ ವಯಮಪ್ಯತ್ರ ಕಿಂಚಿತ್ಕೃತಶ್ರಮಾಃ ।
ತದ್ ಯಥಾಚಿಂತಿತಂ ಶೀಘ್ರಂ ಕುರುಷ್ವ ವಿಜಯಂ ದಿಶಾಮ್ ॥ ೨
ಇತ್ಯುಕ್ತೇ ಮಂತ್ರಿಮುಖ್ಯೇನ ರಾಜಾ ವತ್ಸೇಶ್ವರೋಽಬ್ರವೀತ್ ।
ಅಸ್ತ್ವೇತದ್ ಬಹುವಿಘ್ನಾಸ್ತು ಸದಾ ಕಲ್ಯಾಣಸಿದ್ಧಯಃ ॥ ೩
ಅತಸ್ತದರ್ಥಂ ತಪಸಾ ಶಂಭುಮಾರಾಧಯಾಮ್ಯಹಮ್ ।
ವಿನಾ ಹಿ ತತ್ಪ್ರಸಾದೇನ ಕುತೋ ವಾಂಛಿತಸಿದ್ಧಯಃ ॥ ೪
ತಚ್ಛ್ರುತ್ವಾ ಚ ತಪಸ್ತಸ್ಯ ಮಂತ್ರಿಣೋಽಪ್ಯನುಮೇನಿರೇ ।
ಸೇತುಬಂಧೋದ್ಯತಸ್ಯಾಬ್ಧೌ ರಾಮಸ್ಯೇವ ಕಪೀಶ್ವರಾಃ ॥ ೫

೬ ಅನಂತರ ವತ್ಸರಾಜನು ರಾಣಿಯರಿಬ್ಬರೊಡನೆ ಮತ್ತು ಮಂತ್ರಿಗಳೊಡನೆ ತಪಸ್ಸಿಗೆ ಕುಳಿತನು. ಮೂರು ದಿನ ಉಪವಾಸವಿದ್ದ ರಾಜನಿಗೆ ಶಿವನು ಕನಸಿನಲ್ಲಿ ಕಾಣಿಸಿಕೊಂಡು ಹೀಗೆ ಹೇಳಿದನು.

೭ "ನಿನ್ನ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ಆದ್ದರಿಂದ ಎದ್ದೇಳು. ಯಾವ ಅಡೆತಡೆಯೂ ಇಲ್ಲದೆ ಗೆಲುವನ್ನು ಪಡೆಯುವೆ. ಬಹುಬೇಗ ಎಲ್ಲ ವಿದ್ಯಾಧರರಿಗೂ ಪ್ರಭುವಾದ ಪುತ್ರನನ್ನು ಪಡೆಯುವೆ."

೮ ಅನಂತರ ಸೂರ್ಯನ ಕಿರಣಗಳಿಂದ ಪುಷ್ಟಿಯನ್ನು ಪಡೆಯುವ ಪಾಡ್ಯಮಿಯ ಚಂದ್ರನಂತೆ ಶಿವನ ಪ್ರಸಾದದಿಂದ ಬಳಲಿಕೆಯನ್ನು ನೀಗಿಕೊಂಡ ವತ್ಸರಾಜನು ಎಚ್ಚರಗೊಂಡನು.

೯. ವ್ರತದ ಉಪವಾಸದಿಂದ ಬಳಲಿದ್ದ, ಕುಸುಮಕೋಮಲೆಯರಾದ ಇಬ್ಬರು ರಾಣಿಯರಿಗೂ, ಮಂತಿಗಳಿಗೂ ಆ ಸ್ವಪ್ನದ ಬಗೆಗೆ ಹೇಳಿ ವತ್ಸರಾಜನು ಅವರನ್ನು ಸಂತೋಷಗೊಳಿಸಿದನು.

೧೦. ಕಿವಿಯಿಂದ ಪಾನಮಾಡಿದ ಆ ಸ್ವಪ್ನವರ್ಣನೆಯಿಂದಲೇ ತೃಪ್ತಿ ಹೊಂದಿದ ಆ ರಾಣಿಯರಿಬ್ಬರಿಗೂ ಸಿಹಿಯಾದ ಔಷಧದ ಪಾನವು ಕೇವಲ ವೈಭವವನ್ನು ಸೂಚಿಸುವುದಕ್ಕಾಯಿತು.

೧೧. ವತ್ಸರಾಜನು ತಪಸ್ಸಿನಿಂದ ತನ್ನ ಪೂರ್ವಜರಿಗೆ ಸಮವಾದ ಮಹಿಮೆಯನ್ನು ಪಡೆದುಕೊಂಡನು. ಅವನ ಪತ್ನಿಯರು ಪತಿವ್ರತೆಯರ ಪುಣ್ಯಮಯವಾದ ಕೀರ್ತಿಯನ್ನು ತಮ್ಮದಾಗಿಸಿಕೊಂಡರು.

---

ತತಸ್ತಂ ಸಹ ದೇವೀಭ್ಯಾಂ ಸಚಿವೈಶ್ಚ ತಪಃಸ್ಥಿತಮ್ ।
ತ್ರಿರಾತ್ರೋಪೋಷಿತಂ ಭೂಪಂ ಶಿವಃ ಸ್ವಪ್ನೇ ಸಮಾದಿಶತ್ ॥ ೬
ತುಷ್ಟೋಽಸ್ಮಿ ತೇ ತದುತ್ತಿಷ್ಠ ನಿರ್ವಿಘ್ನಂ ಜಯಮಾಪ್ಸ್ಯಸಿ ।
ಸರ್ವವಿದ್ಯಾಧರಾಧೀಶಂ ಪುತ್ರಂ ಚೈವಾಚಿರಾದಿತಿ ॥ ೭
ತತಃ ಸ ಬುಬುಧೇ ರಾಜಾ ತತ್ಪ್ರಸಾದಹೃತಕ್ಲಮಃ ।
ಅರ್ಕಾಂಶುರುಚಿತಾಪ್ಯಾಯಃ ಪ್ರತಿಪಚ್ಚಂದ್ರಮಾ ಇವ ॥ ೮
ಆನಂದಯಚ್ಚ ಸಚಿವಾನ್ ಪ್ರಾತಃ ಸ್ವಪ್ನೇನ ತೇನ ಸಃ ।
ವ್ರತೋಪವಾಸಕ್ಲಾಂತೇ ಚ ದೇವ್ಯೌ ದ್ವೇ ಪುಷ್ಪಕೋಮಲೇ ॥ ೯
ತತ್ಸ್ವಪ್ನವರ್ಣನೇನೈವ ಶ್ರೋತ್ರಪೇಯೇನ ತೃಪ್ತಯೋಃ ।
ತಯೋಶ್ಚ ವಿಭವಾಯೈವ ಜಾತಃ ಸ್ವಾದ್ವೌಷಧಕ್ರಮಃ ॥ ೧೦
ಲೇಭೇ ಸ ರಾಜಾ ತಪಸಾ ಪ್ರಭಾವಂ ಪೂರ್ವಜೈಃ ಸಮಮ್ ।
ಪುಣ್ಯಾಂ ಪತಿವ್ರತಾನಾಂ ಚ ತತ್ಪತ್ನ್ಯೌ ಕೀರ್ತಿಮಾಪತುಃ ॥ ೧೧

೧೨. ಪೌರಜನರೆಲ್ಲ ಉತ್ಸವಾಚರಣೆಯಲ್ಲಿ ತೊಡಗಿದರು. ವ್ರತದ ಪಾರಣೆಯು ನೆರವೇರಿತು. ಅನಂತರ ಒಂದು ದಿನ ಯೌಗಂಧರಾಯಣನು ರಾಜನಿಗೆ ಹೀಗೆ ಹೇಳಿದನು.

೧೩. ""ಭಗವಾನ್ ಶಿವನು ನಿನ್ನಲ್ಲಿ ಪ್ರಸನ್ನನಾಗಿರುವುದರಿಂದ ನೀನು ಧನ್ಯ. ಆದ್ದರಿಂದ ಈಗ ಶತ್ರುಗಳನ್ನು ಗೆದ್ದು ಭುಜಬಲದಿಂದ ಗಳಿಸಿದ ಲಕ್ಷ್ಮಿಯನ್ನು ಪಡೆಯುವವನಾಗು.

೧೪. ರಾಜರು ಸ್ವಧರ್ಮದಿಂದ ಗಳಿಸಿದ ಲಕ್ಷ್ಮಿಯು ಅವರ ವಂಶದಲ್ಲಿ ಸ್ಥಿರವಾಗಿ ನಿಲ್ಲುತ್ತಾಳೆ. ತನ್ನ ಧರ್ಮದಿಂದ ಸಂಪಾದಿಸಿದ ಸಂಪತ್ತುಗಳಿಗೆ ವಿನಾಶವಿಲ್ಲ.

೧೫. ಆದ್ದರಿಂದಲೇ ನಿನ್ನ ಪೂರ್ವಜರಿಂದ ಗಳಿಸಲ್ಪಟ್ಟು ಬಹುಕಾಲ ಭೂಮಿಯೊಳಗೆ ಹುದುಗಿದ್ದ ನಿಧಿಯು ಕಳೆದು ಹೋಗಿದ್ದುದು ನಿನಗೆ ಸಿಕ್ಕಿತು. ಈ ಬಗೆಗೆ ಒಂದು ಕಥೆಯನ್ನು ಕೇಳು.

## ದೇವದಾಸನ ಕಥೆ

೧೬. ಹಿಂದೆ ಪಾಟಲಿಪುತ್ರನಗರದಲ್ಲಿ ಶ್ರೀಮಂತರ ವಂಶದಲ್ಲಿ ಹುಟ್ಟಿದ ದೇವದಾಸನೆಂಬ ವಣಿಕ್ಪುತ್ರನಿದ್ದನು.

೧೭. ಪೌಂಡ್ರವರ್ಧನ ನಗರದ ಒಬ್ಬ ಶ್ರೀಮಂತ ವ್ಯಾಪಾರಿಯ ಮಗಳು ಅವನ ಹೆಂಡತಿಯಾಗಿದ್ದಳು.

---

ಉತ್ಸವವ್ಯಗ್ರಪೌರೇ ಚ ವಿಹಿತೇ ವ್ರತಪಾರಣೇ ।
ಯೌಗಂಧರಾಯಣೋಽನ್ಯೇದ್ಯುರಿತಿ ರಾಜಾನಮಬ್ರವೀತ್ ॥ ೧೨
ಧನ್ಯಸ್ತ್ವಂ ಯಸ್ಯ ಚೈವೇತ್ಥಂ ಪ್ರಸನ್ನೋ ಭಗವಾನ್ ಹರಃ
ತದಿದಾನೀಂ ರಿಪೂನ್ ಜಿತ್ವಾ ಭಜ ಲಕ್ಷ್ಮೀಂ ಭುಜಾರ್ಜಿತಾಮ್ ॥ ೧೩
ಸಾ ಹಿ ಸ್ವಧರ್ಮಸಂಭೂತಾ ಭೂಭೃತಾಮನ್ವಯೇ ಸ್ಥಿತಾ ।
ನಿಜಧರ್ಮಾರ್ಜಿತಾನಾಂ ಹಿ ವಿನಾಶೋ ನಾಸ್ತಿ ಸಂಪದಾಮ್ । ೧೪
ತಥಾ ಚ ಚಿರಭೂಮಿಷ್ಠೋ ನಿಧಿಃ ಪೂರ್ವಜಸಂಭೃತಃ ।
ಪ್ರನಷ್ಟೋ ಭವತಾ ಪ್ರಾಪ್ತಃ ಕಿಂ ಚಾತ್ರೈತಾಂ ಕಥಾಂ ಶೃಣು ॥ ೧೫
ಬಭೂವ ದೇವದಾಸಾಖ್ಯಃ ಪುರೇ ಪಾಟಲಿಪುತ್ರಕೇ ।
ಪುರಾ ಕೋಽಪಿ ವಣಿಕ್ಪುತ್ರೋ ಮಹಾಧನಕುಲೋದ್ಗತಃ ॥ ೧೬
ಅಭವತ್ತಸ್ಯ ಭಾರ್ಯಾ ಚ ನಗರಾತ್ ಪೌಂಡ್ರವರ್ಧನಾತ್ ।
ಪರಿಣೀತಾ ಸಮೃದ್ಧಸ್ಯ ಕಸ್ಯಾಪಿ ವಣಿಜಃ ಸುತಾ ॥ ೧೭

೧೮. ತಂದೆ ತೀರಿಹೋದ ಮೇಲೆ ಕ್ರಮೇಣ ಅನೇಕ ಚಟುಗಳಿಗೆ ವಶನಾದ ದೇವದಾಸನು ಜೂಜಿನಲ್ಲಿ ತನ್ನ ಎಲ್ಲ ಹಣವನ್ನೂ ಕಳೆದುಕೊಂಡನು.

೧೯. ಆಮೇಲೆ ಅವನ ಹೆಂಡತಿಯೂ ದಾರಿದ್ರ್ಯದ ದುಃಖದಲ್ಲಿ ಕೆಟ್ಟಸ್ಥಿತಿಯಲ್ಲಿ ಇರಬೇಕಾಯಿತು. ಅವಳ ತಂದೆಯು ಬಂದು ಅವಳನ್ನು ಪೌಂಡ್ರವರ್ಧನ ನಗರದ ತನ್ನ ಮನೆಗೆ ಕರೆದುಕೊಂಡು ಹೋದನು.

೨೦. ಕಾಲಕ್ರಮೇಣ ತನ್ನ ಆಪತ್ತಿನಿಂದ ಖಿನ್ನನಾದ ದೇವದಾಸನು ತನ್ನ ವೃತ್ತಿಯಾದ ವ್ಯಾಪಾರವನ್ನು ಮಾಡಲು ಅಪೇಕ್ಷಿಸಿ ಬಂಡವಾಳ ಬೇಕೆಂದು ಮಾವನನ್ನು ಬೇಡುವುದಕ್ಕಾಗಿ ಹೋದನು.

೨೧. ಮಾವನ ಪಟ್ಟಣವಾದ ಪೌಂಡ್ರವರ್ಧನವನ್ನು ಸಂಜೆಯ ವೇಳೆಯಲ್ಲಿ ತಲುಪಿ ಧೂಳಿನಿಂದ ಮುಚ್ಚಿದ, ಸರಿಯಾದ ಬಟ್ಟೆಯೂ ಇಲ್ಲದ ತನ್ನ ಶರೀರವನ್ನು ನೋಡಿಕೊಂಡು ದೇವದಾಸನು ಚಿಂತಿಸತೊಡಗಿದನು.

೨೨. ಈ ಸ್ಥಿತಿಯಲ್ಲಿ ನಾನು ಮಾವನ ಮನೆಗೆ ಪ್ರವೇಶ ಮಾಡುವುದು ಹೇಗೆ ? ಅಭಿಮಾನವುಳ್ಳವರಿಗೆ ಮರಣವೇ ಲೇಸು, ತನ್ನ ಜನರ ಮುಂದೆ ದೈನ್ಯ ತೋರಿಸುವುದು ಲೇಸಲ್ಲ.

೨೩. ಹೀಗೆ ಆಲೋಚಿಸಿ ಮಾರುಕಟ್ಟೆಗೆ ಹೋಗಿ ಯಾವುದೋ ಒಂದು ಅಂಗಡಿಯ ಮುಂದೆ ರಾತ್ರಿ ತಾವರೆ ಹೂವು ಮುದುಡಿಕೊಳ್ಳುವಂತೆ ಮುದುಡಿಕೊಂಡು ಇದ್ದುಬಿಟ್ಟನು.

---

ಗತೇ ಪಿತರಿ ಪಂಚತ್ವಂ ಕ್ರಮೇಣ ವ್ಯಸನಾನ್ವಿತಃ ।
ಸ ದೇವದಾಸೋ ದ್ಯೂತೇನ ಸರ್ವಂ ಧನಮಹಾರಯತ್ ॥ ೧೮
ತತಶ್ಚ ತಸ್ಯ ಸಾ ಭಾರ್ಯಾ ದುಃಖದಾರಿದ್ರ್ಯದುಃಸ್ಥಿತಾ ।
ಏತ್ಯ ನೀತಾ ನಿಜಂ ಗೇಹಂ ಸ್ವಪಿತ್ರಾ ಪೌಂಡ್ರವರ್ಧನಮ್ ॥ ೧೯
ಶನೈಃ ಸೋಽಪಿ ವಿಪತ್ಖಿನ್ನಃ ಸ್ಥಾತುಮಿಚ್ಛನ್ ಸ್ವಕರ್ಮಣಿ ।
ಮೂಲ್ಯಾರ್ಥೀ ದೇವದಾಸಸ್ತಂ ಶ್ವಶುರಂ ಯಾಚಿತುಂ ಯಯೌ ॥ ೨೦
ಪ್ರಾಪ್ತಶ್ಚ ಸಂಧ್ಯಾಸಮಯೇ ತತ್ಪುರಂ ಪೌಂಡ್ರವರ್ಧನಮ್ ।
ರಜೋರೂಕ್ಷೋ ವಿವಸ್ತ್ರೋ ಚ ವೀಕ್ಷ್ಯಾತ್ಮಾನಮಚಿಂತಯತ್ ॥ ೨೧
ಈದೃಶಃ ಪ್ರವಿಶಾಮೀಹ ಕಥಂ ಶ್ವಶುರವೇಶ್ಮನಿ ।
ವರಂ ಹಿ ಮಾನಿನೋ ಮೃತ್ಯುರ್ನ ದೈನ್ಯಂ ಸ್ವಜನಾಗ್ರತಃ ॥ ೨೨
ಇತ್ಯಾಲೋಚ್ಯಾಪಣೇ ಗತ್ವಾ ಸ ಕ್ವಾಪಿ ವಿಪಣೇರ್ಬಹಿಃ ।
ನಕ್ತಂ ಸಂಕುಚಿತಸ್ತಸ್ಥೌ ತತ್ಕಾಲಂ ಕಮಲೋಪಮಃ ॥ ೨೩

೨೪. ಒಂದು ಕ್ಷಣಕಾಲವಾದ ಮೇಲೆ ಯಾವನೋ ಒಬ್ಬ ತರುಣ ವ್ಯಾಪಾರಿಯು ಬಾಗಿಲನ್ನು ತೆರೆದು ಅಂಗಡಿಯೊಳಕ್ಕೆ ಹೋಗುತ್ತಿದ್ದುದನ್ನು ಅವನು ಕಂಡನು.

೨೫. ಮತ್ತೊಂದು ಕ್ಷಣ ಕಳೆದ ಮೇಲೆ ಸದ್ದುಮಾಡದೆ ಹೆಜ್ಜೆಗಳನ್ನು ಇಡುತ್ತಾ ಬಂದ ಒಬ್ಬಳು ಹೆಂಗಸು ಬೇಗಬೇಗನೆ ಒಳಗೆ ಹೊಕ್ಕುದನ್ನೂ ಅವನು ನೋಡಿದನು.

೨೬. ಅಂಗಡಿಯ ಒಳಗೆ ದೀಪ ಉರಿಯುತ್ತಿದ್ದುದರಿಂದ ಅವನು ತನ್ನ ದೃಷ್ಟಿಯನ್ನು ಹಾಯಿಸಿದಾಗ ಆ ಹೆಂಗಸು ತನ್ನ ಹೆಂಡತಿಯೇ ಎಂದು ಗುರುತು ಹಿಡಿದನು.

೨೭. ಆಮೇಲೆ ಅವಳು ಬಾಗಿಲಿಗೆ ಅಗಳಿಯನ್ನು ಹಾಕಿ ಮುಚ್ಚಿದಾಗ ತನ್ನ ಹೆಂಡತಿ ಬೇರೊಬ್ಬನನ್ನು ಆಶ್ರಯಿಸಿದ್ದಾಳೆ ಎಂಬುದನ್ನು ತಿಳಿದು ದುಃಖದ ಸಿಡಿಲ ಹೊಡೆತಕ್ಕೆ ಬಲಿಯಾಗಿ ದೇವದಾಸನು ಹೀಗೆ ಆಲೋಚಿಸತೊಡಗಿದನು.

೨೮. ಹಣವಿಲ್ಲದವನು ತನ್ನ ದೇಹವನ್ನು ಕಳೆದುಕೊಳ್ಳುತ್ತಾನೆ. ಹೀಗಿರುವಾಗ ಮಿಂಚುಗಳಿಗಿರುವಂತೆ ಚಂಚಲತ್ವವು ನಿಸರ್ಗಸಿದ್ಧವಾಗಿರುವ ಹೆಂಗಸರ ಬಗೆಗೆ ಹೇಳುವುದೇನಿದೆ ?

೨೯. ಕಷ್ಟಚಟವೆಂಬ ಸಮುದ್ರದಲ್ಲಿ ಬಿದ್ದ ಗಂಡಸರ ಸ್ಥಿತಿ ಇದೇ. ತಂದೆಯ ಮನೆಯಲ್ಲಿದ್ದು ಸ್ವತಂತ್ರಳಾಗಿರುವ ಹೆಂಗಸಿನ ರೀತಿಯೂ ಇದೇ.

---

ಕ್ಷಣಾಚ್ಚ ತಸ್ಯಾಂ ವಿಪಣೌ ಪ್ರವಿಶಂತಂ ವ್ಯಲೋಕಯತ್ ।
ಯುವಾನಂ ವಣಿಜಂ ಕಂಚಿದುದ್ಘಾಟಿತಕವಾಟಕಮ್ ॥ ೨೪

ಕ್ಷಣಾಂತರೇ ಚ ತತ್ರೈವ ನಿಃಶಬ್ದಪದಮಾಗತಾಮ್ ।
ದ್ರುತಮಂತಃ ಪ್ರವಿಷ್ಟಾಂ ಚ ಸ್ತ್ರಿಯಮೇಕಾಂ ದದರ್ಶ ಸಃ ॥ ೨೫

ಜ್ವಲತ್ಪ್ರದೀಪೇ ಯಾವಚ್ಚ ದದೌ ದೃಷ್ಟಿಂ ತದಂತರೇ ।
ಪ್ರತ್ಯಭಿಜ್ಞಾತವಾಂಸ್ತಾವತ್ತಾಂ ನಿಜಾಮೇವ ಗೇಹಿನೀಮ್ ॥ ೨೬

ತತಃ ಸೋಽರ್ಗಲಿತದ್ವಾರಾಂ ಭಾರ್ಯಾಂ ತಾಮನ್ಯಗಾಮಿನೀಮ್ ।
ದೃಷ್ಟ್ವಾ ದುಃಖಾಶನಿಹತೋ ದೇವದಾಸೋ ವ್ಯಚಿಂತಯತ್ ॥ ೨೭

ಧನಹೀನೇನ ದೇಹೋಽಪಿ ಹಾರ್ಯತೇ ಸ್ತ್ರೀಷು ಕಾ ಕಥಾ ।
ನಿಸರ್ಗನಿಯತಂ ಯಾಸಾಂ ವಿದ್ಯುತಾಮಿವ ಚಾಪಲಮ್ ॥ ೨೮

ತದಿಯಂ ಸಾ ವಿಪತ್ಪುಂಸಾಂ ವ್ಯಸನಾರ್ಣವಪಾತಿನಾಮ್ ।
ಗತಿಃ ಸೇಯಂ ಸ್ವತಂತ್ರಾಯಾಃ ಸ್ತ್ರಿಯಾಃ ಪಿತೃಗೃಹಸ್ಥಿತೇಃ ॥ ೨೯

೩೦. ಹೀಗೆ ಹೊರಗೆ ನಿಂತು ಆಲೋಚಿಸುತ್ತಿದ್ದ ಅವನು ಒಳಗೆ ಸಂಭೋಗಾನಂತರ ಆನಂದದಲ್ಲಿದ್ದ ಅವನ ಹೆಂಡತಿಯ ಕಥಾಸಂಲಾಪದ ಮಾತುಗಳನ್ನು ಕೇಳಿಸಿಕೊಂಡನು.

೩೧. ಬಾಗಿಲಿನ ಬಳಿಗೆ ಬಂದು ಅವನು (ರಂಧ್ರದಲ್ಲಿ) ಕಿವಿಯನ್ನಿಟ್ಟು (ಕೇಳಿದಾಗ) ಆ ಪಾಪಿ ಹೆಂಗಸು ತನ್ನ ಉಪಪತಿ ವ್ಯಾಪಾರಿಗೆ ಏಕಾಂತದಲ್ಲಿ ಹೀಗೆ ಹೇಳುತ್ತಿದ್ದಳು.

೩೨. "ಇಂದು ನಿನ್ನಲ್ಲಿರುವ ಪ್ರೀತಿಯಿಂದ ಈ ರಹಸ್ಯವನ್ನು ಹೇಳುತ್ತಿದ್ದೇನೆ, ಕೇಳಿಸಿಕೋ. ನನ್ನ ಗಂಡನಿಗೆ ಹಿಂದೆ ವೀರವರ್ಮಾ ಎಂಬ ಮುತ್ತಾತನಿದ್ದನು.

೩೩. ತನ್ನ ಮನೆಯ ನಾಲ್ಕು ಮೂಲೆಗಳಲ್ಲಿ ಅವನು ಚಿನ್ನದಿಂದ ತುಂಬಿಸಿದ್ದ ನಾಲ್ಕು ಮಡಕೆಗಳನ್ನು ಗೂಢವಾಗಿ ನೆಲದಲ್ಲಿ ಹೊತಿಟ್ಟಿದ್ದನು.

೩೪–೩೫. ಆ ವಿಷಯವನ್ನವನು ತನ್ನ ಹೆಂಡತಿಯರಲ್ಲೊಬ್ಬಳಿಗೆ ತಿಳಿಸಿದ್ದನು. ಆ ಹೆಂಡತಿಯು ತನ್ನ ಕೊನೆಗಾಲದಲ್ಲಿ ಸೊಸೆಗೆ ಅದನ್ನು ಹೇಳಿದಳು. ಅವಳು ತನ್ನ ಸೊಸೆಗೆ, ಎಂದರೆ ನನ್ನ ಅತ್ತೆಗೆ ಹೇಳಿದ್ದಳು. ಅವಳು ನನಗೆ ಹೇಳಿದಳು. ಹೀಗೆ ನನ್ನ ಗಂಡನ ಮನೆಯಲ್ಲಿ ಅತ್ತೆಯಂದಿರ ಸರದಿಯ ಪ್ರಕಾರ ಬಾಯಿಂದ ಬಾಯಿಗೆ ವಿಷಯವು ತಲುಪಿದೆ.

೩೬. ಅದನ್ನು ನಾನು ನನ್ನ ದರಿದ್ರಗಂಡನಿಗೆ ಹೇಳಲಿಲ್ಲ. ಅವನು ಜೂಜುಕೋರ. ನಾನವನನ್ನು ದ್ವೇಷಿಸುತ್ತೇನೆ. ನೀನು ನನ್ನ ಪರಮ ಪ್ರೇಮಿ.

---

ಇತಿ ಸಂಚಿಂತಯಂಸ್ತಸ್ಯಾ ಭಾರ್ಯಾಯಾಃ ಸ ಬಹಿಃ ಸ್ಥಿತಃ ।
ರತಾಂತವಿಸ್ರಂಭಜುಷಃ ಕಥಾಲಾಪಮಿವಾಶೃಣೋತ್ ॥ ೩೦

ಉಪೇತ್ಯ ಚ ದದೌ ದ್ವಾರಿ ಸ ಕರ್ಣಂ ಸಾಪಿ ತತ್ಕ್ಷಣಮ್ ।
ಇತ್ಯಬ್ರವೀದುಪಪತಿಂ ಪಾಪಾ ತಂ ವಣಿಜಂ ರಹಃ ॥ ೩೧

ಶೃಣ್ವಿದಂ ಕಥಯಾಮ್ಯದ್ಯ ರಹಸ್ಯಂ ತೇಽನುರಾಗಿಣೀ ।
ಮದ್ಭರ್ತುರ್ವೀರವರ್ಮಾಖ್ಯಃ ಪುರಾಭೂತ್ ಪ್ರಪಿತಾಮಹಃ ॥ ೩೨

ಸ್ವಗೃಹಸ್ಯಾಂಗಣೇ ತೇನ ಚತ್ವಾರಃ ಸ್ವರ್ಣಪೂರಿತಾಃ ।
ಕುಂಭಾಶ್ಚತುರ್ಷು ಕೋಣೇಷು ನಿಗೂಢಾಃ ಸ್ಥಾಪಿತಾ ಭುವಿ ॥ ೩೩

ತದೇಕಸ್ಯಾಃ ಸ್ವಭಾರ್ಯಾಯಾಃ ಸ ಚಕ್ರೇ ವಿದಿತಂ ತದಾ ।
ತದ್ಭಾರ್ಯಾ ಚಾಂತಕಾಲೇ ಸಾ ಸ್ನುಷಾಯೈ ತದವೋಚತ ॥ ೩೪

ಸಾಪಿ ಸ್ನುಷಾಯೈ ಮಚ್ಛ್ವಶ್ರ್ವೈ ಮಚ್ಛ್ವಶ್ರೂರಬ್ರವೀಚ್ಚ ಮೇ ।
ಇತ್ಯಯಂ ಮತ್ಪತಿಕುಲೇ ಶ್ವಶ್ರೂಕ್ರಮಮುಖಾಗಮಃ ॥ ೩೫

ಸ್ವಭರ್ತುಸ್ತಚ್ಚ ನ ಮಯಾ ದರಿದ್ರಸ್ಯಾಪಿ ವರ್ಣಿತಮ್ ।
ಸ ಹಿ ದ್ಯೂತರತೋ ದ್ವೇಷ್ಯಸ್ತ್ವಂ ತು ಮೇ ಪರಮಃ ಪ್ರಿಯಃ ॥ ೩೬

೩೭. ಆದ್ದರಿಂದ ನೀನು ಆ ಊರಿಗೆ ಹೋಗಿ ನನ್ನ ಗಂಡನಿಂದ ಹಣಕ್ಕೆ ಆ ಮನೆಯನ್ನು ಕೊಂಡುಕೊಂಡು ಆ ಚಿನ್ನವನ್ನು ಪಡೆದುಕೊಂಡು ಇಲ್ಲಿಗೆ ಬಂದು ನನ್ನೊಡನೆ ಸುಖವನ್ನು ಅನುಭವಿಸು.

೩೮. ಕುಟಿಲಸ್ವಭಾವದ ಅವಳು ಹೀಗೆ ಹೇಳಿದಾಗ ನಿಧಿಯು ಅಪ್ರಯತ್ನವಾಗಿ ತನಗೆ ಸಿಕ್ಕೇಬಿಟ್ಟಿತೆಂದು ಭಾವಿಸಿದ ಆ ಉಪಪತಿ ವ್ಯಾಪಾರಿಯು ಅವಳ ಬಗೆಗೆ ಸಂತೋಷಪಟ್ಟನು.

೩೯. ದೇವದಾಸನು ತನ್ನ ಕೆಟ್ಟ ಹೆಂಡತಿಯ ಮಾತಿನ ಚೂರಿ ಇರಿತದಿಂದ (ಹಿಂಸಿತನಾಗಿ) ಹೊರಗೆ ನಡೆದನು. ಆದೇ ಸಮಯದಲ್ಲಿ ಅವನ ಹೃದಯದಲ್ಲಿ ಮೊಳೆಹೊಡೆದು ಗಟ್ಟಿಯಾಗಿ ಜೋಡಿಸಿದಂತೆ ಹಣದ ಆಸೆಯು ಸೇರಿಕೊಂಡಿತು.

೪೦. ಕೂಡಲೆ ಅವನು ಪಾಟಲಿಪುತ್ರನಗರಕ್ಕೆ ಅಲ್ಲಿಂದ ಹೋದನು. ಅಲ್ಲಿ ತನ್ನ ಮನೆಯಲ್ಲಿ ತಲುಪಿ ಆ ನಿಧಿಯನ್ನೆಲ್ಲ ತೆಗೆದು ತನ್ನದನ್ನಾಗಿ ಮಾಡಿಕೊಂಡನು.

೪೧. ಆ ಮೇಲೆ ಅವನ ಹೆಂಡತಿಯ ಕಳ್ಳ ಪ್ರೇಮಿಯಾದ ವ್ಯಾಪಾರಿಯು ನಿಧಿಯನ್ನು ಪಡೆಯುವ ಅತ್ಯಾಸೆಯನ್ನಿಟ್ಟುಕೊಂಡು ವ್ಯಾಪಾರದ ನೆವದಿಂದ ಅಲ್ಲಿಗೆ ಬಂದನು.

೪೨. ಅವನು ದೇವದಾಸನಿಂದ ಅವನ ಮನೆಯನ್ನು ಕೊಂಡನು. ದೇವದಾಸನು ಅವನಿಗೆ ಹೆಚ್ಚು ಬೆಲೆಯನ್ನು ಕೇಳಿ ಮಾರಿದನು.

---

ತತ್ತತ್ರ ಗತ್ವಾ ಮದ್ಭರ್ತುಃ ಸಕಾಶಾತ್ತದ್ಗೃಹಂ ಧನೈಃ ।
ಕ್ರೀತ್ವಾ ತತ್ಪ್ರಾಪ್ಯ ಚ ಸ್ವರ್ಣಮಿಹೈತ್ಯ ಭಜ ಮಾಂ ಸುಖಮ್ ॥ ೩೭
ಏವಮುಕ್ತಃ ಕುಟಿಲಯಾ ಸ ತಯೋಪಪತಿರ್ವಣಿಕ್ ।
ತುತೋಷ ತಸ್ಯೈ ಮನ್ವಾನೋ ನಿಧಿಂ ಲಬ್ಧಮಯತ್ನತಃ ॥ ೩೮
ದೇವದಾಸೋಽಪಿ ಕುವಧೂವಾಕ್ಶಲ್ಯೈಃ ಸ್ಥೈರ್ಬಹಿರ್ಗತಃ ।
ಕೀಲಿತಾಮಿವ ತತ್ಕಾಲಂ ಧನಾಶಾಂ ಹೃದಯೇ ದಧೌ ॥ ೩೯
ಜಗಾಮ ಚ ತತಃ ಸದ್ಯಃ ಪುರಂ ಪಾಟಲಿಪುತ್ರಕಮ್ ।
ಪ್ರಾಪ್ಯ ಚ ಸ್ವಗೃಹಂ ಲಬ್ಧ್ವಾ ನಿಧಾನಂ ಸ್ವೀಚಕಾರ ತತ್ ॥ ೪೦
ಅಥಾಜಗಾಮ ಸ ವಣಿಕ್ ತದ್ಭಾರ್ಯಾಛನ್ನಕಾಮುಕಃ ।
ತಮೇವ ದೇಶಂ ವಾಣಿಜ್ಯವ್ಯಾಜೇನ ನಿಧಿಲೋಲುಪಃ ॥ ೪೧
ದೇವದಾಸಸಕಾಶಾಚ್ಚ ಕ್ರೀಣಾತಿ ಸ್ಮ ಸ ತದ್ಗೃಹಮ್ ।
ದೇವದಾಸೋಽಪಿ ಮೂಲ್ಯೇನ ಭೂಯಸಾ ತಸ್ಯ ತದ್ದದೌ ॥ ೪೨

೪೩. ಆಮೇಲೆ ಮನೆಯ ವ್ಯವಸ್ಥೆಯನ್ನೂ ಮಾಡಿಕೊಂಡು ಯುಕ್ತಿಯಿಂದ ಹೆಂಡತಿಯನ್ನು ಮಾವನ ಮನೆಯಿಂದ ಕರೆಸಿಕೊಂಡನು.

೪೪. ಹೀಗೆ ಮಾಡಿದಾಗ ಅವನ ಹೆಂಡತಿಯ ಕಾಮುಕ ಮೋಸಗಾರ ವ್ಯಾಪಾರಿಯು ಯಾವ ನಿಧಿಯೂ ಸಿಕ್ಕದೆ ಹೋಗಲು ದೇವದಾಸನಿಗಿಂತೆಂದನು.

೪೫. "ಈ ನಿನ್ನ ಹಳೆಯ ಮನೆ ನನಗೆ ಇಷ್ಟವಾಗಲಿಲ್ಲ. ಆದ್ದರಿಂದ ನನ್ನ ಅಸಲು ಹಣವನ್ನು ಕೊಟ್ಟು ನಿನ್ನ ಮನೆಯನ್ನು ನೀನೇ ತೆಗೆದುಕೋ".

೪೬. ಹೀಗೆ ಹಟಗುಟ್ಟುತ್ತಿದ್ದ ಆ ವ್ಯಾಪಾರಿಯೂ, ಅದೆಲ್ಲ ಆಗುವುದಿಲ್ಲವೆಂದು ಹೇಳುತ್ತಿದ್ದ ದೇವದಾಸನೂ ವಿವಾದಕ್ಕಿಳಿದು ಇಬ್ಬರೂ ರಾಜನ ಮುಂದೆ ಹಾಜರಾದರು.

೪೭. ಎದೆಯಲ್ಲಿರುವ ವಿಷದಂತೆ ತಡೆದುಕೊಳ್ಳಲಾಗದಿದ್ದ ತನ್ನ ಹೆಂಡತಿಯ ವೃತ್ತಾಂತವನ್ನು ದೇವದಾಸನು ಪೂರ್ಣವಾಗಿ ರಾಜನ ಮುಂದೆ ಹೇಳಿಬಿಟ್ಟನು.

೪೮. ಆಮೇಲೆ ರಾಜನು ಅವನ ಹೆಂಡತಿಯನ್ನು ಕರೆಸಿ ವಸ್ತುಸ್ಥಿತಿಯನ್ನು ತಿಳಿದುಕೊಂಡು ಬೇರೆಯವರ ಹೆಂಡತಿಯಲ್ಲಿ ಆಸಕ್ತನಾಗಿದ್ದ ಆ ವ್ಯಾಪಾರಿಯ ಸರ್ವಸ್ವವನ್ನೂ ದಂಡವಾಗಿ ಕಿತ್ತುಕೊಂಡನು.

೪೯. ದೇವದಾಸನು ಆ ಕೆಟ್ಟ ಹೆಂಡತಿಯ ಮೂಗನ್ನು ಕೊಯ್ಯಿಸಿ ಬೇರೆಯವಳನ್ನು ಮದುವೆ ಮಾಡಿಕೊಂಡು ನಿಧಿಯೊಡನೆ ಸುಖವಾಗಿದ್ದನು.

---

ತತೋ ಗೃಹಸ್ಥಿತಿಂ ಕೃತ್ವಾ ಯುಕ್ತ್ಯಾ ಶ್ವಶುರವೇಶ್ಮನಃ ।
ಸ ದೇವದಾಸಃ ಶೀಘ್ರಂ ತಾಮಾನಿನಾಯ ಸ್ವಗೇಹಿನೀಮ್ ॥ ೪೩
ಏವಂ ಕೃತೇ ಚ ತದ್ಭಾರ್ಯಾಕಾಮುಕಃ ಸ ವಣಿಕ್ಶಠಃ ।
ಅಲಬ್ಧನಿಧಿರಭ್ಯೇತ್ಯ ದೇವದಾಸಮುವಾಚ ತಮ್ ॥ ೪೪
ಏತದ್ ಭವದ್ಗೃಹಂ ಜೀರ್ಣಂ ಮಹ್ಯಂ ನ ಖಲು ರೋಚತೇ ।
ತದ್ದೇಹಿ ಮೇ ನಿಜಂ ಮೂಲ್ಯಂ ಸ್ವಗೃಹಂ ಸ್ವೀಕುರುಷ್ವ ಚ ॥ ೪೫
ಇತಿ ಜಲ್ಪಂಶ್ಚ ಸ ವಣಿಕ್ ದೇವದಾಸಶ್ಚ ವಿಬ್ರುವನ್ ।
ಉಭೌ ವಿವಾದಸಕ್ತೌ ತೌ ರಾಜಾಗ್ರಮುಪಜಗ್ಮತುಃ ॥ ೪೬
ತತ್ರ ಸ್ವಭಾರ್ಯಾವೃತ್ತಾಂತಂ ವಕ್ಷಃಸ್ಥವಿಷದುಃಸಹಮ್ ।
ದೇವದಾಸೋ ನರೇಂದ್ರಾಗ್ರೇ ಕೃತ್ಸ್ನಮುದ್ಗಿರತಿ ಸ್ಮ ತಮ್ ॥ ೪೭
ತತಶ್ಚಾನಾಯ್ಯ ತದ್ಭಾರ್ಯಾಂ ತತ್ತ್ವಂ ಚಾನ್ವಿಷ್ಯ ಭೂಪತಿಃ ।
ಅದಂಡಯತ್ತಂ ಸರ್ವಸ್ವಂ ವಣಿಜಂ ಪಾರದಾರಿಕಮ್ ॥ ೪೮
ದೇವದಾಸೋಽಪಿ ಕುವಧೂಂ ಕೃತ್ವಾ ತಾಂ ಛಿನ್ನನಾಸಿಕಾಮ್ ।
ಅನ್ಯಾಂ ಚ ಪರಿಣೀಯಾತ್ರ ತಸ್ಥೌ ಲಬ್ಧನಿಧಿಃ ಸುಖಮ್ ॥ ೪೯

೫೦. ಹೀಗೆ ಧರ್ಮಮಾರ್ಗದಿಂದ ಗಳಿಸಿದ ಸಂಪತ್ತು ಅನೇಕ ಪೀಳಿಗೆಗಳವರೆಗೂ ಬಿಟ್ಟುಹೋಗದೆ ಉಳಿಯುತ್ತದೆ. ಹಾಗಲ್ಲದೆ ಇರುವುದಾದರೋ ಜಲಪಾತದ ಮೇಲೆ ಹಾರುವ ನೀರಿನ ಹನಿಯಂತೆ ತಾತ್ಕಾಲಿಕ.

೫೧. ಆದ್ದರಿಂದ ಮನುಷ್ಯನು ಧರ್ಮದಿಂದ ಹಣವನ್ನು ಗಳಿಸಲು ಪ್ರಯತ್ನಿಸಬೇಕು. ರಾಜನಂತೂ ಧರ್ಮದಿಂದಲೇ ಧನಾರ್ಜನೆ ಮಾಡಬೇಕು. ಏಕೆಂದರೆ ರಾಜ್ಯವೆಂಬ ಮರದ ಬೇರು ಹಣವೇ.

೫೨. ಆದ್ದರಿಂದ ದೇವ ! ಮಂತ್ರಿಮಂಡಲವನ್ನು ಸರಿಯಾಗಿ ಸಮ್ಮಾನಿಸಿ ಸಿದ್ಧಿಗಾಗಿ ಧರ್ಮಮಾರ್ಗದಲ್ಲಿ ಬರುವ ಲಕ್ಷ್ಮಿಯನ್ನು ಪಡೆದುಕೊಳ್ಳಲು ದಿಗ್ವಿಜಯವನ್ನು ಮಾಡು.

೫೩. ನಿನ್ನ ಇಬ್ಬರು ಮಾವಂದಿರ ಬಂಧುಗಳ ಸಂಬಂಧದ ಕಾರಣದಿಂದ ಬಹಳ ಜನ ರಾಜರು ನಿನಗೆ ವಿರುದ್ಧರಾಗುವುದಿಲ್ಲ, ಬದಲಿಗೆ ನಿನ್ನ ಜೊತೆಗೇ ಸೇರಿಕೊಳ್ಳುತ್ತಾರೆ.

೫೪. ವಾರಾಣಸಿಯಲ್ಲಿರುವ ರಾಜ ಬ್ರಹ್ಮದತ್ತನೆಂಬವನು ಯಾವಾಗಲೂ ನಿನ್ನ ಹಗೆಯಾಗಿದ್ದಾನೆ. ಆದ್ದರಿಂದ ಅವನನ್ನು ಮೊದಲು ಗೆಲ್ಲು.

೫೫. ಅವನು ಸೋತಮೇಲೆ ಪೂರ್ವದಿಂದ ಆರಂಭಿಸಿ ಎಲ್ಲ ದಿಕ್ಕುಗಳನ್ನೂ ಕ್ರಮೇಣ ಗೆದ್ದುಕೋ. ಪಾಂಡುವಿನ ಬೆಳ್ನೈದಿಲೆಯಂತೆ ಉಜ್ಜ್ವಲವಾದ ಕೀರ್ತಿಯನ್ನು ಮೇಲಕ್ಕೇರಿಸು.

---

ಇತ್ಥಂ ಧರ್ಮಾರ್ಜಿತಾ ಲಕ್ಷ್ಮೀರಾ ಸಂತತ್ಯನಪಾಯಿನೀ ।
ಇತರಾ ತು ಜಲಾಪಾತತುಷಾರಕಣನಶ್ವರೀ ॥ ೫೦

ಅತೋ ಯತೇತ ಧರ್ಮೇಣ ಧನಮರ್ಜಯಿತುಂ ಪುಮಾನ್ ।
ರಾಜಾ ತು ಸುತರಾಂ ಯೇನ ಮೂಲಂ ರಾಜ್ಯತರೋರ್ಧನಮ್ ॥ ೫೧

ತಸ್ಮಾದ್ ಯಥಾವತ್ ಸಂಮಾನ್ಯ ಸಿದ್ಧಯೇ ಮಂತ್ರಿಮಂಡಲಮ್ ।
ಕುರು ದಿಗ್ವಿಜಯಂ ದೇವ ಲಬ್ಧುಂ ಧರ್ಮೋತ್ತರಾಂ ಶ್ರಿಯಮ್ ॥ ೫೨

ಶ್ವಶುರದ್ವಯಬಂಧೂನಾಂ ಪ್ರಸಕ್ತಾನುಪ್ರಸಕ್ತಿತಃ ।
ವಿಕುರ್ವತೇ ನ ಬಹವೋ ರಾಜಾನಸ್ತೇ ಮಿಲಂತಿ ಚ ॥ ೫೩

ಯಸ್ತ್ವೇಷ ಬ್ರಹ್ಮದತ್ತಾಖ್ಯೋ ವಾರಾಣಸ್ಯಾಂ ಮಹೀಪತಿಃ ।
ನಿತ್ಯಂ ವೈರೀ ಸ ತೇ ತಸ್ಮಾದ್ ವಿಜಯಸ್ವ ತಮಗ್ರತಃ ೫೪

ತಸ್ಮಿನ್ ಜಿತೇ ಜಯ ಪ್ರಾಚೀಪ್ರಕ್ರಮೇಣಾಖಿಲಾ ದಿಶಃ
ಉಚ್ಚೈಃ ಕುರುಷ್ವ ವೈ ಪಾಂಡೋರ್ಯಶಶ್ಚ ಕುಮುದೋಜ್ಜ್ವಲಮ್ ॥ ೫೫

೫೬. ಮುಖ್ಯಮಂತ್ರಿಯು ಹೀಗೆ ಹೇಳಿದಾಗ 'ಹಾಗೆಯೇ ಆಗಲಿ' ಎಂದು ವಿಜಯಕ್ಕೆ ಪ್ರಯತ್ನಿಸಿದ ವತ್ಸರಾಜನು ಪ್ರಜೆಗಳಿಗೆ ದಂಡಯಾತ್ರೆಯ ಆರಂಭಕ್ಕೆ ಆದೇಶವನ್ನಿತ್ತನು.

೫೭. ತನ್ನನ್ನು ಹಿಂಬಾಲಿಸಿದ ಮಾವನ ಮಗ ಗೋಪಾಲಕನಿಗೆ ಸತ್ಕಾರರೂಪವಾಗಿ ವಿದೇಹದೇಶದಲ್ಲಿ ರಾಜ್ಯವನ್ನು ಕೊಟ್ಟನು.

೫೮. ಪದ್ಮಾವತಿಯ ಸೋದರ ಸಿಂಹವರ್ಮನು ಸೈನ್ಯಸಮೇತವಾಗಿ ಬಂದನು. ಅವನನ್ನು ಸಮ್ಮಾನಿಸಿ ವತ್ಸರಾಜನು ಅವನಿಗೆ ಚೇದಿರಾಜ್ಯವನ್ನು ನೀಡಿದನು.

೫೯. ಮೋಡಗಳಿಂದ ದಿಕ್ಕುಗಳನ್ನೆಲ್ಲ ವ್ಯಾಪಿಸುವ ಮಳೆಗಾಲದಂತೆ ಸೈನ್ಯಗಳಿಂದ ಎಲ್ಲ ದಿಕ್ಕುಗಳನ್ನು ತುಂಬಿಸಿದ್ದ ಭಿಲ್ಲರಾಜ ಪುಲಿಂದಕನನ್ನೂ ವತ್ಸರಾಜನು ಕರೆ ತರಿಸಿದನು.

೬೦. ಆ ಮಹಾಪ್ರಭುವಿನ ರಾಜ್ಯದಲ್ಲಿ ದಂಡಯಾತ್ರೆಯ ಸಂಭ್ರಮ ಉಂಟಾದರೆ ಶತ್ರುಗಳ ಹೃದಯದಲ್ಲಾದರೋ ತಳಮಳ ಉಂಟಾಯಿತೆಂಬುದು ಅಚ್ಚರಿಯ ವಿಷಯ.

೬೧. ವಾರಾಣಸಿಯಲ್ಲಿ ರಾಜ ಬ್ರಹ್ಮದತ್ತನ ಚೇಷ್ಟೆಗಳನ್ನು ಅರಿತುಕೊಳ್ಳುವುದಕ್ಕಾಗಿ ಯೌಗಂಧರಾಯಣನು ಮೊದಲೇ ಗೂಢಚಾರರನ್ನು ಅಲ್ಲಿಗೆ ಕಳುಹಿಸಿದ್ದನು.

೬೨. ಆಗ ಶುಭವನ್ನು ಸೂಚಿಸುವ ಶಕುನಗಳಾಗಲು ಸಂತೋಷದಿಂದ ಶುಭದಿನದಲ್ಲಿ ಮೊದಲು ಪೂರ್ವದಿಕ್ಕಿಗೆ ಹೊರಟು ಬ್ರಹ್ಮದತ್ತನ ಮೇಲೇರಿ ಹೋದನು.

---

ಇತ್ಯುಕ್ತೋ ಮಂತ್ರಿಮುಖ್ಯೇನ ತಥೇತಿ ವಿಜಯೋದ್ಯತಃ ।
ವತ್ಸರಾಜಃ ಪ್ರಕೃತಿಷು ಪ್ರಯಾಣಾರಂಭಮಾದಿಶತ್ ॥ ೫೬
ದದೌ ವೈದೇಹದೇಶೇ ಚ ರಾಜ್ಯಂ ಗೋಪಾಲಕಾಯ ಸಃ ।
ಸತ್ಕಾರಹೇತೋರ್ನೃಪತಿಃ ಶ್ವಶುರ್ಯಾಯಾನುಗಚ್ಛತೇ ॥ ೫೭
ಕಿಂ ಚ ಪದ್ಮಾವತೀಭ್ರಾತ್ರೇ ಪ್ರಾಯಚ್ಛತ್ ಸಿಂಹವರ್ಮಣೇ ।
ಸಂಮಾನ್ಯ ಚೇದಿವಿಷಯಂ ಸೈನ್ಯೈಃ ಸಮಮುಪೇಯುಷೇ ॥ ೫೮
ಆನಾಯಯಚ್ಚ ಸ ವಿಭುರ್ಭಿಲ್ಲರಾಜಂ ಪುಲಿಂದಕಮ್ ।
ನಿತ್ಯಂ ಬಲೈರ್ವ್ಯಾಪ್ತದಿಶಂ ಪ್ರಾವೃಟ್ಕಾಲಮಿವಾಂಬುದೈಃ ॥ ೫೯
ಬಭೂವ ಯಾತ್ರಾಸಂರಂಭೋ ರಾಷ್ಟ್ರೇ ತಸ್ಯ ಮಹಾಪ್ರಭೋಃ ।
ಆಕುಲತ್ವಂ ತು ಶತ್ರೂಣಾಂ ಹೃದಿ ಚಿತ್ರಮಜಾಯತ ॥ ೬೦
ಯೌಗಂಧರಾಯಣಶ್ಚಾಗ್ರೇ ಚಾರಾನ್ ವಾರಾಣಸೀಂ ಪ್ರತಿ ।
ಪ್ರಾಹಿಣೋದ್ ಬ್ರಹ್ಮದತ್ತಸ್ಯ ರಾಜ್ಞೋ ಜ್ಞಾತುಂ ವಿಚೇಷ್ಟಿತಮ್ ॥ ೬೧
ತತಃ ಶುಭೇಽಹನಿ ಪ್ರೀತೋ ನಿಮಿತ್ತೈರ್ಜಯಶಂಸಿಭಿಃ ।
ಬ್ರಹ್ಮದತ್ತಂ ಪ್ರತಿ ಪ್ರಾಚ್ಯಾಂ ಪೂರ್ವಂ ವತ್ಸೇಶ್ವರೋ ಯಯೌ ॥ ೬೨

೬೩. ಮೇಲೆ ಛತ್ರದಿಂದ ಶೋಭಿಸುವ, ಯುದ್ಧದಲ್ಲಿ ಜಯವನ್ನು ತರುವ ಎತ್ತರವಾದ ಆನೆಯನ್ನು ವತ್ಸರಾಜನು ಏರಿಕುಳಿತನು. ಆಗ ಅವನು ಹೂವು ಬಿಟ್ಟ ಒಂದೇ ಮರದಿಂದ ಶೋಭಿಸುವ ಪರ್ವತವನ್ನು ಏರುವ ಪ್ರತಾಪಶಾಲಿಯಾದ ಸಿಂಹದಂತೆ ಕಂಡನು.

೬೪. ಸಫಲತೆಯ ದೂತಿಯೋ ಎಂಬಂತೆ ಬಂದ ಶರತ್ಕಾಲವು ವತ್ಸರಾಜನಿಗೆ ಹರ್ಷವನ್ನು ತಂದಿತು. ಆಗ ನದಿಗಳಲ್ಲಿ ನೀರು ಕಡಿಮೆಯಾದುದರಿಂದ ದಾರಿ ಸುಗಮವಾಗಿತ್ತು.

೬೫. ಹೆಚ್ಚಾಗಿ ಗದ್ದಲ ಮಾಡುತ್ತಿದ್ದ ಸೈನ್ಯಗಳಿಂದ ವತ್ಸರಾಜನು ಭೂತಲವನ್ನೆಲ್ಲ ತುಂಬಿಸುತ್ತಿದ್ದು ಅಕಾಲದಲ್ಲಿ ಮೋಡಗಳೇ ಇಲ್ಲದಿದ್ದರೂ ಮಳೆಗಾಲದ ಸಂಭ್ರಮವನ್ನು ಉಂಟುಮಾಡುತ್ತಿದ್ದನು.

೬೬. ಆಗ ಸೈನ್ಯದ ಶಬ್ದದ ಪ್ರತಿಧ್ವನಿಯಿಂದ ತುಂಬಿಹೋದ ದಿಕ್ಕುಗಳು ಪರಸ್ಪರ ವತ್ಸರಾಜನ ಆಗಮನದಿಂದುಂಟಾದ ಭಯವನ್ನು ಹೇಳಿಕೊಳ್ಳುತ್ತಿರುವಂತೆ ಇತ್ತು.

೬೭. ಚಿನ್ನದ ಜೀನುಗಳಲ್ಲಿ ಸೂರ್ಯನ ಬೆಳಕನ್ನು ತುಂಬಿಕೊಂಡಿದ್ದ ಕುದುರೆಗಳು ಹಿಂದೆ ಬರುತ್ತಿದ್ದ ವತ್ಸರಾಜನು ಮಾಡಿದ ನೀರಾಜನದಿಂದ ಸಂತುಷ್ಟನಾದ ಅಗ್ನಿದೇವನು ಅನುಸರಿಸಿ ಬರುತ್ತಿದ್ದಾನೆಯೋ ಎಂಬಂತೆ ಕಾಣುತ್ತಿದ್ದವು.

೬೮. ಕಿವಿಗಳ ಬಳಿ ಬಿಳಿಯ ಚಾಮರಗಳನ್ನು ಹೊಂದಿದ್ದ ಆನೆಗಳು ಕಪೋಲಗಳಲ್ಲಿ ಮದಜಲವು ಸಿಂದೂರದ ಹುಡಿಯೊಡನೆ ಬೆರೆತಿದ್ದುದರಿಂದ ಕೆಂಪಾಗಿ ಶೋಭಿಸುತ್ತಿದ್ದವು.

---

ಆರೂಢಃ ಪ್ರೋಚ್ಛ್ರಿತಚ್ಛತ್ರಂ ಪ್ರೋತ್ತುಂಗಂ ಜಯಕುಂಜರಮ್ ।
ಗಿರಿಂ ಪ್ರಫುಲ್ಲೈಕತರುಂ ಮೃಗೇಂದ್ರ ಇವ ದುರ್ಮದಃ ॥ ೬೩

ಪ್ರಾಪ್ತಯಾ ಸಿದ್ಧಿದೂತ್ಯೇವ ಶರದಾ ದತ್ತಸಂಮದಃ ।
ದರ್ಶಯಂತ್ಯಾತಿಸುಗಮಂ ಮಾರ್ಗಂ ಸ್ವಲ್ಪಾಂಬುನಿಮ್ನಗಮ್ ॥ ೬೪

ಪೂರಯನ್ ಬಹುನಾದಾಭಿರ್ವಾಹಿನೀಭಿರ್ಭುವಸ್ತಲಮ್ ।
ಕುರ್ವನ್ನಕಾಂಡನಿರ್ಮೇಘವರ್ಷಾಸಮಯಸಂಭ್ರಮಮ್ ॥ ೬೫

ತದಾ ಚ ಸೈನ್ಯನಿರ್ಘೋಷಪ್ರತಿಶಬ್ದಾಕುಲೀಕೃತಾಃ ।
ಪರಸ್ಪರಮಿವಾಚಖ್ಯುಸ್ತದಾಗಮಭಯಂ ದಿಶಃ ॥ ೬೬

ಚೇಲುಶ್ಚ ಹೇಮಸಂನಾಹಸಂಭೃತಾರ್ಕಪ್ರಭಾ ಹಯಾಃ ।
ತಸ್ಯ ನೀರಾಜನಪ್ರೀತಪಾವಕಾನುಗತಾ ಇವ ॥ ೬೭

ವಿರೇಜುರ್ವಾರಣಾಶ್ಚಾಸ್ಯ ಸಿತಶ್ರವಣಚಾಮರಾಃ ।
ವಿಗಲದ್ಗಂಡಸಿಂದೂರಶೋಣದಾನಜಲಾಃ ಪಥಿ ॥ ೬೮

೧೯. ಶರತ್ಕಾಲದಲ್ಲಿ ಬಿಳುಪಾಗಿರುವ ಮೋಡಗಳನ್ನು ಮಡಿಲಲ್ಲಿಟ್ಟುಕೊಂಡ ಹಾಗೂ ಧಾತುರಸಗಳ ತೊರಗಳಿಂದ ಕೂಡಿದ್ದ ಬೆಟ್ಟಗಳು ವತ್ಸರಾಜನಿಗೆ ಹೆದರಿಕೊಂಡು ಅವನ ಹಿಂದೆ ಕಳುಹಿಸಿಕೊಟ್ಟ ತಮ್ಮ ಮಕ್ಕಳಂತೆ ಆ ಆನೆಗಳು ಕಾಣುತ್ತಿದ್ದುವು.

೨೦. ಬೇರೆಯವರ ತೇಜಸ್ಸು ಹರಡುವುದನ್ನು ಈ ರಾಜನು ಸಹಿಸುವುದಿಲ್ಲ ಎಂಬುದನ್ನು ತೋರಿಸಲೆಂಬಂತೆ ವತ್ಸರಾಜನ ಸೈನ್ಯದಿಂದ ಎದ್ದ ಧೂಳು ಸೂರ್ಯನ ತೇಜಸ್ಸನ್ನು ಮುಚ್ಚಿಬಿಟ್ಟಿತು.

೨೧. ನೀತಿ ಮತ್ತು ಗುಣಗಳಿಂದ ಆಕರ್ಷಿಸಲ್ಪಟ್ಟ ಕೀರ್ತಿ ಮತ್ತು ಜಯಲಕ್ಷ್ಮಿಯರಂತೆ ಇಬ್ಬರು ರಾಣಿಯರೂ ವತ್ಸರಾಜನನ್ನು ಹೆಜ್ಜೆಹೆಜ್ಜೆಗೂ ಅನುಸರಿಸಿಬರುತ್ತಿದ್ದರು.

೨೨. ಗಾಳಿಯಿಂದ ಕೆಳಕ್ಕೂ ಮೇಲಕ್ಕೂ ಹಾರುತ್ತಿದ್ದ ಬಾವುಟಗಳ ಬಟ್ಟೆಗಳು ಶತ್ರುಗಳಿಗೆ "ಬಗ್ಗಿರಿ ಅಥವಾ ಓಡಿಹೋಗಿರಿ" ಎಂದು ಹೇಳುತ್ತಿದ್ದಂತಿದ್ದುವು.

೨೩. ಭೂಮಿ ತಗ್ಗಿ ಹೋಗಬಹುದು ಎಂಬ ಭಯದಿಂದ ಗಾಬರಿಗೊಂಡ ಶೇಷನು ಮೇಲಕ್ಕೆತ್ತಿದ ಹೆಡೆಗಳೋ ಎಂಬಂತಿದ್ದ ಅರಳಿದ ಬಿಳಿಯ ತಾವರೆಗಳನ್ನು ಹೊಂದಿದ್ದ ಸ್ಥಳಗಳನ್ನು ನೋಡುತ್ತಾ ವತ್ಸರಾಜನು ಪ್ರಯಾಣ ಮಾಡುತ್ತಿದ್ದನು.

೨೪. ಈ ಮಧ್ಯದಲ್ಲಿ ಯೌಗಂಧರಾಯಣನ ಅಪ್ಪಣೆಯಂತೆ ಕಾಪಾಲಿಕವ್ರತವನ್ನು ಹಿಡಿದ ಗೂಢಚಾರರು ವಾರಾಣಸೀ ನಗರವನ್ನು ತಲುಪಿದರು.

---

ಶರತ್ಪಾಂಡುಪಯೋದಾಂಕಾಃ ಸಧಾತುರಸನಿರ್ಝರಾಃ ।
ಯಾತ್ರಾನುಪ್ರೇಷಿತಾ ಭೀತ್ಯೈರಾತ್ಮಜಾ ಇವ ಭೂಧರೈಃ ॥ ೧೯
ನೈವೈಷ ರಾಜಾ ಸಹತೇ ಪರೇಷಾಂ ಪ್ರಸೃತಂ ಮಹಃ ।
ಇತೀವ ತಚ್ಚಮೂರೇಣುರರ್ಕತೇಜಸ್ತಿರೋದಧೇ ॥ ೨೦
ಪದಾತ್ಪದಂ ಚ ದ್ವೇ ದೇವ್ಯೌ ಮಾರ್ಗೇ ತಮನುಜಗ್ಮತುಃ ।
ನೃಪಂ ನಯಗುಣಾಕೃಷ್ಟೇ ಇವ ಕೀರ್ತಿಜಯಶ್ರಿಯೌ ॥ ೨೧
ನಮತಾಥ ಪಲಾಯಧ್ವಮಿತ್ಯೂಚೇ ವಿದ್ವಿಷಾಮಿವ ।
ಪವನಾಕ್ಷಿಪ್ತವಿಕ್ಷಿಪ್ತೈಸ್ತಸ್ಯ ಸೇನಾಧ್ವಜಾಂಶುಕೈಃ ॥ ೨೨
ಏವಂ ಯಯೌ ಸ ದಿಗ್ಭಾಗಾನ್ ಪಶ್ಯನ್ ಫುಲ್ಲಸಿತಾಂಬುಜಾನ್ ।
ಮಹೀಮರ್ದಭಯೋದ್ಭ್ರಾಂತಶೇಷೋತ್ಕ್ಷಿಪ್ತಫಣಾನಿವ ॥ ೨೩
ಅತ್ರಾಂತರೇ ಚ ತೇ ಚಾರಾ ಧೃತಕಾಪಾಲಿಕವ್ರತಾಃ ।
ಯೌಗಂಧರಾಯಣಾದಿಷ್ಟಾಃ ಪ್ರಾಪುರ್ವಾರಾಣಸೀಂ ಪುರೀಮ್ ॥ ೨೪

೭೫. ಅವರಲ್ಲಿ ನಟನೆಯನ್ನು ಚೆನ್ನಾಗಿ ಕಲಿತಿದ್ದ ಒಬ್ಬನು ಜ್ಞಾನಿಯಂತೆ ತೋರಿಸಿಕೊಳ್ಳುತ್ತಾ ಗುರುವಾದನು. ಉಳಿದವರು ಅವನ ಶಿಷ್ಯರಾದರು.

೭೬. ಭಿಕ್ಷೆಯಿಂದ ಹೊಟ್ಟೆಹೊರೆಯುತ್ತಿದ್ದ ಆ ಕಪಟಗುರುವನ್ನು ಶಿಷ್ಯರು "ಈ ನಮ್ಮ ಆಚಾರ್ಯನು ತ್ರಿಕಾಲಜ್ಞಾನಿ" ಎಂದು ಅಲ್ಲಲ್ಲಿ ಪ್ರಕಾಶಪಡಿಸಿದರು.

೭೭. ಭವಿಷ್ಯವನ್ನು ಕೇಳಲು ಬಂದವರಿಗೆ ಬೆಂಕಿಯಿಂದ (ಮನೆ) ಸುಟ್ಟುಹೋಗುತ್ತದೆ ಇತ್ಯಾದಿ ಏನೇನನ್ನು ಆ ಜ್ಞಾನಿಯು ಹೇಳುತ್ತಿದ್ದನೋ ಅದನ್ನು ಅವನ ಶಿಷ್ಯರು ಗುಟ್ಟಾಗಿ ಹೋಗಿ ತಾವೇ ಮಾಡಿಬಿಡುತ್ತಿದ್ದರು. ಅದರಿಂದ ಅವನು ಪ್ರಸಿದ್ಧನಾಗಿಬಿಟ್ಟನು.

೭೮. ಕ್ಷಲ್ಲಕವಾದ ಸಿದ್ಧಿಯಿಂದ ಆನಂದಪಟ್ಟ, ರಾಜನ ಪ್ರೀತಿಪಾತ್ರನಾಗಿದ್ದ ಯಾವನೋ ಒಬ್ಬ ರಾಜಕುಮಾರನನ್ನು ಅವನು ತನ್ನ ಭಕ್ತನನ್ನಾಗಿ ಮಾಡಿಕೊಂಡನು.

೭೯. ವತ್ಸರಾಜನೊಡನೆ ಯುದ್ಧ ಸಮೀಪಿಸಿದಾಗ ಆ ಭಕ್ತನ ಮೂಲಕ ರಾಜ ಬ್ರಹ್ಮದತ್ತನ ಬಗ್ಗೆ ಪ್ರಶ್ನೆಗಳನ್ನು ಕೇಳಿ ಕಪಟಗುರು ಅವನ ರಹಸ್ಯಗಳನ್ನು ತಿಳಿದುಕೊಂಡನು.

೮೦. ಬ್ರಹ್ಮದತ್ತನ ಮಂತ್ರಿ ಯೋಗಕರಂಡಕನು (ದಾಳಿ ಮಾಡಲು) ಬರುತ್ತಿದ್ದ ವತ್ಸರಾಜನ ಹಾದಿಯಲ್ಲಿ ನಾನಾ ತೊಂದರೆಗಳನ್ನೊಡ್ಡಿದನು.

---

ತೇಷಾಂ ಚ ಕುಹಕಾಭಿಜ್ಞೋ ಜ್ಞಾನಿತ್ವಮುಪದರ್ಶಯನ್ ।
ಶಿಶ್ರಿಯೇ ಗುರುತಾಮೇಕಃ ಶೇಷಾಸ್ತುಚ್ಛಿಷ್ಯತಾಂ ಯಯುಃ ॥ ೭೫
ಆಚಾರ್ಯೋಽಯಂ ತ್ರಿಕಾಲಜ್ಞ ಇತಿ ವ್ಯಾಜಗುರುಂ ಚ ತಮ್ ।
ಶಿಷ್ಯಾಸ್ತೇ ಖ್ಯಾಪಯಾಮಾಸುರ್ಭಿಕ್ಷಾಶಿನಮಿತಸ್ತತಃ ॥ ೭೬
ಯದುವಾಚಾಗ್ನಿದಾಹಾದಿ ಸ ಜ್ಞಾನೀ ಭಾವಿ ಪೃಚ್ಛತಾಮ್ ।
ತಚ್ಛಿಷ್ಯಾಸ್ತತ್ ತಥಾ ಗುಪ್ತಂ ಚಕ್ರುಸ್ತೇನ ಸ ಪಪ್ರಥೇ ॥ ೭೭
ರಂಜಿತಂ ಕ್ಷುದ್ರಸಿದ್ಧ್ಯಾ ಚ ತತ್ರತ್ಯಂ ನೃಪವಲ್ಲಭಮ್ ।
ಸ್ವೀಚಕ್ರೇ ಸ ಕಮಪ್ಯೇಕಂ ರಾಜಪುತ್ರಮುಪಾಸಕಮ್ ॥ ೭೮
ತನ್ಮುಖೇನೈವ ರಾಜ್ಞಶ್ಚ ಬ್ರಹ್ಮದತ್ತಸ್ಯ ಪೃಚ್ಛತಃ ।
ಸೋಽಭೂತ್ತತ್ರ ರಹಸ್ಯಜ್ಞಃ ಪ್ರಾಪ್ತೇ ವತ್ಸೇಶವಿಗ್ರಹೇ ॥ ೭೯
ಅಥಾಸ್ಯ ಬ್ರಹ್ಮದತ್ತಸ್ಯ ಮಂತ್ರೀ ಯೋಗಕರಂಡಕಃ ।
ಚಕಾರ ವತ್ಸರಾಜಸ್ಯ ವ್ಯಾಜಾನಾಗಚ್ಛತಃ ಪಥಿ ॥ ೮೦

೮೧. ಪ್ರತಿಯೊಂದು ದಾರಿಯಲ್ಲೂ ವಿಷಮುಂತಾದ ವಸ್ತುಗಳನ್ನು ಬೆರೆಸಿ ಮರಗಿಡಗಳನ್ನೂ, ಹೂಬಳ್ಳಿಗಳನ್ನೂ, ನೀರನ್ನೂ, ಹುಲ್ಲನ್ನೂ ಹಾಳು ಮಾಡಿದನು.

೮೨. (ಶತ್ರುಗಳ) ಸೈನ್ಯದಲ್ಲಿ (ಹಾನಿಮಾಡಲು) ವಿಷಕನ್ಯೆಯರಾದ ವೇಶ್ಯೆಯರನ್ನೂ ರಾತ್ರಿಯ ವೇಳೆ ಮೋಸದಿಂದ ಕೊಲ್ಲುವ ಘಾತಕರನ್ನೂ ಕಳುಹಿಸಿದನು.

೮೩. ಕಪಟಜ್ಞಾನಿಯಂತೆ ನಟಿಸುತ್ತಿದ್ದ ಗೂಢಚಾರನು ಅದೆಲ್ಲವನ್ನೂ ತಿಳಿದುಕೊಂಡು ತನ್ನ ಜೊತೆಗಾರರ ಮೂಲಕ ಯೌಗಂಧರಾಯಣನಿಗೆ ತಿಳಿಸಿದನು.

೮೪. ಇದನ್ನೆಲ್ಲ ತಿಳಿದುಕೊಂಡ ಯೌಗಂಧರಾಯಣನು ದಾರಿಯಲ್ಲಿ ಹೆಜ್ಜೆಹೆಜ್ಜೆಗೂ ಕೆಡಿಸಲ್ಪಟ್ಟಿದ್ದ ಹುಲ್ಲು ನೀರು ಮುಂತಾದುವನ್ನು ಪ್ರತಿಔಷಧಗಳಿಂದ ಶುದ್ಧ ಮಾಡಿಸಿದನು.

೮೫. ಸೇನೆಯ ನಿವೇಶದಲ್ಲಿ ಅಪರಿಚಿತಸ್ತ್ರೀಯರೊಡನೆ (ಸೈನಿಕರ) ಸಂಬಂಧವನ್ನೂ (ಯೌಗಂಧರಾಯಣನು) ನಿಷೇಧಿಸಿದನು. ರುಮಣ್ವಂತನು ಹಿಡಿಸಿಹಾಕಿದ ಕೊಲೆಗಾರರನ್ನೂ ವಧಿಸಿದನು.

೮೬. ತನ್ನ ಮಾಯೆಯೆಲ್ಲ ಭಗ್ನವಾದುದನ್ನು ಅರಿತುಕೊಂಡ ಬ್ರಹ್ಮದತ್ತನು ಸೈನ್ಯಗಳಿಂದ ದಿಕ್ಕುಗಳನ್ನೆಲ್ಲ ತುಂಬಿಸಿದ್ದ ವತ್ಸರಾಜನನ್ನು ಗೆಲ್ಲುವುದು ತನಗೆ ಅಸಾಧ್ಯ ಎಂದು ಭಾವಿಸಿದನು.

---

ಅದೂಷಯತ್ ಪ್ರತಿಪಥಂ ವಿಷಾದಿದ್ರವ್ಯಯುಕ್ತಿಭಿಃ ।
ವೃಕ್ಷಾನ್ ಕುಸುಮವಲ್ಲೀಶ್ಚ ತೋಯಾನಿ ಚ ತೃಣಾನಿ ಚ ॥ ೮೧
ವಿದಧೇ ವಿಷಕನ್ಯಾಶ್ಚ ಸೈನ್ಯೇ ಪಣ್ಯವಿಲಾಸಿನೀಃ ।
ಪ್ರಾಹಿಣೋತ್ ಪುರುಷಾಂಶ್ಚೈವ ನಿಶಾಸು ಛದ್ಮಘಾತಿನಃ ॥ ೮೨
ತಚ್ಚ ವಿಜ್ಞಾಯ ಸ ಜ್ಞಾನಿಲಿಂಗೀ ಚಾರೋ ನ್ಯವೇದಯತ್ ।
ಯೌಗಂಧರಾಯಣಾಯಾಶು ಸ್ವಸಹಾಯಮುಖೈಸ್ತದಾ ॥ ೮೩
ಯೌಗಂಧರಾಯಣೋಽಪ್ಯೇತದ್ ಬುದ್ಧ್ವಾ ಪ್ರತಿಪದಂ ಪಥಿ ।
ದೂಷಿತಂ ತೃಣತೋಯಾದಿ ಪ್ರತಿಯೋಗೈರಶೋಧಯತ್ ॥ ೮೪
ಅಪೂರ್ವಸ್ತ್ರೀಸಮಾಯೋಗಂ ಕಟಕೇ ನಿಷಿಷೇಧ ಚ ।
ಅವಧೀದ್ ವಧಕಾಂಸ್ತಾಂಶ್ಚ ಲಬ್ಧಾನ್ ಸಹ ರುಮಣ್ವತಾ ॥ ೮೫
ತದ್‌ಬುದ್ಧ್ವಾ ಧ್ವಸ್ತಮಾಯಃ ಸನ್ ಸೈನ್ಯಪೂರಿತದಿಙ್ಮುಖಮ್ ।
ವತ್ಸೇಶ್ವರಂ ಬ್ರಹ್ಮದತ್ತೋ ಮೇನೇ ದುರ್ಜಯಮೇವ ತಮ್ ॥ ೮೬

೮೭. ಮಂತ್ರಿಗಳೊಡನೆ ಆಲೋಚನೆ ಮಾಡಿ ದೂತನನ್ನು ಕಳುಹಿಸಿ ವತ್ಸರಾಜನು ಹತ್ತಿರ ಬಂದಾಗ ತಲೆಯಮೇಲೆ ಕೈಜೋಡಿಸಿ ನಿಂತು ಬ್ರಹ್ಮದತ್ತನು ತಾನೇ ಮುಂದೆ ಬಂದು ಎದುರುಗೊಂಡನು.

೮೮. ಹಾಗೆ ಬಂದ ಬ್ರಹ್ಮದತ್ತನಿಗೆ ವತ್ಸರಾಜನೂ ಕಾಣಿಕೆಯನ್ನು ನೀಡಿ ಪ್ರೀತಿಯಿಂದ ಗೌರವಿಸಿದನು. ಶೂರರು ನಮಸ್ಕಾರಪ್ರಿಯರಲ್ಲವೆ ?

೮೯–೯೦. ಹೀಗೆ ಬ್ರಹ್ಮದತ್ತನು ಸೋತಮೇಲೆ ಪೂರ್ವದಿಕ್ಕನ್ನೂ ವಶಪಡಿಸಿಕೊಂಡು ಮೆತ್ತಗಿದ್ದವರನ್ನು ಬಗ್ಗಿಸುತ್ತಾ , ಬೇರಿನ ಸಮೇತ ಗಾಳಿಯು ಮರಗಳನ್ನು ಕಿತ್ತೊಗೆಯುವಂತೆ ಸೆಟೆದು ನಿಂತವರನ್ನು ಮೂಲೋತ್ಪಾಟನೆ ಮಾಡುತ್ತಾ ಬಂಗಾಳದ ವಿಜಯದಿಂದ ಬೆದರಿ ನಡುಗುತ್ತಿದ್ದಂತೆ ಕಾಣುತ್ತಿದ್ದ ಚಲಿಸುವ ಅಲೆಗಳಿಂದ ತಳಮಳಗೊಂಡಿದ್ದ ಪೂರ್ವಸಮುದ್ರವನ್ನು ಬಲಿಷ್ಠನಾಗಿದ್ದ ವತ್ಸರಾಜನು ತಲುಪಿದನು.

೯೧. ಆ ಸಮುದ್ರದ ಎಲ್ಲೆಯ ದಡದಲ್ಲಿ ವತ್ಸರಾಜನು ಜಯಸ್ತಂಭವನ್ನು ನೆಡಿಸಿದನು. ಅದು ಪಾತಾಳಲೋಕಕ್ಕೆ ಅಭಯವನ್ನು ಯಾಚಿಸಲು ಬಂದು ನಿಂತ ಸರ್ಪರಾಜನಂತಿತ್ತು

೯೨. ಕಳಿಂಗದ ಜನರು ತಾವೇ ಮುಂದೆ ಬಂದು ಬಗ್ಗಿನಿಂತು ಕರ (ಕಪ್ಪ ಅಥವಾ ಕೈ) ವನ್ನು ಕೊಟ್ಟರು. ಅದರಿಂದ ಕೀರ್ತಿಶಾಲಿ ವತ್ಸರಾಜನ ಯಶಸ್ಸು ಮಹೇಂದ್ರ ಪರ್ವತವನ್ನೇರಿ ಕುಳಿತಿತು.

---

ಸಂಮಂತ್ರ್ಯ ದತ್ತ್ವಾ ದೂತಂ ಚ ಶಿರೋವಿರಚಿತಾಂಜಲಿಃ ।
ತತಃ ಸ ನಿಕಟೀಭೂತಂ ವತ್ಸೇಶಂ ಸ್ವಯಮಭ್ಯಗಾತ್ ॥ ೮೭
ವತ್ಸರಾಜೋಽಪಿ ತಂ ಪ್ರಾಪ್ತಂ ಪ್ರದತ್ತೋಪಾಯನಂ ನೃಪಮ್ ।
ಪ್ರೀತ್ಯಾ ಸಂಮಾನಯಾಮಾಸ ಶೂರಾ ಹಿ ಪ್ರಣತಿಪ್ರಿಯಾಃ ॥ ೮೮
ಇತ್ಥಂ ತಸ್ಮಿನ್ ಜಿತೇ ಪ್ರಾಚೀಂ ಶಮಯನ್ನಮಯನ್ ಮೃದೂನ್ ।
ಉನ್ಮೂಲಯಂಶ್ಚ ಕಠಿನಾನ್ನೃಪಾನ್ ವಾಯುರಿವ ದ್ರುಮಾನ್ ॥ ೮೯
ಪ್ರಾಪ ಚ ಪ್ರಬಲಃ ಪ್ರಾಚ್ಯಂ ಚಲದ್ವೀಚಿವಿಘೂರ್ಣಿತಮ್ ।
ವಂಗಾವಜಯವಿತ್ರಾಸವೇಪಮಾನಮಿವಾಂಬುಧಿಮ್ ॥ ೯೦
ತಸ್ಯ ವೇಲಾತಟಾಂತೇ ಚ ಜಯಸ್ತಂಭಂ ಚಕಾರ ಸಃ ।
ಪಾತಾಲಾಭಯಯಾಚ್ಞಾರ್ಥಂ ನಾಗರಾಜಮಿವೋದ್ಗತಮ್ ॥ ೯೧
ಅವನಮ್ಯ ಕರೇ ದತ್ತೇ ಕಲಿಂಗೈರಗ್ರಗೈಸ್ತತಃ ।
ಆರುರೋಹ ಮಹೇಂದ್ರಾದ್ರಿಂ ಯಶಸ್ತಸ್ಯ ಯಶಸ್ವಿನಃ ॥ ೯೨

೯೩. ಮಹೇಂದ್ರಪರ್ವತದ ಸೋಲಿನಿಂದ ಹೆದರಿ ಓಡಿಬಂದ ವಿಂಧ್ಯಪರ್ವತದ ಶಿಖರಗಳೋ ಎಂಬಂತಿದ್ದ ಆನೆಗಳಿಂದ ವತ್ಸರಾಜನು ರಾಜರ ಅಡವಿ ಪ್ರದೇಶವನ್ನೂ ಗೆದ್ದು ದಕ್ಷಿಣದಿಕ್ಕಿಗೆ ಹೊರಟನು.

೯೪. ಶರತ್ಕಾಲವು ಹೇಗೆ ಮೋಡಗಳನ್ನು ಸಾರವಿಲ್ಲದೆಯೂ ಗುಡುಗಿಲ್ಲದೆಯೂ ಮಾಡುವುದೋ ಹಾಗೆ ವತ್ಸರಾಜನೂ ಪರ್ವತಗಳನ್ನು ಆಶ್ರಯಿಸಿದ್ದ ಶತ್ರುಗಳನ್ನು ನಿಸ್ಸಾರರನ್ನಾಗಿಯೂ ಧ್ವನಿಯಿಲ್ಲದವರನ್ನಾಗಿಯೂ ಮಾಡಿಬಿಟ್ಟನು.

೯೫. ಎಲ್ಲವನ್ನೂ ಮರ್ದಿಸುತ್ತ ಮುನ್ನಡೆದ ಆ ವತ್ಸರಾಜನು ದಾಟಿದ ಕಾವೇರಿಯೂ ಚೋಳರಾಜನ ಕೀರ್ತಿಯೂ ಒಟ್ಟಿಗೆ ಮಲಿನವಾದುವು.

೯೬. ಮುರಲಜನರ ತಲೆಯ ಉನ್ನತಿಯನ್ನು ಮಾತ್ರ ವತ್ಸರಾಜನು ಸಹಿಸಲಿಲ್ಲವೆಂದಲ್ಲ. ಕೈಗಳಿಂದ ಮರ್ದಿತವಾದ ಕುಚಗಳಲ್ಲೂ ಅವನು ಅದನ್ನು ಸಹಿಸಲಿಲ್ಲ.

೯೭. ವತ್ಸರಾಜನ ಆನೆಗಳು ಏಳು ಭಾಗವಾಗಿ ಹರಿಯುತ್ತಿದ್ದ ಗೋದಾವರೀನದಿಯ ನೀರನ್ನು ಕುಡಿದು ಅದನ್ನೇ ಏಳು ರೀತಿಯಾಗಿ ಮದಜಲದ ನೆವದಲ್ಲಿ ಹೊರಚೆಲ್ಲಿದುವು.

೯೮. ಅನಂತರ ವತ್ಸರಾಜನು ನರ್ಮದಾನದಿಯನ್ನು ದಾಟಿ ಉಜ್ಜಯಿನಿಗೆ ಹೋದನು. ಚಂಡಮಹಾಸೇನನನ್ನು ಮುಂದಿಟ್ಟುಕೊಂಡು ಆ ಪಟ್ಟಣವನ್ನು ಪ್ರವೇಶಿಸಿದನು.

---

ಮಹೇಂದ್ರಾಭಿಭವಾದ್ ಭೀತೈರ್ವಿಂಧ್ಯಕೂಟೈರಿವಾಗತೈಃ ।
ಗಜೈರ್ಜಿತ್ವಾಟವೀಂ ರಾಜ್ಞಾಂ ಸ ಯಯೌ ದಕ್ಷಿಣಾಂ ದಿಶಮ್ ॥ ೯೩

ತತ್ರ ಚಕ್ರೇ ಸ ನಿಸ್ಸಾರಪಾಂಡುರಾನ್ ಅಪಗರ್ಜಿತಾನ್ ।
ಪರ್ವತಾಶ್ರಯಿಣಃ ಶತ್ರೂನ್ ಶರತ್ಕಾಲ ಇವಾಂಬುದಾನ್ ॥ ೯೪

ಉಲ್ಲಂಘ್ಯಮಾನಾ ಕಾವೇರೀ ತೇನ ಸಂಮರ್ದಕಾರಿಣಾ ।
ಚೋಲಕೇಶ್ವರಕೀರ್ತಿಶ್ಚ ಕಾಲುಷ್ಯಂ ಯಯತುಃ ಸಮಮ್ ॥ ೯೫

ನ ಪರಂ ಮುರಲಾನಾಂ ಸ ಸೇಹೇ ಮೂರ್ಧಸು ನೋನ್ನತಿಮ್ ।
ಕರೈರಾಹನ್ಯಮಾನೇಷು ಯಾವತ್ ಕಾಂತಾಕುಚೇಷ್ವಪಿ ॥ ೯೬

ಯತ್ತಸ್ಯ ಸಪ್ತಧಾ ಭಿನ್ನಂ ಪಪುರ್ಗೋದಾವರೀಪಯಃ ।
ಮಾತಂಗಾಸ್ತಂ ಮದವ್ಯಾಜಾತ್ ಸಪ್ತಧೈವಾಮುಚನ್ನಿವ ॥ ೯೭

ಅಥೋತ್ತೀರ್ಯ ಸ ವತ್ಸೇಶೋ ರೇವಾಮುಜ್ಜಯಿನೀಮಗಾತ್ ।
ಪ್ರವಿವೇಶ ಚ ತಾಂ ಚಂಡಮಹಾಸೇನಪುರಸ್ಕೃತಃ ॥ ೯೮

೯೯. ಮಾಲೆಗಳನ್ನು ಧರಿಸಿದುದರಿಂದ ಸಡಿಲವಾದ ಕೇಶಪಾಶದಿಂದ ಚೆಲುವು ಇಮ್ಮಡಿಯಾದ ಮಾಲವಸ್ತ್ರೀಯರ ಕುಡಿನೋಟಗಳಿಗೆ ವತ್ಸರಾಜನು ಗುರಿಯಾದನು.

೧೦೦. ಮಾವನಿಂದ ಸತ್ಕಾರವನ್ನು ಪಡೆದ ವತ್ಸರಾಜನು ಅಲ್ಲಿ ಎಷ್ಟು ನೆಮ್ಮದಿಯಿಂದ ಇದ್ದುಬಿಟ್ಟನೆಂದರೆ ತನ್ನ ದೇಶದ ಅಧಿಕವಾಗಿ ಇಷ್ಟವಾದ ಭೋಗಗಳನ್ನೂ ಅವನು ಮರೆತುಬಿಟ್ಟನು.

೧೦೧. ತಂದೆಯ ಪಕ್ಕದಲ್ಲಿ ನಿಂತ ವಾಸವದತ್ತೆಯು ತನ್ನ ಚಿಕ್ಕ ವಯಸ್ಸನ್ನು ನೆನಪಿಸಿಕೊಳ್ಳುತ್ತಾ ಸುಖದಲ್ಲೂ ಮನಸ್ಸನ್ನು ಎಲ್ಲೋ ಕಳೆದುಕೊಂಡವಳಂತೆ ಇದ್ದಳು.

೧೦೨. ಮಹಾರಾಜ ಚಂಡಮಹಾಸೇನನು ತನ್ನ ಮಗಳೊಡನೆ ಇದ್ದಂತೆಯೇ ಪದ್ಮಾವತಿಯೊಡನೆಯೂ ಪ್ರೀತಿಯಿಂದ ಇದ್ದು ಆನಂದ ಪಡುತ್ತಿದ್ದನು.

೧೦೩. ಕೆಲವು ರಾತ್ರಿಗಳ ವರೆಗೆ ಅಲ್ಲಿ ವಿಶ್ರಾಂತಿಯನ್ನು ತೆಗೆದುಕೊಂಡು ಸಂತುಷ್ಟನಾದ ವತ್ಸರಾಜನು ಮಾವನ ಸೈನ್ಯಗಳನ್ನೂ ಸೇರಿಸಿಕೊಂಡು ಪಶ್ಚಿಮದಿಕ್ಕಿಗೆ ಪ್ರಯಾಣ ಬೆಳೆಸಿದನು.

೧೦೪. ಬಳ್ಳಿಯಂತಿದ್ದ ವತ್ಸರಾಜನ ಖಡ್ಗವು ನಿಶ್ಚಿತವಾಗಿ ಪ್ರತಾಪವೆಂಬ ಬೆಂಕಿಯ ಹೊಗೆ. ಏಕೆಂದರೆ ಆ ಖಡ್ಗವು ಲಾಟದೇಶದ ಹೆಂಗಸರ ಕಣ್ಣುಗಳನ್ನು ಕಂಬನಿಗಳಿಂದ ಕಲುಷಿತವಾಗಿ ಮಾಡಿತು.

---

ಸ ಮಾಲ್ಯಶ್ಲಥಧಮ್ಮಿಲ್ಲಶೋಭಾದ್ವೈಗುಣ್ಯಶಾಲಿನಾಮ್ ।
ಮಾಲವಸ್ತ್ರೀಕಟಾಕ್ಷಾಣಾಂ ಯಯೌ ಚಾತ್ರೈವ ಲಕ್ಷ್ಯತಾಮ್ ॥ ೯೯
ತಸ್ಥೌ ಚ ನಿರ್ವೃತಸ್ತತ್ರ ತಥಾ ಶ್ವಶುರಸತ್ಕೃತಃ ।
ವಿಸಸ್ಮಾರ ಯಥಾಭೀಷ್ಟಾನಪಿ ಭೋಗಾನ್ ಸ್ವದೇಶಜಾನ್ ॥ ೧೦೦
ಆಸೀದ್ ವಾಸವದತ್ತಾ ಚ ಪಿತುಃ ಪಾರ್ಶ್ವವಿವರ್ತಿನೀ ।
ಸ್ಮರಂತೀ ಬಾಲಭಾವಸ್ಯ ಸೌಖ್ಯೇಽಪಿ ವಿಮನಾ ಇವ ॥ ೧೦೧
ರಾಜಾ ಚಂಡಮಹಾಸೇನಸ್ತಯಾ ತನಯಯಾ ಯಥಾ ।
ತಥೈವ ಪದ್ಮಾವತ್ಯಾಪಿ ನಂದತಿ ಸ್ಮ ಸಮಾಗತಃ ॥ ೧೦೨
ವಿಶ್ರಮ್ಯ ಚ ನಿಶಾಃ ಕಾಶ್ಚಿತ್ ಪ್ರೀತೋ ವತ್ಸೇಶ್ವರಸ್ತತಃ ।
ಅನ್ವಿತಃ ಶ್ವಾಶುರೈಃ ಸೈನ್ಯೈಃ ಪ್ರಯಯೌ ಪಶ್ಚಿಮಾಂ ದಿಶಮ್ ॥ ೧೦೩
ತಸ್ಯ ಖಡ್ಗಲತಾ ನೂನಂ ಪ್ರತಾಪಾನಲಧೂಮಿಕಾ ।
ಯಚ್ಚಕ್ರೇ ಲಾಟನಾರೀಣಾಮುದಶ್ರುಕಲುಷಾ ದೃಶಃ ॥ ೧೦೪

೧೦೫. ಅವನ ಆನೆಗಳು ಮಂದರಪರ್ವತದ ಕಾಡುಗಳನ್ನು ಅಲುಗಾಡಿಸಿದಾಗ ಸಮುದ್ರವನ್ನು ಕಡೆಯುವುದಕ್ಕಾಗಿ ಈ ವತ್ಸರಾಜನು ನನ್ನನ್ನು ಬುಡಸಹಿತ ಕಿತ್ತು ಹಾಕದಿರಲಿ ಎಂದು ಮಂದರ ಪರ್ವತವು ನಡುಗುತ್ತಿರುವಂತೆ ಕಾಣುತ್ತಿತ್ತು.

೧೦೬. ಈ ತೇಜಸ್ವಿಯು ಸೂರ್ಯನಿಗಿಂತ ಭಿನ್ನನಾದವನು. ಏಕೆಂದರೆ ಇವನು ಪಶ್ಚಿಮದಲ್ಲಿ ಉದಯಿಸಿ ಆ ದಿಕ್ಕನ್ನು ಗೆದ್ದವನು.

೧೦೭. ಅನಂತರ ವತ್ಸರಾಜನು ಕುಬೇರನನ್ನು ತಿಲಕವಾಗಿ ಹೊಂದಿರುವ, ಅಲಕಾಪಟ್ಟಣದ ಸಂಬಂಧವನ್ನು ಹೇಳಿಕೊಳ್ಳುವ ಮತ್ತು ಕೈಲಾಸಪರ್ವತವೆಂಬ ನಗುವಿನಿಂದ ಸುಂದರವಾಗಿ ಕಾಣುವ ದಿಕ್ಕನ್ನು ಕುರಿತು ತೆರಳಿದನು.

೧೦೮. ಸಿಂಧುರಾಜನನ್ನು (ಸಿಂಧು ಎಂಬ ದೇಶದ ದೊರೆಯನ್ನು) ವಶಪಡಿಸಿಕೊಂಡು, ಹರಿಸೈನ್ಯ (ಅಶ್ವಸೇನೆ) ಗಳಿಂದ ಅನುಸರಿಸಲ್ಪಟ್ಟ ವತ್ಸರಾಜನು ಸಿಂಧುರಾಜನನ್ನು (ಸಮುದ್ರವನ್ನು) ವಶಪಡಿಸಿಕೊಂಡು ಹರಿಸೈನ್ಯ (ಕಪಿಸೇನೆ) ಗಳಿಂದ ಅನುಸರಿಸಲ್ಪಟ್ಟ ರಾಮನು ರಾಕ್ಷಸರನ್ನು ನಾಶಪಡಿಸಿದಂತೆ ಮ್ಲೇಚ್ಛರನ್ನು ಕೊನೆಗೊಳಿಸಿದನು.

109. ತುರುಕರ ಕುದುರೆಗಳ ಗುಂಪುಗಳು ಕ್ಷುಬ್ಧವಾದ ಕಡಲಿನ ಅಲೆಗಳಂತೆ ವತ್ಸರಾಜನ ಆನೆಗಳ ಹಿಂಡುಗಳೆಂಬ ಎಲ್ಲೆಗಾಡುಗಳಲ್ಲಿ ಒಟ್ಟೊಟ್ಟಾಗಿ ನುಗ್ಗಿದುವು.

110. ಕೈಯಲ್ಲಿ ಚಕ್ರಧಾರಿಯಾದ ಪುರುಷೋತ್ತಮ ವಿಷ್ಣು ಪಾಪಿರಾಹುವಿನ ತಲೆಯನ್ನು ಕತ್ತರಿಸಿ ಹಾಕಿದಂತೆ, ಶತ್ರುಗಳಿಂದ ಕಪ್ಪವನ್ನು ತೆಗೆದುಕೊಂಡ ಶ್ರೇಷ್ಠಪುರುಷ ವತ್ಸರಾಜನು ಪಾರಸೀಕರ ರಾಜನ ತಲೆಯನ್ನು ಕತ್ತರಿಸಿ ಹಾಕಿದನು.

---

ಅಸೌ ಮಥಿತುಮಂಭೋಧಿಂ ಮಾ ಮಾಮುನ್ಮೂಲಯಿಷ್ಯತಿ ।
ಇತೀವ ತದ್ಗಜಾಧೂತವನೋಽವೇಪತ ಮಂದರಃ ॥ ೧೦೫

ಸತ್ಯಂ ಸ ಕೋಽಪಿ ತೇಜಸ್ವೀ ಭಾಸ್ವದಾದಿವಿಲಕ್ಷಣಃ ।
ಪ್ರತೀಚ್ಯಾಮುದಯಂ ಪ್ರಾಪ ಪ್ರಕೃಷ್ಟಮಪಿ ಯಜ್ಜಯೀ ॥ ೧೦೬

ತತಃ ಕುಬೇರತಿಲಕಾಮ್ ಅಲಕಾಸಂಗಶಂಸಿನೀಮ್ ।
ಕೈಲಾಸಹಾಸಸುಭಗಾಮ್ ಆಶಾಮಭಿಸಸಾರ ಸಃ ॥ ೧೦೭

ಸಿಂಧುರಾಜಂ ವಶೀಕೃತ್ಯ ಹರಿಸೈನ್ಯೈರನುದ್ರುತಃ ।
ಕ್ಷಪಯಾಮಾಸ ಚ ಮ್ಲೇಚ್ಛಾನ್ ರಾಘವೋ ರಾಕ್ಷಸಾನಿವ ॥ ೧೦೮

ತುರುಷ್ಕತುರಗವ್ರಾತಾಃ ಕ್ಷುಬ್ಧಸ್ಯಾಬ್ಧೇರಿವೋರ್ಮಯಃ ।
ತದ್ಗಜೇಂದ್ರಘಟಾ ವೇಲಾವನೇಷು ದಲಶೋ ಯಯುಃ ॥ ೧೦೯

ಗೃಹೀತಾರಿಕರಃ ಶ್ರೀಮಾನ್ ಪಾಪಸ್ಯ ಪುರುಷೋತ್ತಮಃ ।
ರಾಹೋರಿವ ಸ ಚಿಚ್ಛೇದ ಪಾರಸೀಕಪತೇಃ ಶಿರಃ ॥ ೧೧೦

111. ಹೂಣರ ನಾಶವನ್ನು ಮಾಡಿದ ವತ್ಸರಾಜನ ಕೀರ್ತಿಯು ದಿಕ್ಕುಗಳ ತಾವುಗಳಲ್ಲೆಲ್ಲ ಪ್ರತಿಧ್ವನಿಸಿ ಎರಡನೆಯ ಗಂಗೆಯಂತೆ ಹಿಮಾಚಲಪರ್ವತದಲ್ಲೆಲ್ಲ ಹರಿಯಿತು.

112. ಭಯ ಹುಟ್ಟಿಸಿ ಶತ್ರುಗಳನ್ನು ಹತೋಟಿಗೆ ತಂದ ವತ್ಸರಾಜನ ಸೈನ್ಯಗಳು ಜಯಘೋಷವನ್ನು ಮಾಡುತ್ತಿದ್ದಾಗ ಅದಕ್ಕೆ ಪ್ರತಿಯಾಗಿ ಶಬ್ದವು ಹೊಮ್ಮಿದುದು ಬೆಟ್ಟಗಳ ಗುಹೆಗಳಲ್ಲಿ ಮಾತ್ರ.

113. ತಲೆಯ ಮೇಲೆ ಕೊಡೆಯಿಲ್ಲದೆ ಅವನಿಗೆ ಆಗ ನಮಸ್ಕರಿಸಿದ ಕಾಮರೂಪದ ಒಡೆಯನೂ ಕಾಂತಿಹೀನನಾದುದು ಅಂಥ ಅಚ್ಚರಿಯ ವಿಷಯವೇನಲ್ಲ.

114. ಪರ್ವತಗಳು ಓಡಾಡುವ ಬೆಟ್ಟಗಳನ್ನೇ ಕಪ್ಪದ ರೂಪದಲ್ಲಿ ಆನೆಗಳನ್ನಾಗಿ ಮಾಡಿ ಅರ್ಪಿಸಿದುವೋ ಎಂಬಂತಿದ್ದ, ಆ ರಾಜನು ಒಪ್ಪಿಸಿದ ಆನೆಗಳೊಡನೆ ಕೂಡಿದ ಸಮ್ರಾಟ್ ವತ್ಸರಾಜನು (ತನ್ನ ನಗರಕ್ಕೆ) ಹಿಂದಿರುಗಿದನು.

115. ಹೀಗೆ ವತ್ಸರಾಜನು ಭೂಮಿಯನ್ನು ಗೆದ್ದುಕೊಂಡು ಪರಿವಾರ ಸಮೇತನಾಗಿ ಪದ್ಮಾವತಿಯ ತಂದೆಯಾದ ಮಗಧರಾಜನ ಪಟ್ಟಣವನ್ನು ತಲುಪಿದನು.

116. ನಿಶಾ (ರಾತ್ರಿ) ಮತ್ತು ಜ್ಯೋತ್ಸ್ನಾ (ಬೆಳದಿಂಗಳು) ಗಳೊಡನೆ ಚಂದ್ರನು ಬಂದಾಗ ಮನ್ಮಥನು ಹೇಗೆ ವಿಜೃಂಭಿಸುವನೋ ಹಾಗೆ ಇಬ್ಬರು ರಾಣಿಯರೊಡನೆ ವತ್ಸರಾಜನು ಬಂದಾಗ ಮಗಧರಾಜನೂ ಉತ್ಸವಗಳನ್ನಾಚರಿಸಿದನು.

---

ಹೂಣಹಾನಿಕೃತಸ್ತಸ್ಯ ಮುಖರೀಕೃತದಿಙ್ಮುಖಾ ।
ಕೀರ್ತಿರ್ದ್ವಿತೀಯಾ ಗಂಗೇವ ವಿಚಚಾರ ಹಿಮಾಚಲೇ ॥ ೧೧೧

ನದಂತೀಷ್ವಸ್ಯ ಸೇನಾಸು ಭಯಸ್ತಿಮಿತವಿದ್ವಿಷಃ ।
ಪ್ರತೀಪಃ ಶುಶ್ರುವೇ ನಾದಃ ಶೈಲರಂಧ್ರೇಷು ಕೇವಲಮ್ ॥ ೧೧೨

ಅಪಚ್ಛತ್ರೇಣ ಶಿರಸಾ ಕಾಮರೂಪೇಶ್ವರೋಽಪಿ ತಮ್ ।
ನಮನ್ ವಿಚ್ಛಾಯತಾಂ ಭೇಜೇ ಯತ್ತದಾ ನ ತದದ್ಭುತಮ್ ॥ ೧೧೩

ತದ್ದತ್ತೈರನ್ವಿತೋ ನಾಗೈಃ ಸಮ್ರಾಡ್ ವಿವವೃತೇಽಥ ಸಃ ।
ಅದ್ರಿಭಿರ್ಜಂಗಮೈಃ ಶೈಲೈಃ ಕರೀಕೃತ್ಯಾರ್ಪಿತೈರಿವ ॥ ೧೧೪

ಏವಂ ವಿಜಿತ್ಯ ವತ್ಸೇಶೋ ವಸುಧಾಂ ಸಪರಿಚ್ಛದಃ ।
ಪದ್ಮಾವತೀಪಿತುಃ ಪ್ರಾಪ ಪುರಂ ಮಗಧಭೂಭೃತಃ ॥ ೧೧೫

ಮಗಧೇಶಶ್ಚ ದೇವೀಭ್ಯಾಂ ಸಹಿತೇಽಸ್ಮಿನ್ನುಪಸ್ಥಿತೇ ।
ಸೋತ್ಸವೋಽಭೂನ್ನಿಶಾಜ್ಯೋತ್ಸ್ನಾವತಿ ಚಂದ್ರ ಇವ ಸ್ಮರಃ ॥ ೧೧೬

117. ಮೊದಲು ಯಾರಿಗೂ ಕಾಣಿಸದಂತೆ ಇದ್ದು ಆಮೇಲೆ ವ್ಯಕ್ತವಾಗಿ ಎಲ್ಲರೆದುರಿಗೆ ಬಂದ ವಾಸವದತ್ತೆಯನ್ನು ಅವನು ಹೆಚ್ಚು ವಿನಯವುಳ್ಳವಳೆಂದು ಅರಿತು ಮೆಚ್ಚಿದನು.

118. ಅನಂತರ ಮಗಧರಾಜನೂ ಅವನ ನಗರದ ಜನರೂ ವತ್ಸರಾಜನನ್ನು ಪೂಜಿಸಿದರು. ಪ್ರೀತಿಯಿಂದ ಬಂದ ಎಲ್ಲ ಜನರ ಮನಸ್ಸೂ ಅವನನ್ನು ಅನುಸರಿಸಿತು. ವಿಜಯಶಾಲಿಯಾಗಿ ಎಲ್ಲ ಭೂಮಿಯನ್ನು ತನ್ನದಾಗಿ ಮಾಡಿಕೊಂಡ ವತ್ಸರಾಜನು ದೊಡ್ಡ ಪಡೆಯೊಡನೆ ತನ್ನ ದೇಶವಾದ ಲಾವಾಣಕದ ಕಡೆಗೆ ನಡೆದನು.

ಮಹಾಕವಿ ಸೋಮದೇವಭಟ್ಟನು ರಚಿಸಿದ

ಕಥಾಸರಿತ್ಸಾಗರದ ಲಾವಾಣಕಲಂಬಕದಲ್ಲಿ

ಐದನೆಯ ತರಂಗ ಮುಗಿಯಿತು.

---

ಅವಿಜ್ಞಾತಸ್ಥಿತಾಮಾದೌ ಪುನಶ್ಚ ವ್ಯಕ್ತಮಾಗತಾಮ್ ।
ಮೇನೇ ವಾಸವದತ್ತಾಂ ಚ ಸೋಽಧಿಕಪ್ರಶ್ರಯಾಸ್ಪದಮ್ ॥ ೧೧೭
ತತೋ ಮಗಧಭೂಭೃತಾ ಸನಗರೇಣ ತೇನಾರ್ಚಿತಃ
ಸಮಸ್ತಜನಮಾನಸೈರನುಗತೋಽನುರಾಗಾಗತೈಃ ।
ನಿಗೀರ್ಣವಸುಧಾತಲೋ ಬಲಭರೇಣ ಲಾವಾಣಕಂ
ಜಗಾಮ ವಿಷಯಂ ನಿಜಂ ಸ ಕಿಲ ವತ್ಸರಾಜೋ ಜಯೀ ॥ ೧೧೮

ಇತಿ ಮಹಾಕವಿಶ್ರೀಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ ಲಾವಾಣಕಲಂಬಕೇ

ಪಂಚಮಸ್ತರಂಗಃ

## ಆರನೆಯ ತರಂಗ

1. ಅನಂತರ ಸೈನ್ಯಕ್ಕೆ ವಿಶ್ರಾಂತಿಯನ್ನು ಕೊಡಲು ಲಾವಾಣಕದಲ್ಲಿ ನಿಂತ ವತ್ಸರಾಜನು ಏಕಾಂತದಲ್ಲಿ ಯೌಗಂಧರಾಯಣನಿಗಿಂತೆಂದನು.
2. '"ಭೂಮಿಯ ಮೇಲಿರುವ ಎಲ್ಲ ದೊರೆಗಳನ್ನೂ ನಿನ್ನ ಬುದ್ಧಿಯಿಂದ ಸೋಲಿಸಿದೆ. ಉಪಾಯದಿಂದ ನಮ್ಮವರನ್ನಾಗಿ ಅವರನ್ನೂ ಮಾಡಿಕೊಂಡಿರುವುದರಿಂದ ಅವರು ನನಗೆ ದ್ರೋಹ ಬಗೆಯುವುದಿಲ್ಲ.
3. ಆದರೆ ದುಷ್ಟಹೃದಯದ ವಾರಾಣಸಿಯ ರಾಜ ಬ್ರಹ್ಮದತ್ತನೊಬ್ಬನು ನನಗೆ ದ್ರೋಹವನ್ನೆಸಗುತ್ತಾನೆ. ವಕ್ರಬುದ್ಧಿಯವರಲ್ಲಿ ನಂಬಿಕೆ ಎಂದರೇನು ?"
4. ಹೀಗೆ ವತ್ಸರಾಜನು ನುಡಿಯಲು ಯೌಗಂಧರಾಯಣನು ಹೇಳಿದನು. "ರಾಜನ್, ಬ್ರಹ್ಮದತ್ತನು ಮತ್ತೆ ನಿನಗೆ ವಿರುದ್ಧವಾಗಿ ನಡೆಯುವುದಿಲ್ಲ.

---

## ಷಷ್ಠಸ್ತರಂಗಃ

ತತಃ ಸ ಸೇನಾವಿಶ್ರಾಂತ್ಯೈ ತತ್ರ ಲಾವಾಣಕೇ ಸ್ಥಿತಃ ।
ರಹಸ್ಯುವಾಚ ವತ್ಸೇಶೋ ರಾಜಾ ಯೌಗಂಧರಾಯಣಮ್ ॥ ೧
ತ್ವದ್ಬುದ್ಧ್ಯಾ ನಿರ್ಜಿತಾಃ ಸರ್ವೇ ಪೃಥಿವ್ಯಾಂ ಭೂಭೃತೋ ಮಯಾ ।
ಉಪಾಯ ಸ್ವೀಕೃತಾಸ್ತೇ ಚ ನೈವ ವ್ಯಭಿಚರಂತಿ ಮೇ ॥ ೨
ವಾರಾಣಸೀಪತಿಸ್ತ್ವೇಷ ಬ್ರಹ್ಮದತ್ತೋ ದುರಾಶಯ ಃ ।
ಜಾನೇ ವ್ಯಭಿಚರತ್ಯೇಕೋ ವಿಶ್ವಾಸ ಃ ಕುಟಿಲೇಷು ಕಃ ॥ ೩
ಇತಿ ವತ್ಸೇಶ್ವರೇಣೋಕ್ತ ಆಹ ಯೌಗಂಧರಾಯಣಃ ।
ನ ರಾಜನ್ ಬ್ರಹ್ಮದತ್ತೋ ಭೂಯೋ ವ್ಯಭಿಚರಿಷ್ಯತಿ ॥ ೪

5. ದಾಳಿಗೆ ಒಳಗಾಗಿ ಅವನು ನಿನ್ನ ಬಳಿಗೆ ಬಂದಾಗ ನೀನು ಅವನನ್ನು ಚೆನ್ನಾಗಿ ಗೌರವಿಸಿದೆ. ಒಳ್ಳೆಯದಾಗಿ ನಡೆದುಕೊಂಡವನ ಬಗೆಗೆ ವಿವೇಕವುಳ್ಳ ಯಾವನು ತಾನೆ ಕೆಟ್ಟುದನ್ನು ಮಾಡುತ್ತಾನೆ ?

6. ಯಾವನಾದರೂ ಹಾಗೊಮ್ಮೆ ಮಾಡಿದ್ದಾದರೆ ಅದು ಅವನಿಗೇ ಅಶುಭವನ್ನು ತಂದೀತು. ಈ ವಿಷಯದಲ್ಲಿ ಒಂದು ಕಥೆಯನ್ನು ಬಣ್ಣಿಸುವೆನು, ಕೇಳು.

## ಫಲಭೂತಿಯಾದ ಸೋಮದತ್ತನ ಕಥೆ

7. ಹಿಂದೆ ಪದ್ಮದೇಶದಲ್ಲಿ ಕೀರ್ತಿಶಾಲಿಯಾಗಿದ್ದ ಅಗ್ನಿದತ್ತನೆಂಬ ಹೆಸರಿನ ಉತ್ತಮ ಬ್ರಾಹ್ಮಣನಿದ್ದನು. ರಾಜನು ನೀಡಿದ್ದ ಅಗ್ರಹಾರದಿಂದ ಅವನು ಜೀವನ ನಡೆಸುತ್ತಿದ್ದನು.

8. ಅವನಿಗೆ ಸೋಮದತ್ತನೆಂಬ ಹಿರಿಯ ಮಗನೂ, ವೈಶ್ವಾನರದತ್ತನೆಂಬ ಎರಡನೆಯ ಮಗನೂ ಹುಟ್ಟಿದರು.

9. ಅವರಲ್ಲಿ ಮೊದಲನೆಯವನು ಮೂರ್ಖನೂ ರೂಪವಂತನೂ ವಿನಯರಹಿತನೂ ಆಗಿದ್ದನು. ಇನ್ನೊಬ್ಬನು ವಿದ್ವಾಂಸನೂ, ವಿನಯಶಾಲಿಯೂ ಅಧ್ಯಯನವನ್ನು ಇಷ್ಟಪಡುವವನೂ ಆಗಿದ್ದನು.

10. ಅವರಿಬ್ಬರಿಗೂ ಮದುವೆಯಾಯಿತು. ತಂದೆಯು ಲೋಕಾಂತರಕ್ಕೆ ತೆರಳಿದ ಮೇಲೆ ಅವನ ಅಗ್ರಹಾರ ಮುಂತಾದುವನ್ನು ಇಬ್ಬರೂ ಅರ್ಧ ಅರ್ಧ ಹಂಚಿಕೊಂಡರು.

---

ಆಕ್ರಾಂತೋಪನತಸ್ತ್ವೇಷ ಭೃಶಂ ಸಂಮಾನಿತಸ್ತ್ವಯಾ ।
ಶುಭಾಚಾರಸ್ಯ ಕಃ ಕುರ್ಯಾದ್ ಅಶುಭಂ ಹಿ ಸಚೇತನಃ ॥ ೫
ಕುರ್ವೀತ ವಾ ಯಸ್ತಸ್ಯೈವ ತದಾತ್ಮನ್ಯಶುಭಂ ಭವೇತ್ ।
ತಥಾ ಚ ಶ್ರೂಯತಾಮತ್ರ ಕಥಾಂ ತೇ ವರ್ಣಯಾಮ್ಯಹಮ್ ॥ ೬
ಬಭೂವ ಪದ್ಮವಿಷಯೇ ಪುರಾ ಕೋಽಪಿ ದ್ವಿಜೋತ್ತಮಃ ।
ಖ್ಯಾತಿಮಾನಗ್ನಿದತ್ತಾಖ್ಯೋ ಭೂಭೃದ್ದತ್ತಾಗ್ರಹಾರಭುಕ್ ॥ ೭
ತಸ್ಯೈಕಸೋಮದತ್ತಾಖ್ಯಃ ಪುತ್ರೋ ಜ್ಯಾಯಾನಜಾಯತ ।
ದ್ವಿತೀಯಶ್ಚಾಭವದ್ ವೈಶ್ವಾ ನರದತ್ತಾಖ್ಯಯಾ ಸುತಃ ॥ ೮
ಆದ್ಯಸ್ತಯೋರಭೂನ್ಮೂರ್ಖಃ ಸ್ವಾಕೃತಿರ್ದುರ್ವಿನೀತಕಃ ।
ಅಪರಶ್ಚಾಭವದ್ ವಿದ್ವಾನ್ ವಿನೀತೋಽಧ್ಯಯನಪ್ರಿಯಃ ॥ ೯
ಕೃತದಾರಾವುಭೌ ತೌ ಚ ಪಿತರ್ಯಸ್ತಂ ಗತೇ ತತಃ ।
ತದೀಯಸ್ಯಾಗ್ರಹಾರಾದೇರರ್ಧಮರ್ಧಂ ವಿಭೇಜತುಃ ॥ ೧೦

11. ಅವರ ಮಧ್ಯದಲ್ಲಿ ಚಿಕ್ಕವನು ದೊರೆಯ ಸಂಮಾನವನ್ನು ಪಡೆದನು. ಹಿರಿಯ ಸೋಮದತ್ತನು ಚಂಚಲ ಮನಸ್ಸಿನವನಾಗಿ ಕ್ಷತ್ರಿಯರ ಕೆಲಸವನ್ನು ಮಾಡುತ್ತಿದ್ದನು.

12. ಒಮ್ಮೆ ಅವನು ಶೂದ್ರರೊಡನೆ ಗೋಷ್ಠಿ ನಡೆಸುತ್ತಿದ್ದುದನ್ನು ನೋಡಿ ಸೋಮದತ್ತನ ತಂದೆಯ ಮಿತ್ರನಾಗಿದ್ದ ದ್ವಿಜನೊಬ್ಬನು ಹೀಗೆಂದನು.

13. "ಮೂರ್ಖ, ಅಗ್ನಿದತ್ತನ ಮಗನಾಗಿ ಶೂದ್ರನಂತೆ ವರ್ತಿಸುತ್ತಿರುವೆ. ರಾಜರಿಂದ ಪೂಜೆಗೊಳ್ಳುತ್ತಿರುವ ನಿನ್ನ ತಮ್ಮನನ್ನು ಕಂಡೂ ನೀನು ನಾಚಿಕೊಳ್ಳುವುದಿಲ್ಲವೆ ?"

14. ಅದನ್ನು ಕೇಳಿ ಕೋಪಗೊಂಡ ಸೋಮದತ್ತನು ಗೌರವವನ್ನೂ ಬಿಟ್ಟು ಓಡಿ ಬಂದು ಆ ವಿಪ್ರನನ್ನು ಕಾಲಿನಿಂದ ಒದ್ದನು.

15. ಆಗ ಕಾಲಿನಿಂದ ಒದೆಸಿಕೊಂಡು ಸಿಟ್ಟಿಗೆದ್ದ ಆ ವಿಪ್ರನು ಬೇರೆ ಬ್ರಾಹ್ಮಣರನ್ನು ಸಾಕ್ಷಿಗಳನ್ನಾಗಿ ಮಾಡಿ ರಾಜನ ಬಳಿ ದೂರನ್ನು ಸಲ್ಲಿಸಿದನು.

16. ಸೋಮದತ್ತನನ್ನು ಬಂಧಿಸಿ ತರುವುದಕ್ಕಾಗಿ ರಾಜನು ಭಟರನ್ನು ಕಳುಹಿಸಿದನು. ಅವರು ಬಂದಾಗ ಸೋಮದತ್ತನ ಗೆಳೆಯರು ಶಸ್ತ್ರಗಳನ್ನು ಹಿಡಿದು ಅವರಿಗೇ ಹೊಡೆದರು.

17. ಅನಂತರ ಇನ್ನೂ ದೊಡ್ಡ ಸೈನ್ಯವನ್ನು ಕಳುಹಿಸಿ ರಾಜನು ಸೋಮದತ್ತನನ್ನು ಹಿಡಿಸಿ ಕೋಪದಿಂದ ಕುರುಡಾಗಿ ಅವನಿಗೆ ಶೂಲಕ್ಕೆ ಹಾಕುವ ಶಿಕ್ಷೆಯನ್ನು ವಿಧಿಸಿದನು.

---

ತನ್ಮಧ್ಯಾತ್ ಸ ಕನೀಯಾಂಶ್ಚ ರಾಜ್ಞಾ ಸಂಮಾನಿತೋಽಭವತ್ ।
ಜ್ಯೇಷ್ಠಸ್ತು ಸೋಮದತ್ತೋಽಭೂಚ್ಚಪಲಃ ಕ್ಷತ್ರಕರ್ಮಕೃತ್ ॥ ೧೧
ಏಕದಾ ಬದ್ಧಗೋಷ್ಠೀಕಂ ಶೂದ್ರೈಃ ಸಹ ವಿಲೋಕ್ಯ ತಮ್ ।
ಸೋಮದತ್ತಂ ಪಿತೃಸುಹೃದ್ ದ್ವಿಜಃ ಕೋಽಪ್ಯೇವಮಬ್ರವೀತ್ ॥ ೧೨
ಅಗ್ನಿದತ್ತಸುತೋ ಭೂತ್ವಾ ಶೂದ್ರವನ್ಮೂರ್ಖ ಚೇಷ್ಟಸೇ ।
ನಿಜಮೇವಾನುಜಂ ದೃಷ್ಟ್ವಾ ರಾಜಪೂಜ್ಯಂ ನ ಲಜ್ಜಸೇ ॥ ೧೩
ತಚ್ಛ್ರುತ್ವಾ ಕುಪಿತಃ ಸೋಽಥ ಸೋಮದತ್ತಃ ಪ್ರಧಾವ್ಯ ತಮ್ ।
ವಿಪ್ರಂ ಪಾದಪ್ರಹಾರೇಣ ಜಘಾನೋಜ್ಝಿತಗೌರವಃ ॥ ೧೪
ತತ್ರ ವಿಪ್ರಃ ಸ ಕೃತ್ವಾನ್ಯಾನ್ ಸಾಕ್ಷಿಣಸ್ತತ್ಕ್ಷಣಂ ದ್ವಿಜಾನ್ ।
ಗತ್ವಾ ಪಾದಾಹತಿಕ್ರುದ್ಧೋ ರಾಜಾನಂ ತಂ ವ್ಯಜಿಜ್ಞಪತ್ ॥ ೧೫
ರಾಜಾಪಿ ಸೋಮದತ್ತಸ್ಯ ಬಂಧಾಯ ಪ್ರಾಹಿಣೋದ್ ಭಟಾನ್ ।
ತೇ ಚ ನಿರ್ಗತ್ಯ ತನ್ಮಿತ್ರೈರ್ಜಘ್ನಿರೇ ಶಸ್ತ್ರಪಾಣಿಭಿಃ ॥ ೧೬
ತತೋ ಭೂಯೋ ಬಲಂ ಪ್ರೇಷ್ಯಾವಷ್ಟಭ್ಯಾಸ್ಯ ಭೂಪತಿಃ ।
ಕ್ರೋಧಾಂಧಃ ಸೋಮದತ್ತಸ್ಯ ಶೂಲಾರೋಪಣಮಾದಿಶತ್ ॥ ೧೭

18. ಶೂಲಕ್ಕೆ ಹಾಕುತ್ತಿದ್ದಾಗ ಆ ಬ್ರಾಹ್ಮಣನು ಅಕಸ್ಮಾತ್ ಯಾರೋ ತಳ್ಳಿದಂತಾಗಿ ಭೂಮಿಯ ಮೇಲೆ ಉರುಳಿಬಿದ್ದನು.
19. ಮುಂದೆ ಬರುವ ಒಳ್ಳೆಯದನ್ನು ಭಾಗ್ಯಗಳೇ ಕಾಪಾಡುತ್ತವೆ. ಏಕೆಂದರೆ ಅವನನ್ನು ಮತ್ತೆ ಶೂಲಕ್ಕೆ ಹಾಕಲು ಹೊರಟ ಆ ಕಟುಕರು ಕುರುಡರಾಗಿಬಿಟ್ಟರು.
20. ಸೋಮದತ್ತನ ಕಿರಿಯಸೋದರನು ವಿಜ್ಞಾಪನೆ ಮಾಡಿದಾಗ ಪ್ರಸನ್ನನಾದ ರಾಜನು ಆ ಕ್ಷಣದಲ್ಲಿ ನಡೆದ ಎಲ್ಲ ವೃತ್ತಾಂತವನ್ನೂ ಕೇಳಿ ಸೋಮದತ್ತನನ್ನು ಮರಣದಂಡನೆಯಿಂದ ಬಿಡಿಸಿದನು.
21. ಮರಣವನ್ನು ತಪ್ಪಿಸಿಕೊಂಡ ಸೋಮದತ್ತನು ರಾಜನಿಂದಾದ ಅವಮಾನದಿಂದ ನೊಂದು ಮನೆಯವರೊಡನೆ ಬೇರೆ ದೇಶಕ್ಕೆ ಹೋಗಲು ಇಷ್ಟಪಟ್ಟನು.
22. ಆದರೆ ಒಟ್ಟಿಗೆ ಸೇರಿದ ಬಂಧುಗಳು ಅವನು ಹಾಗೆ ಹೋಗುವುದನ್ನು ಇಷ್ಟಪಡಲಿಲ್ಲ. ಆಗ ರಾಜನು ಕೊಟ್ಟಿದ್ದ ಅರ್ಧ ಅಗ್ರಹಾರವನ್ನು ಕಳೆದುಕೊಂಡು ಸೋಮದತ್ತನು ದುಃಸ್ಥಿತಿಗೆ ತಲುಪಿದನು.
23. ಅನಂತರ ಬೇರೆ ವೃತ್ತಿ ಇಲ್ಲದುದರಿಂದ ಅವನು ಕೃಷಿಯನ್ನು ಮಾಡಲು ಬಯಸಿದನು. ಅದಕ್ಕೆ ಯೋಗ್ಯವಾದ ಭೂಮಿಯನ್ನು ನೋಡುವುದಕ್ಕಾಗಿ ಶುಭದಿನದಲ್ಲಿ ಅಡವಿಗೆ ಹೋದನು.

---

ಆರೋಪ್ಯಮಾಣಃ ಶೂಲಾಯಾಮಥಾಕಸ್ಮಾತ್ ಸ ಚ ದ್ವಿಜಃ ।
ಪ್ರಕ್ಷಿಪ್ತ ಇವ ಕೇನಾಪಿ ನಿಪಪಾತ ತತಃ ಕ್ಷಿತೌ ॥ ೧೮
ರಕ್ಷಂತಿ ಭಾವಿ ಕಲ್ಯಾಣಂ ಭಾಗ್ಯಾನ್ಯೇವ ಯತೋಽಸ್ಯ ತೇ ।
ಅಂಧೀಬಭೂವುರ್ವಧಕಾಃ ಪುನರಾರೋಪಣೋದ್ಯತಾಃ ॥ ೧೯
ತತ್ಕ್ಷಣಂ ಶ್ರುತವೃತ್ತಾಂತಸ್ತುಷ್ಟೋ ರಾಜಾ ಕನೀಯಸಾ ।
ಭ್ರಾತ್ರಾಸ್ಯ ಕೃತವಿಜ್ಞಪ್ತಿರ್ವಧಾದೇನಮಮೋಚಯತ್ ॥ ೨೦
ತತೋ ಮರಣಸಂತೀರ್ಣಃ ಸೋಮದತ್ತೋ ಗೃಹೈಃ ಸಹ ।
ಗಂತುಂ ರಾಜಾವಮಾನೇನ ದೇಶಾಂತರಮಿಯೇಷ ಸಃ ॥ ೨೧
ಯದಾ ಚ ನೈಚ್ಛನ್ ಗಮನಂ ಸಮೇತಾಸ್ತಸ್ಯ ಬಾಂಧವಾಃ ।
ತ್ಯಕ್ತರಾಜಾಗ್ರಹಾರಾರ್ಧಾಂ ಪ್ರತಿಪೇದೇ ತದಾ ಸ್ಥಿತಿಮ್ ॥ ೨೨
ತತೋ ವೃತ್ತ್ಯಂತರಾಭಾವಾತ್ ಕರ್ತುಂ ಸ ಚಕಮೇ ಕೃಷಿಮ್ ।
ತದ್ಯೋಗ್ಯಾಂ ಚ ಭುವಂ ದ್ರಷ್ಟುಂ ಶುಭೇಽಹನ್ಯಟವೀಂ ಯಯೌ ॥ ೨೩

24. ಮುಂದೆ ಫಲಸಮೃದ್ಧಿಯನ್ನು ಕೊಡುವುದೆಂದು ಊಹಿಸಬಹುದಾದ ಶುಭ (ಲಕ್ಷಣಗಳಿಂದ ಕೂಡಿದ್ದ) ಭೂಮಿಯು ಅವನಿಗೆ ಸಿಕ್ಕಿತು. ಆ ಭೂಮಿಯ ಮಧ್ಯದಲ್ಲಿ ಬಹಳ ವಿಶಾಲವಾಗಿದ್ದ ಅಶ್ವತ್ಥದ ಮರವೊಂದಿತ್ತು.
25. ಮಂಗಳಕರವಾದ ಒತ್ತಾದ ನೆರಳಿನಿಂದ ಸೂರ್ಯನ ಕಿರಣಗಳನ್ನು ಮುಚ್ಚಿಹಾಕಿ ಮಳೆಗಾಲದಂತೆ ತಂಪಾಗಿದ್ದ ಆ ವೃಕ್ಷವನ್ನು ನೋಡಿ ಕೃಷಿ ಮಾಡಬೇಕೆಂದಿದ್ದ ಸೋಮದತ್ತನು ಸಂತೋಷಪಟ್ಟನು.
26. ಈ ಮರದಲ್ಲಿ ಯಾವ ದೇವತೆ ವಾಸವಾಗಿದೆಯೋ ಆ ದೇವತೆಯ ಭಕ್ತನು ನಾನು ಎಂದು ಹೇಳಿ ಪ್ರದಕ್ಷಿಣೆ ಮಾಡಿ ಆ ಅಶ್ವತ್ಥವೃಕ್ಷಕ್ಕೆ ಅವನು ನಮಸ್ಕಾರ ಮಾಡಿದನು.
27. ಮಂಗಳವನ್ನು ಮಾಡಿ ಎತ್ತುಗಳ ಜೋಡಿಯನ್ನು ಹೂಡಿ ಆ ಮರಕ್ಕೆ ಬಲಿಯನ್ನಿತ್ತು ಅಲ್ಲಿ ವ್ಯವಹಾರವನ್ನು ಆರಂಭಿಸಿದನು.
28. ಹಗಲೂ ಇರುಳೂ ಅವನು ಆ ಮರದ ಕೆಳಗೇ ಇರುತ್ತಿದ್ದನು. ಯಾವಾಗಲೂ ಅವನ ಹೆಂಡತಿ ಅವನಿಗೆ ಅಲ್ಲಿಗೇ ಊಟವನ್ನು ತಂದುಕೊಡುತ್ತಿದ್ದಳು.
29. ಕಾಲ ಕಳೆದಂತೆ ಅವನು ಹಾಕಿದ್ದ ಬೆಳೆಗಳು ಮಾಗಿ (ಕೊಯ್ಲಿಗೆ ಬಂದಾಗ) ದುರ್ದೈವದಿಂದ ಬೇರೆ ರಾಜ್ಯದವರು ಬಂದು ನಿಶ್ಶಂಕವಾಗಿ ಆ ಭೂಮಿಯನ್ನು ಲೂಟಿ ಮಾಡಿದರು.

---

ತತ್ರ ಲೇಭೇ ಶುಭಾಂ ಭೂಮಿಂ ಸಂಭಾವ್ಯ ಫಲಸಂಪದಮ್ ।
ತನ್ಮಧ್ಯೇ ಚ ಮಹಾಭೋಗಮಶ್ವತ್ಥತರುಮೈಕ್ಷತ ॥ ೨೪
ತಂ ಕಲ್ಯಾಣಘನಚ್ಛಾಯಾಛನ್ನಸೂರ್ಯಾಂಶುಶೀತಲಮ್ ।
ಪ್ರಾವೃಟ್‌ಕಾಲಮಿವಾಲೋಕ್ಯ ಕೃಷ್ಯರ್ಥೀ ತೋಷಮಾಪ ಸಃ ॥ ೨೫
ಯೋಽಧಿಷ್ಠಾತಾತ್ರ ತಸ್ಯೈವ ಭಕ್ತೋಽಸ್ಮೀತ್ಯಭಿಧಾಯ ಚ ।
ಕೃತಪ್ರದಕ್ಷಿಣೋಽಶ್ವತ್ಥವೃಕ್ಷಂ ತಂ ಪ್ರಣನಾಮ ಸಃ ॥ ೨೬
ಸಂಯೋಜ್ಯಾಥ ಬಲೀವರ್ದಯುಗಂ ರಚಿತಮಂಗಳಃ ।
ಕೃತ್ವಾ ಬಲಿಂ ತಸ್ಯ ತರೋರಾರೇಭೇ ಕೃಷಿಮತ್ರ ಸಃ ॥ ೨೭
ತಸ್ಥೌ ತಸ್ಯೈವ ಚಾಧಸ್ತಾದ್ ದ್ರುಮಸ್ಯ ಸ ದಿವಾನಿಶಮ್ ।
ಭೋಜನಂ ತಸ್ಯ ಚಾನಿನ್ಯೇ ತತ್ರೈವ ಗೃಹಿಣೀ ಸದಾ ॥ ೨೮
ಕಾಲೇ ತತ್ರ ಚ ಪಕ್ವೇಷು ತಸ್ಯ ಸಸ್ಯೇಷ್ವಶಂಕಿತಮ್ ।
ಸಾ ಭೂಮಿಃ ಪರರಾಷ್ಟ್ರೇಣ ದೈವಾದೇತ್ಯ ವ್ಯಲುಂಠ್ಯತ ॥ ೨೯

30. ಶತ್ರುಗಳ ಸೈನ್ಯ ಹೊರಟು ಹೋಯಿತು. ಬೆಳೆ ನಷ್ಟವಾಗಿತ್ತು. ಆದರೂ ಸತ್ತ್ವಶಾಲಿಯಾದ ಸೋಮದತ್ತನು ಅಳುತ್ತಿದ್ದ ಹೆಂಡತಿಯನ್ನು ಸಂತೈಸಿ ಅಳಿದುಳಿದಿದ್ದ ಬೆಳೆಯನ್ನು ತಂದನು.

31. ಹಿಂದಿನಂತೆಯೇ ಪೂಜೆ ಮಾಡಿ ಅದೇ ಮರದ ಕೆಳಗೆ ಅವನು ನಿಂತುಬಿಟ್ಟನು. ಆಪತ್ಕಾಲದಲ್ಲಿ ಹೆಚ್ಚು ಗಟ್ಟಿಗರಾಗುವುದು ಧೀರರ ಸ್ವಭಾವವಲ್ಲವೆ ?

32. ಚಿಂತೆಯಿಂದ ನಿದ್ದೆಯಿಲ್ಲದೆ ಒಬ್ಬೊಂಟಿಗನಾಗಿ ಅವನು ರಾತ್ರಿಯಲ್ಲೂ ಅಲ್ಲೇ ಇದ್ದಾಗ ಆ ಅಶ್ವತ್ಥವೃಕ್ಷದಿಂದ ಒಂದು ಮಾತು ಕೇಳಿಸಿತು.

33. "ಎಲೈ ಸೋಮದತ್ತನೆ, ನಿನ್ನ ವಿಷಯದಲ್ಲಿ ಸಂತುಷ್ಟನಾಗಿದ್ದೇನೆ. ಶ್ರೀಕಂಠದೇಶದಲ್ಲಿರುವ ಆದಿತ್ಯಪ್ರಭನೆಂಬ ರಾಜನ ರಾಜ್ಯಕ್ಕೆ ಹೋಗು.

34. ಅಲ್ಲಿ ಪ್ರತಿದಿನವೂ ರಾಜನ ಬಾಗಿಲಿನಲ್ಲಿ ನಿಂತು ಸಂಧ್ಯಾಗ್ನಿ ಹೋತ್ರದ ಮಂತ್ರಗಳನ್ನು ಪಠಿಸಿ ಈ ಮಾತನ್ನು ಹೇಳು.

35. 'ನಾನು ಫಲಭೂತಿ ಎಂಬ ವಿಪ್ರನು ಹೇಳುತ್ತಿದ್ದೇನೆ. ಕೇಳಿರಿ. ಒಳ್ಳೆಯದನ್ನು ಮಾಡುವವನು ಒಳ್ಳೆಯ ಫಲವನ್ನು ಪಡೆಯುತ್ತಾನೆ. ಕೆಟ್ಟದ್ದನ್ನು ಮಾಡುವವನು ಕೆಟ್ಟದ್ದನ್ನೇ ಪಡೆಯುತ್ತಾನೆ.'

36. ಹೀಗೆ ಹೇಳುತ್ತಿದ್ದರೆ ನೀನು ಹೆಚ್ಚು ಏಳ್ಗೆಯನ್ನು ಹೊಂದುವೆ. ಸಂಧ್ಯಾಗ್ನಿಹೋತ್ರದ ಮಂತ್ರಗಳನ್ನು ಈಗಲೇ ನನ್ನಿಂದ ಕಲಿತುಕೋ.

---

ತತಃ ಪರಬಲೇ ಯಾತೇ ನಷ್ಟೇ ಸಸ್ಯೇ ಸ ಸತ್ತ್ವವಾನ್ ।
ಆಶ್ವಾಸ್ಯ ರುದತೀಂ ಭಾರ್ಯಾಂ ಕಿಂಚಿಚ್ಛೇಷಂ ತದಾದದೌ ॥ ೩೦
ಪ್ರಾಗ್ವತ್ ಕೃತಬಲಿಸ್ತಸ್ಥೌ ತತ್ರೈವಾಥ ತರೋರಧಃ ।
ನಿಸರ್ಗಃ ಸ ಹಿ ಧೀರಾಣಾಂ ಯದಾಪದ್ಯಧಿಕಂ ದೃಢಾಃ ॥ ೩೧
ಅಥ ಚಿಂತಾವಿನಿದ್ರಸ್ಯ ಸ್ಥಿತಸ್ಯೈಕಾಕಿನೋ ನಿಶಿ ।
ತಸ್ಯಾಶ್ವತ್ಥತರೋಸ್ತಸ್ಮಾದುಚ್ಚಚಾರ ಸರಸ್ವತೀ ॥ ೩೨
ಭೋಃ ಸೋಮದತ್ತ ತುಷ್ಟೋಽಸ್ಮಿ ತವ ತದ್ಗಚ್ಛ ಭೂಪತೇಃ ।
ಆದಿತ್ಯಪ್ರಭಸಂಜ್ಞಸ್ಯ ರಾಷ್ಟ್ರಂ ಶ್ರೀಕಂಠದೇಶಗಮ್ ॥ ೩೩
ತತ್ರ ತಸ್ಯಾನವರತಂ ದ್ವಾರದೇಶೇ ಮಹೀಪತೇಃ ।
ವದೇಃ ಪಠಿತ್ವಾ ಸಂಧ್ಯಾಗ್ನಿಹೋತ್ರಮಂತ್ರಾನಿದಂ ವಚಃ ॥ ೩೪
ಫಲಭೂತಿರಹಂ ನಾಮ್ನಾ ವಿಪ್ರಃ ಶೃಣುತ ವಚ್ಮಿ ಯತ್ ।
ಭದ್ರಕೃತ್ ಪ್ರಾಪ್ನುಯಾದ್ ಭದ್ರಮಭದ್ರಂ ಚಾಪ್ಯಭದ್ರಕೃತ್ ॥ ೩೫
ಏವಂ ವದಂಶ್ಚ ತತ್ರ ತ್ವಂ ಮಹತೀಮೃದ್ಧಿಮಾಪ್ಸ್ಯಸಿ ।
ಸಂಧ್ಯಾಗ್ನಿಹೋತ್ರಮಂತ್ರಾಂಶ್ಚ ಮತ್ತ ಏವ ಪಠಾಧುನಾ ॥ ೩೬

37. ನಾನೊಬ್ಬ ಯಕ್ಷ" ಎಂದು ಹೇಳಿ ತನ್ನ ಪ್ರಭಾವದಿಂದ ಆ ಕ್ಷಣದಲ್ಲೇ ಅವನಿಗೆ ಆ ಮಂತ್ರಗಳನ್ನು ಹೇಳಿಕೊಟ್ಟು ಆ ವಾಣಿಯು ಆಲದ ಮರದಲ್ಲೇ ಮಾಯ ವಾಯಿತು.
38. ಬೆಳಗಾದ ಮೇಲೆ ಬುದ್ಧಿಮಂತ ಸೋಮದತ್ತನು ಯಕ್ಷನು ಕೊಟ್ಟಿದ್ದ 'ಫಲಭೂತಿ' ಎಂಬ ಹೆಸರನ್ನಿಟ್ಟುಕೊಂಡು ತನ್ನ ಪತ್ನಿಯೊಡನೆ ಹೊರಟನು.
39. ಸುತ್ತಲೂ ಇದ್ದ ಯಾವುಯಾವುವೋ ದುರ್ಗಮವಾದ, ಕೆಟ್ಟ ದಶೆಗಳಂತಿದ್ದ ಅಡವಿಗಳನ್ನು ದಾಟಿ ಅವನು ಶ್ರೀಕಂಠದೇಶವನ್ನು ತಲುಪಿದನು.
40–41. ಅಲ್ಲಿ ರಾಜನ (ಅರಮನೆಯ) ಬಾಗಿಲಲ್ಲಿ ನಿಂತು ಸಂಧ್ಯಾಗ್ನಿ ಹೋತ್ರದ ಮಂತ್ರಗಳನ್ನು ಪಠಿಸಿ 'ಫಲಭೂತಿ' ಎಂಬ ತನ್ನ ಹೆಸರನ್ನು ಯಥಾವತ್ತಾಗಿ ಹೇಳಿಕೊಂಡು ಅವನು "ಒಳ್ಳೆಯದನ್ನು ಮಾಡುವವನು ಒಳ್ಳೆಯ ಫಲವನ್ನೂ, ಕೆಟ್ಟ ಕೆಲಸವನ್ನು ಮಾಡುವವನು ಕೆಟ್ಟ ಫಲವನ್ನೂ ಪಡೆಯುತ್ತಾನೆ" ಎಂದು ಜನರಿಗೆ ಕುತೂಹಲವನ್ನುಂಟುಮಾಡುವ ಮಾತನ್ನು ಹೇಳತೊಡಗಿದನು.
42. ಮತ್ತೆ ಮತ್ತೆ ಆ ಮಾತನ್ನೇ ಆಡುತ್ತಿದ್ದ ಅವನ ಬಗೆಗೆ ಕುತೂಹಲ ತಾಳಿದ ಆದಿತ್ಯ ಪ್ರಭ ಮಹಾರಾಜನು ಫಲಭೂತಿಯನ್ನು (ಅರಮನೆಯ ಒಳಕ್ಕೆ) ಕರೆಸಿ ಕೊಂಡನು.

---

ಅಹಂ ಚ ಯಕ್ಷ ಇತ್ಯುಕ್ತ್ವಾ ಸ್ವಪ್ರಭಾವೇಣ ತತ್ಕ್ಷಣಮ್ ।
ತಮಧ್ಯಾಪ್ಯ ಚ ತಾನ್ ಮಂತ್ರಾನ್ ವಟೇ ವಾಣೀ ತಿರೋದಧೇ ॥ ೩೭
ಪ್ರಾತಃ ಸ ಸೋಮದತ್ತಶ್ಚ ಪ್ರತಸ್ಥೇ ಭಾರ್ಯಯಾ ಸಹ ।
ಫಲಭೂತಿರಿತಿ ಪ್ರಾಪ್ಯ ನಾಮ ಯಕ್ಷಕೃತಂ ಕೃತೀ ॥ ೩೮
ಅತಿಕ್ರಮ್ಯಾಟವೀಸ್ತಾಸ್ತಾ ವಿಷಮಾಃ ಪರಿವರ್ತಿನೀಃ ।
ದುರ್ದಶಾ ಇವ ಸಂಪ್ರಾಪ ಶ್ರೀಕಂಠವಿಷಯಂ ಚ ಸಃ ॥ ೩೯
ತತ್ರ ಸಂಧ್ಯಾಗ್ನಿಕಾರ್ಯಾದಿ ಪಠಿತ್ವಾ ದ್ವಾರಿ ಭೂಪತೇಃ ।
ಯಥಾವನ್ನಾಮ ಸಂಶ್ರಾವ್ಯ ಫಲಭೂತಿರಿತಿ ಸ್ವಕಮ್ ॥ ೪೦
ಸೋಽವಾದೀದ್ ಭದ್ರಕೃದ್ ಭದ್ರಮಭದ್ರಂ ಚಾಪ್ಯಭದ್ರಕೃತ್ ।
ಪ್ರಾಪ್ನುಯಾದಿತಿ ಲೋಕಸ್ಯ ಕೌತುಕೋತ್ಪಾದಕಂ ವಚಃ ॥ ೪೧
ಮುಹುಶ್ಚ ತದ್ ವದಂತಂ ತಂ ತತ್ರಾದಿತ್ಯಪ್ರಭೋ ನೃಪಃ ।
ಬುದ್ಧ್ವಾ ಪ್ರವೇಶಯಾಮಾಸ ಫಲಭೂತಿಂ ಕುತೂಹಲೀ ॥ ೪೨

43. ಒಳಗೆ ಹೋದ ಫಲಭೂತಿಯು ರಾಜನ ಮುಂದೆ ಕೂಡ ಅದನ್ನೇ ಮತ್ತೆ ಮತ್ತೆ ಹೇಳಿದನು. ಅದನ್ನು ಕೇಳಿ ರಾಜನು ಪಕ್ಕದಲ್ಲಿದ್ದವರ ಜೊತೆಗೆ ತಾನೂ ನಕ್ಕನು.

44. ಸಾಮಂತರೊಡನೆ ರಾಜನು ಅವನಿಗೆ ಬಟ್ಟೆಗಳನ್ನೂ ಒಡವೆಗಳನ್ನೂ ಹಳ್ಳಿಗಳನ್ನೂ ದಾನಮಾಡಿದನು. ದೊಡ್ಡವರ ಸಂತೋಷ ಎಂದೂ ವ್ಯರ್ಥವಾಗುವುದಿಲ್ಲ.

45. ಹೀಗೆ ಬಡವನಾಗಿದ್ದ ಫಲಭೂತಿಯು ಯಕ್ಷನ ಅನುಗ್ರಹದಿಂದ ರಾಜನು ಅರ್ಪಿಸಿದ ಐಶ್ವರ್ಯವನ್ನು ಪಡೆದುಕೊಂಡನು.

46. ಹಿಂದೆ ಹೇಳಿದ ಮಾತನ್ನೇ ಮತ್ತೆ ಮತ್ತೆ ಹೇಳುತ್ತಾ ಅವನು ರಾಜನ ಆಪ್ತತ್ವವನ್ನು ಗಳಿಸಿಕೊಂಡನು. ಪ್ರಭುಗಳ ಮನಸ್ಸು ವಿನೋದವನ್ನು ಇಷ್ಟಪಡುವುದಲ್ಲವೆ ?

47. ಕ್ರಮವಾಗಿ ರಾಜನ ಅರಮನೆಯಲ್ಲೂ ರಾಜ್ಯದಲ್ಲೂ ಅಂತಃಪುರದಲ್ಲೂ 'ಇವನು ರಾಜನಿಗೆ ಬೇಕಾದವನು' ಎಂದು ಗೌರವಯುತವಾದ ಪ್ರೀತಿಯನ್ನು ಸಂಪಾದಿಸಿದನು.

48. ಯಾವಾಗಲೋ ಒಮ್ಮೆ ಆದಿತ್ಯಪ್ರಭ ಮಹಾರಾಜನು ಬೇಟೆಯನ್ನಾಡಿ ಅಡವಿಯಿಂದ ಹಿಂದಿರುಗಿ ಒಡನೆಯೇ ಅಂತಃಪುರವನ್ನು ಹೊಕ್ಕನು.

49. ದ್ವಾರಪಾಲಕರು ಸಂಭ್ರಮಪಟ್ಟು ಅನುಮಾನಿಸುತ್ತಿರುವಷ್ಟರಲ್ಲೇ ಅವನು ಒಳಹೊಕ್ಕು ಕುವಲಯಾವಲೀ ಎಂಬ ರಾಣಿಯು ದೇವಪೂಜೆಯಲ್ಲಿ ನಿರತಳಾಗಿರುವುದನ್ನು ಕಂಡನು.

---

ಸೋಽಪಿ ಪ್ರವಿಶ್ಯ ತಸ್ಯಾಗ್ರೇ ತದೇವ ಮುಹುರಬ್ರವೀತ್ ।
ಜಹಾಸ ತೇನ ಸ ನೃಪಸ್ತದಾ ಪಾರ್ಶ್ವಸ್ಥಿತೈಸ್ಸದಾ ॥ ೪೩

ಸಸಾಮಂತಶ್ಚ ವಸ್ತ್ರಾಣಿ ದತ್ತ್ವಾ ಚಾಭರಣಾನಿ ಸಃ ।
ಗ್ರಾಮಾನ್ ರಾಜಾ ದದೌ ತಸ್ಮೈ ನ ತೋಷೋ ಮಹತಾಂ ಮೃಷಾ ॥ ೪೪

ಏವಂ ಚ ತತ್ಕ್ಷಣಂ ಪ್ರಾಪ ಗುಹ್ಯಕಾನುಗ್ರಹೇಣ ಸಃ ।
ಫಲಭೂತಿಃ ಕೃಶೋ ಭೂತ್ವಾ ವಿಭೂತಿಂ ಭೂಭೃದರ್ಪಿತಾಮ್ ॥ ೪೫

ಸದಾ ತದೇವ ಚ ವದನ್ ಪೂರ್ವೋಕ್ತಂ ಪ್ರಾಪ ಭೂಪತೇಃ ।
ವಾಲ್ಲಭ್ಯಮೀಶ್ವರಾಣಾಂ ಹಿ ವಿನೋದರಸಿಕಂ ಮನಃ ॥ ೪೬

ಕ್ರಮಾದ್ ರಾಜಗೃಹೇ ಚಾಸ್ಮಿನ್ ರಾಷ್ಟ್ರೇಷ್ವಂತಃ ಪುರೇಷು ಚ ।
ರಾಜಪ್ರಿಯ ಇತಿ ಪ್ರೀತಿಂ ಬಹುಮಾನಮವಾಪ ಸಃ ॥ ೪೭

ಕದಾಚಿದಥ ಸೋಽಟವ್ಯಾಃ ಕೃತ್ವಾಖೇಟಕಮಾಗತಃ ।
ಆದಿತ್ಯಪ್ರಭಭೂಪಾಲಃ ಸಹಸಾಂತಃಪುರಂ ಯಯೌ ॥ ೪೮

ದ್ವಾಃಸ್ಥಸಂಭ್ರಮಸಾಶಂಕಃ ಪ್ರವಿಶ್ಯೈವ ದದರ್ಶ ಸಃ ।
ದೇವೀಂ ದೇವಾರ್ಚನವ್ಯಗ್ರಾಂ ನಾಮ್ನಾ ಕುವಲಯಾವಲೀಮ್ ॥ ೪೯

50. ಆಗ ಅವಳು ಬೆತ್ತಲೆಯಾಗಿದ್ದಳು. ಕೂದಲನ್ನು ಎತ್ತಿಕಟ್ಟಿದ್ದಳು. ಕಣ್ಣುಗಳನ್ನು ಮುಚ್ಚಿ (ಧ್ಯಾನ ಮಾಡುತ್ತಿದ್ದಳು). ದಪ್ಪವಾದ ಸಿಂದೂರದ ತಿಲಕವನ್ನು ಧರಿಸಿದ್ದಳು. ಜಪ ಮಾಡುತ್ತಿದ್ದುದರಿಂದ ಅವಳ ತುಟಿಗಳು ಅದುರುತ್ತಿದ್ದುವು.

51. ವಿಚಿತ್ರವಾದ ಬಣ್ಣಗಳಿಂದ ರಚಿಸಲಾಗಿದ್ದ ಮಂಡಲದ ಮಧ್ಯದಲ್ಲಿ ಅವಳು ಕುಳಿತಿದ್ದಳು. ರಕ್ತ, ಹೆಂಡ, ಮನುಷ್ಯಮಾಂಸಗಳನ್ನು ಅವಳು ಪೂಜೆಗೆ ಬಳಸಿಕೊಂಡಿದ್ದಳು.

52. ರಾಜನು ಪ್ರವೇಶ ಮಾಡಿದಾಗ ಅವಳು ಗಾಬರಿಯಿಂದ ಎದ್ದು ಬಟ್ಟೆಹಾಕಿಕೊಂಡಳು. ಅವನು (ಅದೆಲ್ಲ ಏನೆಂದು) ಕೇಳಿದಾಗ ಮೊದಲು ಅಭಯವನ್ನು ಯಾಚಿಸಿ ಆಮೇಲೆ ಕ್ಷಣಮಾತ್ರದಲ್ಲಿ ಹೀಗೆ ನುಡಿದಳು.

53. ""ಪ್ರಭು, ನಿಮಗೆ ಅಭ್ಯುದಯ ಉಂಟಾಗಲೆಂದೇ ಈ ಪೂಜೆಯನ್ನು ನಾನು ಮಾಡಿದೆನು. ಇದರಲ್ಲಿ ಶಾಸ್ತ್ರದ ವಿಚಾರವನ್ನೂ ಸಿದ್ಧಿಯನ್ನೂ (ಹೇಳುವೆನು), ಕೇಳಿ.

54. ಹಿಂದೆ ನಾನು ತಂದೆಯ ಮನೆಯಲ್ಲಿದ್ದಾಗ ಒಮ್ಮೆ ತೋಟದಲ್ಲಿದ್ದೆ. ಕನ್ಯೆಯಾಗಿದ್ದ ನಾನು ವಸಂತಮಹೋತ್ಸವದಲ್ಲಿ ಭಾಗವಹಿಸಿದ್ದಾಗ ಗೆಳತಿಯರೆಲ್ಲರೂ ಒಟ್ಟುಗೂಡಿ ನನಗೆ ಹೀಗೆ ಹೇಳಿದರು.

55. "ಇಲ್ಲಿ ಸಂತೋಷಕ್ಕಾಗಿ ನಿರ್ಮಿಸಲಾಗಿರುವ ಉದ್ಯಾನದಲ್ಲಿ ದೇವರುಗಳಿಗೂ ದೇವನಾದ ವರಗಳನ್ನು ನೀಡುವವನಾದ, ಮಹಿಮೆಯುಳ್ಳವನೂ ಆದ ವಿನಾಯಕನು ಮರಗಳ ತೋಪಿನ ಮಧ್ಯದಲ್ಲಿದ್ದಾನೆ.

---

ದಿಗಂಬರಾಮೂರ್ಧ್ವಕೇಶೀಂ ನಿಮೀಲಿತವಿಲೋಚನಾಮ್ ।
ಸ್ಥೂಲಸಿಂದೂರತಿಲಕಾಂ ಜಪಪ್ರಸ್ಫುರಿತಾಧರಾಮ್ ॥ ೫೦
ವಿಚಿತ್ರವರ್ಣಕನ್ಯಸ್ತಮಹಾಮಂಡಲಮಧ್ಯಗಾಮ್ ।
ಅಸೃಕ್ಸುರಾಮಹಾಮಾಂಸಕಲ್ಪಿತೋಗ್ರಬಲಿಕ್ರಿಯಾಮ್ ॥ ೫೧
ಸಾಪಿ ಪ್ರವಿಷ್ಟೇ ನೃಪತೌ ಸಂಭ್ರಮಾಕಲಿತಾಂಶುಕಾ ।
ತೇನ ಪೃಷ್ಟಾ ಕ್ಷಣಾದೇವಮವೋಚದ್ ಯಾಚಿತಾಭಯಾ ॥ ೫೨
ತವೈವೋದಯಲಾಭಾರ್ಥಂ ಕೃತವತ್ಯಸ್ಮಿ ಪೂಜನಮ್ ।
ಅತ್ರ ಚಾಗಮವೃತ್ತಾಂತಂ ಸಿದ್ಧಿಂ ಚ ಶೃಣು ಮೇ ಪ್ರಭೋ ॥ ೫೩
ಪುರಾಹಂ ಪಿತೃವೇಶ್ಮಸ್ಥಾ ಕನ್ಯಾ ಮಧುಮಹೋತ್ಸವೇ ।
ಏವಮುಕ್ತಾ ವಯಸ್ಯಾಭಿಃ ಸಮೇತ್ಯೋದ್ಯಾನವರ್ತಿನೀ ॥ ೫೪
ಅಸ್ತೀಹ ಪ್ರಮದೋದ್ಯಾನೇ ತರುಮಂಡಲಮಧ್ಯಗಃ ।
ದೃಷ್ಟಪ್ರಭಾವೋ ವರದೋ ದೇವದೇವೋ ವಿನಾಯಕಃ ॥ ೫೫

56. ಪ್ರಾರ್ಥಿಸಿದ್ದನ್ನೆಲ್ಲ ಕೊಡುವ ಆ ವಿನಾಯಕನನ್ನು ಭಕ್ತಿಯಿಂದ ಹೋಗಿ ಪೂಜಿಸು. ಅದರಿಂದ ಬೇಗನೆ ಯಾವ ವಿಘ್ನವೂ ಇಲ್ಲದೆ ನಿನಗೆ ಅನುರೂಪನಾದ ಪತಿಯನ್ನು ಪಡೆಯುವೆ."

57. ಅದನ್ನು ಕೇಳಿ ಮುಗ್ಧಭಾವದಿಂದ ನಾನು ಆ ಗೆಳತಿಯರನ್ನು "ವಿನಾಯಕನನ್ನು ಪೂಜಿಸಿದರೆ ಕನ್ಯೆಯರು ಗಂಡನನ್ನು ಪಡೆಯುವರೇ ?" ಎಂದು ಪ್ರಶ್ನಿಸಿದೆನು.

58. ಅವರು ನನಗೆ ಉತ್ತರ ಕೊಟ್ಟರು "ಇದೇನು ಹೀಗೆ ಹೇಳುತ್ತಿದ್ದೀಯೆ. ಆ ವಿನಾಯಕನನ್ನು ಪೂಜಿಸದಿದ್ದರೆ ಯಾರಿಗೂ ಯಾವ ಸಿದ್ಧಿಯೂ ಇಲ್ಲ.

59. ಅಲ್ಲದೆ ಆತನ ಪ್ರಭಾವವನ್ನು ನಾವು ವರ್ಣಿಸುತ್ತೇವೆ ಕೇಳು. ಹೀಗೆಂದು ನನ್ನ ಗೆಳತಿಯರು ಈ ಕಥೆಯನ್ನು ಹೇಳಿದರು.

60. ಹಿಂದೆ ತಾರಕನ ಹಾವಳಿಗೆ ಈಡಾಗಿದ್ದ ಇಂದ್ರನು ಶಿವನ ಮಗನು (ಹುಟ್ಟಿ) ಸೇನಾನಿಯಾಗಬೇಕೆಂದು ಅಪೇಕ್ಷಿಸಿದನು. ಆಮೇಲೆ ಮನ್ಮಥನ ದಹನ ವಾಯಿತು.

61. ನಿಯಮಪರನಾಗಿ ಸುದೀರ್ಘವಾಗಿ ಅತ್ಯುಗ್ರನಾಗಿ ತಪಸ್ಸನ್ನು ಮಾಡುತ್ತಿದ್ದ ಶಿವನನ್ನು ಗೌರಿಯು ತಾನೂ ತಪಸ್ಸನ್ನು ಮಾಡಿ ಪ್ರಾರ್ಥಿಸಿ ಪತಿಯನ್ನಾಗಿ ಪಡೆದು ಕೊಂಡಳು.

---

ತಮುಪಾಗತ್ಯ ಭಕ್ತ್ಯಾ ತ್ವಂ ಪೂಜಯ ಪ್ರಾರ್ಥಿತಪ್ರದಮ್ ।
ಯೇನ ನಿರ್ವಿಘ್ನಮೇವಾಶು ಸ್ವೋಚಿತಂ ಪತಿಮಾಪ್ಸ್ಯಸಿ ॥ ೫೬
ತಚ್ಛ್ರುತ್ವಾ ಪರ್ಯಪೃಚ್ಛ್ಯಂತ ಸಖ್ಯಸ್ತಾ ಮೌಗ್ಧ್ಯತೋ ಮಯಾ ।
ಕನ್ಯಾ ಲಭಂತೇ ಭರ್ತಾರಂ ಕಿಂ ವಿನಾಯಕಪೂಜಯಾ ॥ ೫೭
ಅಥ ತಾಃ ಪ್ರತ್ಯವೋಚನ್ಮಾಂ ಕಿಮೇತಾವತ್ ತ್ವಯೋಚ್ಯತೇ ।
ತಸ್ಮಿನ್ನಪೂಜಿತೇ ನಾಸ್ತಿ ಸಿದ್ಧಿಃ ಕಾಪೀಹ ಕಸ್ಯಚಿತ್ ॥ ೫೮
ತಥಾ ಚೈತತ್ಪ್ರಭಾವಂ ತೇ ವರ್ಣಯಾಮೋ ವಯಂ ಶೃಣು ।
ಇತ್ಯುಕ್ತ್ವಾ ಚ ವಯಸ್ಯಾ ಮೇ ಕಥಾಮಕಥಯನ್ನಿಮಾಮ್ ॥ ೫೯
ಪುರಾ ಪುರಾರೇಸ್ತನಯಂ ಸೇನಾನ್ಯಂ ಪ್ರಾಪ್ತುಮಿಚ್ಛತಿ ।
ತಾರಕೋಪದ್ರುತೇ ಶಕ್ರೇ ದಗ್ಧೇ ಚ ಕುಸುಮಾಯುಧೇ ॥ ೬೦
ಊರ್ಧ್ವರೇತಸಮತ್ಯುಗ್ರಂ ಸುದೀರ್ಘತಪಸಿ ಸ್ಥಿತಮ್ ।
ಗೌರೀ ಕೃತತಪಾಃ ಪ್ರಾರ್ಥ್ಯ ಪ್ರಾಪ್ಯ ಚ ತ್ರ್ಯಂಬಕಂ ಪತಿಮ್ ॥ ೬೧

62. ತನಗೆ ಮಗನು ಹುಟ್ಟಬೇಕೆಂದು ಗೌರಿ ಬಯಸಿದಳು. ಮನ್ಮಥನು ಮತ್ತೆ ಬದುಕಬೇಕೆಂದೂ ಆಶಿಸಿದಳು. ಆದರೆ ಸಾಫಲ್ಯಕ್ಕಾಗಿ ವಿಘ್ನೇಶ್ವರನ ಪೂಜೆ ಮಾಡಬೇಕೆಂಬುದನ್ನು ಮರೆತುಬಿಟ್ಟಳು.

63. ಇಷ್ಟಾರ್ಥವನ್ನು ಬೇಡಿದ ಮಡದಿಗೆ ಶಿವನಿಂತೆಂದನು. ""ಪ್ರಿಯೆ, ಹಿಂದೆ ಪ್ರಜಾಪತಿಯ ಮನಸ್ಸಿನಿಂದ ಮನ್ಮಥನು ಹುಟ್ಟಿದನು.

64. ಹುಟ್ಟಿದ ಕೂಡಲೇ 'ಕಂ ದರ್ಪಯಾಮಿ' (=ಯಾರನ್ನು ಉತ್ತೇಜಿಸಲಿ) ಎಂದು ಗರ್ವದಿಂದ ಅವನು ಹೇಳಿದನು. ಆದ್ದರಿಂದ ಬ್ರಹ್ಮನು ಅವನಿಗೆ 'ಕಂದರ್ಪ' ಎಂಬ ಹೆಸರನ್ನಿಟ್ಟನು.

65. "ಮಗನೆ, ನಿನ್ನ ದರ್ಪ ಅತಿಯಾಯಿತು. ಮುಕ್ಕಣ್ಣನೊಬ್ಬನ ತಂಟೆಗೆ ಹೋಗುವುದು ಬೇಡ. ಅವನಿಂದ ನೀನು ಸಾವಿಗೀಡಾಗುವುದು ಬೇಡ."

66. ಹೀಗೆ ಬ್ರಹ್ಮನು ಮೊದಲೇ ಹೇಳಿದ್ದರೂ ಕೂಡ ಆ ದುಷ್ಟನು ನನ್ನನ್ನೇ ತಳಮಳಗೊಳಿಸಲು ಬಂದನು. ನಾನವನನ್ನು ಸುಟ್ಟುಹಾಕಿದೆನು.

67. ನಿನಗೆ ಮಗನನ್ನು ನನ್ನ ಶಕ್ತಿಯಿಂದಲೇ ಉತ್ಪಾದಿಸುತ್ತೇನೆ. ನನಗೆ ಮಕ್ಕಳಾಗಬೇಕಾದರೆ ಸಾಮಾನ್ಯಜನರಂತೆ ಕಾಮೋತ್ಸಾಹವು ಬೇಕಿಲ್ಲ."

---

ಆಚಕಾಂಕ್ಷ ಸುತಪ್ರಾಪ್ತಿಂ ಮದನಸ್ಯ ಚ ಜೀವಿತಮ್ ।
ನ ಚ ಸಸ್ಮಾರ ಸಿದ್ಧ್ಯರ್ಥಂ ಸಾ ವಿಘ್ನೇಶ್ವರಪೂಜನಮ್ ॥ ೬೨
ಅಭೀಷ್ಟಾಭ್ಯರ್ಥಿನೀಂ ತಾಂ ಚ ಕಾಂತಾಮಿತ್ಯವದಚ್ಛಿವಃ ।
ಪ್ರಿಯೇ ಪ್ರಜಾಪತೇಃ ಪೂರ್ವಂ ಮಾನಸಾದಜನಿ ಸ್ಮರಃ ॥ ೬೩
ಕಂ ದರ್ಪಯಾಮೀತಿ ಮದಾಜ್ಜಾತಮಾತ್ರೋ ಜಗಾದ ಚ ।
ತೇನ ಕಂದರ್ಪನಾಮಾನಂ ತಂ ಚಕಾರ ಚತುರ್ಮುಖಃ ॥ ೬೪
ಅತಿದೃಪ್ತೋಽಸಿ ಚೇತ್ ಪುತ್ರ ತತ್ ತ್ರಿನೇತ್ರಸ್ಯ ಲಂಘನಮ್ ।
ಏಕಸ್ಯ ರಕ್ಷೇರ್ಮಾ ನಾಮ ಮೃತ್ಯುಂ ತಸ್ಮಾದವಾಪ್ಸ್ಯಸಿ ॥ ೬೫
ಇತ್ಥಂ ಸ ವೇಧಸೋಕ್ತೋಽಪಿ ಸಂಕ್ಷೋಭಾಯಾಗತಃ ಶಠಃ ।
ಮಯಾ ದಗ್ಧೋ ನ ತಸ್ಯಾಸ್ತಿ ಸದೇಹಸ್ಯೋದ್ಭವಃ ಪುನಃ ॥ ೬೬
ಭವತ್ಯಾಸ್ತು ಸ್ವಶಕ್ತ್ಯೈವ ಪುತ್ರಮುತ್ಪಾದಯಾಮ್ಯಹಮ್ ।
ನ ಹಿ ಮೇ ಮದನೋತ್ಸಾಹಹೇತುಕಾ ಲೋಕವತ್ ಪ್ರಜಾ ॥ ೬೭

68. ಹೀಗೆ ಶಿವನು ಪಾರ್ವತಿಗೆ ಹೇಳುತ್ತಿರುವಾಗಲೇ ಅವರ ಮುಂದೆ ಬ್ರಹ್ಮನು ಇಂದ್ರಸಮೇತನಾಗಿ ಆವಿರ್ಭವಿಸಿದನು.

69. ಅವನು ಸ್ತೋತ್ರಮಾಡಿ ಶಿವನನ್ನು ತಾರಕಾಸುರಸಂಹಾರಕ್ಕಾಗಿ ಪ್ರಾರ್ಥಿಸಿಕೊಂಡನು. ದೇವಿ ಪಾರ್ವತಿಯಲ್ಲಿ ತನ್ನ ಔರಸಪುತ್ರನನ್ನು ಸೃಷ್ಟಿಸಲು ಶಿವನೂ ಒಪ್ಪಿಗೆಯನ್ನಿತ್ತನು.

70. ಪ್ರಾಣಿಗಳ ಮನಸ್ಸಿನಲ್ಲಿ ಮನ್ಮಥನು ಹುಟ್ಟಲಿ ಎಂದೂ ಒಪ್ಪಿದನು. ಪಾರ್ವತಿಯ ಮಾತಿನಂತೆ ಸೃಷ್ಟಿಯು ಕೊನೆಗೊಳ್ಳುವುದನ್ನು ತಪ್ಪಿಸುವುದಕ್ಕಾಗಿ ಶಿವನು ಒಪ್ಪಿಕೊಂಡನು.

71. ತನ್ನ ಮನಸ್ಸಿನಲ್ಲೂ ಮನ್ಮಥನಿಗೆ ಅವಕಾಶವನ್ನು ಶಿವನಿತ್ತನು. ಅದರಿಂದ ಸಂತುಷ್ಟನಾಗಿ ಬ್ರಹ್ಮನು ಹೋದನು ಮತ್ತು ಪಾರ್ವತಿಯು ಆನಂದ ಹೊಂದಿದಳು.

72. ಹೀಗೆ ದಿವಸಗಳು ಕಳೆಯುತ್ತಿರಲು ಒಮ್ಮೆ ಏಕಾಂತದಲ್ಲಿದ್ದ ಶಿವನು ಉಮೆಯೊಡನೆ ಸುರತ ಕ್ರೀಡೆಯನ್ನಾರಂಭಿಸಿದನು.

73. ನೂರಾರು ವರ್ಷಗಳು ಕಳೆದರೂ ಅವನ ಸಂಭೋಗಕ್ಕೆ ಕೊನೆಯೇ ಇರಲಿಲ್ಲ. ಅದರ ಒತ್ತಡದಿಂದ ಮೂರು ಲೋಕಗಳೂ ನಡುಗಿದುವು.

---

ಏವಂ ವದತ ಏವಾಸ್ಯ ಪಾರ್ವತೀಂ ವೃಷಲಕ್ಷ್ಮಣಃ ।
ಆವಿರ್ಬಭೂವ ಪುರತೋ ಬ್ರಹ್ಮಾ ಶತಮುಖಾನ್ವಿತಃ ॥ ೬೮
ತೇನ ಸ್ತುತ್ವಾ ಚ ವಿಜ್ಞಪ್ತಸ್ತಾರಕಾಸುರಶಾಂತಯೇ ।
ಅಂಗೀಚಕ್ರೇ ಶಿವಃ ಸ್ರಷ್ಟುಂ ದೇವ್ಯಾಮಾತ್ಮಜಮೌರಸಮ್ ॥ ೬೯
ಅನುಮೇನೇ ಚ ಕಾಮಸ್ಯ ಜನ್ಮ ಚೇತಸಿ ದೇಹಿನಾಮ್ ।
ಸರ್ಗವಿಚ್ಛೇದರಕ್ಷಾರ್ಥಮಮೂರ್ತಸ್ಯೈವ ತದ್ಗಿರಾ ॥ ೭೦
ದದೌ ಚ ನಿಜಚಿತ್ತೇಽಪಿ ಸೋಽವಕಾಶಂ ಮನೋಭುವೇ ।
ತೇನ ತುಷ್ಟೋ ಯಯೌ ಧಾತಾ ಮುದಂ ಪ್ರಾಪ ಚ ಪಾರ್ವತೀ ॥ ೭೧
ತತೋ ಯಾತೇಷು ದಿವಸೇಷ್ವೇಕದಾ ರಹಸಿ ಸ್ಥಿತಃ ।
ಸಿಷೇವೇ ಸುರತಕ್ರೀಡಾಮುಮಯಾ ಸಹ ಶಂಕರಃ ॥ ೭೨
ಯದಾ ನಾಭೂದ್ ರತಾಂತೋಽಸ್ಯ ಗತೇಷ್ವಬ್ದಶತೇಷ್ವಪಿ ।
ತದಾ ತದುಪಮರ್ದೇನ ಚಕಂಪೇ ಭುವನತ್ರಯಮ್ ॥ ೭೩

74. ಅನಂತರ ಜಗತ್ತೇ ಎಲ್ಲಿ ನಾಶಹೊಂದಿಬಿಡುವುದೋ ಎಂಬ ಭಯದಿಂದ ಶಿವನ ಸಂಭೋಗಕ್ಕೆ ಅಡ್ಡಿಯನ್ನೊಡ್ಡಲು ಬ್ರಹ್ಮನ ಸೂಚನೆಗೆ ಅನುಸಾರವಾಗಿ ದೇವತೆಗಳು ಅಗ್ನಿಯನ್ನು ನೆನಪಿಗೆ ತಂದುಕೊಂಡರು.

75. ಅಗ್ನಿಯನ್ನು ಅವರು ಸ್ಮರಿಸಿದ ಕೂಡಲೇ ಅವನು ಶಿವನನ್ನು ಮುಟ್ಟಲು ಸಾಧ್ಯವೇ ಇಲ್ಲ ಎಂದು ಅರಿತುಕೊಂಡು ದೇವತೆಗಳ ಲೋಕದಿಂದ ದೂರ ಓಡಿಹೋಗಿ ನೀರಿನೊಳಕ್ಕೆ ಹೊಕ್ಕನು.

76. ದೇವತೆಗಳು ಅಗ್ನಿಯನ್ನು ಹುಡುಕುತ್ತಿದ್ದಾಗ, ಅವನ ತೇಜಸ್ಸಿನಿಂದ ಸುಡುತ್ತಿದ್ದ ಕಪ್ಪೆಗಳು ಅವರಿಗೆ ಅಗ್ನಿ ನೀರಿನೊಳಗೆ ಸೇರಿಕೊಂಡುಬಿಟ್ಟಿದ್ದಾನೆ ಎಂದು ಹೇಳಿದುವು.

77. ಆಮೇಲೆ ಆ ಕ್ಷಣದಲ್ಲೇ ಅಗ್ನಿಯು ಶಾಪದಿಂದ ಕಪ್ಪೆಗಳನ್ನು ಅಸ್ಪಷ್ಟ ಮಾತುಗಳುಳ್ಳವನ್ನಾಗಿ ಮಾಡಿ, ಮತ್ತೆ ಅದೃಶ್ಯನಾಗಿ ಮಂದರಪರ್ವತಕ್ಕೆ ಹೊರಟುಹೋದನು.

78. ಅಲ್ಲಿ ಅವನು ಪೊಟರೆಯೊಳಗೆ ಶಂಬೂಕ(ಕಪ್ಪೆಚಿಪ್ಪಿನ)ರೂಪದಲ್ಲಿ ಅಡಗಿಕೊಂಡಿದ್ದಾಗ ಅದನ್ನು ಆನೆಗಳೂ ಗಿಳಿಗಳೂ ದೇವತೆಗಳಿಗೆ ಹೇಳಿದುವು. ಅವರು ಅವನ ಬಳಿ ಹೋದಾಗ ಅವನು ದರ್ಶನ ಕೊಟ್ಟನು.

79. ಗಿಳಿಗಳಿಗೂ ಆನೆಗಳಿಗೂ ಶಾಪಕೊಟ್ಟು ಅವುಗಳ ನಾಲಿಗೆ ಹಿಮ್ಮುಖವಾಗುವಂತೆ ಮಾಡಿದ ಅಗ್ನಿಯನ್ನು ದೇವತೆಗಳು ಸ್ತುತಿಸಿದರು. ಆಗ ಅವನು ದೇವತೆಗಳ ಕಾರ್ಯವನ್ನು ಮಾಡಲು ಒಪ್ಪಿಕೊಂಡನು.

---

ತತೋ ಜಗನ್ನಾಶಭಯಾದ್ ರತವಿಘ್ನಾಯ ಶೂಲಿನಃ ।
ವಹ್ನಿಂ ಸ್ಮರಂತಿ ಸ್ಮ ಸುರಾಃ ಪಿತಾಮಹನಿದೇಶತಃ ॥ ೭೪
ಸೋಽಪ್ಯಗ್ನಿಃ ಸ್ಮೃತಮಾತ್ರಃ ಸನ್ನಧೃಷ್ಯಂ ಮದನಾಂತಕಮ್ ।
ಮತ್ವಾ ಪಲಾಯ್ಯ ದೇವೇಭ್ಯಃ ಪ್ರವಿವೇಶ ಜಲಾಂತರಮ್ ॥ ೭೫
ತತ್ತೇಜೋದಹ್ಯಮಾನಾಶ್ಚ ತತ್ರ ಭೇಕಾ ದಿವೌಕಸಾಮ್ ।
ವಿಚಿನ್ವತಾಂ ಶಶಂಸುಸ್ತಮಗ್ನಿಮಂತರ್ಜಲಸ್ಥಿತಮ್ ॥ ೭೬
ತತಸ್ತಾನನಭಿವ್ಯಕ್ತವಾಚಃ ಶಾಪೇನ ತತ್ಕ್ಷಣಮ್ ।
ಭೇಕಾನ್ ಕೃತ್ವಾ ತಿರೋಭೂಯ ಭೂಯೋಽಗ್ನಿರ್ಮಂದರಂ ಯಯೌ ॥ ೭೭
ತತ್ರ ತಂ ಕೋಟರಾಂತಸ್ಥಂ ದೇವಾಃ ಶಂಬೂಕರೂಪಿಣಮ್ ।
ಪ್ರಾಪುರ್ಗಜಶುಕಾಖ್ಯಾತಂ ಸ ಚೈಷಾಂ ದರ್ಶನಂ ದದೌ ॥ ೭೮
ಕೃತ್ವಾ ಜಿಹ್ವಾವಿಪರ್ಯಾಸಂ ಶಾಪೇನ ಶುಕದಂತಿನಾಮ್ ।
ಪ್ರತಿಪೇದೇ ಚ ದೇವಾನಾಂ ಸ ಕಾರ್ಯಂ ತೈಃ ಕೃತಸ್ತುತಿಃ ॥ ೭೯

80. ಅಲ್ಲಿಗೆ ಹೋಗಿ ಅಗ್ನಿಯು ತನ್ನ ಶಾಖದಿಂದ ಶಿವನನ್ನು ಸಂಭೋಗದಿಂದ ನಿವೃತ್ತನಾಗುವಂತೆ ಮಾಡಿ ಶಾಪಭೀತಿಯಿಂದ ನಮಸ್ಕಾರ ಮಾಡಿ ದೇವತೆಗಳ ಕೆಲಸವನ್ನು ಬಿನ್ನವಿಸಿದನು.

81. ವೇಗ ಹೆಚ್ಚಾಗಿದ್ದುದರಿಂದ ಶಿವನು ತನ್ನ ವೀರ್ಯವನ್ನು ಅಗ್ನಿಯಲ್ಲೇ ಸುರಿಸಿದನು. ಆ ವೀರ್ಯವನ್ನು ಧರಿಸಲು ಅಗ್ನಿಯೂ ಶಕ್ತನಾಗಿರಲಿಲ್ಲ, ಪಾರ್ವತಿಯೂ ಸಮರ್ಥಳಾಗಿರಲಿಲ್ಲ.

82. ನಿನ್ನಿಂದ ನನಗೆ ಮಗನು ಹುಟ್ಟಲಿಲ್ಲ ಎಂದು ನಿರಾಶೆ ಮತ್ತು ಕೋಪದಿಂದ ಪಾರ್ವತೀ ದೇವಿಯು ಹೇಳಿದಾಗ ಅವಳಿಗೆ ಶಿವನಿಂತೆಂದನು.

83. ""ವಿಘ್ನೇಶ್ವರನ ಪೂಜೆಯನ್ನು ಮಾಡದೆ ಇದ್ದುದರಿಂದ ನಿನಗೆ ವಿಘ್ನ ಉಂಟಾಯಿತು. ಆದ್ದರಿಂದ ಅವನನ್ನೀಗ ಪೂಜಿಸು.  ಅದರಿಂದ ನಮ್ಮ ಮಗನು ಬೇಗನೆ ಅಗ್ನಿಯಲ್ಲೇ ಹುಟ್ಟುವನು."

84. ಹೀಗೆ ಶಿವನು ಹೇಳಿದಾಗ ದೇವಿಯು ವಿಘ್ನೇಶ್ವರನ ಪೂಜೆಯನ್ನು ಮಾಡಿದಳು. ಆಗ ಅಗ್ನಿಯು ಶಿವನ ವೀರ್ಯದಿಂದ ಗರ್ಭವನ್ನು ಧರಿಸಿದನು.

85. ಆ ರೀತಿ ಶಂಭುವಿನ ತೇಜಸ್ಸನ್ನು ಧರಿಸಿದ್ದ ಅಗ್ನಿಯು ಆ ದಿವಸಗಳಲ್ಲಿ ಅವನೊಳಗೆ ಸೂರ್ಯನು ಪ್ರವೇಶಿಸಿದಂತೆ ಪ್ರಕಾಶಿಸುತ್ತಿದ್ದನು.

---

ಗತ್ವಾ ಚ ಸ್ವೋಷ್ಮಣಾ ಸೋಽಗ್ನಿರ್ನಿವಾರ್ಯ ಸುರತಾಚ್ಛಿವಮ್ ।
ಶಾಪಭೀತ್ಯಾ ಪ್ರಣಮ್ಯಾಸ್ಮೈ ದೇವಕಾರ್ಯಂ ನ್ಯವೇದಯತ್ ॥ ೮೦
ಶರ್ವೋಽಪ್ಯಾರೂಢವೇಗೋಽಗ್ನೌ ತಸ್ಮಿನ್ ವೀರ್ಯಂ ಸ್ವಮಾದಧೇ ।
ತದ್ಧಿ ಧಾರಯಿತುಂ ಶಕ್ತೋ ನ ವಹ್ನಿರ್ನಾಂಬಿಕಾಪಿ ವಾ ॥ ೮೧
ನ ಮಯಾ ತನಯಸ್ತ್ವತ್ತಃ ಸಂಪ್ರಾಪ್ತ ಇತಿ ವಾದಿನೀಮ್ ।
ಖೇದಕೋಪಾಕುಲಾಂ ದೇವೀಮಿತ್ಯುವಾಚ ತತೋ ಹರಃ ॥ ೮೨
ವಿಘ್ನೋಽತ್ರ ತವ ಜಾತೋಽಯಂ ವಿನಾ ವಿಘ್ನೇಶಪೂಜನಮ್ ।
ತದರ್ಚಯೈನಂ ಯೇನಾಶು ವಹ್ನೌ ನೋ ಜನಿತಾ ಸುತಃ ॥ ೮೩
ಇತ್ಯುಕ್ತಾ ಶಂಭುನಾ ದೇವೀ ಚಕ್ರೇ ವಿಘ್ನೇಶ್ವರಾರ್ಚನಮ್ ।
ಅನಲೋಽಪಿ ಸಗರ್ಭೋಽಭೂತ್ತೇನ ವೀರ್ಯೇಣ ಧೂರ್ಜಟೇ ಃ ॥ ೮೪
ತತ್ತೇಜಃ ಶಾಂಭವಂ ಬಿಭ್ರತ್ ಸ ತದಾ ದಿವಸೇಷ್ವಪಿ ।
ಅಂತಃ ಪ್ರವಿಷ್ಟತಿಗ್ಮಾಂಶುರಿವ ಸಪ್ತಾರ್ಚಿರಾಬಭೌ ॥ ೮೫

86. ಅನಂತರ ಆ ತೇಜಸ್ಸನ್ನು ಧರಿಸಲಾರದೆ ಅವನು ಗಂಗೆಯಲ್ಲಿ ಅದನ್ನು ಬಿಟ್ಟನು. ಗಂಗೆಯು ಶಿವನ ಅಪ್ಪಣೆಯಂತೆ ಆ ತೇಜಸ್ಸನ್ನು ಮೇರುಪರ್ವತದ ಅಗ್ನಿಕುಂಡದಲ್ಲಿ ಹಾಕಿದಳು.

87. ಅಲ್ಲಿ ಶಿವನ ಗಣಗಳಿಂದ ಸಂರಕ್ಷಿತವಾದ ಆ ಗರ್ಭವು ಒಂದು ಸಾವಿರ ವರ್ಷಗಳಾದ ಮೇಲೆ ಹೊರಗೆ ಬಂದು ಆರು ಮುಖಗಳ ಕುಮಾರನಾಯಿತು.

88. ಆಮೇಲೆ ಗೌರಿಯಿಂದ ನಿಯೋಜಿತರಾದ ಆರು ಮಂದಿ ಕೃತ್ತಿಕೆಯರ ಎದೆಹಾಲನ್ನು ಆರು ಮುಖಗಳಿಂದ ಕುಡಿದು ಕೆಲವೇ ದಿನಗಳಲ್ಲಿ ಆ ಕುಮಾರನು ಬೆಳೆದನು.

89. ಈ ಮಧ್ಯದಲ್ಲಿ ತಾರಕಾಸುರನಿಂದ ಸೋತುಹೋದ ದೇವರಾಜನಾದ ಇಂದ್ರನು ಯುದ್ಧವನ್ನು ಕೈಬಿಟ್ಟು ದುರ್ಗಮವಾದ ಮೇರುಪರ್ವತದ ಶಿಖರಗಳನ್ನು ಆಶ್ರಯಿಸಿದನು.

90. ದೇವತೆಗಳು ಋಷಿಗಳೊಡನೆ (ಬಂದು) ಷಣ್ಮುಖನಿಗೆ ಶರಣಾಗತರಾದರು. ದೇವತೆಗಳನ್ನು ಕುಮಾರನು ರಕ್ಷಿಸುತ್ತಾ ತನ್ನ ಸುತ್ತಮುತ್ತ ಅವರನ್ನು ಇಟ್ಟುಕೊಂಡನು.

91. ಅದನ್ನು ತಿಳಿದು ರಾಜ್ಯವು ಕಳೆದು ಹೋಯಿತು ಎಂದು ಅರಿತುಕೊಂಡು ಇಂದ್ರನು ಕಳವಳಪಟ್ಟನು. ಮತ್ಸರದಿಂದ ಹೋಗಿ ಅವನು ಕುಮಾರನೊಡನೆ ಕಾಳಗಕ್ಕಿಳಿದನು.

---

ಉದ್ವಾಮ ಚ ಗಂಗಾಯಾಂ ತತ್ತೇಜಃ ಸೋಽಥ ದುರ್ಧರಮ್ ।
ಗಂಗೈನಮತ್ಯಜನ್ಮೇರೌ ವಹ್ನಿಕುಂಡೇ ಹರಾಜ್ಞಯಾ ॥ ೮೬

ತತ್ರ ಸಂರಕ್ಷ್ಯಮಾಣಃ ಸನ್ ಸ ಗರ್ಭಃ ಶಾಂಭವೈರ್ಗಣೈಃ ।
ನಿಃಸೃತ್ಯಾಬ್ದಸಹಸ್ರೇಣ ಕುಮಾರೋಽಭೂತ್ ಷಡಾನನಃ ॥ ೮೭

ತತೋ ಗೌರೀನಿಯುಕ್ತಾನಾಂ ಕೃತ್ತಿಕಾನಾಂ ಪಯೋಧರಾನ್ ।
ಷಣ್ಣಾಂ ಷಡ್ಭಿರ್ಮುಖೈಃ ಪೀತ್ವಾ ಸ್ವಲ್ಪೈಃ ಸ ವವೃಧೇ ದಿನೈಃ ॥ ೮೮

ಅತ್ರಾಂತರೇ ದೇವರಾಜಸ್ತಾರಕಾಸುರನಿರ್ಜಿತಃ ।
ಶಿಶ್ರಿಯೇ ಮೇರುಶೃಂಗಾಣಿ ದುರ್ಗಾಣ್ಯುಜ್ಝಿತಸಂಗರಃ ॥ ೮೯

ದೇವಾಶ್ಚ ಸಾಕಮೃಷಿಭಿಃ ಷಣ್ಮುಖಂ ಶರಣಂ ಯಯುಃ ।
ಷಣ್ಮುಖೋಽಪಿ ಸ ತಾನ್ ರಕ್ಷನ್ನಾಸೀತ್ ತೈಃ ಪರಿವಾರಿತಃ ॥ ೯೦

ತದ್ ಬುದ್ಧ್ವಾ ಹಾರಿತಂ ಮತ್ವಾ ರಾಜ್ಯಮಿಂದ್ರೋಽಥ ಚುಕ್ಷುಭೇ ।
ಯೋಧಯಾಮಾಸ ಗತ್ವಾ ಚ ಕುಮಾರಂ ಸ ಸಮತ್ಸರಃ ॥ ೯೧

92. ಇಂದ್ರನ ವಜ್ರವು ಕುಮಾರನ ಶರೀರಕ್ಕೆ ತಗುಲಿದಾಗ ಅದರಿಂದ ಅಪ್ರತಿಮ ತೇಜಸ್ಸಿನಿಂದ ಕೂಡಿದ ಶಾಖ, ವಿಶಾಖ ಎಂಬ ಇಬ್ಬರು ಮಕ್ಕಳು ಹುಟ್ಟಿದರು.

93. ಪುತ್ರಸಹಿತನಾಗಿ ಕುಮಾರನು ಇಂದ್ರನ ಪರಾಕ್ರಮವನ್ನು ಅಡಗಿಸಿದನು. ಆಗ ಶಿವನು ತಾನೇ ಅಲ್ಲಿಗೆ ಬಂದು ಮಗನನ್ನು ಯುದ್ಧಬೇಡವೆಂದು ತಡೆದನು.

94. "ತಾರಕಾಸುರನನ್ನು ಕೊಲ್ಲಲು ಮತ್ತು ಇಂದ್ರನ ರಾಜ್ಯವನ್ನು ಕಾಪಾಡಲು ನೀನು ಹುಟ್ಟಿರುವೆ. ಆದ್ದರಿಂದ ನಿನ್ನ ಕಾರ್ಯವನ್ನು ನೀನು ಮಾಡು" ಎಂದು ಶಿವನು ಕುಮಾರನಿಗೆ ಆದೇಶವನ್ನಿತ್ತನು.

95. ಆಗ ವೃತ್ರಶತ್ರುವೆನಿಸಿದ ಇಂದ್ರನು ಸಂತುಷ್ಟನಾಗಿ ನಮಸ್ಕರಿಸಿ ಆ ಕ್ಷಣದಲ್ಲೇ ಕುಮಾರನ ಸೇನಾಧಿಪತ್ಯದ ಅಭಿಷೇಕವನ್ನು ಆರಂಭಿಸಿದನು.

96. ಅಭಿಷೇಕಕ್ಕಾಗಿ ಇಂದ್ರನು ತಾನೇ ಕಲಶವನ್ನೆತ್ತಿದನು. ಆದರೆ ಆಗ ಅವನ ಕೈ ಅಲುಗಾಡದೆ ನಿಂತುಬಿಟ್ಟಿತು. ಅದರಿಂದ ಇಂದ್ರನಿಗೆ ದುಃಖವಾಯಿತು. ಆಗ ಶಿವನು ಅವನಿಗೆ ಹೀಗೆ ಹೇಳಿದನು.

97. "ಸೇನಾನಿಯನ್ನು ಅಪೇಕ್ಷಿಸಿದ ನೀನು ಗಜಮುಖದ ವಿಘ್ನೇಶ್ವರನನ್ನು ಪೂಜಿಸಲಿಲ್ಲ. ಅದರಿಂದ ನಿನಗೆ ಈ ವಿಘ್ನ ಉಂಟಾಗಿದೆ. ಈಗ ಅವನನ್ನು ಪೂಜಿಸು."

---

ತದ್ವಜ್ರಾಭಿಹತಸ್ಯಾಂಗಾತ್ ಷಣ್ಮುಖಸ್ಯೋದ್ಬಭೂವತುಃ ।
ಪುತ್ರೌ ಶಾಖವಿಶಾಖಾಖ್ಯೌ ಉಭಾವತುಲತೇಜಸೌ ॥ ೯೨
ಸಪುತ್ರಂ ಚ ತಮಾಕ್ರಾಂತಶತಕ್ರತುಪರಾಕ್ರಮಮ್ ।
ಉಪೇತ್ಯ ತನಯಂ ಶರ್ವಃ ಸ್ವಯಂ ಯುದ್ಧಾದವಾರಯತ್ ॥ ೯೩
ಜಾತೋಽಸಿ ತಾರಕಂ ಹಂತುಂ ರಾಜ್ಯಂ ಚೇಂದ್ರಸ್ಯ ರಕ್ಷಿತುಮ್ ।
ತತ್ಕುರುಷ್ವ ನಿಜಂ ಕಾರ್ಯಮಿತಿ ಚೈನಂ ಶಶಾಸ ಸಃ ॥ ೯೪
ತತಃ ಪ್ರಣಮ್ಯ ಪ್ರೀತೇನ ತತ್ಕ್ಷಣಂ ವೃತ್ರವೈರಿಣಾ ।
ಸೈನಾಪತ್ಯಾಭಿಷೇಕೋಽಸ್ಯ ಕುಮಾರಸ್ಯೋಪಚಕ್ರಮೇ ॥ ೯೫
ಸ್ವಯಮುತ್ಕ್ಷಿಪ್ತಕಲಶಃ ಸ್ತಬ್ಧಬಾಹುರಭೂದ್ ಯದಾ ।
ತತಃ ಶಕ್ರಃ ಶುಚಮಗಾದಥೈನಮವದಚ್ಛಿವಃ ॥ ೯೬
ನ ಪೂಜಿತೋ ಗಜಮುಖಃ ಸೇನಾನ್ಯಂ ವಾಂಛತಾ ತ್ವಯಾ ।
ತೇನೈಷ ವಿಘ್ನೋ ಜಾತಸ್ತೇ ತತ್ಕುರುಷ್ವ ತದರ್ಚನಮ್ ॥ ೯೭

98. ಅದನ್ನು ಕೇಳಿ ಹಾಗೆಯೇ ಮಾಡಿದ ಇಂದ್ರನ ಕೈ ಮುಕ್ತವಾಯಿತು. ಅವನು ಸೇನಾನಿಯ ಅಭಿಷೇಕದ ಉತ್ಸವವನ್ನು ಚೆನ್ನಾಗಿ ನೆರವೇರಿಸಿದನು.

99. ಆಮೇಲೆ ಬಹು ಬೇಗ ಸೇನಾನಿಯು ತಾರಕಾಸುರನನ್ನು ಕೊಂದನು. ಕಾರ್ಯಸಿದ್ಧಿಯನ್ನು ಪಡೆದ ದೇವತೆಗಳೂ ಮಗನನ್ನು ಪಡೆದ ಗೌರಿಯೂ ಆನಂದಪಟ್ಟರು.

100. ದೇವಿ, ಹೀಗೆ ದೇವತೆಗಳೂ ಗಣಪತಿಯನ್ನು ಪೂಜಿಸದಿದ್ದರೆ ಕಾರ್ಯಸಿದ್ಧಿಗಳು ಉಂಟಾಗುವುದಿಲ್ಲ. ಆದ್ದರಿಂದ ವರವು ಬೇಕೆನ್ನುವವ ನೀನೂ ಅವನನ್ನು ಪೂಜಿಸಬೇಕು."

101. ಆರ್ಯಪುತ್ರ, ಗೆಳತಿಯರು ಹೀಗೆ ನನಗೆ ಹೇಳಿದ ಮೇಲೆ ನಾನು ಉದ್ಯಾನದ ಒಂದು ಕಡೆ ಇದ್ದ ವಿಘ್ನರಾಜನನ್ನು ಪೂಜಿಸಿದೆನು.

102. ಪೂಜೆಯು ಮುಗಿಯುತ್ತಿದ್ದಂತೆಯೇ ಅಕಸ್ಮಾತ್ತಾಗಿ ಬಾನಿನ ಅಂಗಳದಲ್ಲಿ ತಮ್ಮ ಸಿದ್ಧಿಗಳ ಪ್ರಭಾವದಿಂದ ಮೇಲಕ್ಕೆ ಹಾರಿ ವಿಹಾರ ಮಾಡುತ್ತಿದ್ದ ನನ್ನ ಗೆಳತಿಯರನ್ನು ನೋಡಿದೆನು.

103. ಅದನ್ನು ನೋಡಿ ಕುತೂಹಲದಿಂದ ಅವರನ್ನು ಕೂಗಿಕರೆದು ಬಾನಿನಿಂದ ಇಳಿಸಿ ನಾನು ಅವರ ಸಿದ್ಧಿಯ ಸ್ವರೂಪದ ಬಗೆಗೆ ಕೇಳಿದೆನು. ಕೂಡಲೇ ಅವರು ಹೀಗೆ ಹೇಳಿದರು.

---

ತಚ್ಛ್ರುತ್ವಾ ತತ್ತಥಾ ಕೃತ್ವಾ ಮುಕ್ತಬಾಹುಃ ಶಚೀಪತಿಃ ।
ಅಭಿಷೇಕೋತ್ಸವಂ ಸಮ್ಯಕ್ ಸೇನಾನ್ಯೇ ನಿರವರ್ತಯತ್ ॥ ೯೮
ತತೋ ಜಘಾನ ನ ಚಿರಾತ್ ಸೇನಾನೀಸ್ತಾರಕಾಸುರಮ್ ।
ನನಂದುಃ ಸಿದ್ಧಕಾರ್ಯಾಶ್ಚ ದೇವಾ ಗೌರೀ ಚ ಪುತ್ರಿಣೀ ॥ ೯೯
ತದೇವಂ ದೇವಿ ದೇವಾನಾಮಪಿ ಸಂತಿ ನ ಸಿದ್ಧಯಃ ।
ಹೇರಂಬೇಽನರ್ಚಿತೇ ತಸ್ಮಾತ್ ಪೂಜಯೈನಂ ವರಾರ್ಥಿನೀ ॥ ೧೦೦
ಇತ್ಯುಕ್ತಾಹಂ ವಯಸ್ಯಾಭಿರುದ್ಯಾನ್ಯೈಕಾಂತವರ್ತಿನಮ್ ।
ಆರ್ಯಪುತ್ರ ಪುರಾ ಗತ್ವಾ ವಿಘ್ನರಾಜಮಪೂಜಯಮ್ ॥ ೧೦೧
ಪೂಜಾವಸಾನೇ ಚಾಪಶ್ಯಮಕಸ್ಮಾದ್ ಗಗನಾಂಗಣೇ ।
ಉತ್ಪತ್ಯ ವಿಹರಂತೀಸ್ತಾಃ ಸ್ವಸಖೀರ್ನಿಜಸಿದ್ಧಿತಃ ॥ ೧೦೨
ತದ್‌ದೃಷ್ಟ್ವಾ ಕೌತುಕಾದ್ ವ್ಯೋಮ್ನಃ ಸಮಾಹೂಯಾವತಾರ್ಯ ಚ ।
ಮಯಾ ಸಿದ್ಧಿಸ್ವರೂಪಂ ತಾಃ ಪೃಷ್ಟಾಃ ಸದ್ಯೋಽಬ್ರುವನ್ನಿದಮ್ ॥ ೧೦೩

104. "'ಇವು ಮನುಷ್ಯ ಮಾಂಸವನ್ನು ತಿಂದುದರಿಂದ ಉಂಟಾದ ಡಾಕಿನೀಮಂತ್ರಸಿದ್ಧಿಗಳು. ಕಾಲರಾತ್ರಿ ಎಂದು ಪ್ರಸಿದ್ಧಳಾದ ಬ್ರಾಹ್ಮಣಿಯು ನಮ್ಮ ಗುರು."

105. ಹೀಗೆ ಗೆಳತಿಯರು ಹೇಳಿದಾಗ ಆಕಾಶದಲ್ಲಿ ಸಂಚರಿಸುವ ಸಿದ್ಧಿಗೆ ಆಶೆಪಟ್ಟ ನಾನು ಮನುಷ್ಯಮಾಂಸವನ್ನು ತಿನ್ನಲು ಹೆದರಿ ಒಂದು ಕ್ಷಣಕಾಲ ಹಿಂಜರಿದೆನು.

106. ಆಮೇಲೆ ಆ ಸಿದ್ಧಿಗಾಗಿ ಆಸೆಪಟ್ಟ ನಾನು ಆ ಸಖಿಯರನ್ನು ಕುರಿತು "ನನಗೂ ಈ ಉಪದೇಶವನ್ನು ನೀವು ಕೊಡಿಸಿರಿ" ಎಂದು ಹೇಳಿದೆನು.

107. ಆಗ ನನ್ನ ಕೋರಿಕೆಯ ಪ್ರಕಾರ ಅವರು ಆ ಕ್ಷಣದಲ್ಲೇ ಹೋಗಿ ವಿಕಟಾಕಾರದ ಕಾಳರಾತ್ರಿ ಎಂಬವಳನ್ನು ಕರೆದುಕೊಂಡು ಬಂದರು.

108. ಆ ಕಾಳರಾತ್ರಿಯ ಹುಬ್ಬುಗಳು ಕೂಡಿಕೊಂಡಿದ್ದುವು, ಕಣ್ಣುಗಳು ಚಂಚಲವಾಗಿದ್ದುವು. ಅವಳ ಮೂಗು ಬಗ್ಗಿದ್ದು ಅದರುತ್ತಿತ್ತು, ಕೆನ್ನೆಗಳು ಉಬ್ಬಿದ್ದುವು ಮತ್ತು ತುಟಿಗಳು ಭಯಂಕರವಾಗಿದ್ದುವು. ಉಬ್ಬಿದ ಹಲ್ಲುಗಳು ಮತ್ತು ಉದ್ದವಾದ ಕುತ್ತಿಗೆ ಅವಳಿಗಿದ್ದುವು.

109. ಅವಳ ಸ್ತನಗಳು ನೇತಾಡುತ್ತಿದ್ದುವು, ಹೊಟ್ಟೆ ದೊಡ್ಡದಾಗಿತ್ತು. ಅವಳ ಪಾದರಕ್ಷೆಗಳು ಸೀಳಿ ಹೋಗಿ ಹರಡಿಕೊಂಡಿದ್ದುವು. ಬ್ರಹ್ಮನು ಕುರೂಪದ ಸೃಷ್ಟಿಯಲ್ಲೂ ನೈಪುಣ್ಯವನ್ನು ಹೊಂದಿದ್ದಾನೆಂದು ಅವಳು ತೋರಿಸುತ್ತಿರುವಂತೆ ಇದ್ದಳು.

---

ಇಮಾ ನೃಮಾಂಸಾಶನಜಾ ಡಾಕಿನೀಮಂತ್ರಸಿದ್ಧಯಃ ।
ಕಾಲರಾತ್ರಿರಿತಿ ಖ್ಯಾತಾ ಬ್ರಾಹ್ಮಣೀ ಗುರುರತ್ರ ನಃ ॥ ೧೦೪

ಏವಂ ಸಖೀಭಿರುಕ್ತಾಹಂ ಖೇಚರೀಸಿದ್ಧಿಲೋಲುಪಾ ।
ನೃಮಾಂಸಾಶನಭೀತಾ ಚ ಕ್ಷಣಮಾಸಂ ಸಸಂಶಯಾ ॥ ೧೦೫

ಅಥ ತತ್ಸಿದ್ಧಿಲುಬ್ಧತ್ವಾದವೋಚಂ ತಾಃ ಸಖೀರಹಮ್ ।
ಉಪದೇಶೋ ಮಮಾಪ್ಯೇಷ ಯುಷ್ಮಾಭಿರ್ದಾಪ್ಯತಾಮಿತಿ ॥ ೧೦೬

ತತೋ ಮದಭ್ಯರ್ಥನಯಾ ಗತ್ವಾ ತತ್ಕ್ಷಣಮೇವ ತಾಃ ।
ಆನಿನ್ಯು ಕಾಲರಾತ್ರಿಂ ತಾಂ ತತ್ರೈವ ವಿಕಟಾಕೃತಿಮ್ ॥ ೧೦೭

ಮಿಲದ್ಭ್ರುವಂ ಕಾತರಾಕ್ಷೀಂ ನ್ಯಂಚಚ್ಚಿಪಿಟನಾಸಿಕಾಮ್ ।
ಸ್ಥೂಲಗಂಡೀಂ ಕರಾಲೋಷ್ಠೀಂ ದಂತುರಾಂ ದೀರ್ಘಕಂದರಾಮ್ ॥
೧೦೮

ಲಂಬಸ್ತನೀಮುದರಿಣೀಂ ವಿದೀರ್ಣೋತ್ಫುಲ್ಲಪಾದುಕಾಮ್ ।
ಧಾತ್ರಾ ವೈರೂಪ್ಯನಿರ್ಮಾಣವೈದಗ್ಧೀಂ ದರ್ಶಿತಾಮಿವ ॥ ೧೦೯

110. ಅವಳಿಗೆ ನಮಸ್ಕರಿಸಿ ನಾನು ಸ್ನಾನ ಮಾಡಿದ ಮೇಲೆ ವಿಘ್ನೇಶ್ವರನ ಪೂಜೆಯನ್ನು ಮಾಡಿಸಿ, ಬೆತ್ತಲೆ ಮಾಡಿ ಮಂಡಲದಲ್ಲಿ ಭಯಂಕರವಾದ ಭೈರವಪೂಜೆಯನ್ನು ನನ್ನಿಂದ ಮಾಡಿಸಿದಳು.

111. ಅಭಿಷೇಕವಾದ ಮೇಲೆ ಅವಳು ನನಗೆ ಆಯಾ ಮಂತ್ರಗಳನ್ನು ಕಲಿಸಿದಳು. ದೇವರ ಅರ್ಚನೆಯಲ್ಲಿ ಬಲಿಕೊಟ್ಟಿದ್ದ ಮನುಷ್ಯನ ಮಾಂಸವನ್ನು ನನಗೆ ತಿನ್ನಲು ಕೊಟ್ಟಳು.

112. ಮಂತ್ರಸಮೂಹವನ್ನೆಲ್ಲ ಕಲಿತು ಮಾನವಮಾಂಸವನ್ನು ನಾನು ತಿಂದ ಕೂಡಲೇ ಬಟ್ಟೆ ಇಲ್ಲದ ಸ್ಥಿತಿಯಲ್ಲೇ ಸಖಿಯರೊಡನೆ ಆಕಾಶದಲ್ಲಿ ಹಾರುತ್ತಿದ್ದೆನು.

113. ದೇವ, ಅಲ್ಲಿ ನಾನು ಆಟಗಳನ್ನಾಡಿ ಗುರುವಿನ ಆಜ್ಞೆಯಂತೆ ಆಕಾಶದಿಂದ ಇಳಿದು ನನ್ನ ಕನ್ಯಕಾಂತಃಪುರಕ್ಕೆ ತೆರಳಿದೆನು.

114. ಹೀಗೆ ಚಿಕ್ಕಂದಿನಲ್ಲೇ ನಾನು ಡಾಕಿನೀಚಕ್ರವರ್ತಿನಿ ಆಗಿಬಿಟ್ಟೆನು. ನಾವು ಒಟ್ಟಿಗೆ ಅನೇಕ ಮನುಷ್ಯರನ್ನು ತಿಂದುಹಾಕಿದ್ದೇವೆ.

## ಕಾಳರಾತ್ರಿಯ ಕಥೆ

115. ಮಹಾರಾಜ, ಈ ಕಥೆಯ ಮಧ್ಯದಲ್ಲಿ ಇನ್ನೊಂದು ಕಥೆಯನ್ನು ಕೇಳು. ಆ ಕಾಳರಾತ್ರಿಗೆ ವಿಷ್ಣುಸ್ವಾಮಿ ಎಂಬ ಗಂಡನಿದ್ದನು.

---

ಸಾ ಮಾಂ ಪಾದಾನತಾಂ ಸ್ನಾತಾಂ ಕೃತವಿಘ್ನೇಶ್ವರಾರ್ಚನಾಮ್ ।
ವಿವಸ್ತ್ರಾಂ ಮಂಡಲೇ ಭೀಮಾಂ ಭೈರವಾರ್ಚಾಮಕಾರಯತ್ ॥ ೧೧೦
ಅಭಿಷಿಚ್ಯ ಚ ಸಾ ಮಹ್ಯಂ ತಾಂಸ್ತಾನ್ ಮಂತ್ರಾನ್ ನಿಜಾನ್ ದದೌ ।
ಭಕ್ಷಣಾಯ ನೃಮಾಂಸಂ ಚ ದೇವಾರ್ಚನಬಲೀಕೃತಮ್ ॥ ೧೧೧
ಆತ್ತಮಂತ್ರಗಣಾ ಭುಕ್ತಮಹಾಮಾಂಸಾ ಚ ತತ್ಕ್ಷಣಮ್ ।
ನಿರಂಬರೈವೋತ್ಪತಿತಾ ಸಸಖೀಕಾಹಮಂಬರಮ್ ॥ ೧೧೨
ಕೃತಕ್ರೀಡಾವತೀರ್ಯಾಥ ಗಗನಾದ್ ಗುರ್ವನುಜ್ಞಯಾ ।
ಗತಾಭೂವಮಹಂ ದೇವ ಕನ್ಯಕಾಂತಃಪುರಂ ನಿಜಮ್ ॥ ೧೧೩
ಏವಂ ಬಾಲ್ಯೇऽಪಿ ಜಾತಾಹಂ ಡಾಕಿನೀಚಕ್ರವರ್ತಿನೀ ।
ಭಕ್ಷಿತಾಸ್ತತ್ರ ಚಾಸ್ಮಾಭಿಃ ಸಮೇತ್ಯ ಬಹವೋ ನರಾಃ ॥ ೧೧೪
ಅಸ್ಮಿನ್ ಕಥಾಂತರೇ ಚೈತಾಂ ಮಹಾರಾಜ ಕಥಾಂ ಶೃಣು ।
ವಿಷ್ಣುಸ್ವಾಮೀತ್ಯಭೂತ್ತಸ್ಯಾಃ ಕಾಲರಾತ್ರ್ಯಾಃ ಪತಿರ್ದ್ವಿಜಃ ॥ ೧೧೫

116. ಅವನು ವೇದವಿದ್ಯೆಯಲ್ಲಿ ವಿಶಾರದನಾಗಿದ್ದು ಆ ದೇಶದಲ್ಲಿ ಒಬ್ಬ ಉಪಾಧ್ಯಾಯನಾಗಿ ನಾನಾ ದಿಕ್ಕುಗಳಿಂದ ಬರುತ್ತಿದ್ದ ಶಿಷ್ಯರಿಗೆ ಬೋಧಿಸುತ್ತಿದ್ದನು.

117. ಅವನ ಶಿಷ್ಯರ ಮಧ್ಯದಲ್ಲಿ ಸುಂದರಕ ಎಂಬ ಹೆಸರಿನ ಯುವಕನಿದ್ದನು. ಆ ಶಿಷ್ಯನ ಉತ್ತಮ ನಡತೆಯಿಂದ ಅವನ ದೇಹಗುಣಗಳು ಇನ್ನೂ ಹೆಚ್ಚು ಶೋಭಾಯಮಾನವಾಗಿದ್ದವು.

118. ಒಮ್ಮೆ ಗಂಡನು ಎಲ್ಲೋ ಹೊರಗೆ ಹೋಗಿದ್ದಾಗ ಉಪಾಧ್ಯಾಯಪತ್ನಿ ಕಾಳರಾತ್ರಿಯು ಕಾಮಪೀಡಿತಳಾಗಿ ಏಕಾಂತದಲ್ಲಿ ಆ ಸುಂದರಕನನ್ನು ಬಯಸಿದಳು.

119. ಕುರೂಪಿಗಳನ್ನು ನಗೆಗೆ ಈಡುಮಾಡಿ ಮನ್ಮಥನು ಆಟವಾಡುತ್ತಾನೆಂಬುದು ನಿಶ್ಚಿತ. ಏಕೆಂದರೆ ಆ ಕಾಳರಾತ್ರಿಯು ತನ್ನ ರೂಪವನ್ನು ನೋಡಿಕೊಳ್ಳದೆ ಸುಂದರಕನಲ್ಲಿ ಆಸೆಯನ್ನು ತೋರಿಸಿದಳು.

120. ಅವಳು ಎಷ್ಟು ಬೇಡಿಕೊಂಡರೂ ಅವನು ಅಂತಹ ಅಪರಾಧವನ್ನು ಮಾಡಲು ಎಳ್ಳಷ್ಟೂ ಒಪ್ಪಲಿಲ್ಲ. ಸ್ತ್ರೀಯರು ಹೇಗಾದರೂ ವರ್ತಿಸಲಿ, ಸತ್ಪುರುಷರ ಮನಸ್ಸು ನಿಶ್ಚಲವಾಗಿರುವುದಲ್ಲವೆ ?

121. ಅವನು ಹೊರಟು ಹೋದಾಗ ಕಾಳರಾತ್ರಿಯು ಕೋಪದಿಂದ ತಾನೇ ತನ್ನ ಉಗುರುಗಳಿಂದಲೂ ಹಲ್ಲುಗಳಿಂದಲೂ ತನ್ನ ಶರೀರಕ್ಕೆ ಗಾಯ ಮಾಡಿ ಸೀಳಿಕೊಂಡಳು.

---

ಸ ಚ ತಸ್ಮಿನ್ನುಪಾಧ್ಯಾಯೋ ದೇಶೇ ನಾನಾದಿಗಾಗತಾನ್ ।
ಶಿಷ್ಯಾನಧ್ಯಾಪಯಾಮಾಸ ವೇದವಿದ್ಯಾವಿಶಾರದಃ ॥ ೧೧೬
ಶಿಷ್ಯಮಧ್ಯೇ ಚ ತಸ್ಯೈಕೋ ನಾಮ್ನಾ ಸುಂದರಕೋ ಯುವಾ ।
ಬಭೂವ ಶಿಷ್ಯಃ ಶೀಲೇನ ವಿರಾಜಿತವಪುರ್ಗುಣಃ ॥ ೧೧೭
ತಮುಪಾಧ್ಯಾಯಪತ್ನೀ ಸಾ ಕಾಲರಾತ್ರಿಃ ಕದಾಚನ ।
ವವ್ರೇ ರಹಸಿ ಕಾಮಾರ್ತಾ ಪತ್ಯೌ ಕ್ವಾಪಿ ಬಹಿರ್ಗತೇ ॥ ೧೧೮
ನೂನಂ ವಿರೂಪೈರಧಿಕಂ ಹಾಸ್ಯೈಃ ಕ್ರೀಡತಿ ಸ್ಮರಃ ।
ಯತ್ ಸಾನವೇಕ್ಷ್ಯ ಸ್ವಂ ರೂಪಂ ಚಕ್ರೇ ಸುಂದರಕಸ್ಪೃಹಾಮ್ ॥ ೧೧೯
ಸ ತು ಸರ್ವಾತ್ಮನಾ ನೈಚ್ಛದರ್ಥ್ಯಮಾನೋಽಪಿ ವಿಪ್ಲವಮ್ ।
ಸ್ತ್ರೀಯೋ ಯಥಾ ವಿಚೇಷ್ಟಂತಾಂ ನಿಷ್ಕಂಪಂ ತು ಸತಾಂ ಮನಃ ॥ ೧೨೦
ತತಃ ಸಾಪಸೃತೇ ತಸ್ಮಿನ್ ಕಾಲರಾತ್ರಿಃ ಕ್ರುಧಾ ತದಾ ।
ಸ್ವಮಂಗಂ ಪಾಟಯಾಮಾಸ ಸ್ವಯಂ ದಂತನಖಕ್ಷತೈಃ ॥ ೧೨೧

122. ಬಟ್ಟೆಗಳನ್ನು ಹಿಡಿದುಕೊಂಡು, ಕೂದಲನ್ನು ಕೆದರಿಕೊಂಡು ಅವಳು ಅಳುತ್ತಾ ಇದ್ದಳು. ಅಷ್ಟರಲ್ಲಿ ಉಪಾಧ್ಯಾಯ ವಿಷ್ಣುಸ್ವಾಮಿ ಮನೆಯೊಳಕ್ಕೆ ಬಂದನು.

123. ಅವನು ಒಳಗೆ ಬರುತ್ತಿದ್ದಂತೆಯೇ ಅವಳು, "ಸ್ವಾಮಿ, ನೋಡಿ. ಬಲಾತ್ಕಾರದಿಂದ ನನ್ನನ್ನು ಹೊಂದಲು ಇಷ್ಟಪಟ್ಟ ಸುಂದರಕನು ನನಗೆ ಇಂಥ ಅವಸ್ಥೆಯನ್ನು ತಂದಿದ್ದಾನೆ" ಎಂದು ಹೇಳಿದಳು.

124. ಅದನ್ನು ಕೇಳಿ ಆ ಉಪಾಧ್ಯಾಯನು ಆ ಕ್ಷಣದಲ್ಲೇ ಸಿಟ್ಟಿನಿಂದ ಉರಿದನು. ಹೆಂಗಸರಲ್ಲಿ ಇಟ್ಟಿರುವ ನಂಬಿಕೆಯು ವಿದ್ವಾಂಸರ ವಿಮರ್ಶನಶಕ್ತಿಯನ್ನೂ ಅಪಹರಿಸಿಬಿಡುತ್ತದೆ.

125. ಸಾಯಂಕಾಲ ಸುಂದರಕನು ಮನೆಗೆ ಬಂದಾಗ ಶಿಷ್ಯಸಮೇತನಾಗಿ ಉಪಾಧ್ಯಾಯನು ಅವನನ್ನು ಅಟ್ಟಿಸಿಕೊಂಡು ಹೋಗಿ ಮುಷ್ಟಿಗಳಿಂದಲೂ ಕಾಲುಗಳಿಂದಲೂ ಕೋಲುಗಳಿಂದಲೂ ಹೊಡೆದನು.

126. ಏಟುಗಳಿಂದ (ಜ್ಞಾನ ಕಳೆದುಕೊಂಡು) ಚಲನೆಯಿಲ್ಲದಂತಾದ ಆ ಸುಂದರಕನನ್ನು ಶಿಷ್ಯರಿಗೆ ಹೇಳಿ ಯಾರ ಸಹಾಯವೂ ಇಲ್ಲದ ದಾರಿಯಲ್ಲಿ ಹಾಕಿಸಿದನು.

127. ಅನಂತರ ರಾತ್ರಿಯ ಗಾಳಿಯು ಬೀಸಿದಾಗ ಮೆಲ್ಲಮೆಲ್ಲನೆ ಸುಂದರಕನು (ಎಚ್ಚರಗೊಂಡು) ಆ ರೀತಿಯಲ್ಲಿ ದಂಡಿಸಲ್ಪಟ್ಟ ತನ್ನನ್ನು ತಾನೇ ನೋಡಿ ಹೀಗೆ ಚಿಂತಿಸಿದನು.

---

ವಿಕೀರ್ಣವಸ್ತ್ರಕೇಶಾಂತಾ ರುದತೀ ತಾವದಾಸ್ತ ಚ ।
ಗೃಹಂ ಯಾವದುಪಾಧ್ಯಾಯೋ ವಿಷ್ಣುಸ್ವಾಮೀ ವಿವೇಶ ಸಃ ॥ ೧೨೨
ಪ್ರವಿಷ್ಟಂ ತಮುವಾದೀಕ್ಷ್ಟ ಪಶ್ಯ ಸುಂದರಕೇಣ ಮೇ ।
ಅವಸ್ಥಾ ವಿಹಿತಾ ಸ್ವಾಮಿನ್ ಬಲಾತ್ಕಾರಾಭಿಲಾಷಿಣಾ ॥ ೧೨೩
ತಚ್ಛ್ರುತ್ವಾ ಸ ಉಪಾಧ್ಯಾಯಃ ಕ್ರುಧಾ ಜಜ್ವಾಲ ತತ್‌ಕ್ಷಣಮ್ ।
ಪ್ರತ್ಯಯಃ ಸ್ತ್ರೀಷು ಮುಷ್ಣಾತಿ ವಿಮರ್ಶಂ ವಿದುಷಾಮಪಿ ॥ ೧೨೪
ಸಾಯಂ ಚ ತಂ ಸುಂದರಕಂ ಗೃಹಪ್ರಾಪ್ತಂ ಪ್ರಧಾವ್ಯ ಸಃ ।
ಸಶಿಷ್ಯೋ ಮುಷ್ಟಿಭಿಃ ಪಾದೈರ್ಲಗುಡೈಶ್ಚಾಪ್ಯತಾಡಯತ್ ॥ ೧೨೫
ಕಿಂ ಚ ಪ್ರಹಾರನಿಶ್ಚೇಷ್ಟಂ ಶಿಷ್ಯಾನಾದಿಶ್ಯ ತಂ ಬಹಿಃ ।
ತ್ಯಾಜಯಾಮಾಸ ರಥ್ಯಾಯಾಂ ನಿರಪೇಕ್ಷತಯಾ ನಿಶಿ ॥ ೧೨೬
ತತಃ ಶನೈಃ ಸುಂದರಕಃ ಸ ನಿಶಾನಿಲವೀಜಿತಃ ।
ತಥಾಭಿಭೂತಮಾತ್ಮಾನಂ ಪಶ್ಯನ್ನೇವಮಚಿಂತಯತ್ ॥ ೧೨೭

128. "ಆಹಾ, ರಜಸ್ಸಿನಿಂದ ಸೋತ ಮನಸ್ಸುಳ್ಳ ಗಂಡಸರಿಗೆ ಹೆಂಗಸಿನ ಪ್ರಚೋದನೆಯು ಕೆರೆಗಳಿಗೆ ಬಿರುಗಾಳಿಯಂತೆ ಒಳಗೇ ತಳಮಳವನ್ನುಂಟುಮಾಡುತ್ತದೆ.

129. ವೃದ್ಧನೂ ವಿದ್ವಾಂಸನೂ ಆದ ಉಪಾಧ್ಯಾಯನೂ ಕೂಡ ಏನೂ ವಿಚಾರಿಸದೆ ಅತಿಕೋಪದಿಂದ ನನಗೆ ಸ್ತ್ರೀಪ್ರೇರಣೆಯಿಂದ ಹಿಂಸೆಯನ್ನು ಮಾಡಿದನು.

130. ಅಥವಾ ದೈವದ ಆಟದಲ್ಲಿ ಸೃಷ್ಟಿಯ ಆರಂಭದ ಕಾಲದಿಂದಲೂ ವಿದ್ವಾಂಸರಾದ ವಿಪ್ರರಿಗೂ ಮೋಕ್ಷದ ಬಾಗಿಲಿಗೆ ಅಡ್ಡವಾಗಿರುವ ಎರಡು ಅಗಳಿಗಳೆಂದರೆ ಕಾಮ, ಕ್ರೋಧಗಳು.

131. ದೇವದಾರುವನದಲ್ಲಿ ಬಹುಹಿಂದೆ ಮುನಿಗಳೂ ತಮ್ಮ ಹೆಂಡಂದಿರು ಜಾರಿರಬಹುದೆಂದು ಸಂಶಯಪಟ್ಟು ಶಿವನ ಮೇಲೆ ಕೋಪಮಾಡಿ ಕೊಂಡಿದ್ದರಲ್ಲವೆ ?

132. (ಭಗವಾನ್) ಶಂಕರನು ಕ್ಷಪಣಕನ ಆಕೃತಿಯನ್ನು ಧರಿಸಿಕೊಂಡು ಋಷಿಗಳಲ್ಲೂ ಅಶಾಂತಿಯಿದೆ ಎಂದು ಉಮೆಗೆ ತೋರಿಸಲು ಹಾಗೆ ಕಾಣಿಸಿಕೊಂಡನೆಂಬುದನ್ನು ಅವರು ಅರಿಯದಾದರು.

133. ಮೂರು ಲೋಕಗಳ ಕ್ಷೋಭೆಗೆ ಕಾರಣವಾದ ಶಾಪವನ್ನು ಕೊಟ್ಟು ಆಮೇಲೆ ಅವನು ಭಗವಾನ್ ಶಿವನೆಂದು ತಿಳಿದುಕೊಂಡು ಅವನಿಗೇ ಅವರೆಲ್ಲ ಶರಣಾಗತರಾದರು.

---

ಅಹೋ ಸ್ತ್ರೀಪ್ರೇರಣಾ ನಾಮ ರಜಸಾ ಲಂಘಿತಾತ್ಮನಾಮ್ ।
ಪುಂಸಾಂ ವಾತ್ಯೇವ ಸರಸಾಮಾಶಯಕ್ಷೋಭಕಾರಿಣೀ ॥ ೧೨೮
ಯೇನಾವಿಚಾರ್ಯ ವೃದ್ಧೋಽಪಿ ವಿದ್ವಾನಪಿ ಚ ತತ್ತಥಾ ।
ಅತಿ ಕ್ರೋಧಾದುಪಾಧ್ಯಾಯೋ ವಿರುದ್ಧಮಕರೋನ್ಮಯಿ ॥ ೧೨೯
ಅಥವಾ ದೈವಸಂಸಿದ್ಧಾವಾ ಸೃಷ್ಟೇರ್ವಿದುಷಾಮಪಿ ।
ಕಾಮಕ್ರೋಧೌ ಹಿ ವಿಪ್ರಾಣಾಂ ಮೋಕ್ಷದ್ವಾರಾರ್ಗಲಾವುಭೌ ॥ ೧೩೦
ತಥಾ ಹಿ ಕಿಂ ನ ಮುನಯಃ ಸ್ವದಾರಭ್ರಂಶಶಂಕಿನಃ ।
ದೇವದಾರುವನೇ ಪೂರ್ವಮಪಿ ಶರ್ವಾಯ ಚುಕ್ರುಧುಃ ॥ ೧೩೧
ನ ಚೈನಂ ವಿವಿದುರ್ದೇವಂ ಕೃತಕ್ಷಪಣಕಾಕೃತಿಮ್ ।
ಉಮಾಯೈ ದರ್ಶಯಿಷ್ಯಂತಮೃಷೀಣಾಮಪ್ಯಶಾಂತತಾಮ್ ॥ ೧೩೨
ದತ್ತಶಾಪಾಶ್ಚ ತೇ ಸದ್ಯಸ್ತ್ರಿಜಗತ್‌ಕ್ಷೋಭಕಾರಣಮ್ ।
ಬುದ್ಧ್ವಾ ತಂ ದೇವಮೀಶಾನಂ ತಮೇವ ಶರಣಂ ಯಯುಃ ॥ ೧೩೩

134. ಹೀಗೆ ಕಾಮ, ಕ್ರೋಧ ಮುಂತಾದ ಅರಿಷಡ್ವರ್ಗದಿಂದ ವಂಚಿತರಾದ ಮುನಿಗಳೂ ತಪ್ಪು ಮಾಡುವರೆಂದ ಮೇಲೆ ಶ್ರೋತ್ರಿಯ ಬ್ರಾಹ್ಮಣರದು ಯಾವ ಕಥೆ ?'

135. ಹೀಗೆಲ್ಲ ಯೋಚಿಸಿದ ಸುಂದರಕನು ರಾತ್ರಿಯಲ್ಲಿ ಕಳ್ಳರ ಭಯದಿಂದ ಸಮೀಪದಲ್ಲಿದ್ದ ನಿರ್ಜನವಾದ ಗೋವಾಟಭವನಕ್ಕೆ ಹೋದನು.

136. ಆ ಭವನದ ಒಂದು ಭಾಗದಲ್ಲಿ ಯಾರಿಗೂ ಕಾಣಿಸದಂತೆ ಕ್ಷಣಕಾಲ ಅವನು ಇದ್ದನು. ಅಷ್ಟು ಹೊತ್ತಿಗೆ ಅದೇ ಭವನಕ್ಕೆ ಕಾಳರಾತ್ರಿಯೂ ಬಂದಳು.

137. ವೀರರು ಹಿಡಿಯುವ ಚೂರಿಯನ್ನು ಅವಳು ಸೆಳೆದು ಹಿಡಿದಿದ್ದಳು. ಬಾಯಿನಿಂದ ಘೂತ್ಕರಿಸಿ ಬುಸುಗುಟ್ಟುತ್ತಾ ಉಲ್ಕೆಗಳನ್ನು ಉಗಿಯುತ್ತಿದ್ದಳು. ಡಾಕಿನಿಯರ ಗುಂಪು ಅವಳ ಜೊತೆಯಲ್ಲಿತ್ತು.

138. ಆ ರೀತಿಯಾಗಿದ್ದ ಕಾಳರಾತ್ರಿಯನ್ನು ಅಲ್ಲಿ ನೋಡಿ ಸುಂದರಕನು ಹೆದರಿ ರಕ್ಷೋಘ್ನಮಂತ್ರಗಳನ್ನು ನೆನಪಿಸಿಕೊಂಡನು.

139. ಆ ಮಂತ್ರದ ಪ್ರಭಾವದಿಂದ ಮೋಹಕ್ಕೊಳಗಾದ ಅವಳು ಭಯದಿಂದ ಅಂಗಗಳನ್ನು ಕುಗ್ಗಿಸಿ ಮೂಲೆಯಲ್ಲಿ ಅಲುಗಾಡದೆ ಕುಳಿತಿದ್ದ ಸುಂದರಕನನ್ನು ಕಾಣಲಿಲ್ಲ.

140. ಕಾಳರಾತ್ರಿಯು ಹಾರಾಟದ ಉತ್ಪತನ ಮಂತ್ರವನ್ನು ಉಚ್ಚರಿಸಿ ಸಖೀಜನರೊಡನೆ ಗೋವಾಟಭವನಸಮೇತವಾಗಿ ಆಕಾಶಕ್ಕೆ ಹಾರಿದಳು.

---

ತದೇವಂ ಕಾಮಕೋಪಾದಿರಿಪುಷಡ್ವರ್ಗವಂಚಿತಾಃ ।
ಮುನಯೋಽಪಿ ವಿಮುಹ್ಯಂತಿ ಶ್ರೋತ್ರಿಯೇಷು ಕಥೈವ ಕಾ ॥ ೧೩೪
ಇತಿ ಸುಂದರಕಸ್ತತ್ರ ಧ್ಯಾಯನ್ ದಸ್ಯುಭಯಾನ್ನಿಶಿ ।
ಆರುಹ್ಯ ಶೂನ್ಯಗೋವಾಟಹರ್ಮ್ಯೇ ತಸ್ಥೌ ಸಮೀಪಗೇ ॥ ೧೩೫
ತತ್ರೈಕದೇಶೇ ಯಾವಚ್ಚ ಕ್ಷಣಂ ತಿಷ್ಠತ್ಯಲಕ್ಷಿತಃ ।
ತಾವತ್ತತ್ರೈವ ಹರ್ಮ್ಯೇ ಸಾ ಕಾಲರಾತ್ರಿರುಪಾಯಯೌ ॥ ೧೩೬
ಆಕೃಷ್ಟ ವೀರಚ್ಛುರಿಕಾ ಮುಕ್ತಘೂತ್ಕಾರಭೀಷಣಾ ।
ನಯನಾನನವಾಂತೋಲ್ಕಾ ಡಾಕಿನೀಚಕ್ರಸಂಗತಾ ॥ ೧೩೭
ತಾಂ ದೃಷ್ಟ್ವಾ ತಾದೃಶೀಂ ತತ್ರ ಕಾಲರಾತ್ರಿಮುಪಾಗತಾಮ್ ।
ಸಸ್ಮಾರ ಮಂತ್ರಾನ್ ರಕ್ಷೋಘ್ನಾನ್ ಭೀತಃ ಸುಂದರಕೋಽಥ ಸಃ ॥ ೧೩೮
ತನ್ಮಂತ್ರಮೋಹಿತಾ ಚಾಥ ತಂ ದದರ್ಶ ನ ಸಾ ತದಾ ।
ಭಯಸಂಪಿಂಡಿತೈರಂಗೈರೇಕಾಂತೇ ನಿಭೃತಸ್ಥಿತಮ್ ॥ ೧೩೯
ಅಥೋತ್ಪತನಮಂತ್ರಂ ಸಾ ಪಠಿತ್ವಾ ಸಸಖೀಜನಾ ।
ಕಾಲರಾತ್ರಿಃ ಸಗೋವಾಟಹರ್ಮ್ಯಾ ವ್ಯೋಮೋದಪತನ್ನಭಃ ॥ ೧೪೦

141. ಆಗ ಆ ಮಂತ್ರವನ್ನು ಕೇಳಿಸಿಕೊಂಡ ಸುಂದರಕನು ಅದನ್ನು ಗ್ರಹಿಸಿಕೊಂಡನು. ಆ ಕಾಳರಾತ್ರಿಯು ಕ್ಷಿಪ್ರವಾಗಿ ಭವನದೊಡನೆ ಉಜ್ಜಯಿನೀ ನಗರಕ್ಕೆ ಹೋದಳು.

142. ಅಲ್ಲಿ ಆ ಭವನವನ್ನು ಮಂತ್ರಶಕ್ತಿಯಿಂದ ತರಕಾರಿಗಳ ತೋಟದಲ್ಲಿ ಇಳಿಸಿ ಸ್ಮಶಾನಕ್ಕೆ ಹೋಗಿ ಡಾಕಿನಿಯರ ಗುಂಪಿನ ಮಧ್ಯದಲ್ಲಿ ಸೇರಿಕೊಂಡು ಕಾಳರಾತ್ರಿಯು ಆಟವಾಡುತ್ತಿದ್ದಳು.

143. ಆಗ ಹಸಿವಿನಿಂದ ಬಳಲಿದ ಸುಂದರಕನು ತರಕಾರಿಗಳ ತೋಟದಲ್ಲಿಳಿದು ಕೆಲವು ಬೇರುಗಳನ್ನು ಕಿತ್ತುತಂದು ಅವುಗಳಿಂದ ತನ್ನ ಹಸಿವನ್ನಡಗಿಸಿಕೊಂಡನು.

144. ಹಸಿವಿಗೆ ಪ್ರತೀಕಾರವನ್ನು ಮಾಡಿಕೊಂಡು ಅವನು ಮೊದಲಿನಂತೆ ಗೋವಾಟ ಭವನವನ್ನಾಶ್ರಯಿಸಿದ ಮೇಲೆ ಮಧ್ಯರಾತ್ರಿಯಲ್ಲಿ ಕಾಳರಾತ್ರಿಯು ಸ್ಮಶಾನದಿಂದ ಹಿಂದಿರುಗಿ ಬಂದಳು.

145. ಆಮೇಲೆ ಗೋವಾಟಭವನವನ್ನೇರಿ ಕಾಳರಾತ್ರಿಯು ಹಿಂದಿನಂತೆ ಮಂತ್ರಸಿದ್ಧಿಯಿಂದ ಶಿಷ್ಯೆಯರ ಜೊತೆಯಲ್ಲಿ ಆಕಾಶಮಾರ್ಗದಿಂದ ರಾತ್ರಿಯಲ್ಲೇ ಮನೆಗೆ ಬಂದುಸೇರಿದಳು.

146. ವಾಹನವಾಗಿದ್ದ ಗೋವಾಟವನ್ನು ಅದರ ಸ್ಥಾನದಲ್ಲಿ ನಿಲ್ಲಿಸಿ ಶಿಷ್ಯೆಯರನ್ನು ಕಳುಹಿಸಿಕೊಟ್ಟು ಅವಳು ತನ್ನ ಮಲಗುವ ಕೋಣೆಯನ್ನು ಪ್ರವೇಶಿಸಿದಳು.

---

ತಂ ಚ ಮಂತ್ರಂ ಸ ಜಗ್ರಾಹ ಶ್ರುತ್ವಾ ಸುಂದರಕಸ್ತದಾ ।
ಸಹರ್ಮ್ಯಾ ಸಾಪಿ ನಭಸಾ ಕ್ಷಿಪ್ರಮುಜ್ಜಯಿನೀಂ ಯಯೌ ॥ ೧೪೧
ತತ್ರಾವತಾರ್ಯ ಹರ್ಮ್ಯಂ ಸಾ ಮಂತ್ರತಃ ಶಾಕವಾಟಕೇ ।
ಗತ್ವಾ ಸ್ಮಶಾನೇ ಚಿಕ್ರೀಡ ಡಾಕಿನೀಚಕ್ರಮಧ್ಯಗಾ ॥ ೧೪೨
ತತ್ಕ್ಷಣಂ ಚ ಕ್ಷುಧಾಕ್ರಾಂತಃ ಶಾಕವಾಟೇಽವತೀರ್ಯ ಸಃ ।
ತತ್ರ ಸುಂದರಕಶ್ಚಕ್ರೇ ವೃತ್ತಿಮುತ್ಖಾತಮೂಲಕೈಃ ॥ ೧೪೩
ಕೃತಕ್ಷುತ್ಪ್ರತಿಘಾತೇಽಸ್ಮಿನ್ ಪ್ರಾಗ್ವದ್ ಗೋವಾಟಮಾಶ್ರಿತೇ ।
ಪ್ರತ್ಯಾಯಯೌ ಕಾಳರಾತ್ರೀ ರಾತ್ರಿಮಧ್ಯೇ ನಿಕೇತನಾತ್ ॥ ೧೪೪
ತತೋಽಧಿರೂಢಗೋವಾಟಾ ಪೂರ್ವವನ್ಮಂತ್ರಸಿದ್ಧಿತಃ ।
ಆಕಾಶೇನ ಸಶಿಷ್ಯಾ ಸಾ ನಿಶಿ ಸ್ವಗೃಹಮಾಯಯೌ ॥ ೧೪೫
ಸ್ಥಾಪಯಿತ್ವಾ ಯಥಾಸ್ಥಾನಂ ತಚ್ಚ ಗೋವಾಟವಾಹನಮ್ ।
ವಿಸೃಜ್ಯಾನುಚರೀಸ್ತಾಶ್ಚ ಶಯ್ಯಾವೇಶ್ಮ ವಿವೇಶ ಸಾ ॥ ೧೪೬

147. ವಿಘ್ನಗಳಿಂದ ವಿಸ್ಮಿತನಾಗಿ ಸುಂದರಕನೂ ಆ ರಾತ್ರಿಯನ್ನು ಕಳೆದು ಬೆಳಗಾದ ಮೇಲೆ ಗೋವಾಟವನ್ನು ಬಿಟ್ಟು ಮಿತ್ರರ ಬಳಿಗೆ ಹೋದನು.

148. ಅಲ್ಲಿ ತನ್ನ ಕಥೆಯನ್ನೆಲ್ಲ ಹೇಳಿ ಬೇರೆ ದೇಶಕ್ಕೆ ಹೋಗಲು ಉದ್ಯುಕ್ತನಾದನು. ಮಿತ್ರರು ಅವನನ್ನು ಸಮಾಧಾನಗೊಳಿಸಲಾಗಿ ಅವರ ಮಧ್ಯದಲ್ಲೇ ಇರತೊಡಗಿದನು.

149. ಉಪಾಧ್ಯಾಯರ ಮನೆಯನ್ನು ಬಿಟ್ಟು ಸತ್ರದ ಮನೆಯಲ್ಲಿ (ಧರ್ಮಛತ್ರದಲ್ಲಿ) ಊಟಮಾಡುತ್ತಾ ಸ್ನೇಹಿತರೊಡನೆ ಸ್ವೇಚ್ಛೆಯಿಂದ ಅಲೆದಾಡುತ್ತಾ ಅಲ್ಲೇ ವಾಸಮಾಡುತ್ತಿದ್ದನು.

150. ಒಮ್ಮೆ ಮನೆಗೆ ಬೇಕಾದ ಉಪಕರಣಗಳನ್ನು ಕೊಳ್ಳಲು ಹೋಗಿದ್ದ ಕಾಳರಾತ್ರಿಯು ಅಂಗಡಿಯಲ್ಲಿ ಸುಂದರಕನನ್ನು ನೋಡಿದಳು.

151. ಅವನ ಬಳಿಗೆ ಮತ್ತೆ ಕಾಮಪೀಡಿತಳಾಗಿ ಬಂದ ಕಾಳರಾತ್ರಿಯು "ಸುಂದರಕ, ಈಗಲಾದರೂ ನಿನ್ನಲ್ಲೇ ಜೀವವನ್ನಿಟ್ಟಿರುವ ನನ್ನನ್ನು ವರಿಸು" ಎಂದು ಹೇಳಿದಳು.

152. ಹೀಗೆ ಅವಳು ಹೇಳಿದಾಗ ಸಜ್ಜನನಾದ ಸುಂದರಕನು "ಹೀಗೆ ಹೇಳಬೇಡ. ಇದು ಧರ್ಮವಲ್ಲ. ಗುರುಪತ್ನಿಯಾದ ನೀನು ನನ್ನ ತಾಯಿ' ಎಂದು ನುಡಿದನು.

---

ಸೋಽಪಿ ಸುಂದರಕೋ ನೀತ್ವಾ ತಾಂ ನಿಶಾಂ ವಿಘ್ನವಿಸ್ಮಿತಃ ।
ಪ್ರಭಾತೇ ತ್ಯಕ್ತಗೋವಾಟೋ ನಿಕಟಂ ಸುಹೃದಾಂ ಯಯೌ ॥ ೧೪೭
ತತ್ರಾಖ್ಯಾತಸ್ವವೃತ್ತಾಂತೋ ವಿದೇಶಗಮನೋನ್ಮುಖಃ ।
ತೈಃ ಸಮಾಶ್ವಾಸಿತೋ ಮಿತ್ರೈಸ್ತನ್ಮಧ್ಯೇ ಸ್ಥಿತಿಮಗ್ರಹೀತ್ ॥ ೧೪೮
ಉಪಾಧ್ಯಾಯಗೃಹಂ ತ್ಯಕ್ತ್ವಾ ಭುಂಜಾನಃ ಸತ್ರಸದ್ಮನಿ ।
ಉವಾಸ ತತ್ರ ವಿಹರನ್ ಸ್ವಚ್ಛಂದಃ ಸುಖಿಭಿಃ ಸಹ ॥ ೧೪೯
ಏಕದಾ ನಿರ್ಗತಾ ಕ್ರೇತುಂ ಗೃಹೋಪಕರಣಾನಿ ಸಾ ।
ದದರ್ಶ ತಂ ಸುಂದರಕಂ ಕಾಲರಾತ್ರಿಃ ಕಿಲಾಪಣೇ ॥ ೧೫೦
ಉಪೇತ್ಯ ಚ ಜಗಾದೈನಂ ಪುನರೇವ ಸ್ಮರಾತುರಾ ।
ಭಜ ಸುಂದರಕಾದ್ಯಾಪಿ ಮಾಂ ತ್ವದಾಯತ್ತಜೀವಿತಾಮ್ ॥ ೧೫೧
ಏವಮುಕ್ತಸ್ತಯಾ ಸೋಽಥ ಸಾಧುಃ ಸುಂದರಕೋಽಬ್ರವೀತ್ ।
ಮೈವಂ ವಾದೀರ್ನ ಧರ್ಮೋಽಯಂ ಮಾತಾ ಮೇ ಗುರುಪತ್ನ್ಯಸಿ ॥
೧೫೨

153. ಆಗ ಕಾಳರಾತ್ರಿಯು "ಧರ್ಮವನ್ನು ನೀನು ತಿಳಿದವನಾದರೆ, ನನಗೆ ನನ್ನ ಪ್ರಾಣವನ್ನು ಕೊಡು. ಪ್ರಾಣದಾನಕ್ಕಿಂತ ಹೆಚ್ಚಿನ ಧರ್ಮ ಯಾವುದಿದೆ ?' ಎಂದು ಹೇಳಿದಳು.

154. ಆಗ ಸುಂದರಕನು "ತಾಯಿ, ಹೀಗೆ ಮನಸ್ಸಿನಲ್ಲೂ ಚಿಂತಿಸಬೇಡ. ಗುರುಪತ್ನಿಯನ್ನು ಕಾಮಿಸುವುದು ಎಂಥ ಧರ್ಮವಾದೀತು' ಎಂದನು.

155. ಹೀಗೆ ಅವನಿಂದ ನಿರಾಕೃತಳಾದ ಕಾಳರಾತ್ರಿಯು ರೋಷದಿಂದ ಅವನನ್ನು ಹೆದರಿಸುತ್ತಾ ತನ್ನ ಕೈಯಿಂದಲೇ ಮೇಲುಡುಗೆಯನ್ನು ಹರಿದುಕೊಂಡು ಮನೆಗೆ ಹೋದಳು.

156. ಅಲ್ಲಿ ಗಂಡನಿಗೆ ಹರಿದುಹೋಗಿದ್ದ ತನ್ನ ಉತ್ತರೀಯವನ್ನು ತೋರಿಸಿ 'ನೋಡು, ಸುಂದರಕನು ಓಡಿಬಂದು ನನ್ನ ಮೇಲುಡುಗೆಯನ್ನು ಹರಿದುಹಾಕಿದನು' ಎಂದು ಹೇಳಿದಳು.

157. ಅವಳ ಗಂಡನು ಕ್ರೋಧದಿಂದ ಹೋಗಿ ಸುಂದರಕನ ದೋಷವನ್ನು ನಿರೂಪಿಸಿ ಸತ್ರದಲ್ಲಿ ಸುಂದರಕನಿಗೆ ಕೂಡಲೇ ಊಟವನ್ನು ನಿಲ್ಲಿಸುವಂತೆ ಮಾಡಿದನು.

158. ಸುಂದರಕನು ಬೇಸರದಿಂದ ಆ ದೇಶವನ್ನು ಬಿಟ್ಟು ಹೋಗಲು ಸಿದ್ಧನಾದನು. ಗೋವಾಟಭವನದಲ್ಲಿ ಕಲಿತಿದ್ದ ಆಕಾಶಸಂಚಾರದ ಮಂತ್ರವು ಅವನಿಗೆ ತಿಳಿದಿತ್ತು

---

ತತೋಽಬ್ರವೀತ್ ಕಾಲರಾತ್ರಿರ್ಧರ್ಮಂ ಚೇದ್ವೇತ್ಸಿ ದೇಹಿ ತತ್ ।
ಪ್ರಾಣಾನ್ ಮೇ ಪ್ರಾಣದಾನಾದ್ಧಿ ಧರ್ಮಃ ಕೋಽಭ್ಯಧಿಕೋ ಭವೇತ್ ॥
೧೫೩

ಅಥ ಸುಂದರಕೋಽವಾದೀನ್ಮಾತರ್ಮೈವಂ ಕೃಥಾ ಹೃದಿ ।
ಗುರುತಲ್ಪಾಭಿಗಮನಂ ಕುತ್ರ ಧರ್ಮೋ ಭವಿಷ್ಯತಿ ॥ ೧೫೪
ಏವಂ ನಿರಾಕೃತಾ ತೇನ ತರ್ಜಯಂತೀ ಚ ತಂ ರುಷಾ ।
ಪಾಟಯಿತ್ವಾ ಸ್ವಹಸ್ತೇನ ಸ್ವೋತ್ತರೀಯಮಗಾದ್ ಗೃಹಮ್ ॥ ೧೫೫
ಪಶ್ಯ ಸುಂದರಕೇಣೇದಂ ಧಾವಿತ್ವಾ ಪಾಟಿತಂ ಮಮ ।
ಇತ್ಯುವಾಚ ಪತಿಂ ತತ್ರ ದರ್ಶಯಿತ್ವೋತ್ತರೀಯಕಮ್ ॥ ೧೫೬
ಸ ಚ ತಸ್ಯಾಃ ಪತಿಃ ಕ್ರೋಧಾದ್ ಗತ್ವಾವದ್ಯಮುದೀರ್ಯ ಚ ।
ಸತ್ರೇ ಸುಂದರಕಸ್ಯಾಶು ವಾರಯಾಮಾಸ ಭೋಜನಮ್ ॥ ೧೫೭
ತತಃ ಸುಂದರಕಃ ಖೇದಾತ್ತಂ ದೇಶಂ ತ್ಯಕ್ತುಮುದ್ಯತಃ ।
ಜಾನನ್ನುತ್ಪತನೇ ವ್ಯೋಮ್ನಿ ಮಂತ್ರಂ ಗೋವಾಟಶಿಕ್ಷಿತಮ್ ॥ ೧೫೮

159. ಆದರೆ ಆಕಾಶದಿಂದ ಇಳಿಯುವುದಕ್ಕೆ ಬೇಕಾದ ಮಂತ್ರವನ್ನು ಕೇಳಿದ್ದರೂ ಅದನ್ನು ಅವನು ಮರೆತಿದ್ದನು. ಅದನ್ನು ಕಲಿತುಕೊಳ್ಳಲು ಮತ್ತೆ ರಾತ್ರಿಯಲ್ಲಿ ನಿರ್ಜನವಾದ ಗೋವಾಟಭವನಕ್ಕೆ ಹೋದನು.

160. ಅವನು ಅಲ್ಲಿದ್ದಾಗ ಹಿಂದಿನಂತೆ ಕಾಳರಾತ್ರಿಯು ಅಲ್ಲಿಗೆ ಬಂದು ಅದೇ ರೀತಿಯಲ್ಲಿ ಭವನದಲ್ಲಿದ್ದು ಹಾರಿ ಆಕಾಶಮಾರ್ಗದಿಂದಲೇ ಉಜ್ಜಯಿನಿಗೆ ಹೋದಳು.

161. ಅಲ್ಲಿ ತರಕಾರಿತೋಟದಲ್ಲಿ ಮಂತ್ರದಿಂದ ಗೋವಾಟಭವನವನ್ನಿಳಿಸಿ ರಾತ್ರಿಯ ಕೆಲಸಗಳಿಗಾಗಿ ಅವಳು ಸ್ಮಶಾನಕ್ಕೆ ಮತ್ತೆ ಹೋದಳು.

162. ಆದರೆ ಆ ಮಂತ್ರವನ್ನು ಸುಂದರಕನು ಮತ್ತೊಮ್ಮೆ ಕೇಳಿಸಿಕೊಂಡರೂ ಗ್ರಹಿಸಲಾಗಲಿಲ್ಲ. ಗುರುವಿನ ಉಪದೇಶವಿಲ್ಲದೆ ಸಂಪೂರ್ಣ ಸಿದ್ಧಿಗಳು ಉಂಟಾಗುವುದು ಹೇಗೆ ಸಾಧ್ಯ ?

163. ಆಮೇಲೆ ಅಲ್ಲಿ ಕೆಲವು ಗೆಡ್ಡೆಗೆಣಸುಗಳನ್ನು ತಿಂದು ಮತ್ತೆ ಕೆಲವನ್ನು ತೆಗೆದುಕೊಂಡು ಹೋಗಲು ಗೋವಾಟದಲ್ಲಿ ಹಾಕಿ ಹಿಂದಿನಂತೆ ಅಲ್ಲೇ ಇದ್ದನು.

164. ಆ ಕಾಳರಾತ್ರಿಯು ಬಂದು ಗೋವಾಟವನ್ನೇರಿ ರಾತ್ರಿಯಲ್ಲಿ ಆಕಾಶಮಾರ್ಗದಿಂದ ಪಯಣಿಸಿ, ವಾಹನವನ್ನು ನಿಲ್ಲಿಸಿ ತನ್ನ ಮನೆಯನ್ನು ಸೇರಿಕೊಂಡಳು.

---

ತತೋಽವರೋಹೇಽಪ್ಯಪರಂ ಶಿಕ್ಷಿತುಂ ಶ್ರುತವಿಸ್ಮೃತಮ್ ।
ತದೇವ ಮಂತ್ರಂ ಗೋವಾಟಹರ್ಮ್ಯಂ ನಿಶಿ ಪುನರ್ಯಯೌ ॥ ೧೫೯
ತತ್ರ ತಸ್ಮಿನ್ ಸ್ಥಿತೇ ಪ್ರಾಗ್ವತ್ ಕಾಲರಾತ್ರಿರುಪೇತ್ಯ ಸಾ ।
ತಥೈವೋತ್ಪತ್ಯ ಹರ್ಮ್ಯಸ್ಥಾ ವ್ಯೋಮ್ನೈವೋಜ್ಜಯಿನೀಂ ಯಯೌ ॥ ೧೬೦
ತತ್ರಾವತಾರ್ಯ ಮಂತ್ರೇಣ ಗೋವಾಟಂ ಶಾಕವಾಟಕೇ ।
ಜಗಾಮ ರಾತ್ರಿಚರ್ಯಾಯೈ ಪುನಃ ಸಾ ಪಿತೃಕಾನನಮ್ ॥ ೧೬೧
ತಂ ಚ ಸುಂದರಕೋ ಮಂತ್ರಂ ಭೂಯಃ ಶ್ರುತ್ವಾಪಿ ನಾಗ್ರಹೀತ್ ।
ವಿನಾ ಹಿ ಗುರ್ವಾದೇಶೇನ ಸಂಪೂರ್ಣಾಃ ಸಿದ್ಧಯಃ ಕುತಃ ॥ ೧೬೨
ತತೋಽತ್ರ ಭುಕ್ತ್ವಾ ಕತಿಚಿನ್ಮೂಲಕಾನ್ಯಪರಾಣಿ ಚ ।
ನೇತುಂ ಪ್ರಕ್ಷಿಪ್ಯ ಗೋವಾಟೇ ತತ್ರ ತಸ್ಥೌ ಸ ಪೂರ್ವವತ್ ॥ ೧೬೩
ಅಥೈತ್ಯಾರೂಢಗೋವಾಟಾ ಸಾ ಗತ್ವಾ ನಭಸಾ ನಿಶಿ ।
ವಿವೇಶ ಕಾಲರಾತ್ರಿಃ ಸ್ವಂ ಸದ್ಮ ಸ್ಥಾಪಿತವಾಹನಾ ॥ ೧೬೪

165. ಸುಂದರಕನಾದರೋ ಬೆಳಗ್ಗೆ ಗೋವಾಟದಿಂದ ಹೊರಗೆ ಬಂದು ಊಟಕ್ಕೆ ಬೇಕಾದ ಹಣವನ್ನು ಗಳಿಸಲು ಗೆಡ್ಡೆಗೆಣಸುಗಳನ್ನು ತೆಗೆದುಕೊಂಡು ಮಾರುಕಟ್ಟೆಗೆ ಹೋದನು.

166. ಆ ಗೆಡ್ಡೆಗೆಣಸುಗಳನ್ನು ಅವನು ಮಾರಬೇಕೆಂದಿದ್ದಾಗ ಮಾಳವದೇಶದ ರಾಜಸೇವಕರು ಅವು ತಮ್ಮ ದೇಶದ್ದೆಂದು ನೋಡಿ ಯಾವ ಬೆಲೆಯನ್ನೂ ಕೊಡದೆ ಅವುಗಳನ್ನು ಕಿತ್ತುಕೊಂಡರು.

167. ಅವನು ಜಗಳವಾಡಿದಾಗ ಅವನ ಸ್ನೇಹಿತರೂ ಅವನ ಹಿಂದೆ ಬಂದರು. 'ಇವನು ಕಲ್ಲಿನಿಂದ ನಮಗೆ ಹೊಡೆದನು' ಎಂದು ಆರೋಪಿಸಿ ರಾಜಸೇವಕರು ಸುಂದರಕನನ್ನು ರಾಜನ ಬಳಿಗೆ ಕರೆದೊಯ್ದರು.

168. "ಮಾಲವದೇಶದಿಂದ ಗೆಡ್ಡೆಗೆಣಸುಗಳನ್ನು ತಂದು ಕಾನ್ಯಕುಬ್ಜದಲ್ಲಿ ನೀನು ಮಾರುತ್ತಿರುವುದು ಹೇಗೆ ?' ಎಂದು ನಾವು ಕೇಳಿದರೆ ಇವನು ಉತ್ತರವನ್ನು ಹೇಳುತ್ತಿಲ್ಲ.

169. ಬದಲಾಗಿ ಕಲ್ಲುಗಳಿಂದ ನಮಗೆ ಹೊಡೆಯುತ್ತಾನೆ ಎಂದು ಆ ವಂಚಕರು ರಾಜನಿಗೆ ಹೇಳಿದರು. ರಾಜನೂ ಆ ಅದ್ಭುತದ ಬಗೆಗೆ ಅವನನ್ನು ಪ್ರಶ್ನಿಸಿದನು. ಆಗ ಅವನ ಮಿತ್ರರಿಂತೆಂದರು.

---

ಸೋಽಪಿ ಸುಂದರಕಃ ಪ್ರಾತರ್ಗೋವಾಟಾನ್ನಿರ್ಗತಸ್ತತಃ ।
ಯಯೌ ಭೋಜನಮೂಲ್ಯಾರ್ಥೀ ವಿಪಣೀಮಾತ್ತಮೂಲಕಃ ॥ ೧೬೫
ವಿಕ್ರೀಣಾನಸ್ಯ ತಸ್ಯಾತ್ರ ಮೂಲಕಂ ರಾಜಸೇವಕಾಃ ॥
ಮಾಲವೀಯಾ ವಿನಾ ಮೂಲ್ಯಂ ಜಹ್ರುರ್ದೃಷ್ಟ್ವಾ ಸ್ವದೇಶಜಮ್ ॥ ೧೬೬
ತತಃ ಸ ಕಲಹಂ ಕುರ್ವನ್ ಬದ್ಧ್ವಾ ಸುಹೃದನುದ್ರುತಃ ।
ಪಾಷಾಣಘಾತದಾಯೀತಿ ರಾಜಾಗ್ರು ತೈರನೀಯತ ॥ ೧೬೭
ಮಾಲವಾತ್ ಕಥಮಾನೀಯ ಕಾನ್ಯಕುಬ್ಜೇಽತ್ರ ಮೂಲಕಮ್ ।
ವಿಕ್ರೀಣೀಷೇ ಸದೇತ್ಯೇಷ ಪೃಷ್ಟೋಽಸ್ಮಾಭಿರ್ನ ಜಲ್ಪತಿ ॥ ೧೬೮
ಹಂತಿ ಪ್ರತ್ಯುತ ಪಾಷಾಣೈರಿತ್ಯುಕ್ತಸ್ತೈಃ ಶಠೈರ್ನೃಪಃ ।
ತಂ ತದದ್ಭುತಮಪ್ರಾಕ್ಷೀತ್ ತತಸ್ತತ್ಸುಹೃದೋಽಬ್ರುವನ್ ॥ ೧೬೯

170. "ನಮ್ಮೊಡನೆ ಇವನನ್ನು ಅರಮನೆ ಮೇಲೆ ಏರಿಸಿದರೆ ಆಗ ಈ ಅದ್ಭುತವನ್ನು ಸಂಪೂರ್ಣವಾಗಿ ಹೇಳುತ್ತಾನಂತೆ ಪ್ರಭು! ಇಲ್ಲದಿದ್ದರೆ ಇವನು ಹೇಳುವುದಿಲ್ಲ"

171. ಹಾಗೆಯೇ ಆಗಲಿ ಎಂದು ರಾಜನು ಅವನನ್ನು ಅರಮನೆಯ ಮೇಲೆ ಏರಿಸಿದನು. ಅವನು ನೋಡುತ್ತಿದ್ದಂತೆಯೇ ಅರಮನೆಸಹಿತವಾಗಿ ಸುಂದರಕನು ಆಕಾಶಕ್ಕೆ ಮಂತ್ರದ ಸಹಾಯದಿಂದ ಹಾರಿದನು.

172. ಮಿತ್ರಸಹಿತನಾಗಿ ಅವನು ಹೋಗಿ ಕ್ರಮೇಣ ಪ್ರಯಾಗವನ್ನು ತಲುಪಿ, ಬಳಲಿದ್ದಾಗ ಅಲ್ಲಿ ರಾಜನೊಬ್ಬ ಸ್ನಾನ ಮಾಡುತ್ತಿದ್ದುದನ್ನು ಕಂಡನು.

173. ಅಲ್ಲೇ ಅರಮನೆಯನ್ನು ನಿಲ್ಲಿಸಿ ಆಕಾಶದಿಂದ ಗಂಗೆಯಲ್ಲಿ ಧುಮುಕಿ, ಎಲ್ಲ ಜನರೂ ಆಶ್ಚರ್ಯದಿಂದ ನೋಡುತ್ತಿರಲು ಆ ರಾಜನ ಬಳಿಗೆ ತೆರಳಿದನು.

174. "ನೀನು ಯಾರು ? ಆಕಾಶದಿಂದ ಹೀಗೆ ಇಳಿದುಬರಲು ಕಾರಣವೇನು ಎಂದು ನಮಗೆ ಹೇಳು " ಎಂದು ರಾಜನು ವಿನಯದಿಂದ ಬಗ್ಗಿ ಕೇಳಿದಾಗ ಸುಂದರಕನು ಹೀಗೆ ನುಡಿದನು.

175. "ನಾನು ಭಗವಾನ್ ಶಂಕರನ ಗಣಗಳಲ್ಲೊಬ್ಬನಾದ ಮುರಜಕ. ಆ ಭಗವಂತನ ಆದೇಶದಂತೆ ಮಾನವರ ಭೋಗಗಳನ್ನು ಅಪೇಕ್ಷಿಸಿ ನಿನ್ನ ಬಳಿಗೆ ಬಂದಿದ್ದೇನೆ.'

---

ಅಸ್ಮಾಭಿಃ ಸಹ ಯದ್ಯೇಷ ಪ್ರಾಸಾದಮಧಿರೋಪ್ಯತೇ ।
ತದ್ಯೈತತ್ ಕೌತುಕಂ ದೇವ ಕೃತ್ಸ್ನಂ ಜಲ್ಪತಿ ನಾನ್ಯಥಾ ॥ ೧೭೦
ತಥೇತ್ಯಾರೋಪಿತೋ ರಾಜ್ಞಾ ಸಪ್ರಾಸಾದೋಽಸ್ಯ ಪಶ್ಯತಃ ।
ಉತ್ಪಪಾತ ಸ ಮಂತ್ರೇಣ ಸದ್ಯಃ ಸುಂದರಕೋ ನಭಃ ॥ ೧೭೧
ಸಮಿತ್ರಸ್ತೇನ ಗತ್ವಾ ಚ ಪ್ರಯಾಗಂ ಪ್ರಾಪ್ಯ ಚ ಕ್ರಮಾತ್ ।
ಶ್ರಾಂತಃ ಕಮಪಿ ರಾಜಾನಂ ಸ್ನಾಂತಂ ತತ್ರ ದದರ್ಶ ಸಃ ॥ ೧೭೨
ಸಂಸ್ತಭ್ಯ ಚಾತ್ರ ಪ್ರಾಸಾದಂ ಗಂಗಾಯಾಂ ಖಾನ್ನಿಪತ್ಯ ಚ ।
ವಿಸ್ಮಯೋದ್ವೀಕ್ಷಿತಃ ಸರ್ವೈಸ್ತಂ ಸ ರಾಜಾನಮಭ್ಯಗಾತ್ ॥ ೧೭೩
ಕಸ್ತ್ವಂ ಕಿಂ ಚಾವತೀರ್ಣೋಽಸಿ ಗಗನಾದಿತಿ ಶಂಸ ನಃ ।
ರಾಜ್ಞಾ ಪ್ರಹ್ವೇಣ ಪೃಷ್ಟಃ ಸನ್ನೇವಂ ಸುಂದರಕೋಽಬ್ರವೀತ್ ॥ ೧೭೪
ಅಹಂ ಮುರಜಕೋ ನಾಮ ಗಣೋ ದೇವಸ್ಯ ಧೂರ್ಜಟೇಃ ।
ಪ್ರಾಪ್ತೋ ಮಾನುಷಭೋಗಾರ್ಥೀ ತ್ವತ್ಸಕಾಶಂ ತದಾಜ್ಞಯಾ ॥ ೧೭೫

176. ಅದನ್ನು ಕೇಳಿ ಅದು ಸತ್ಯವೇ ಇರಬಹುದೆಂದು ಭಾವಿಸಿ ರಾಜನು ಅವನಿಗೆ ಸೊಂಪಾದ ಬೆಳೆಗಳುಳ್ಳ, ರತ್ನಗಳಿಂದ ತುಂಬಿದ, ಸ್ತ್ರೀಯರಿಂದ ಶೋಭಿಸುವ ಉಪಕರಣಸಹಿತವಾದ ಒಂದು ಊರನ್ನೇ ಅವನಿಗೆ ಕೊಟ್ಟನು.

177. ಆ ಪುರದೊಳಕ್ಕೆ ಹೋಗಿ ಹಿಂಬಾಲಕರೊಡನೆ ಆಕಾಶಕ್ಕೆ ಹಾರಿ ದೀರ್ಘಕಾಲದವರೆಗೆ ಸುಂದರಕನು ದೈನ್ಯವಿಲ್ಲದೆ ಸ್ವೇಚ್ಛೆಯಿಂದ ವಿಹಾರ ಮಾಡಿದನು.

178. ಚಿನ್ನದ ಮಂಚದ ಮೇಲೆ ಮಲಗಿಗೊಂಡಿದ್ದ ಅವನಿಗೆ ಉತ್ತಮ ಸ್ತ್ರೀಯರು ಚಾಮರಗಳನ್ನು ಬೀಸುತ್ತಾ ಸೇವೆಯನ್ನು ಮಾಡುತ್ತಿದ್ದರು. ಹೀಗೆ ಅವನು ಇಂದ್ರನಿಗೆ ಸಿಗುವ ಸುಖವನ್ನು ಪಡೆದುಕೊಂಡನು.

179. ಆಮೇಲೆ ಒಮ್ಮೆ ಅವನಿಗೆ ಪರಿಚಿತನಾದ ಆಕಾಶಸಂಚಾರಿ ಸಿದ್ಧನು ಆಕಾಶದಿಂದ ಇಳಿಯುವ ಮಂತ್ರವನ್ನು ಹೇಳಿಕೊಟ್ಟನು.

180. ಇಳಿಯುವ ಮಂತ್ರವನ್ನು ಕಲಿತ ಸುಂದರಕನು ತನ್ನ ದೇಶವಾದ ಕಾನ್ಯಕುಬ್ಜಕ್ಕೆ ಹೋಗಿ ಅಲ್ಲಿ ಆಕಾಶದಿಂದ ಇಳಿದನು.

181. ಬಾಂದಳದಿಂದ ಪುರಸಹಿತವಾಗಿ ಸಂಪೂರ್ಣ ಸಂಪತ್ತಿನಿಂದ ಕೂಡಿ ಸುಂದರಕನು ಇಳಿದುಬಂದುದನ್ನು ತಿಳಿದು ರಾಜನು ತಾನೇ ಕುತೂಹಲದಿಂದ ಅವನನ್ನು (ನೋಡಲು) ಬಂದನು.

---

ತಚ್ಛ್ರುತ್ವಾ ಸತ್ಯಮಾಶಂಕ್ಯ ಸಸ್ಯಾಢ್ಯಂ ರತ್ನಪೂರಿತಮ್ ।
ಸಸ್ತ್ರೀಕಂ ಸೋಪಕರಣಂ ದದೌ ತಸ್ಮೈ ಪುರಂ ನೃಪಃ ॥ ೧೭೬
ಪ್ರವಿಶ್ಯಾಥ ಪುರೇ ತಸ್ಮಿನ್ನುತ್ಪತ್ಯ ದಿವಿ ಸಾನುಗಃ ।
ಚಿರಂ ಸುಂದರಕಃ ಸ್ವೇಚ್ಛಂ ನಿರ್ದೈನ್ಯಂ ವಿಚಚಾರ ಸಃ ॥ ೧೭೭
ಶಯಾನೋ ಹೇಮಪರ್ಯಂಕೇ ವೀಜ್ಯಮಾನಶ್ಚ ಚಾಮರೈಃ ।
ಸೇವ್ಯಮಾನೋ ವರಸ್ತ್ರೀಭಿರೈಂದ್ರಂ ಸುಖಮವಾಪ ಸಃ ॥ ೧೭೮
ಅಥೈಕದಾ ದದೌ ತಸ್ಮೈ ಮಂತ್ರಂ ವ್ಯೋಮಾವರೋಹಣೇ ।
ಸಿದ್ಧಃ ಕೋಽಪಿ ಕಿಲಾಕಾಶಚಾರೀ ಸಂಜಾತಸಂಸ್ತವಃ ॥ ೧೭೯
ಪ್ರಾಪ್ತಾವತಾರಮಂತ್ರಃ ಸಃ ಗತ್ವಾ ಸುಂದರಕಸ್ತತಃ ।
ಕಾನ್ಯಕುಬ್ಜೇ ನಿಜೇ ದೇಶೇ ವ್ಯೋಮಮಾರ್ಗಾದವಾತರತ್ ॥ ೧೮೦
ಸಪುರಂ ಪೂರ್ಣಲಕ್ಷ್ಮೀಕಮವತೀರ್ಣಂ ನಭಸ್ತಲಾತ್ ।
ಬುದ್ಧ್ವಾ ತತ್ರ ಸ್ವಯಂ ರಾಜಾ ಕೌತುಕಾತ್ತಮುಪಾಯಯೌ ॥ ೧೮೧

182. ಅವನನ್ನು ಗುರುತಿಸಿ ರಾಜನು ಪ್ರಶ್ನೆ ಮಾಡಿದಾಗ ಕಾಲದ ವಿವೇಕವಿದ್ದ ಸುಂದರಕನು ಕಾಳರಾತ್ರಿಯು ಮಾಡಿದುದೆಲ್ಲವನ್ನೂ ತನ್ನ ವೃತ್ತಾಂತವನ್ನೂ ಹೇಳಿದನು.

183. ಅನಂತರ ಕಾಳರಾತ್ರಿಯನ್ನು ಕರೆಸಿ ರಾಜನು ವಿಚಾರಿಸಿದನು. ಅವಳು ಯಾವುದೇ ಹೆದರಿಕೆಯಿಲ್ಲದೆ ತನ್ನ ತಪ್ಪನ್ನೆಲ್ಲ ಒಪ್ಪಿಕೊಂಡಳು.

184. ರಾಜನು ಕೋಪಗೊಂಡು ಅವಳ ಕಿವಿಗಳನ್ನು ಕತ್ತರಿಸಲು ಉದ್ಯುಕ್ತನಾದಾಗ, ಅವಳನ್ನು (ಭಟರು) ಹಿಡಿದುಕೊಂಡಿದ್ದರೂ ಕೂಡ ಎಲ್ಲರೂ ನೋಡುತ್ತಿದ್ದಂತೆಯೇ ಅವಳು ಅದೃಶ್ಯಳಾದಳು.

೧೮೫. ಆಮೇಲೆ ರಾಜನು ಅವನ ರಾಜ್ಯದಲ್ಲಿ ಕಾಳರಾತ್ರಿಯು ಇರಬಾರದೆಂದು ನಿಷೇಧಿಸಿದನು. ಅವನಿಂದ ಪೂಜೆಗೊಂಡ ಸುಂದರಕನು ಮತ್ತೆ ಆಕಾಶವನ್ನು ಆಶ್ರಯಿಸಿದನು.”

೧೮೬. ಹೀಗೆ ತನ್ನ ಗಂಡ ಆದಿತ್ಯಪ್ರಭಮಹಾರಾಜನಿಗೆ (ಕಥೆಯನ್ನು) ಹೇಳಿ ರಾಣಿ ಕುವಲಯಾವಲಿಯು ಮತ್ತಿಂತೆಂದಳು.

೧೮೭. "'ದೇವ, ಡಾಕಿನೀಮಂತ್ರಸಿದ್ಧಿಗಳು ಈ ವಿಧವಾಗಿರುತ್ತವೆ. ಇದು ನನ್ನ ತಂದೆಯ ದೇಶದಲ್ಲಿ ನಡೆಯಿತು ಮತ್ತು ಎಲ್ಲೆಲ್ಲೂ ಪ್ರಸಿದ್ಧವಾಯಿತು.

೧೮೮. ನಾನು ಕಾಳರಾತ್ರಿಯ ಶಿಷ್ಯೆ ಎಂದು ಮೊದಲೇ ಹೇಳಿದ್ದೇನೆ. ಆದರೆ ಅದಕ್ಕಿಂತಲೂ ಹೆಚ್ಚಾಗಿ ನನಗೆ ಪಾತಿವ್ರತ್ಯದ ಬಲದಿಂದ ಅಧಿಕವಾದ ಸಿದ್ಧಿಯುಂಟಾಗುವುದು.

---

ಪರಿಜ್ಞಾತಶ್ಚ ಪೃಷ್ಟಶ್ಚ ರಾಜಾಗ್ರೇ ಸೋಽಥ ಕಾಲವಿತ್ ।
ಕಾಲರಾತ್ರಿಕೃತಂ ಸರ್ವಂ ಸ್ವವೃತ್ತಾಂತಂ ನ್ಯವೇದಯತ್ ॥ ೧೮೨
ತತಶ್ಚಾನಾಯ್ಯ ಪಪ್ರಚ್ಛ ಕಾಲರಾತ್ರಿಂ ಮಹೀಪತಿಃ ।
ನಿರ್ಭಯಾ ಸಾಪ್ಯವಿನಯಂ ಸ್ವಂ ಸರ್ವಂ ಪ್ರತ್ಯಪದ್ಯತ ॥ ೧೮೩
ಕುಪಿತೇ ಚ ನೃಪೇ ತಸ್ಯಾಃ ಕರ್ಣೌ ಚ ಛೇತ್ತುಮುದ್ಯತೇ ।
ಸಾ ಗೃಹೀತಾಪಿ ಪಶ್ಯತ್ಸು ಸರ್ವೇಷ್ವೇವ ತಿರೋದಧೇ ॥ ೧೮೪
ತತಃ ಸ್ವರಾಷ್ಟ್ರೇ ವಾಸೋಽಸ್ಯಾಸ್ತತ್ರ ರಾಜ್ಞಾ ನ್ಯಷಿಧ್ಯತ ।
ತತ್ಪೂಜಿತಃ ಸುಂದರಕಃ ಶಿಶ್ರಿಯೇ ಚ ನಭಃ ಪುನಃ ॥ ೧೮೫
ಇತ್ಯುಕ್ತ್ವಾ ತತ್ರ ಭರ್ತಾರಮಾದಿತ್ಯಪ್ರಭಭೂಪತಿಮ್ ।
ಅಭಾಷತ ಪುನಶ್ಚೈನಂ ರಾಜ್ಞೀ ಕುವಲಯಾವಲೀ ॥ ೧೮೬
ಭವಂತ್ಯೇವಂವಿಧಾ ದೇವ ಡಾಕಿನೀಮಂತ್ರಸಿದ್ಧಯಃ ।
ಏತಚ್ಚ ಮತ್ಪಿತುರ್ದೇಶೇ ವೃತ್ತಂ ಸರ್ವತ್ರ ವಿಶ್ರುತಮ್ ॥ ೧೮೭
ಕಾಲರಾತ್ರೇಶ್ಚ ಶಿಷ್ಯಾಹಮಿತ್ಯಾದೌ ವರ್ಣಿತಂ ಮಯಾ ।
ಪತಿವ್ರತಾತ್ವಾತ್ ಸಿದ್ಧಿಸ್ತು ತತೋಽಪ್ಯಭ್ಯಧಿಕಾ ಮಮ ॥ ೧೮೮

೧೮೯. ನಿನ್ನ ಶ್ರೇಯಸ್ಸಿಗಾಗಿ ಅರ್ಚನೆ ಮಾಡುತ್ತಿದ್ದ ನನ್ನನ್ನು ನೀನು ನೋಡಿದೆಯಷ್ಟೆ ಕಾಣಿಕೆಯಾಗಿ ಕೊಡಬೇಕಾಗಿದ್ದ ನರನನ್ನು ಮಂತ್ರದಿಂದ ಸೆಳೆಯಲು ನಾನು ಉದ್ಯುಕ್ತಳಾಗಿದ್ದೆನು.

೧೯೦. ಆದ್ದರಿಂದ ಈಗ ನೀನೂ ನಮ್ಮ ಸಂಪ್ರದಾಯದೊಳಗೆ ಪ್ರವೇಶಿಸು. ಸಿದ್ಧಿಯೋಗದಿಂದ ನೀನು ಸೋಲಿಸುವ ರಾಜರ ತಲೆಯಮೇಲೆ ನಿನ್ನ ಕಾಲನ್ನಿಡುವವನಾಗು."

೧೯೧. ಅದನ್ನು ಕೇಳಿದ ರಾಜನು "ಡಾಕಿನೀ ಸಂಪ್ರದಾಯದ ನರಮಾಂಸ ಭಕ್ಷಣವೆಲ್ಲಿ, ದೊರೆಯ ಪಟ್ಟವೆಲ್ಲಿ" ಎಂದು ಹೇಳಿ ಅದನ್ನು ನಿಷೇಧಿಸಿದನು.

೧೯೨. ಆದರೆ ರಾಣಿ ಪ್ರಾಣಗಳನ್ನೇ ಬಿಡಲು ಸಿದ್ಧಳಾದಾಗ, ರಾಜನು ಅದಕ್ಕೆ ಒಪ್ಪಿಗೆಯನ್ನು ಕೊಟ್ಟನು. ವಿಷಯಸುಖಗಳ ಸೆಳೆತಕ್ಕೆ ಸಿಕ್ಕವರು ಒಳ್ಳೆಯ ಹಾದಿಯಲ್ಲಿರುವುದು ಹೇಗೆ ಸಾಧ್ಯ ?

೧೯೩. ರಾಜನು ಪ್ರತಿಜ್ಞೆಯನ್ನು ಅಂಗೀಕರಿಸಿದ ಮೇಲೆ ಅವಳು ಅವನನ್ನು ಮೊದಲೇ ಪೂಜಿಸಿದ ಮಂಡಲದೊಳಕ್ಕೆ ಬಿಟ್ಟು ಹೀಗೆಂದಳು.

೧೯೪. "ನಿನ್ನ ಬಳಿ ಇರುವ ಫಲಭೂತಿ ಎಂಬ ಬ್ರಾಹ್ಮಣನನ್ನು ಇಲ್ಲಿ ಬಲಿಯಾಗಿ ಅರ್ಪಿಸುವುದಕ್ಕೋಸ್ಕರ (ಮಂತ್ರದಿಂದ) ಸೆಳೆದುಕೊಂಡು ಬರಲು ನಾನು ಸಂಕಲ್ಪಿಸಿದ್ದೆನು.

---

ಭವತಾ ಚಾದ್ಯ ದೃಶ್ಯಾಹಂ ಶ್ರೇಯೋಽರ್ಥಂ ತೇ ಕೃತಾರ್ಚನಾ ।
ಉಪಹಾರಾಯ ಪುರುಷಂ ಮಂತ್ರೇಣಾಕ್ರಷ್ಟುಮುದ್ಯತಾ ॥ ೧೮೯
ತದಸ್ಮದೀಯೇಽತ್ರ ನಯೇ ತ್ವಮಪಿ ಪ್ರವಿಶಾಧುನಾ ।
ಸಿದ್ಧಿಯೋಗಜಿತಾನಾಂ ಚ ರಾಜ್ಞಾಂ ಮೂರ್ಧ್ನಿ ಪದಂ ಕುರು ॥ ೧೯೦
ತಚ್ಛ್ರುತ್ವಾ ಕ್ವ ಮಹಾಮಾಂಸಭೋಜನಂ ಡಾಕಿನೀನಯೇ ।
ಕ್ವ ಚ ರಾಜತ್ವಮಿತ್ಯುಕ್ತ್ವಾ ಸ ರಾಜಾ ನಿಷಿಷೇಧ ತತ್ ॥ ೧೯೧
ಪ್ರಾಣತ್ಯಾಗೋದ್ಯತಾಯಾಂ ತು ರಾಜ್ಞ್ಯಾಂ ತತ್ ಪ್ರತ್ಯಪದ್ಯತ ।
ವಿಷಯಾಕೃಷ್ಯಮಾಣಾ ಹಿ ತಿಷ್ಠಂತಿ ಸುಪಥೇ ಕಥಮ್ ॥ ೧೯೨
ತತಃ ಸಾ ತಂ ಪ್ರವೇಶ್ಯೈವ ಮಂಡಲೇ ಪೂರ್ವಪೂಜಿತೇ ।
ಗೃಹೀತಸಮಯಂ ಸಂತಂ ರಾಜನಮಿದಮಬ್ರವೀತ್ ॥ ೧೯೩
ಯ ಏಷ ಫಲಭೂತ್ಯಾಖ್ಯಃ ಸ್ಥಿತೋ ವಿಪ್ರಸ್ತವಾಂತಿಕೇ ।
ಸ ಮಯಾತ್ರೋಪಹಾರಾರ್ಥಮಾಕ್ರಷ್ಟುಮುಪಕಲ್ಪಿತಃ ॥ ೧೯೪

೧೫೫. ಆದರೆ ಹಾಗೆ ಸೆಳೆದುಕೊಂಡು ಬರುವುದಕ್ಕೆ ಪ್ರಯಾಸವಾಗುತ್ತದೆ. ಆದ್ದರಿಂದ ಅದರ ಬದಲಾಗಿ ಈ ಕಾರ್ಯಕ್ಕೆ ಯಾವನಾದರೊಬ್ಬ ಅಡಿಗೆಯವನನ್ನು ನಿಯೋಜಿಸೋಣ. ಅವನೇ ಫಲಭೂತಿಯನ್ನು ಕೊಂದು ಮಾಂಸವನ್ನು ಬೇಯಿಸಲಿ.

೧೫೬. ಈ ಬಗೆಗೆ ಕರುಣೆಯನ್ನು ತೋರಿಸಬೇಡ. ಏಕೆಂದರೆ ಅವನ ಮಾಂಸದ ಪ್ರಸಾದವನ್ನು ತಿಂದು ಪೂಜೆಯನ್ನು ಮುಗಿಸಿದರೆ ಸಿದ್ಧಿಯು ಪೂರ್ಣವಾಗುತ್ತದೆ. ಏಕೆಂದರೆ ಅವನು ಉತ್ತಮನು.'

೧೫೭. ಹೀಗೆ ಪ್ರಿಯೆಯು ಹೇಳಿದಾಗ ಪಾಪಕ್ಕೆ ಹೆದರುವವನಾದರೂ ಆ ರಾಜನು ಒಪ್ಪಿಕೊಂಡು ಬಿಟ್ಟನು. ಹೆಂಗಸರಿಗೆ ಅಧೀನವಾಗಿ ಕಷ್ಟಪಡುವ ಸ್ಥಿತಿಗೆ ಧಿಕ್ಕಾರವಿರಲಿ !

೧೫೮. ಆಮೇಲೆ ಸಾಹಸಿಕ ಎಂಬ ಅಡುಗೆಯವನನ್ನು ಕರೆಸಿ, ಅವನಿಗೆ ನಂಬಿಕೆಯನ್ನು ಹುಟ್ಟಿಸಿ ತಮ್ಮ ಮಾತಿಗೆ ಒಪ್ಪಿಕೊಳ್ಳುವಂತೆ ಮಾಡಿ ದಂಪತಿಗಳು ಒಟ್ಟಿಗೆ ಅವನಿಗೆ ಹೀಗೆ ಹೇಳಿದರು.

೧೫೯. "ರಾಜನು ಇಂದು ಪತ್ನೀಸಮೇತನಾಗಿ ಊಟ ಮಾಡುವನು. ಆದ್ದರಿಂದ ಭೋಜನಕ್ಕೆ ತ್ವರೆ ಮಾಡು" ಎಂದು ಯಾರು ಬಂದು ನಿನಗೆ ಹೇಳುವನೋ ಅವನನ್ನು ಕೊಂದು ಕೆಡವು.

---

ಆಕರ್ಷಣಂ ಚ ಸಾಯಾಸಂ ತತ್‌ಕಶ್ಚಿತ್ ಸೂಪಕೃದ್ ವರಮ್ ।
ನಯೇಽತ್ರ ಸ್ಥಾಪ್ಯತಾಂ ಯಸ್ತಂ ಸ್ವಯಂ ಹಂತಿ ಪಚತ್ಯಪಿ ॥ ೧೫೫
ನ ಕಾರ್ಯಾ ಚ ಘೃಣಾ ಯಸ್ಮಾತ್ ತನ್ಮಾಂಸಬಲಿಭಕ್ಷಣಾತ್ ।
ಸಮಾಪಿತೇಽರ್ಚನೇ ಪೂರ್ಣಾ ಸಿದ್ಧಿಃ ಸ್ಯಾದುತ್ತಮೋ ಹಿ ಸಃ ॥ ೧೫೬
ಇತ್ಯುಕ್ತಃ ಪ್ರಿಯಯಾ ರಾಜಾ ಪಾಪಭೀತೋಽಪಿ ತತ್ಪುನಃ ।
ಅಂಗೀಚಕಾರ ಧಿಗಹೋ ಕಷ್ಟಾಂ ಸ್ತ್ರೀಪ್ವನುರೋಧಿತಾಮ್ ॥ ೧೫೭
ಆನಾಯ್ಯ ಸೂಪಕಾರಂ ಚ ತತಃ ಸಾಹಸಿಕಾಭಿಧಮ್ ।
ವಿಶ್ವಾಸ್ಯ ದೀಕ್ಷಿತಂ ಕೃತ್ವಾ ದಂಪತೀ ತೌ ಸಹೋಚತುಃ ॥ ೧೫೮
ರಾಜಾ ದೇವೀದ್ವಿತೀಯೋಽದ್ಯ ಭೋಕ್ಷ್ಯತೇ ತತ್ ತ್ವರಾಂ ಕುರು ।
ಆಹಾರಸ್ಯೇತಿ ಯೋಽಭ್ಯೇತ್ಯ ತ್ವಾಂ ಬ್ರೂಯಾತ್ ತಂ ನಿಪಾತಯೇಃ ॥ ೧೫೯

೨೦೦. ಅವನ ಮಾಂಸಗಳಿಂದ ಗುಟ್ಟಾಗಿ ಬೆಳಗ್ಗೆ ನಮ್ಮಿಬ್ಬರಿಗಾಗಿ ರುಚಿಯಾದ ಭೋಜನವನ್ನು ಸಿದ್ಧಪಡಿಸು." ಹೀಗೆ ಆಜ್ಞಾಪಿಸಲ್ಪಟ್ಟ ಅಡುಗೆಯವನು 'ಹಾಗೇ ಆಗಲಿ' ಎಂದು ಹೇಳಿ ಮನೆಗೆ ಹೋದನು.

೨೦೧-೨೦೨. ಬೆಳಗ್ಗೆ ಬಂದ ಫಲಭೂತಿಗೆ ರಾಜನು ಅಪ್ಪಣೆ ಮಾಡಿದನು "'ಹೋಗು, ಸಾಹಸಿಕನೆಂಬ ಅಡುಗೆಯವನನ್ನು ಅಡುಗೆ ಮನೆಯಲ್ಲಿ ಕಂಡು 'ರಾಜನು ರಾಣಿಯೊಡನೆ ಬಂದು ಇಂದು ರುಚಿಕರವಾದ ಊಟವನ್ನು ಮಾಡಲಿದ್ದಾನೆ. ಆದ್ದರಿಂದ ಬೇಗನೆ ನೀನು ಉತ್ತಮ ಆಹಾರವನ್ನು ಸಿದ್ಧಪಡಿಸು' ಎಂದು ಹೇಳು."

೨೦೩. ಹಾಗೇ ಆಗಲಿ ಎಂದು ಫಲಭೂತಿಯು ಹೊರಗೆ ಹೊರಟನು. ಆಗ ರಾಜನ ಚಂದ್ರಪ್ರಭನೆಂಬ ಪುತ್ರನು ಬಂದು ಅವನಿಗೆ ಹೀಗೆಂದನು.

೨೦೪. "ಆರ್ಯ, ಹಿಂದೆ ನೀನು ನನ್ನ ಅಪ್ಪನಿಗೆ ಮಾಡಿಸಿದ್ದೆಯಲ್ಲ, ಅಂಥ ಕರ್ಣಾಭರಣವನ್ನೇ ನನಗೆ ಈಗಲೇ ಈ ಚಿನ್ನದಿಂದ ಮಾಡಿಸಿಕೊಡು".

೨೦೫. ಹೀಗೆ ರಾಜಪುತ್ರನು ಒತ್ತಾಯಪೂರ್ವಕವಾಗಿ ಕೋರಿ ಫಲಭೂತಿಯನ್ನು ಕುಂಡಲಗಳನ್ನು ಮಾಡಿಸಲು ಕಳುಹಿಸಿಬಿಟ್ಟನು.

---

ತನ್ಮಾಂಸೈಶ್ಚ ರಹಃ ಕುರ್ಯಾಃ ಪ್ರಾತರ್ನೌ ಸ್ವಾದು ಭೋಜನಮ್ ।
ಇತಿ ಸೂಪಕೃದಾದಿಷ್ಟಸ್ತಥೇತ್ಯುಕ್ತ್ವಾ ಗೃಹಂ ಯಯೌ ॥ ೨೦೦
ಪ್ರಾತಶ್ಚ ಫಲಭೂತಿಂ ತಂ ಪ್ರಾಪ್ತಂ ರಾಜಾ ಜಗಾದ ಸಃ ।
ಗಚ್ಛ ಸಾಹಸಿಕಂ ಬ್ರೂಹಿ ಸೂಪಕಾರಂ ಮಹಾನಸೇ ॥ ೨೦೧
ರಾಜಾ ದೇವೀದ್ವಿತೀಯೋಽದ್ಯ ಭೋಕ್ಷ್ಯತೇ ಸ್ವಾದು ಭೋಜನಮ್ ।
ಅತಸ್ತ್ವರಿತಮಾಹಾರಮುತ್ತಮಂ ಸಾಧಯೇರಿತಿ ॥ ೨೦೨
ತಥೇತಿ ನಿರ್ಗತಂ ತಂ ಚ ಫಲಭೂತಿಂ ಬಹಿಸ್ತದಾ ।
ಏತ್ಯ ಚಂದ್ರಪ್ರಭೋ ನಾಮ ರಾಜ್ಞಃ ಪುತ್ರೋಽಬ್ರವೀದಿದಮ್ ॥ ೨೦೩
ಅನೇನ ಶೀಘ್ರಂ ಹೇಮ್ನಾ ಮೇ ಕಾರಯಾದ್ಯೈವ ಕುಂಡಲೇ ।
ಯಾದೃಶೇ ಭವತಾ ಪೂರ್ವಮಾರ್ಯ ತಾತಸ್ಯ ಕಾರಿತೇ ॥ ೨೦೪
ಇತ್ಯುಕ್ತೋ ರಾಜಪುತ್ರೇಣ ಫಲಭೂತಿಸ್ತದೈವ ಸಃ ।
ಕೃತಾನುರೋಧಃ ಪ್ರಹಿತೋ ಯಯೌ ಕುಂಡಲಯೋಃ ಕೃತೇ ॥ ೨೦೫

೨೦೬. ರಾಜಪುತ್ರನಾದರೋ ಫಲಭೂತಿಯು ಹೇಳಿದ ರಾಜನ ಆಜ್ಞೆಯನ್ನು ಹೇಳಲು ಅಡುಗೆ ಮನೆಗೆ ಒಬ್ಬೊಂಟಿಗನಾಗಿ ಸಂತೋಷದಿಂದ ಹೋದನು.

೨೦೭. ಅಲ್ಲಿ ರಾಜನ ಆಜ್ಞೆಯನ್ನು ಹೇಳಿದ ರಾಜಪುತ್ರನನ್ನು ಸಾಹಸಿಕನೆಂಬ ಅಡುಗೆಯವನು ಪ್ರತಿಜ್ಞಾನುಸಾರವಾಗಿ ಕೂಡಲೇ ಚೂರಿಯಿಂದ (ಇರಿದು) ಕೊಂದು ಹಾಕಿದನು.

೨೦೮. ಆ ಮಾಂಸಗಳಿಂದಲೇ ಸಾಹಸಿಕನು ಸಿದ್ಧಪಡಿಸಿದ ಭೋಜನವನ್ನು ರಾಣಿಯೂ ರಾಜನೂ ನಡೆದ ಸಂಗತಿಯನ್ನು ತಿಳಿಯದೆ ಪೂಜಾನಂತರದಲ್ಲಿ ತಿಂದರು.

೨೦೯. ಆ ರಾತ್ರಿಯನ್ನು ದುಃಖದಿಂದ ಕಳೆದ ರಾಜನು ಮರುದಿನ ಬೆಳಗ್ಗೆ ಕೈಯಲ್ಲಿ ಕುಂಡಲಗಳನ್ನು ಹಿಡಿದು ಬಂದ ಫಲಭೂತಿಯನ್ನು ನೋಡಿದನು.

೨೧೦. ದಿಗ್ಭ್ರಾಂತನಾಗಿ ಕುಂಡಲಗಳ ಬಗೆಗೆ ಆ ಕ್ಷಣದಲ್ಲೇ ಅವನನ್ನು ಪ್ರಶ್ನಿಸಿದನು. ಅವನು ನಡೆದ ತನ್ನ ಕಥೆಯನ್ನೆಲ್ಲ ಹೇಳಿದಾಗ ರಾಜನು ನೆಲದ ಮೇಲೆ ಕುಸಿದು ಬಿದ್ದನು.

೨೧೧. ತನ್ನನ್ನೂ ರಾಣಿಯನ್ನೂ ಹಳಿಯುತ್ತಾ 'ಅಯ್ಯೋ ಮಗನೇ !' ಎಂದು ಕೂಗಿ ಅತ್ತನು. ಮಂತ್ರಿಗಳು ಕಾರಣವನ್ನು ಕೇಳಿದಾಗ ಎಲ್ಲವನ್ನೂ ನಡೆದಂತೆಯೇ ಬಣ್ಣಿಸಿದನು.

---

ರಾಜಪುತ್ರೋಽಪ್ಯಗಾತ್ ಸ್ವೈರಂ ಕಥಿತಂ ಫಲಭೂತಿನಾ ।
ರಾಜಾದೇಶಂ ಗೃಹೀತ್ವಾ ತಮೇಕಾಕ್ಯೇವ ಮಹಾನಸಮ್ ॥ ೨೦೬
ತತ್ರೋಕ್ತರಾಜಾದೇಶಂ ತಂ ಸ್ಥಿತಸಂವಿತ್ ಸ ಸೂಪಕೃತ್ ।
ರಾಜಪುತ್ರಂ ಛುರಿಕಯಾ ಸದ್ಯಃ ಸಾಹಸಿಕೋಽವಧೀತ್ ॥ ೨೦೭
ತನ್ಮಾಂಸೈಃ ಸಾಧಿತಂ ತೇನ ಭೋಜನಂ ಚ ಕೃತಾರ್ಚನೌ ।
ಅಭುಂಜಾತಾಮಜಾನಂತೌ ತತ್ತ್ವಂ ರಾಜ್ಞೀ ನೃಪಸ್ತಥಾ ॥ ೨೦೮
ನೀತ್ವಾ ಚ ಸಾನುತಾಪಸ್ತಾಂ ರಾತ್ರಿಂ ರಾಜಾ ದದರ್ಶ ಸಃ ।
ಪ್ರಾತಃ ಕುಂಡಲಹಸ್ತಂ ತಂ ಫಲಭೂತಿಮುಪಾಗತಮ್ ॥ ೨೦೯
ವಿಭ್ರಾಂತಃ ಕುಂಡಲೋದ್ದೇಶಾತ್ತಂ ಚ ಪಪ್ರಚ್ಛ ತತ್ಕ್ಷಣಮ್ ।
ತೇನಾಖ್ಯಾತಸ್ವವೃತ್ತಾಂತಃ ಪಪಾತ ಚ ಭುವಸ್ತಲೇ ॥ ೨೧೦
ಹಾ ಪುತ್ರೇತಿ ಚ ಚಕ್ರಂದ ನಿಂದನ್ ಭಾರ್ಯಾಂ ಸಹಾತ್ಮನಾ ।
ಪೃಷ್ಟಶ್ಚ ಸಚಿವೈಃ ಸರ್ವಂ ಯಥಾತತ್ತ್ವಮವರ್ಣಯತ್ ॥ ೨೧೧

೨೧೨. ಫಲಭೂತಿಯು ಒಳ್ಳೆಯದನ್ನು ಮಾಡುವವನು ಒಳ್ಳೆಯ ಫಲವನ್ನೂ ಕೆಟ್ಟದ್ದನ್ನು ಮಾಡುವವನು ಕೆಟ್ಟ ಫಲವನ್ನೂ ಪಡೆಯುತ್ತಾನೆ ಎಂದು ಪ್ರತಿನಿತ್ಯ ಹೇಳುತ್ತಿದ್ದ ಮಾತನ್ನು ಹೇಳಿದನು.

೨೧೩. ಬೇರೆಯವರಿಗೆ ಮಾಡಬೇಕೆಂದಿರುವ ಪಾಪಕಾರ್ಯವು ಪ್ರಾಯಶಃ ಗೋಡೆಗೆ ಎಸೆದ ಚೆಂಡಿನಂತೆ ಹಿಂದಿರುಗಿ ನೆಗೆದು ನಮ್ಮ ಮೇಲೇ ಬೀಳುತ್ತದೆ.

೨೧೪. ಪಾಪವನ್ನಾಚರಿಸಿದ ನಾವು ಬ್ರಹ್ಮಹತ್ಯೆಯನ್ನು ಮಾಡಲು ಇಷ್ಟಪಟ್ಟುದರಿಂದ ನಮ್ಮ ಮಗನನ್ನೇ ಕೊಂದು ಅವನ ಮಾಂಸವನ್ನೇ ತಿನ್ನುವಂತಾಯಿತು.

೨೧೫–೨೧೬. ಹೀಗೆ ಹೇಳಿ ತಲೆ ತಗ್ಗಿಸಿ ನಿಂತ ಮಂತ್ರಿಗಳಿಗೆ ಬೋಧಿಸಿ ತನ್ನ ರಾಜ್ಯದಲ್ಲಿ ಆ ಫಲಭೂತಿಗೇ ರಾಜ್ಯಾಭಿಷೇಕವನ್ನು ಮಾಡಿ ಪುತ್ರನಿಲ್ಲದ ಆ ರಾಜನು ತನ್ನ ಪಾಪದ ಶುದ್ಧಿಗಾಗಿ ದಾನಗಳನ್ನು ಕೊಟ್ಟು ದುಃಖವೆಂಬ ಬೆಂಕಿಯಿಂದ ಮೊದಲೇ ಸುಟ್ಟುಹೋಗಿದ್ದರೂ ಪತ್ನೀಸಮೇತನಾಗಿ ಮತ್ತೆ ಅಗ್ನಿಪ್ರವೇಶ ಮಾಡಿದನು.

೨೧೭. ರಾಜ್ಯವನ್ನು ಪಡೆದುಕೊಂಡ ಫಲಭೂತಿಯು ಭೂಮಿಯನ್ನಾಳಿದನು. ಹೀಗೆ ಒಳ್ಳೆಯದನ್ನೋ ಕೆಟ್ಟದ್ದನ್ನೋ ಮಾಡಿದುದು ನಮ್ಮಲ್ಲೇ ಫಲವನ್ನು ಕೊಡುತ್ತದೆ.

---

ಉವಾಚ ಚೈತದುಕ್ತಂ ತತ್ ಪ್ರತ್ಯಹಂ ಫಲಭೂತಿನಾ ।
ಭದ್ರಕೃತ್ ಪ್ರಾಪ್ನುಯಾದ್ ಭದ್ರಮಭದ್ರಂ ಚಾಪ್ಯಭದ್ರಕೃತ್ ॥ ೨೧೨
ಕಂದುಕೋ ಭಿತ್ತಿನಿಕ್ಷಿಪ್ತ ಇವ ಪ್ರತಿಫಲನ್ಮುಹುಃ ।
ಆಪತತ್ಯಾತ್ಮನಿ ಪ್ರಾಯೋ ದೋಷೋಽನ್ಯಸ್ಯ ಚಿಕೀರ್ಷಿತಃ ॥ ೨೧೩
ಪಾಪಾಚಾರೈರ್ಯದಸ್ಮಾಭಿರ್ಬ್ರಹ್ಮಹತ್ಯಾಂ ಚಿಕೀರ್ಷುಭಿಃ ।
ಸ್ವಪುತ್ರಘಾತನಂ ಕೃತ್ವಾ ಪ್ರಾಪ್ತಂ ತನ್ಮಾಂಸಭಕ್ಷಣಮ್ ॥ ೨೧೪
ಇತ್ಯುಕ್ತ್ವಾ ಬೋಧಯಿತ್ವಾ ಚ ಮಂತ್ರಿಣಃ ಸ್ವಾನ್ ಅಧೋಮುಖಾನ್ ।
ತಮೇವ ಫಲಭೂತಿಂ ಚ ನಿಜೇ ರಾಜ್ಯೇಽಭಿಷಿಚ್ಯ ಸಃ ॥ ೨೧೫
ರಾಜಾ ಪ್ರದತ್ತದಾನಃ ಸನ್ ಅಪುತ್ರಃ ಪಾಪಶುದ್ಧಯೇ ।
ಸಭಾರ್ಯಃ ಪ್ರವಿವೇಶಾಗ್ನಿಂ ದಗ್ಧೋಽಪ್ಯನುಶಯಾಗ್ನಿನಾ ॥ ೨೧೬
ಫಲಭೂತಿಶ್ಚ ತದ್ರಾಜ್ಯಂ ಪ್ರಾಪ್ಯ ಪೃಥ್ವೀಂ ಶಶಾಸ ಸಃ ।
ಏವಂ ಭದ್ರಮಭದ್ರಂ ವಾ ಕೃತಮಾತ್ಮನಿ ಕಲ್ಪ್ಯತೇ ॥ ೨೧೭

೨೧೮. ಹೀಗೆ ವತ್ಸೇಶ್ವರನ ಮುಂದೆ ಈ ಕಥೆಯನ್ನು ಹೇಳಿ ಯೌಗಂಧರಾಯಣನು ಮತ್ತೆ ರಾಜನಿಗೆ ಹೇಳಿದನು.

೨೧೯. ರಾಜೇಂದ್ರ ಬ್ರಹ್ಮದತ್ತನನ್ನು ಸೋಲಿಸಿದ್ದರೂ ನೀನು ಅವನಿಗೆ ಶುಭವನ್ನೇ ಮಾಡಿರುವೆ. ಒಂದು ವೇಳೆ ನೀನೇ ಅವನನ್ನು ಕೊಲ್ಲಲು ಯತ್ನಿಸಿದರೆ ಅವನು ತೊಂದರೆ ಕೊಡಬಹುದು.

೨೨೦. ಹೀಗೆ ಮುಖ್ಯಮಂತ್ರಿಯು ಹೇಳಿದಾಗ ಅವನ ಮಾತನ್ನು ಅಭಿನಂದಿಸಿ ವತ್ಸರಾಜನು ಎದ್ದು ತನ್ನ ದಿನದ ಕಾರ್ಯವನ್ನು ನೆರವೇರಿಸಿದನು.

೨೨೧. ಎಲ್ಲ ದಿಕ್ಕುಗಳನ್ನೂ ಗೆದ್ದು ಸರ್ವದಿಗ್ವಿಜಯವನ್ನು ಮಾಡಿದ ಧೀಮಂತ ವತ್ಸರಾಜನು ತನ್ನ ನಗರ ಕೌಶಾಂಬಿಗೆ ಲಾವಾಣಕದಿಂದ ಇನ್ನೊಂದು ದಿನ ಹೊರಟನು.

೨೨೨. ನಗರಕ್ಕೆ ರಾಜನು ಪರಿವಾರಸಮೇತನಾಗಿ ಬಂದನು. ಉತ್ಸವವನ್ನು ಆಚರಿಸುತ್ತಿದ್ದ ನಗರವು ಭುಜಲತೆಗಳಂತಿದ್ದ ಬಾವುಟಗಳು ಹಾರುತ್ತಿದ್ದುದರಿಂದ ನರ್ತನಮಾಡುತ್ತಿರುವಂತೆ ಇತ್ತು.

೨೨೩. ಪೌರನಾರಿಯರ ಕಣ್ಣೈದಿಲೆಗಳ ವನದಲ್ಲಿ ಚಂಡಮಾರುತದ ಆರಂಭದ ವಿಲಾಸವನ್ನು ಹೆಜ್ಜೆಹೆಜ್ಜೆಗೂ ಉಂಟುಮಾಡುತ್ತಾ ವತ್ಸರಾಜನು ಕೌಶಾಂಬಿಯನ್ನು ಪ್ರವೇಶಿಸಿದನು.

---

ಇತಿ ವತ್ಸೇಶ್ವರಸ್ಯಾಗ್ರೇ ಕಥಯಿತ್ವಾ ಕಥಾಮಿಮಾಮ್ ।
ಯೌಗಂಧರಾಯಣೋ ಭೂಯೋ ಭೂಪತಿಂ ತಮಭಾಷತ ॥ ೨೧೮

ತಸ್ಮಾತ್ತವ ಸ ರಾಜೇಂದ್ರ ಜಿತ್ವಾಪ್ಯಾಚರತಃ ಶುಭಮ್ ।
ಬ್ರಹ್ಮದತ್ತೋ ವಿಕುರ್ವೀತ ಯದಿ ಹನ್ಯಾಸ್ತ್ವಮೇವ ತಮ್ ॥ ೨೧೯

ಇತ್ಯುಕ್ತೋ ಮಂತ್ರಿಮುಖ್ಯೇನ ತದ್ವಾಕ್ಯಮಭಿನಂದ್ಯ ಸಃ ।
ಉತ್ಥಾಯ ದಿನಕರ್ತವ್ಯಂ ವತ್ಸೇಶೋ ನಿರವರ್ತಯತ್ ॥ ೨೨೦

ಅನ್ಯೇದ್ಯುಶ್ಚ ಸ ಸಂಪನ್ನಸರ್ವದಿಗ್ವಿಜಯಃ ಕೃತೀ ।
ಲಾವಾಣಕಾದುದಚಲತ್ ಕೌಶಾಂಬೀಂ ಸ್ವಪುರೀಂ ಪ್ರತಿ ॥ ೨೨೧

ಕ್ರಮೇಣ ನಗರೀಂ ಪ್ರಾಪ ಕ್ಷಿತೀಶಃ ಸಪರಿಚ್ಛದಃ ।
ಉತ್ಪತಾಕಾಭುಜಲತಾಂ ನೃತ್ಯಂತೀಮುತ್ಸವಾದಿವ ॥ ೨೨೨

ವಿವೇಶ ಚೈನಾಂ ಪೌರಸ್ತ್ರೀನಯನೋತ್ಪಲಕಾನನೇ ।
ವಿತನ್ವಾನಃ ಪ್ರತಿಪದಂ ಪ್ರವಾತಾರಂಭವಿಭ್ರಮಮ್ ॥ ೨೨೩

೨೨೪. ಚಾರಣರು ಅವನ ಬಗೆಗೆ ಹಾಡುತ್ತಿರಲು, ವಂಧಿಮಾಗಧರು ಅವನನ್ನು ಹೊಗಳುತ್ತಿರಲು, ರಾಜರು ಅವನಿಗೆ ನಮಸ್ಕಾರ ಮಾಡುತ್ತಿರಲು ವತ್ಸರಾಜನು ತನ್ನ ಅರಮನೆಗೆ ಬಂದನು.

೨೨೫. ವಿನಯದಿಂದ ಬಗ್ಗಿದ ಸಕಲದೇಶಗಳ ರಾಜರ ಮೇಲೆ ತನ್ನ ಶಾಸನವನ್ನು ಹೊರಿಸಿ ವತ್ಸರಾಜನು ಹಿಂದೆ ನಿಧಿಯಿಂದ ಪಡೆದಿದ್ದ ತನ್ನ ವಂಶಪರಂಪರೆಗೆ ಯೋಗ್ಯವಾದ ಆ ಸಿಂಹಾಸನವನ್ನೇರಿದನು.

೨೨೬ ಆ ಕಾಲದಲ್ಲಿ ಮಂಗಳಕ್ಕಾಗಿ ಬಾರಿಸಿದ ತಾರಧ್ವನಿಯ ಗಂಭೀರ ತೂರ್ಯಶಬ್ದಗಳಿಂದಲೂ ಅವುಗಳ ಪ್ರತಿಧ್ವನಿಗಳಿಂದಲೂ ಆಕಾಶ ತುಂಬಿತು. ದಿಕ್ಪಾಲಕರು ಎಲ್ಲ ದಿಕ್ಕುಗಳಿಂದಲೂ ಹೇಳಿದ ಪ್ರಶಂಸೆಯ ಧ್ವನಿಯಂತೆ ಆ ಶಬ್ದಗಳಿದ್ದುವು.

೨೨೭ ಯಾವ ಲೋಭವನ್ನೂ ಇಟ್ಟುಕೊಳ್ಳದ ವತ್ಸರಾಜನು ಭೂಮಿಯನ್ನು ಗೆದ್ದು ಗಳಿಸಿದ್ದ ಅನೇಕ ಪ್ರಕಾರದ ಸಂಪತ್ತನ್ನು ದ್ವಿಜರಿಗೆ ದಾನ ಮಾಡಿ, ಉತ್ಸವವನ್ನು ಆಚರಿಸಿ ರಾಜಸಮೂಹವನ್ನೂ ತನ್ನ ಮಂತ್ರಿಗಳನ್ನೂ ಕೃತಾರ್ಥರನ್ನಾಗಿ ಮಾಡಿದನು.

---

ಚಾರಣೋದ್ಗೀಯಮಾನಶ್ಚ ಸ್ತೂಯಮಾನಶ್ಚ ಬಂದಿಭಿಃ ।
ನೃಪೈಃ ಪ್ರಣಮ್ಯಮಾನಶ್ಚ ರಾಜಾ ಮಂದಿರಮಾಯಯೌ ॥ ೨೨೪

ತತೋ ವಿನಮ್ರೇಷ್ವಧಿರೋಪ್ಯ ಶಾಸನಂ
ಸ ವತ್ಸರಾಜೋಽಖಿಲದೇಶರಾಜಸು ।
ಪೂರ್ವಂ ನಿಧಾನಾಧಿಗತಂ ಕುಲೋಚಿತಂ
ಪ್ರಸಹ್ಯ ಸಿಂಹಾಸನಮಾರುರೋಹ ತತ್ ॥ ೨೨೫

ತತ್ಕಾಲಮಂಗಲಸಮಾಹತತಾರಧೀರ–
ತೂರ್ಯಾರವಪ್ರತಿರವೈಶ್ಚ ನಭಃ ಪುಪೂರೇ ।
ತನ್ಮಂತ್ರಿಮುಖ್ಯಪರಿತೋಷಿತಲೋಕಪಾಲ–
ದತ್ತೈರಿವ ಪ್ರತಿದಿಶಂ ಸಮಸಾಧುವಾದೈಃ ॥ ೨೨೬

ವಿವಿಧಮಥ ವಿತೀರ್ಯ ವೀತಲೋಭೋ
ವಸು ವಸುಧಾವಿಜಯಾರ್ಜಿತಂ ದ್ವಿಜೇಭ್ಯಃ ।
ಅಕೃತ ಕೃತಮಹೋತ್ಸವಃ ಕೃತಾರ್ಥಂ
ಕ್ಷಿತಿಪತಿಮಂಡಲಮಾತ್ಮಮಂತ್ರಿಣಶ್ಚ ॥ ೨೨೭

೨೨೮. ಆಗ ಆ ರಾಜೇಂದ್ರನು ಕ್ಷೇತ್ರಗಳಲ್ಲಿ (ಸತ್ಪಾತ್ರರಲ್ಲಿ ಅಥವಾ ಹೊಲಗದ್ದೆಗಳಲ್ಲಿ) ಅನುರೂಪವಾಗಿ (ಹೊನ್ನನ್ನು ಅಥವಾ ಮಳೆಯನ್ನು) ಸುರಿಸುತ್ತಿರಲು ಪಟ್ಟಣದಲ್ಲಿ ದೊಡ್ಡ ಮೃದಂಗಗಳ (ಮೋಡಗಳೆಂಬ ಮೃದಂಗಗಳ) ವಾದನದಿಂದ ಬಹುಧಾನ್ಯ ಫಲವು (ಹೆಚ್ಚಾದ ಧಾನ್ಯಗಳ ಫಲ ಅಥವಾ ನಾನಾವಿಧವಾದ ಫಲ ಉಂಟಾಗುವುದು ಎಂದು ಊಹಿಸಿ ಆ ಕೌಶಾಂಬೀನಗರದಲ್ಲಿ ಜನರು ಉತ್ಸವ ವನ್ನಾಚರಿಸಿದರು.

೨೨೯. ಹೀಗೆ ಜಗತ್ತನ್ನೆಲ್ಲ ಜಯಿಸಿದ ಧೀಮಂತ ವತ್ಸರಾಜನು ರುಮಣ್ವಂತನಲ್ಲೂ ಯೌಗಂಧರಾಯಣನಲ್ಲೂ ರಾಜ್ಯಭಾರದ ಹೊರೆಯನ್ನರ್ಪಿಸಿ ಪದ್ಮಾವತೀ ಸಹಿತಳಾದ ವಾಸವದತ್ತೆಯೊಡನೆ ತನಗೆ ಇಷ್ಟಬಂದಂತೆ ಸುಖವಾಗಿದ್ದನು.

---

ಕ್ಷೇತ್ರೇಷು ವರ್ಷತಿ ತದಾನುಗುಣಂ ನರೇಂದ್ರೇ
ತಸ್ಮಿನ್ ಧ್ವನದ್ಘನಮೃದಂಗನಿನಾದಿತಾಯಾಮ್ ।
ಸಂಭಾವ್ಯ ಭಾವಿಬಹುಧಾನ್ಯಫಲಂ ಜನೋಽಪಿ
ತಸ್ಯಾಂ ಪುರಿ ಪ್ರತಿಗೃಹಂ ವಿಹಿತೋತ್ಸವೋಽಭೂತ್ ॥

೨೨೮

ಏವಂ ವಿಜಿತ್ಯ ಜಗತೀಂ ಸ ಕೃತೀ ರುಮಣ್ವದ್–
ಯೌಗಂಧರಾಯಣನಿವೇಶಿತರಾಜ್ಯಭಾರಃ ।
ತಸ್ಥೌ ಯಥೇಚ್ಛಮಥ ವಾಸವದತ್ತಯಾತ್ರ
ಪದ್ಮಾವತೀಸಹಿತಯಾ ಸಹ ವತ್ಸರಾಜಃ ॥ ೨೨೯

೨೩೦. ಕೀರ್ತಿ ಮತ್ತು ಲಕ್ಷ್ಮಿಯರಂತಿದ್ದ ಆ ಇಬ್ಬರು ರಾಣಿಯರ ಮಧ್ಯದಲ್ಲಿದ್ದ ವತ್ಸರಾಜನು ಶ್ರೇಷ್ಠ ಗಾಯಕರು ಹಾಡುತ್ತಿರಲು ತನ್ನ ಕೀರ್ತಿಯಂತೆ ಬಿಳುಪಾಗಿದ್ದ ಚಂದ್ರೋದಯವನ್ನು ನೋಡುತ್ತಾ ಆನಂದಿಸಿದನು ಮತ್ತು ಶತ್ರುಗಳ ಪ್ರತಾಪವನ್ನು ಕುಡಿಯುವಂತೆ ಮಧುವನ್ನು ದೀರ್ಘಕಾಲದವರೆಗೆ ಸೇವಿಸಿ ಆನಂದಪಟ್ಟನು.

ಮಹಾಕವಿ ಶ್ರೀ ಸೋಮದೇವ ಭಟ್ಟನು ರಚಿಸಿದ

ಕಥಾಸರಿತ್ಸಾಗರದ ಲಾವಾಣಕಲಂಬಕದಲ್ಲಿ

ಆರನೆಯ ತರಂಗ ಮುಗಿಯಿತು.

ಮೂರನೆಯದಾದ ಲಾವಾಣಕಲಂಬಕವೂ ಇಲ್ಲಿಗೆ ಮುಗಿಯಿತು.

---

ಕೀರ್ತಿಶ್ರಿಯೋರಿವ ತಯೋರುಭಯೋಶ್ಚ ದೇವ್ಯೋ–
ರ್ಮಧ್ಯಸ್ಥಿತಃ ಸ ವರಚಾರಣಗೀಯಮಾನಃ ।
ಚಂದ್ರೋದಯಂ ನಿಜಯಶೋಧವಲಂ ಸಿಷೇವೇ
ಶತ್ರುಪ್ರತಾಪಮಿವ ಶೀಧು ಪಪೌ ಚ ಶಶ್ವತ್ ॥ ೨೩೦

ಇತಿ ಮಹಾಕವಿ ಶ್ರೀ ಸೋಮದೇವಭಟ್ಟವಿರಚಿತೇ

ಕಥಾಸರಿತ್ಸಾಗರೇ

ಲಾವಾಣಕಲಂಬಕೇ ಷಷ್ಠಸ್ತರಂಗಃ

ಸಮಾಪ್ತಶ್ಚಾಯಂ ಲಾವಾಣಕಲಂಬಕಸ್ತೃತೀಯಃ ।

❖ ❖ ❖